# ಭಾರತೀಯ ಸ್ಮೃತಿಗಳು

## ಭಾರತೀಯ ಪ್ರಾಚೀನ ಸ್ಮೃತಿಗಳ ಪರಿಚಯ



ಲೇಖಕರು : ವಿದ್ವಾನ್ ರಘುಸುತ

# ಭಾರತೀಯ ಸ್ಮೃತಿಗಳು

## ಭಾರತದ ಪ್ರಾಚೀನ ಸ್ಮೃತಿಗಳ ಸಂಕ್ಷಿಪ್ತ ಪರಿಚಯ

ಸಾಹಿತ್ಯ ಭೂಷಣ, ಸಾಹಿತ್ಯ ಮಹೋಪಾಧ್ಯಾಯ, ಧರ್ಮ ಸಾರಸ್ವತ

**ವಿದ್ವಾನ್ 'ರಘುಸುತ'**

**ಹೇಮಂತ ಸಾಹಿತ್ಯ**

ನಂ. 972 ಸಿ, 4ನೇ 'ಇ' ಬ್ಲಾಕ್, ರಾಜಾಜಿನಗರ

ಶ್ರೀ ವೆಂಕಟೇಶ್ವರ ಸ್ವಾಮಿ ದೇವಸ್ಥಾನದ ರಸ್ತೆ

ಬೆಂಗಳೂರು - 560010

BHARATHIYA SMRITHIGALU—A short description of all Smrithis of India – Written by Vidwan Raghusutha, Published by M/s. Hemantha Sahithya, No. 972C, 4th 'E' Block, Rajaji Nagar, Bangalore-560010.

FIRST PUBLISHED—2000 No. of Copies : 1000



ಮುದ್ರಿತ ಪ್ರತಿಗಳು : 1000

ಪ್ರಥಮ ಮುದ್ರಣ : 2000

ಬೆಲೆ :

ಮುಖಪುಟ ಕಲೆ : ಶ್ರೀಕಾಂತ ಹೆಗಡೆ

ಮುದ್ರಕರು :

ಪ್ರಭು ಮುದ್ರಣ

60–1, ಮೊದಲ ಮುಖ್ಯ ರಸ್ತೆ, ಶಾಕಾಂಬರಿ ನಗರ

ಸಾರಕ್ಕಿ, ಬೆಂಗಳೂರು – 560 078

# ಕೃತಜ್ಞತೆ

ಈ ಗ್ರಂಥದ ಪ್ರಕಟಣೆಗಾಗಿ ಧನಸಹಾಯ ನೀಡಿರುವ ತಿರುಮಲೆ-ತಿರುಪತಿ ದೇವಸ್ಥಾನದ ಆಡಳಿತಾಧಿಕಾರಿಯವರಿಗೂ, ಸಂಪಾದಕರಿಗೂ ಹಾಗೂ ಇತರೇ ಅಧಿಕಾರವರ್ಗಕ್ಕೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ರಘುಸುತ

# ಪ್ರಕಾಶಕರ ಮಾತು

ನಮ್ಮ ಪ್ರಕಾಶನದಲ್ಲಿ ಇದುವರೆವಿಗೆ ಅನೇಕ ಜನಪ್ರಿಯ ಕೃತಿಗಳನ್ನು ನೀಡಿ, ಓದುಗರ ಮನೋವಾಂಛೆಯನ್ನು ತಣಿಸಿದ್ದೇವೆ. ಆದರೆ ಪಾಂಡಿತ್ಯ ಪೂರ್ಣ, ವಿದ್ವಜ್ಜನ ಪ್ರೀತಿಯ ಕೃತಿಗಳನ್ನು ಪ್ರಕಾಶಪಡಿಸಬೇಕೆಂಬ ಆಸೆ ಇತ್ತು. ಕೃತಿರೂಪದಲ್ಲಿ ತಮ್ಮ ವಿದ್ವೆಯನ್ನು ದಾಖಲಿಸುವ ಲೇಖಕರು ನಮ್ಮಲ್ಲಿ ಕಡಿಮೆ. ಅವರಲ್ಲೂ ಸಾಮಾನ್ಯ ಜನರಿಗೆ ಸಹಾಯಕವಾಗುವಂತಹ ಕೃತಿಗಳನ್ನು ಬರೆಯುವವರು ಇನ್ನೂ ಕಡಿಮೆಯೆ. ಇಂತಹ ಬೆರಳೆಣಿಸುವಷ್ಟು ಪಂಡಿತ-ಲೇಖಕರಲ್ಲಿ ವಿದ್ವಾನ್ 'ರಘುಸುತ'ರೂ ಒಬ್ಬರೂ. ಈ ಹಿಂದೆಯೂ ಶ್ರೀಯುತರು ನಮ್ಮ ಪ್ರಕಾಶನಕ್ಕೆ ಇಂತಹ ಕೆಲವೊಂದು ಕೃತಿಗಳನ್ನು ನೀಡಿ, ನಮ್ಮ ಪ್ರಕಾಶನದ ಮಟ್ಟವನ್ನು ಮೇಲೇರಿಸಿದ್ದಾರೆ. ಅಂತೆಯೇ ಈಗ ಅವರು ರಚಿಸಿರುವ ಬೋಧಪ್ರದ, ನೀತಿಪ್ರದ ಹಾಗೂ ತುಂಬಾ ಅಪರೂಪವಾಗಿರುವ ಈ ಸಾಹಿತ್ಯ ಕೃತಿಯನ್ನು ಬೆಳಕಿಗೆ ತರಲು ನಮಗೆ ಹೆಮ್ಮೆ ಎನಿಸುತ್ತದೆ. ನಾನು ತುಂಬು ಸಂತೋಷದಿಂದ ರಘುಸುತರ 'ಭಾರತೀಯ ಸ್ಮೃತಿಗಳು' ಎನ್ನುವ ಈ ಕೃತಿಯನ್ನು ಕನ್ನಡ ಜನತೆಗೆ ನೀಡಲು ಹರ್ಷಿಸುತ್ತೇನೆ. ಇಂತಹ ಇಳಿ ವಯಸ್ಸಿನಲ್ಲೂ, ಆರೋಗ್ಯ ಚೆನ್ನಾಗಿಲ್ಲದಿರುವಾಗಲೂ ಪುಸ್ತಕ ರಚನೆ ಸ್ಫೂರ್ತಿಯನ್ನು ಹೊಂದಿರುವ ಮಾನ್ಯ ಲೇಖಕರು ಈ ಕೃತಿಯನ್ನು ಕನ್ನಡ ಜನತೆಗೆ ನಮ್ಮ ಮುಖಾಂತರ ನೀಡಲು ಸಹಾಯ ಮಾಡಿರುವುದು ಕನ್ನಡ ನಾಡಿನ ಪುಣ್ಯ. ಇದಕ್ಕಾಗಿ ನಾನು ರಘುಸುತರಿಗೆ ಆಭಾರಿಯಾಗಿರುತ್ತೇನೆ. ವಿದ್ವನ್ಮಣಿಗಳು ಹಾಗೂ ಸಾಮಾನ್ಯ ಓದುಗರು ಈ ಮಹತ್ಕೃತಿಯನ್ನು ಹೃದಯಪೂರ್ವಕವಾಗಿ ಸ್ವಾಗತಿಸುವರೆಂದು ನಂಬಿದ್ದೇನೆ.

ರಾಜಾಜಿನಗರ, ಬೆಂಗಳೂರು-10
25-7-1999

ಎಂ. ವೆಂಕಟೇಶ್
ಹೇಮಂತ ಸಾಹಿತ್ಯ

# ಲೇಖಕನ ಮಾತು

ಭಾರತದ ಪ್ರಾಚೀನ ಸಂಸ್ಕೃತಿ, ಸಾಹಿತ್ಯಗಳು–ವೇದಗಳು, ಪುರಾಣಗಳು, ಉಪನಿಷತ್ತುಗಳು ಹಾಗೂ ಸ್ಮೃತಿಗಳನ್ನು ಅವಲಂಬಿಸಿವೆ. ಇವು ಭಾರತದ ಜನಜೀವನದ ಕ್ರಮಬದ್ಧ ಮಾರ್ಗಸೂಚಿಗಳಾಗಿದ್ದುವು. ಇವುಗಳ ಆಧಾರದ ಮೇಲೆಯೇ ಹಿಂದಿನ ಜನಜೀವನ ನಡೆಯುತ್ತಿತ್ತು. ಹಿಂದೆ ಸಮಾಜ ಮತ್ತು ಧರ್ಮಗಳು ಒಂದು ರೆಂಬೆಯ ಎರಡು ಕೊಂಬೆಗಳಂತಿದ್ದುವು, ಮಾನವನ ಎರಡು ಕಣ್ಣುಗಳಿದ್ದಂತೆ, ಒಂದನ್ನೊಂದು ಬಿಟ್ಟು ಇರುತ್ತಿರಲಿಲ್ಲ. ಹೀಗಾಗಿ ಇವು ಸಮಾಜದ ಅವಿಚ್ಛಿನ್ನ ಭಾಗವಾಗಿದ್ದುವು. ಇವು ಜನರ ಜೀವನವನ್ನು ಪ್ರತಿಬಿಂಬಿಸುತ್ತಿದ್ದಂತೆ ರಾಷ್ಟ್ರದ ಕೈಗನ್ನಡಿಯೂ ಆಗಿದ್ದವು, ರಾಷ್ಟ್ರದ ನೈತಿಕ ಬಲವನ್ನು ಒಗ್ಗೂಡಿಸುವುದರಲ್ಲೂ ಸಹಾಯಕವಾಗುತ್ತಿತ್ತು. ಇದರಿಂದ ಅಖಂಡ ಭಾರತದ ಭಾರತೀಯತೆ ಶತಶತಮಾನಗಳಿಂದಲೂ ಇಂದಿಗೂ ಉಳಿದು ಬರಲು ಸಹಾಯಕವಾಯಿತು. ಮಾರಕವಾದ ವಿದೇಶೀ ಕ್ರೌರ್ಯತಮ ಧಾಳಿಗಳನ್ನೂ ಎದುರಿಸುವಷ್ಟು ಮಾನಸಿಕ ಶಕ್ತಿಯನ್ನು ಇವು ನೀಡಿದವು. ಸಾಂಸ್ಕೃತಿಯ ಸ್ಥಿಮಿತತೆಗೆ ಇವು ಬೆನ್ನೆಲುಬಾದವು. ಪರಿಣಾಮವಾಗಿ ಭಾರತೀಯ ಪರಂಪರೆ ಇಂದಿಗೂ ಜೀವಂತವಾಗಿ ಉಳಿದಿದೆ.

ಸ್ಮೃತಿಗಳು ಮಾನವನ ದಿನನಿತ್ಯ ನಡುವಳಿಕೆಗಳನ್ನು ಸರಿತಿದ್ದುವ ಮಾರ್ಗಸೂಚಿಗಳು. ಅವು ತಿಳಿಸಿರುವಂತೆ ನಾವುಗಳು ಮುನ್ನಡೆಯಬೇಕು. ಅವು ತೋರಿದ ದಾರಿಯಲ್ಲಿ ನಾವು ಹೆಜ್ಜೆ ಇರಿಸಬೇಕು. ಆದರಿಂದ ಇವು ಅಂದಿಗೂ, ಇಂದಿಗೂ ಪ್ರಸ್ತುತ. ಇಂದಿನ ಕಲುಷಿತ ಜಾತಿ ರಾಜಕೀಯದ ಹೊಲಸುತನದಲ್ಲಿ ಸ್ಮೃತಿಗಳಿಗೆ ಪುರೋಹಿತಷಾಹಿಯ ಪ್ರತೀಕವೆಂಬ ಹಣೆಪಟ್ಟಿ ಕಟ್ಟಿ, ದೂರವಿರಿಸುವ ಪ್ರಯತ್ನ ಮಾಡಬಹುದು. ಇದಕ್ಕೆ ಕಾರಣವೂ ಇಲ್ಲದಿಲ್ಲ. ಇಂದಿನ ಸಮಾಜಕ್ಕೆ ಅವುಗಳಲ್ಲಿನ ಕೆಲವೊಂದು ಅಂಶಗಳು ಹೊಂದಿಕೊಳ್ಳುವುದಿಲ್ಲ, ಅನ್ವಯವಾಗುವುದಿಲ್ಲ. ಮೊದಲು ಜಾತಿಯ ಪ್ರಶ್ನೆಯೇ ಇರಲಿಲ್ಲ. ಭಾರತಕ್ಕೆ ಆಂಗ್ಲರ ಪ್ರವೇಶದ ನಂತರವೇ ಒಡೆದು ಆಳುವ ನೀತಿಯ ಜಾತಿವಾದವನ್ನು ಅವರು ತಂದದ್ದು. ಅದಕ್ಕೆ ಮುಂಚೆ ಇರಲಿಲ್ಲ. ವಿದೇಶೀ ಧಾಳಿಗಳು ನಡೆದಾಗ್ಯೂ ಈ ಒಡಕು ಬಂದಿರಲಿಲ್ಲ. ಭಾರತಕ್ಕೆ ಬಂದು ನೆಲೆಸಿದ

ವಿದೇಶೀಯರೆಲ್ಲರೂ ಒಂದೆರಡು ಶತಮಾನಗಳ ನಂತರ ಭಾರತೀಯರೇ ಆಗಿ ಹೋದರು. ಇದು ಇಲ್ಲಿನ ನೆಲದ ಗುಣ. ಇದೇ ರೀತಿಯಲ್ಲಿ ವಿದೇಶಗಳಲ್ಲಿ ನೆಲೆಸಿದ ಭಾರತೀಯರೂ ಕೂಡ ಅಲ್ಲಿನವರೇ ಆಗಿ ಹೋದರು. ಒಡೆದು ಆಳುವ ನೀತಿಯ ಆಂಗ್ಲರು ಭಾರತೀಯರ ಒಗ್ಗಟ್ಟನ್ನು ಮುರಿಯುವುದಕ್ಕಾಗಿ ಈ ರೀತಿಯ ತಂತ್ರಗಾರಿಕೆಯನ್ನು ಮಾಡಿದರು. ಸ್ವಚ್ಛ ಹೃದಯಗಳ ಭಾರತೀಯರು ಈ ಮೋಸದ ಬಲೆಗೆ ತುತ್ತಾದರು. ಇಂತಹ ಮೋಸದ ಬಲೆಯ ಒಂದು ಗಾಳವೇ 'ಪುರೋಹಿತಶಾಹಿ' ಎನ್ನುವ ಪದ. ಸ್ಮೃತಿಗಳಲ್ಲಿ ಈ ಪದಕ್ಕೆ ಅರ್ಥವೇ ಇಲ್ಲ. ಸಮಾಜವೆಲ್ಲ ಒಂದೇ ಎನ್ನುವ ಭಾವನೆಯಿಂದ ಅವು ನಿರ್ಮಾಣವಾದುವು.

ಸ್ಮೃತಿಗಳಲ್ಲಿನ ಅನೇಕ ಅಂಶಗಳು ಇಂದಿಗೆ ಹೊಂದಾಣಿಕೆಯಾಗದಿದ್ದರೂ, ಅಂದಿಗೆ ಹೊಂದಾಣಿಕೆಯಾಗುತ್ತಿತ್ತು. ಇಂತಹ ಹೊಂದಾಣಿಕೆಯಾಗದಂತಹ ಕೆಲವೊಂದು ಅಂಶಗಳಿಂದ ಹೊರತುಪಡಿಸಿದರೆ, ಇಂದಿಗೂ ಸ್ಮೃತಿಗಳು ತಿಳಿಸುವ ಕೆಲವೊಂದು ನಿಯಮಗಳು ಕ್ರಮಬದ್ಧವಾದುವು, ಅನುಕರಣೀಯವಾದುವು. ಮಾರ್ಕಂಡೇಯ ಪುರಾಣದಲ್ಲಿ ತಿಳಿಸಿರುವ ಮಕ್ಕಳ ಲಾಲನೆ-ಪಾಲನೆಯ ಬಗ್ಗೆ ತಿಳಿಸಿರುವ ನಿಯಮಗಳು ಯಾವ ಮಾಂಟೆಸ್ಸೋರಿ ವ್ಯವಸ್ಥೆಗಿಂತಲೂ ಕಡಿಮೆ ಇಲ್ಲ. ಇಂದಿಗೂ ಇವು ಪ್ರಸ್ತುತ. ಇದೇ ರೀತಿಯಲ್ಲಿ ಶಿಕ್ಷಣ, ಸಾಮಾಜಿಕ ನಡವಳಿಕೆ, ಗಂಡು-ಹೆಣ್ಣಿನ ಸಂಬಂಧ, ಹಿರಿಯ-ಕಿರಿಯರ ಕರ್ತವ್ಯ, ಸ್ವಚ್ಛತೆಯ ಜೀವನಕ್ಕೆ ಹತೋಟಿ, ಹಿರಿಯ-ಕಿರಿಯರ ಜವಾಬ್ದಾರಿಗಳು-ಇತ್ಯಾದಿಗಳನ್ನು ತಪ್ಪದೆ ಅನುಸರಿಸಬೇಕು. ವ್ಯಕ್ತಿಯೊರ್ವನ ಕ್ರಮಬದ್ಧ ಜೀವನಕ್ಕೆ ಇವೆಲ್ಲ ಎಷ್ಟು ಅಗತ್ಯ ಎಂಬುದನ್ನು ಆಧುನಿಕ ಯಾಂತ್ರಿಕ-ತಾಂತ್ರಿಕ ಜೀವನದ ಅಷ್ಟಪದಿಯ ಬಿಗಿತಕ್ಕೆ ಸಿಲುಕಿರುವ ಯಾವ ಮಾನವನಾದರೂ ಅರ್ಥ ಮಾಡಿಕೊಳ್ಳಬಲ್ಲ. ಇದುವರೆವಿಗೂ ಕನ್ನಡ ಸಾಹಿತ್ಯದಲ್ಲಿ ಸ್ಮೃತಿಗಳನ್ನು ಕುರಿತಾದ ಬರವಣಿಗೆಗಳು ಬಂದಿಲ್ಲ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ 'ಯುಗಯಾತ್ರೀ ಪ್ರವರ್ತಕ' ಸಂಪುಟಗಳಲ್ಲಿನ ಸ್ಮೃತಿಗಳನ್ನು ಕುರಿತಾದ ಬರವಣಿಗೆ ಹಾಗೂ ಸಮಾಜ ಪುಸ್ತಕಾಲಯದವರು ಪ್ರಕಟಿಸಿರುವ 'ಮನುಸ್ಮೃತಿ'ಯ ಮೂಲ, ಕನ್ನಡ ಅನುವಾದಗಳನ್ನು ಬಿಟ್ಟರೆ, ಎಲ್ಲ ಸ್ಮೃತಿಗಳನ್ನು ಪರಿಚಯಿಸುವ ಯಾವ ಕೃತಿಯೂ ಬಂದಿಲ್ಲ. ಕನ್ನಡದಲ್ಲಿ ಈ ಕೊರತೆಯನ್ನು ನೀಗಲು ನಾನೀ ಕೃತಿಯನ್ನು ರಚಿಸಿದ್ದೇನೆ. ಸುಲಭ, ತಿಳಿ ಶೈಲಿಯಲ್ಲಿ ಸಾಮಾನ್ಯ ಜನರಿಗೆ ಅರ್ಥವಾಗುವ ರೀತಿಯಲ್ಲಿ ಅಲ್ಲಲ್ಲಿ ಮೂಲ ಸಂಸ್ಕೃತ ಶ್ಲೋಕ

ಗಳನ್ನು ನೀಡಿ, ರಚಿಸಿದ್ದೇನೆ. ಇಂತಹ ಕೃತಿಯು ಭಾರತೀಯರೆಲ್ಲರಿಗೂ ಸದುಪಯೋಗವಾಗುವುದರಲ್ಲಿ ಅನುಮಾನವಿಲ್ಲ. ಎಲ್ಲ ಕನ್ನಡಿಗರೂ ಇದನ್ನು ಓದಿ, ತಮ್ಮ ಜೀವನದಲ್ಲಿ ಈ ಕೃತಿಯಲ್ಲಿನ ಕೆಲವೊಂದು ಅಂಶಗಳನ್ನಾದರೂ ಅಳವಡಿಸಿಕೊಂಡಲ್ಲಿ ಈ ಲೇಖಕನ ಗುರಿಯು ಸಾರ್ಥಕವಾಗುತ್ತದೆ.

ಅನೇಕ ಮೂಲಗಳಿಂದ ಈ ಕೃತಿಗಾಗಿ ವಿಷಯ ಸಂಗ್ರಹಣೆ ಮಾಡಲಾಗಿದೆ. ಮುಖ್ಯವಾಗಿ ಗೋರಖ್‌ಪುರದ ಕಲ್ಯಾಣಿ ಪತ್ರಿಕೆ ತುಂಬಾ ಸಹಾಯ ಮಾಡಿದೆ. ಕೆಲವೊಂದು ಸ್ಮೃತಿಗಳನ್ನೂ ಅಧ್ಯಯನ ಮಾಡಿದ್ದೇನೆ. ಎಲ್ಲ ಸ್ಮೃತಿಗಳನ್ನು ಮೂಲತಃ ಓದುವುದು ಯಾರಿಂದಲೂ ಸಾಧ್ಯವಿಲ್ಲ. ಈ ಎಲ್ಲ ಮೂಲ ಸಾಮಗ್ರಿಗಳಿಗೂ ನಾನು ಚಿರಋಣಿಯಾಗಿದ್ದೇನೆ.

ಇವುಗಳಲ್ಲಿನ ಕೆಲವೊಂದು ಭಾಗಗಳನ್ನು ಬಿಡಿಯಾಗಿ ಪ್ರಬಂಧ ರೂಪದಲ್ಲಿ ತಿರುಪತಿಯ 'ಸಪ್ತಗಿರಿ', ಬೆಂಗಳೂರಿನ 'ಉಭಯವೇದ' ಮತ್ತಿತರ ಪತ್ರಿಕೆಗಳು ಪ್ರಕಟಿಸಿವೆ. ಅವುಗಳನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಿರುವ, ಈ ಪತ್ರಿಕೆಗಳ ಆಡಳಿತ ವರ್ಗಕ್ಕೆ ನಾನು ಚಿರಋಣಿ. ಅದರಲ್ಲೂ ತಿರುಪತಿಯ ಟಿ.ಟಿ.ಡಿ. ಸಂಸ್ಥೆಯವರು ಇನ್ನು ಅನೇಕ ರೀತಿಗಳಲ್ಲಿ ನನಗೆ ಸಹಾಯ ಮಾಡಿದ್ದಾರೆ. ಅದಕ್ಕಾಗಿಯೂ ವಿಶೇಷವಾಗಿ ಅವರಿಗೆ ನನ್ನ ಅಭಿನಂದನೆಗಳು. ಅಂತೆಯೇ ಈ ಪುಸ್ತಕದ ಪ್ರಕಟಣೆ ಭಾರವನ್ನು ಹೊತ್ತಿರುವ ಖ್ಯಾತ ಪ್ರಕಾಶಕರಾದ ಹೇಮಂತ ಸಾಹಿತ್ಯದ ಶ್ರೀ ಎಂ. ವೆಂಕಟೇಶ್‌ರವರಿಗೂ ನನ್ನ ವಂದನೆಗಳು. ಸುಂದರವಾಗಿ ಮುದ್ರಿಸಿ, ಪ್ರೂಫ್ ತಿದ್ದಿ, ಪುಸ್ತಕದ ಅಚ್ಚುಕಟ್ಟುತನವನ್ನು ಕಾಪಾಡಿರುವ ನನ್ನ ಬಾಲ್ಯಮಿತ್ರರಾದ, ಖ್ಯಾತ ಸಾಹಿತಿಗಳೂ, ಆಕಾಶವಾಣಿಯ ನಿವೃತ್ತ ನಿರ್ದೇಶಕರೂ ಆದ ಶ್ರೀ ಎಚ್. ವಿ. ರಾಮಚಂದ್ರರಾಯರಿಗೆ ನನ್ನ ವಂದನೆಗಳು.

ಈ ಕೃತಿ ಈ ರೂಪ ಪಡೆಯುವುದಕ್ಕೆ ಇನ್ನೂ ಅನೇಕರು ಸಹಾಯ ಮಾಡಿದ್ದಾರೆ. ಅವರೆಲ್ಲರಿಗೂ ನನ್ನ ನಮನಗಳು.

ಕನ್ನಡಿಗರು ಈ ಕೃತಿಯನ್ನು ಸಹೃದಯದಿಂದ ಸ್ವಾಗತಿಸುವರೆಂದು ನಂಬಿದ್ದೇನೆ.

ಬೆಂಗಳೂರು–22 ರಘುಸುತ

# ಪರಿವಿಡಿ

## ಭೂಮಿಕಾ



## ಪ್ರಮುಖ ಸ್ಮೃತಿಗಳು

ಪುಟ ಸಂಖ್ಯೆ





ಭೂಮಿಕಾ

# 1. ಹಿಂದೂ ಧರ್ಮದ ಆಧಾರಗಳು

ಪ್ರಪಂಚದಲ್ಲಿ ಅತ್ಯಂತ ಪ್ರಾಚೀನ ಪರಂಪರೆಯನ್ನು ಹೊಂದಿರುವ ಧರ್ಮ ವೆಂದರೆ ಹಿಂದೂ ಧರ್ಮ. ಈ ಧರ್ಮವು ತನ್ನದೇ ಆದ ಶಾಸ್ತ್ರಪರಂಪರೆ, ಶಾಸ್ತ್ರಸಂಪತ್ತನ್ನು ಹೊಂದಿದೆ.

ಹಿಂದೂಧರ್ಮಶಾಸ್ತ್ರವು ತುಂಬ ವಿಸ್ತಾರವಾದುದು. ಈ ಧಾರ್ಮಿಕ ಗ್ರಂಥಗಳ ಬಹಳ ಹೆಚ್ಚಿನ ಭಾಗವು ವಿಧರ್ಮೀಯರ ಹಾಗೂ ಪರಕೀಯರ ಧಾಳಿಗೆ ಸಿಕ್ಕಿ ನಷ್ಟವಾಯಿತು. ಉಳಿದ ಬಹಳಷ್ಟು ಗ್ರಂಥಗಳು ಪ್ರಕೃತಿಯ ಪ್ರಕೋಪಕ್ಕೆ, ಜನರ ನಿರಂತರ ನಿರ್ಲಕ್ಷ್ಯಕ್ಕೆ, ಕೀಟಗಳ ಧಾಳಿಗೆ ಸಿಕ್ಕಿ ಇನ್ನಷ್ಟು ನಾಶವಾಯಿತು. ಇವೆಲ್ಲವುಗಳಿಂದ ತಪ್ಪಿಸಿಕೊಂಡು ಉಳಿದಿರುವ ಅಲ್ಪಸ್ವಲ್ಪ ಪರಿಮಾಣವೇ ಅಪಾರ ಗ್ರಂಥರಾಶಿಯಾಗಿದೆ. ಇವುಗಳಲ್ಲಿಯೂ ಇನ್ನೂ ಅನೇಕ ಗ್ರಂಥಗಳು ಯಾರ ಯಾರ ಮನೆಗಳಲ್ಲಿಯೋ, ಕಗ್ಗತ್ತಲಿನಲ್ಲಿ ಸಿಕ್ಕಿಹಾಕಿ ಕೊಂಡಿವೆ. ಇವುಗಳು ಜನಸಾಮಾನ್ಯರ, ಪಂಡಿತರ ಕಣ್ಣಿಗೆ ಬಿದ್ದಿಲ್ಲ.

ಇಷ್ಟೆಲ್ಲ ಆದ ಮೇಲೂ ಪ್ರಕಟಣೆಗೊಂಡ, ಅವುಗಳ ಸೂಚಿಪತ್ರವನ್ನು ನೀಡಿದಲ್ಲಿ ಅದೇ ಒಂದು ಬೃಹತ್ ಗ್ರಂಥವಾದೀತು. ಅದರಿಂದ ಅದರ ಸಂಕ್ಷಿಪ್ತ ರೂಪವನ್ನಷ್ಟೇ ಇಲ್ಲಿ ನೀಡಲಾಗಿದೆ. ಹಿಂದೂ ಧರ್ಮದ ಆಧಾರಗ್ರಂಥಗಳು ಮುಖ್ಯವಾಗಿ ೧) ವೇದ, ೨) ವೇದಾಂಗ, ೩) ಉಪವೇದ, ೪) ಇತಿಹಾಸ, ೫) ಪುರಾಣ, ೬) ಸ್ಮೃತಿ, ೭) ದರ್ಶನ, ೮) ನಿಬಂಧ, ೯) ಆಗಮ, ಎಂಬುದಾಗಿವೆ.

## ೧. ವೇದ

ವೇದದಲ್ಲಿ ಆರು ಭಾಗಗಳಿವೆ — ೧) ಮಂತ್ರ ಸಂಹಿತೆ, ೨) ಬ್ರಾಹ್ಮಣ ಗ್ರಂಥ, ೩) ಆರಣ್ಯಕ, ೪) ಸೂತ್ರಗ್ರಂಥ, ೫) ಪ್ರಾತಿಶಾಖ್ಯ ೬) ಅನು ಕ್ರಮಣೀ.

೧. ಮಂತ್ರಸಂಹಿತೆ : ವೇದಗಳು ನಾಲ್ಕು – ಋಗ್ವೇದ, ಯಜು ರ್ವೇದ, ಸಾಮವೇದ ಹಾಗೂ ಅಥರ್ವವೇದ. ಇವು ವೇದದ ವಿಭಾಗಗಳು

ಎಂದೆನಿಸಿಕೊಂಡಿವೆ. ಮೂಲತಃ ವೇದ ಎನ್ನುವುದು ಒಂದೇ. ಆದರೆ ಈ ವೇದದ ವಿಭಾಗಗಳನ್ನು ಮಾಡಿದವರೆಂದರೆ–ಕೃಷ್ಣದ್ವೈಪಾಯನ ವೇದವ್ಯಾಸರು.

ಯಜ್ಞಗಳಲ್ಲಿ ನಾಲ್ಕು ಮುಖ್ಯ ಋತ್ವಿಜರು ಇರುತ್ತಾರೆ. ಅವರು ಯಾರೆಂದರೆ – ಹೋತಾ, ಅಧ್ವರ್ಯು, ಉದ್ಗಾತಾ ಹಾಗೂ ಬ್ರಹ್ಮಾ.

ಋಗ್ವೇದದ ಋತ್ವಿಜನನ್ನು 'ಹೋತಾ' ಎಂದೂ, ಯಜುರ್ವೇದದವನನ್ನು 'ಅಧ್ವರ್ಯು' ಎಂದೂ ಸಾಮವೇದದವನನ್ನು 'ಉದ್ಗಾತ' ಎಂದೂ, ಅಥರ್ವ ವೇದದ ಋತ್ವಿಜನನ್ನು 'ಬ್ರಹ್ಮಾ' ಎಂದೂ ಕರೆಯುತ್ತಾರೆ.

ಇವರು ಕ್ರಮವಾಗಿ ನಾಲ್ಕು ದಿಕ್ಕುಗಳಲ್ಲಿ ಕುಳಿತುಕೊಳ್ಳುತ್ತಾರೆ.

ವೇದಗಳ ಮತ್ತೊಂದು ಹೆಸರು 'ತ್ರಯಿಃ' ಎಂಬುದು. ವೇದತ್ರಯದ ಅರ್ಥವೆಂದರೆ ಮೊದಲು ಪ್ರಧಾನವಾಗಿ ಮೂರೇ ವೇದಗಳು ಇದ್ದವು ಎಂಬುದು–

ಸ್ತ್ರಿಯಾಮೃಕ್ ಸಾಮಯಜುಷೀ
ಇತಿ ವೇದಾಸ್ತ್ರಯಸ್ತ್ರಯಿಃ (ಅಮರಕೋಶ 1–6–3)

ವೇದಗಳು ಅನಾದಿಯಾಗಿವೆ. ಅವುಗಳನ್ನು ಯಾರೂ ಸೃಷ್ಟಿಸಿದ್ದಲ್ಲ. ಅವು ಶಾಶ್ವತವಾದ ಈಶ್ವರೀಯ ಜ್ಞಾನವಾಗಿದೆ. ಸೃಷ್ಟಿಯ ಪ್ರಾರಂಭದಲ್ಲಿ ಇವನ್ನು ಪರಮಾತ್ಮನು ಬ್ರಹ್ಮನ ಹೃದಯದಲ್ಲಿ ಪ್ರಕಟಗೊಳಿಸಿದನು. ಪರಸ್ಪರರು ಆಲಿಸುವುದರಿಂದಲೇ ವೈದಿಕ ಮಂತ್ರಗಳ ಜ್ಞಾನ ಪ್ರಸಾರವಾಗುವುದು. ಆದುದ ರಿಂದಲೇ ಅವನ್ನು 'ಶ್ರುತಿ' ಎಂದು ಕರೆಯಲಾಗುವುದು.

ಈ ವೇದಮಂತ್ರಗಳಿಗೆ ನಿರ್ದಿಷ್ಟವಾದ ಛಂದಸ್ಸು, ಋಷಿ, ದೇವತೆಗಳು ಹಾಗೂ ವಿನಿಯೋಗಗಳಿವೆ. ಛಂದಸ್ಸಿನ ಮುಖಾಂತರ ಆ ಮಂತ್ರಗಳನ್ನು ಹೇಗೆ ಉಚ್ಚರಿಸಬೇಕು ಎಂಬುದು ಗೊತ್ತಾಗುತ್ತದೆ. ಆ ಮಂತ್ರಗಳ ಪೂರ್ತಿ ವ್ಯಾಖ್ಯಾನವು ನಿರುಕ್ತ ಅಥವಾ ವ್ಯಾಕರಣದಿಂದಷ್ಟೇ ಗೊತ್ತಾಗುವುದಿಲ್ಲ. ಯಾರು ಯಾವ ಮಂತ್ರದ ಪ್ರಭಾವವನ್ನು ತಪಸ್ಸಿನ ಮುಖಾಂತರ ಸಾಧನೆ ಮಾಡಿ, ಅರ್ಥದರ್ಶನ ಮಾಡಿಕೊಳ್ಳುವರೊ ಅದು ಆ ಮಂತ್ರದ ಋಷಿ ಎಂದಾಗುವರು. ಈ ರೀತಿಯಲ್ಲಿ ಋಷಿಯು ಮಂತ್ರದ್ರಷ್ಟಾರನಾಗುವನು.

ವೇದದ ಪ್ರತಿಯೊಂದು ಮಂತ್ರದ ಅನುಪೂರ್ವಿ ಇದ್ದು, ಅದು ನಿತ್ಯವಾಗಿ ರುತ್ತದೆ. ಮಂತ್ರಗಳ ಶಬ್ದಗಳಲ್ಲಿ ಯಾವುದೇ ಏರುಪೇರು ಇರುವುದಿಲ್ಲ. ಮಂತ್ರ ಗಳ ಸಂಕಲನ ಕ್ರಮದಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಬಹುದಷ್ಟೆ.

ಇದರಿಂದ ವೇದ ಪಾಠದಲ್ಲಿ ಅನೇಕ ಪ್ರಣಾಲಿಗಳಿವೆ. ಇವುಗಳನ್ನು ಕ್ರಮ, ಘನ, ಜಟಾ, ಶಿಖಾ, ರೇಖಾ. ಮಾಲಾ, ಧ್ವಜ, ದಂಡ ಹಾಗೂ ರಥ ಎಂದು ಕರೆಯುತ್ತೇವೆ.

ವೇದಗಳ ಶಾಖೆಗಳು :

ತಮ್ಮ ಶಿಷ್ಯರಿಗೆ ಮಹರ್ಷಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ವೇದ ಮಂತ್ರಗಳನ್ನು ಓದಿಸುತ್ತಿದ್ದರು. ಯಾರೋ ಒಬ್ಬರು ಒಂದು ಛಂದಸ್ಸಿನ ಎಲ್ಲ ಮಂತ್ರಗಳನ್ನೂ ಒಂದೇ ಸಮನಾಗಿ ಓದಿಸಿದರು. ಮೂರನೆಯವರು ಮಂತ್ರಗಳ ವಿಷಯ ಹಾಗೂ ಉಪಯೋಗಗಳಿಗೆ ಅನುಸಾರ ಜೋಡಿಸಿಟ್ಟರು. ಈ ರೀತಿಯಲ್ಲಿ 'ಸಂಪಾದನ – ಕ್ರಮ'ದಲ್ಲಿ ಒಂದು ವೇದದ ಅನೇಕ ಶಾಖೆಗಳು ಉಂಟಾದುವು.

ಋಗ್ವೇದದಲ್ಲಿ ೨೧ ಶಾಖೆಗಳಿವೆಯೆಂದು ಹೇಳುತ್ತಾರೆ. ಇವುಗಳಲ್ಲಿ 'ಶಾಕಲಶಾಖಾ' ಎನ್ನುವುದು ಮಾತ್ರ ಶುದ್ಧ ರೂಪದಲ್ಲಿ ದೊರೆಯುವುದು.

ಯಜುರ್ವೇದದಲ್ಲಿ ಎರಡು ರೀತಿಯ ಪಾಠಾಂತರಗಳಿವೆ. ಒಂದನ್ನು ಶುಕ್ಲ ಯಜುರ್ವೇದವೆಂದೂ, ಮತ್ತೊಂದನ್ನು ಕೃಷ್ಣಯಜುರ್ವೇದವೆಂದೂ ಕರೆಯುತ್ತಾರೆ. ಶುಕ್ಲಯಜುರ್ವೇದದಲ್ಲಿ ೧೫ ಹಾಗೂ ಕೃಷ್ಣಯಜುರ್ವೇದದಲ್ಲಿ ೮೬ ಶಾಖೆಗಳಿವೆ. ಇವುಗಳಲ್ಲಿ ಶುಕ್ಲ ಯಜುರ್ವೇದದ ಕಾಣ್ವ ಹಾಗೂ ಮಾಧ್ಯಂದಿನ ಶಾಖೆಗಳು ಮಾತ್ರ ಇವೆ. ಕೃಷ್ಣಯಜುರ್ವೇದದ ತೈತ್ತರೀಯ, ಮೈತ್ರಾಯಣಿ, ಕಠ, ಕಾಪಿಷ್ಠಲ ಹಾಗೂ ಶ್ವೇತಾಶ್ವತರ – ಈ ಐದು ಶಾಖೆಗಳು ಮಾತ್ರ ದೊರೆಯುತ್ತವೆ.

ಸಾಮವೇದದಲ್ಲಿ ಒಂದು ಸಹಸ್ರ ಶಾಖೆಗಳಿವೆಯೆಂಬ ಉಲ್ಲೇಖವಿದೆ. ಅವುಗಳಲ್ಲಿ ಕೌಥುಮಿಾ, ಜೈಮಿನೀಯ ಹಾಗೂ ರಾಣಾಯನೀಯ–ಎನ್ನುವ ಮೂರು ಮಾತ್ರ ಇವೆ. ಇವುಗಳಲ್ಲಿಯೂ ಕೌಥುಮಿಾ, ಜೈಮಿನೀಯಗಳು ಮಾತ್ರವೇ ಪೂರ್ಣ ರೂಪದಲ್ಲಿರುವುದು. ರಾಣಾಯಾನೀಯಾ ಎನ್ನುವುದರ ಕೆಲವು ಅಂಶಗಳು ಮಾತ್ರ ಪ್ರಾಪ್ತವಾಗಿವೆ.

ಅಥರ್ವವೇದದ ಶಾಖೆಗಳಲ್ಲಿ ಈಗ ಪೈಪಲಾದೀ ಹಾಗೂ ಶೌನಕೀಯ ಶಾಖೆಗಳು ಮಾತ್ರ ಶುದ್ಧರೂಪದಲ್ಲಿ ದೊರೆತಿವೆ.

೨. ಬ್ರಾಹ್ಮಣ–ಗ್ರಂಥ : ವೇದಮಂತ್ರಗಳನ್ನು ಯಜ್ಞಗಳಲ್ಲಿ ಹೇಗೆ

ಉಪಯೋಗಿಸುವರು ಎಂಬುವನ್ನು ಬ್ರಾಹ್ಮಣಗಳಲ್ಲಿ ತಿಳಿಸಲಾಗಿದೆ.

ಈಗ ದೊರೆತಿರುವ ಬ್ರಾಹ್ಮಣಗಳೆಂದರೆ –

ಋಗ್ವೇದ : ಐತ್ತರೀಯ ಬ್ರಾಹ್ಮಣ ಮತ್ತು ಶಂಖಾಯನ ಬ್ರಾಹ್ಮಣ (ಅಥವಾ ಕೌಷೀತಕೀ ಬ್ರಾಹ್ಮಣ).

ಕೃಷ್ಣ ಯಜುರ್ವೇದ : ತೈತ್ತರೀಯ ಬ್ರಾಹ್ಮಣ ಹಾಗೂ ತೈತ್ತರೀಯ ಸಂಹಿತೆಯ ಮಧ್ಯವರ್ತೀ ಬ್ರಾಹ್ಮಣ.

ಶುಕ್ಲ ಯಜುರ್ವೇದ : ಶತಪಥ ಬ್ರಾಹ್ಮಣ (ಇದೂ ಎರಡು ಭಾಗಗಳಲ್ಲಿವೆ – ಕಣ್ವಶಾಖೆಯದು ೧೭ ಕಾಂಡಗಳಲ್ಲಿದೆ ಹಾಗೂ ಮಾಧ್ಯಂದಿನ ಶಾಖೆಯು ೧೪ ಕಾಂಡಗಳಲ್ಲಿದೆ).

ಸಾಮವೇದ : ೧–ತಾಂಡ್ಯ (ಪಂಚವಿಂಶ) ಬ್ರಾಹ್ಮಣ, ೨–ಷಡ್ವಿಂಶ ಬ್ರಾಹ್ಮಣ, ೩–ಸಾಮವಿಧಾನ ಬ್ರಾಹ್ಮಣ, ೪–ಆರ್ಷೇಯ ಬ್ರಾಹ್ಮಣ, ೫ – ಮಂತ್ರ ಬ್ರಾಹ್ಮಣ, ೬–ದೈವತಾಧ್ಯಾಯ ಬ್ರಾಹ್ಮಣ, ೭–ವಂಶ ಬ್ರಾಹ್ಮಣ, ೮–ಸಂಹಿತೋಪನಿಷದ್ ಬ್ರಾಹ್ಮಣ, ೯ – ಜೈಮಿನೀಯ ಬ್ರಾಹ್ಮಣ ಹಾಗೂ ೧೦ – ಜೈಮಿನೀಯ ಉಪನಿಷದ್ ಬ್ರಾಹ್ಮಣ.

ಅಥರ್ವವೇದ : ಗೋಪಥ ಬ್ರಾಹ್ಮಣ.

ಆರಣ್ಯಕ ಹಾಗೂ ಉಪನಿಷತ್ತು : ಬ್ರಾಹ್ಮಣಗಳಲ್ಲಿ ಕೆಲವು ಭಾಗಗಳು ಅರಣ್ಯಗಳಲ್ಲಿ ಪಠಿಸಲು ಯೋಗ್ಯವಾದವುಗಳು. ಅದರಿಂದ ಅವುಗಳ ಹೆಸರು 'ಆರಣ್ಯಕ'ಗಳು ಎಂದಾದುವು.

ಪ್ರಸ್ತುತ ೨೭೫ ಉಪನಿಷತ್ತುಗಳು ಲೆಕ್ಕಕ್ಕೆ ಸಿಕ್ಕಿವೆ. ಇವುಗಳಲ್ಲಿ ೧೩ ಉಪನಿಷತ್ತುಗಳು ಮುಖ್ಯವಾದುವು. ಅವು ಯಾವುವೆಂದರೆ – ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ, ಪ್ರಶ್ನ, ಐತರೇಯ, ತೈತ್ತಿರೀಯ, ಛಾಂದೋಗ್ಯ ಬೃಹದಾರಣ್ಯಕ, ಶ್ವೇತಾಶ್ವತರ, ಕೌಷೀತಕೀ ಹಾಗೂ ನೃಸಿಂಹತಾಪಿನೀ, ಇವುಗಳಲ್ಲಿ ಈಶಾವಾಸ್ಯೋಪನಿಯತ್ ಯಜುರ್ವೇದದ ಮೂಲ ಸಂಹಿತೆಯಲ್ಲಿದೆ.

೪. ಸೂತ್ರ ಗ್ರಂಥಗಳು : ವೇದಗಳಲ್ಲಿನ ಸೂತ್ರ ಭಾಗವು ಮೂರು ಪ್ರಕಾರಗಳಲ್ಲಿವೆ – ಶ್ರೌತ ಸೂತ್ರ, ಗೃಹ್ಯಸೂತ್ರ ಹಾಗೂ ಧರ್ಮಸೂತ್ರ.

೧) ಶ್ರೌತಸೂತ್ರದಲ್ಲಿ ಮಂತ್ರ ಸಂಹಿತೆಯ ಕರ್ಮಕಾಂಡವನ್ನು ವಿವರಿಸಲಾಗಿದೆ. ಪ್ರಸ್ತುತ ಈ ಕೆಳಗೆ ತಿಳಿಸಿರುವ ಶ್ರೌತಸೂತ್ರಗಳು ಉಪಲಬ್ಧವಿವೆ–

ಋಗ್ವೇದ : ಅಶ್ವಲಾಯನ, ಶಂಖಾಯನ ಶ್ರೌತಸೂತ್ರ.

ಕೃಷ್ಣಯಜುರ್ವೇದ : ಆಪಸ್ತಂಬ ಶ್ರೌತಸೂತ್ರ ಹಿರಣ್ಯಕೇಶಿಯ (ಸತ್ಯಾಷಾಢ) ಶ್ರೌತಸೂತ್ರ ಬೌಧಾಯನ ಶ್ರೌತಸೂತ್ರ, ಭಾರದ್ವಾಜ, ವೈಖಾನಸ, ವಾಧೂಲ, ಮಾನವ ಹಾಗೂ ವಾರಾಹಶ್ರೌತಸೂತ್ರಗಳು.

ಶುಕ್ಲಯಜುರ್ವೇದ : ಕಾತ್ಯಾಯನ (ಪಾರಸ್ಕರ) ಶ್ರೌತಸೂತ್ರ.

ಸಾಮವೇದ : ಮಶಕಸೂತ್ರ, ಲಾಟ್ಯಾಯನಸೂತ್ರ ದ್ರಾಹ್ಯಾಯಣ ಸೂತ್ರ ಹಾಗೂ ಖಾದಿರ ಇತ್ಯಾದಿ ಶ್ರೌತಸೂತ್ರಗಳು.

ಅಥರ್ವವೇದ: ಇದರಲ್ಲಿ ಕೇವಲ ವೈತಾನ ಶ್ರೌತಸೂತ್ರ ಮಾತ್ರ ಲಭ್ಯವಿದೆ.

೨) ಗೃಹ್ಯಸೂತ್ರ ಹಾಗೂ ಧರ್ಮಸೂತ್ರಗಳು : ಶ್ರೌತಸೂತ್ರಗಳು ಹೇಗೆ ನಾಲ್ಕೂ ವೇದಗಳಲ್ಲಿ ಕಾಣಸಿಗುವುದೊ ಹಾಗೆಯೇ ಗೃಹ್ಯಸೂತ್ರ, ಧರ್ಮ ಸೂತ್ರ ಹಾಗೂ ಶುಲ್ಬ ಸೂತ್ರಗಳೂ ಕೂಡ ನಾಲ್ಕೂ ವೇದಗಳಲ್ಲಿ ಕಾಣಸಿಗುತ್ತದೆ.

ಧರ್ಮಸೂತ್ರಗಳಲ್ಲಿ ಧರ್ಮಾಚರಣೆಯ ವರ್ಣನೆಯು ಇರುತ್ತದೆ. ಗೃಹ್ಯ ಸೂತ್ರಗಳಲ್ಲಿ ಕುಲಾಚಾರದ ವರ್ಣನೆ ಇರುತ್ತದೆ.

ಋಗ್ವೇದ : ಆಶ್ವಲಾಯನ ಗೃಹ್ಯಸೂತ್ರ ಹಾಗೂ ಶಂಖಾಯನ ಗೃಹ್ಯ ಸೂತ್ರಗಳು ಇದರಲ್ಲಿವೆ. ಇದರಲ್ಲಿ ವಸಿಷ್ಠ ಧರ್ಮ ಸೂತ್ರವೂ ಇದೆ. ಇದರ ಬಗ್ಗೆ ಸಂಸ್ಕೃತದಲ್ಲಿ ಅನೇಕ ಟೀಕೆಗಳು ಇವೆ.

ಕೃಷ್ಣಯಜುರ್ವೇದ : ಇದರಲ್ಲಿ ಮಾನವ ಗೃಹ್ಯಸೂತ್ರ, ಕಾಠಕ ಗೃಹ್ಯ ಸೂತ್ರ, ಆಪಸ್ತಂಬ ಗೃಹ್ಯಸೂತ್ರ, ಬೌಧಾಯನ ಗೃಹ್ಯಸೂತ್ರ, ವೈಖಾನಸ ಗೃಹ್ಯಸೂತ್ರ ಹಾಗೂ ಹಿರಣ್ಯಕೇಶೀಯ ಗೃಹ್ಯಸೂತ್ರಗಳಿವೆ. ಇವೇ ಹೆಸರಿನ ಧರ್ಮಸೂತ್ರಗಳೂ ಇವೆ.

ಶುಕ್ಲಯಜುರ್ವೇದ : ಇದರಲ್ಲಿ ಪಾರಸ್ಕರ ಗೃಹ್ಯ ಸೂತ್ರ ಹಾಗೂ ಕಾತ್ಯಾಯನ ಗೃಹ್ಯ ಸೂತ್ರಗಳಿವೆ. ಪಾರಸ್ಕರ ಗೃಹ್ಯಸೂತ್ರಗಳ ಮೇಲೆ ಕರ್ಕ, ಜಯರಾಮ, ಗದಾಧರ ಇತ್ಯಾದಿ ಏಳು ಸಂಸ್ಕೃತ ಟೀಕೆಗಳಿವೆ. ಈ ವೇದಕ್ಕೆ ಸಂಬಂಧಪಟ್ಟ ಹಾಗೆ ವಿಷ್ಣು ಧರ್ಮ ಸೂತ್ರವಿದೆ.

ಸಾಮವೇದ : ಇದರಲ್ಲಿ ಜೈಮಿನೀಯ, ಗೋಭಿಲ, ಖಾದಿರ, ದ್ರಾಹ್ಯಾಯಣ – ಎನ್ನುವ ನಾಲ್ಕು ರೀತಿಯ ಗೃಹ್ಯಸೂತ್ರಗಳಿವೆ.

ಇದರಲ್ಲಿ ಗೌತಮನು ಧರ್ಮ ಸೂತ್ರಗಳಿವೆ. ಇದರ ಮೇಲೆ ಮಸ್ಕರಿ ಭಾಷ್ಯ ಹಾಗೂ ಮಿತಾಕ್ಷರಾವೃತ್ತಿ ವ್ಯಾಖ್ಯಾನಗಳಿವೆ. ಇವಲ್ಲದೆ ಛಾಂದೋಗ ಪರಿಶಿಷ್ಟವಿದೆ.

ಅಥರ್ವವೇದ : ಇದರಲ್ಲಿ ಕೌಶಿಕ, ವಾರಾಹ ಹಾಗೂ ವೈಖಾನಸ ಗೃಹ್ಯ ಸೂತ್ರಗಳಿವೆ. ಆದರೆ ಇದರ ಬಗ್ಗೆ ಯಾವುದೇ ಧರ್ಮಸೂತ್ರ ಇದುವರೆವಿಗೆ ದೊರೆತಿಲ್ಲ.

೫. ಪ್ರಾತಿ ಶಾಖ್ಯ : ಪ್ರಾತಿಶಾಖ್ಯ ಎನ್ನುವುದು ಒಂದು ರೀತಿಯ ವೈದಿಕ ವ್ಯಾಕರಣವಾಗಿದೆ. ಇದು ನಾಲ್ಕು ವೇದಗಳಲ್ಲಿ ದೊರೆಯುತ್ತದೆ. ಕಾತ್ಯಾಯನ ಶುಲ್ಬಸೂತ್ರವು ಯಜುರ್ವೇದದ ಶುಲ್ಬ ಸೂತ್ರಗಳಲ್ಲಿ ಪ್ರಧಾನ ವಾದುದು. ಇದರಲ್ಲಿ ರೇಖಾಶಾಸ್ತ್ರದ ವಿಸ್ತಾರವಾದ ವರ್ಣನೆ ಇದೆ. ಇದರಲ್ಲಿ ಭೌತಿಕ ವಿಜ್ಞಾನದ ವರ್ಣನೆ ಇರುವ ವಿಭಾಗವು ಲುಪ್ತವಾಗಿ, ಆದಿಲ್ಲದೆ ವೈದಿಕ ಭೌತ ವಿಜ್ಞಾನವು ಅತಂತ್ರವಲ್ಲಿದೆ.

೬. ಅನುಕ್ರಮಿಣೀ : ವೇದಗಳ ರಕ್ಷಣೆ ಹಾಗೂ ವೇದಾರ್ಥಗಳ ರಕ್ಷಣೆಯನ್ನು ಈ ಗ್ರಂಥಗಳು ಮಾಡುತ್ತವೆ.

ಋಗ್ವೇದ : ೧ – ಆರ್ಷಾನುಕ್ರಮಣೀ – ಇದರಲ್ಲಿ ಮಂತ್ರಕ್ರಮದಿಂದ ಪ್ರಾರಂಭವಾಗುವ ಋಷಿಗಳ ಹೆಸರುಗಳಿವೆ, ೨–ಛಾಂದೋಽನು ಕ್ರಮಿಣೀ, ೩–ದೇವಾನುಕ್ರಮಿಣೀ, ೪-ಅನುವಾಕಾನು ಕ್ರಮಿಣೀ, ೫-ಸರ್ವಾನುಕ್ರಮಿಣೀ, ೬–ಬೃಹದ್ದೈವತ, ೭–ಋಗ್ವಿಜ್ಞಾನ, ೮–ಬಹ್ವಚ್ ಪರಿಶಿಷ್ಟ, ೯–ಶಾಂಖಾಯನ–ಪರಿಶಿಷ್ಟ, ೧೦ – ಆಶ್ವಲಾಯನ ಪರಿಶಿಷ್ಟ ಹಾಗೂ ೧೧ – ಋಕ್ ಪ್ರಾತಿ ಶಾಖ್ಯಗಳು ಲಭ್ಯವಿದೆ.

ಕೃಷ್ಣ ಯಜುರ್ವೇದ : ಇದರಲ್ಲಿ ಆತ್ರೇಯಾನು ಕ್ರಮಿಣೀ, ಚಾರಾ ಯಣೀಯಾನುಕ್ರಮಿಣೀ, ಹಾಗೂ ತೈತ್ತರೀಯ ಪ್ರಾತಿಶಾಖ್ಯಗಳು ಇವೆ.

ಶುಕ್ಲ ಯಜುರ್ವೇದ : ಇದರ ಪ್ರಾತಿಶಾಖ್ಯ ಸೂತ್ರ ಹಾಗೂ ಕಾತ್ಯಾ ಯಾನುಕ್ರಮಿಣೀಗಳು ಲಭ್ಯವಿದೆ.

ಕೃಷ್ಣ ಯಜುರ್ವೇದ : ಇದರಲ್ಲಿ ಆತ್ರೇಯಾನುಕ್ರಮಿಣೀ, ಚಾರಾಯಣೀ ಯಾನುಕ್ರಮಣೀ ಹಾಗೂ ತೈತ್ತರೀಯ ಪ್ರಾತಿಶಾಖ್ಯಗಳು ಇವೆ.

ಶುಕ್ಲ ಯಜುರ್ವೇದ : ಇದರ ಪ್ರಾತಿ ಶಾಖ್ಯ ಸೂತ್ರ ಹಾಗೂ ಕಾತ್ಯಾಯಾನು ಕ್ರಮಣೀಗಳು ಲಭ್ಯವಿವೆ.

## ೨. ವೇದಾಂಗ

ವೇದಗಳಿಗೆ ಆರು ಅಂಗಗಳಿವೆಯೆಂದು ನಂಬಲಾಗಿದೆ. ಈ ಅಂಗಗಳಿಲ್ಲದೆ ವೈದಿಕ ಜ್ಞಾನವು ಅಪೂರ್ಣವಾದುದಾಗಿರುತ್ತದೆ. ವೇದಗಳ ಕಣ್ಣುಗಳೇ. ೧. ಜ್ಯೋತಿಷ, ವೇದಗಳ ಕಿವಿಗಳೇ, ೨. ನಿರುಕ್ತ–ಅವುಗಳ ನಾಸಿಕವೇ, ೩. ಶಿಕ್ಷಾ–ವೇದಗಳ ಮುಖವೇ, ೪. ವ್ಯಾಕರಣ–ವೇದಗಳ ಕೈಗಳು, ೫. ಕಲ್ಪ–ವೇದಗಳ ಕಾಲುಗಳು, ೬. ಛಂದಸ್ಸು ಆಗಿದೆ.

ಛಂದಃ ಪಾದೌ ತು ವೇದಸ್ಯ
ಹಸ್ತೌ ಕಲ್ಪೋಽಥ ಪಠ್ಯತೆ
ಜ್ಯೋತಿಷಾಮಯನಂ ಚಕ್ಷುಃ
ನಿರುಕ್ತಂ ಶ್ರೋತ್ರಮುಚ್ಯತೇ
ಶಿಕ್ಷಾಘ್ರಾಣಂ ತು ವೇದಸ್ಯ
ಮುಖಂ ವ್ಯಾಕರಣಂ ಸ್ಮೃತಮ್
ತಸ್ಮಾತ್ಸಾಂಗಮಧೀತ್ಯೈವ
ಬ್ರಹ್ಮಲೋಕೇ ಮಹೀಯತೆ

ಆದುದರಿಂದ ಈ ಆರೂ ವೇದಾಂಗಗಳನ್ನು ಅಧ್ಯಯನ ಮಾಡಿದಾಗಲೇ ವೇದಾಧ್ಯಯನವು ಪೂರ್ಣವಾಗುವುದು.

೧. ಜ್ಯೋತಿಷ : ಜ್ಯೋತಿಷವು ಜನರಲ್ಲಿ ಸಂಸ್ಕಾರವನ್ನು ಉಂಟು ಮಾಡುತ್ತದೆ. ಅದು ಯಜ್ಞಗಳಿಗೆ ಮುಹೂರ್ತವನ್ನು ನಿರ್ಣಯಿಸಿ, ನಿಗದಿ ಮಾಡುತ್ತದೆ. ಯಜ್ಞಸ್ಥಳ, ಮಂಟಪಗಳ ಅಳೆಯುವಿಕೆಯನ್ನೂ ಅದು ತಿಳಿಸುತ್ತದೆ. ವ್ಯಾಕರಣದಂತೆ ಜ್ಯೋತಿಷ್ಯವೂ ಕೂಡ ವ್ಯಾಪಕವಾದುದು ಲಗಧಾಚಾರ್ಯನ ಜ್ಯೋತಿಷ ವಲ್ಲದೆ, ಸಾಮಾನ್ಯ ಜ್ಯೋತಿಷವನ್ನು ತಿಳಿಸುವ ಅನೇಕ ಗ್ರಂಥಗಳಿವೆ.

ವರಾಹ ಮಿಹಿರ, ಆರ್ಯಭಟ್ಟ, ಬ್ರಹ್ಮಗುಪ್ತ ಹಾಗೂ ಭಾಸ್ಕರಾಚಾರ್ಯರುಗಳ ಜ್ಯೋತಿಷ ಗ್ರಂಥಗಳೂ ಕೂಡ ತುಂಬಾ ಪ್ರಸಿದ್ಧಿ ಪಡೆದಿವೆ.

೨. ಕಲ್ಪ : ಕಲ್ಪಸೂತ್ರಗಳಲ್ಲಿ ಯಜ್ಞಗಳ ವಿಧಿ ವಿಧಾನಗಳ ವರ್ಣನೆ ಇದೆ. ನಾರದ, ಪರಾಶರ, ವಸಿಷ್ಠರುಗಳ ಕಲ್ಪಸೂತ್ರಗ್ರಂಥಗಳು ಹೆಚ್ಚು ಪ್ರಚಾರದಲ್ಲಿವೆ.

೩. ನಿರುಕ್ತ : ಪಾಣಿನಿಯ ವ್ಯಾಕರಣದ ವ್ಯಾಪಕ ಪ್ರಚಾರದಿಂದ ಇತರೇ ಪ್ರಾಚೀನ ವ್ಯಾಕರಣಗಳು ಲುಪ್ತವಾಗಿ ಹೋದುವು. ಇದೇ ರೀತಿಯಲ್ಲಿ ನಿರುಕ್ತಗ್ರಂಥಗಳೂ ಲುಪ್ತವಾದುವು. ವೇದಗಳ ವ್ಯಾಖ್ಯಾನವೇ ನಿರುಕ್ತಗಳು. ಇವನ್ನು ವೇದಗಳ ವಿಶ್ವಕೋಶವೆಂದು ಕರೆಯಲಾಗುತ್ತದೆ. ಈಗ ಕೇವಲ ಯಾಸ್ಕಾಚಾರ್ಯನ ನಿರುಕ್ತವು ಮಾತ್ರ ಉಪಲಬ್ಧವಿದೆ. ಈ ನಿರುಕ್ತದ ಮೇಲೆ ಅನೇಕ ಭಾಷ್ಯಗಳು, ಟೀಕೆಗಳ ಗ್ರಂಥಗಳಿವೆ. ಇದೇ ರೀತಿಯಲ್ಲಿ ಕಶ್ಯಪ, ಶಾಕಪೂಣಿ ಇತ್ಯಾದಿಗಳ ನಿರುಕ್ತಗ್ರಂಥಗಳು ಕಂಡು ಬಂದಿವೆ.

೪. ವ್ಯಾಕರಣ : ಭಾಷೆಯ ನಿಯಮವನ್ನು ಸ್ಥಿರಗೊಳಿಸುವುದು ವ್ಯಾಕರಣದ ಕೆಲಸ. ಶಾಕಟಾಯನನ ವ್ಯಾಕರಣದ ಸೂತ್ರಗಳು ಹಾಗೂ ಇಂದು ಲಭ್ಯವಿರುವ ಪಾಣಿನೀಯ ವ್ಯಾಕರಣಗಳು ಯಜುರ್ವೇದದೊಂದಿಗೆ ಸಂಬದ್ಧವಾಗಿವೆ. ಇದಕ್ಕೆ ಮುಂಚೆಯೂ ಅನೇಕ ವ್ಯಾಕರಣ ಗ್ರಂಥಗಳು ಇದ್ದವು. ಇವುಗಳ ಸೂತ್ರಗಳು ಅಲ್ಲಲ್ಲಿ ಪಾಣಿನಿಯ ಗ್ರಂಥದಲ್ಲಿವೆ. ಪಾಣಿನಿಯ ವ್ಯಾಕರಣದ ಮೇಲೆ ಕಾತ್ಯಾಯನ ಋಷಿಯ ವಾರ್ತಿಕ ಹಾಗೂ ಮಹರ್ಷಿ ಪತಂಜಲಿಯ ಮಹಾಭಾಷ್ಯಗಳು ರಚಿತವಾಗಿವೆ.

ಆ ನಂತರದಲ್ಲಿ ಇವರ ಮೇಲೆ ಅನೇಕ ವ್ಯಾಖ್ಯೆಗಳು ಟೀಕೆಗಳು ಹಾಗೂ ವಿವೇಚನಾತ್ಮಕ ಗ್ರಂಥಗಳು-ಬಹಳಷ್ಟು ಸಂಖ್ಯೆಯಲ್ಲಿ ಸೃಷ್ಟಿಯಾಗಿವೆ.

ಇವೇ ಅಲ್ಲದೆ ಸಾರಸ್ವತ – ವ್ಯಾಕರಣ, ಕಾಮಧೇನು – ವ್ಯಾಕರಣ, ಹೇಮಚಂದ್ರ – ವ್ಯಾಕರಣ, ಪ್ರಾಕೃತ ಪ್ರಕಾಶ, ಪ್ರಾಕೃತ ವ್ಯಾಕರಣಗಳು, ಕಲಾಪ ವ್ಯಾಕರಣ, ಮುಗ್ಧಬೋಧ–ವ್ಯಾಕರಣ. ಇತ್ಯಾದಿ ಅನೇಕ ವ್ಯಾಕರಣ ಶಾಸ್ತ್ರಗಂಥಗಳು ಪ್ರಸಿದ್ಧಿಯನ್ನು ಪಡೆದಿವೆ. ಇವೆಲ್ಲವುಗಳ ಮೇಲೂ ಭಾಷ್ಯ ಟೀಕಾ ಹಾಗೂ ವಿವೇಚನೆಗಳು ಇವೆ.

೫. ಶಿಕ್ಷಾ : ಶಿಕ್ಷಾದಲ್ಲಿ ಮಂತ್ರಗಳ ಸ್ವರ, ಅಕ್ಷರ, ಮಾತ್ರಾ ಹಾಗೂ ಉಚ್ಚಾರಣೆಗಳ ವಿವೇಚನೆ ಇರುತ್ತದೆ. ಪ್ರಸ್ತುತ ಈ ಕೆಳಗೆ ತಿಳಿಸಿರುವ ಶಿಕ್ಷಾ ಗ್ರಂಥಗಳು ಪ್ರಸಿದ್ಧಿ ಪಡೆದಿವೆ.

ಋಗ್ವೇದ : ಪಾಣಿನೀಯ ಶಿಕ್ಷಾ

ಕೃಷ್ಣ ಯಜುರ್ವೇದ : ವ್ಯಾಸ ಶಿಕ್ಷಾ

ಶುಕ್ಲ ಯಜುರ್ವೇದ : ಯಾಜ್ಞವಲ್ಕ್ಯ ಇತ್ಯಾದಿಯವರುಗಳ ೨೫ ಶಿಕ್ಷಾ ಗ್ರಂಥಗಳಿವೆ.

ಸಾಮವೇದ : ಗೌತಮಿ, ಲೋಮಶೀ ಹಾಗೂ ನಾರದೀಯ ಶಿಕ್ಷಾಗಳು.

ಅಥರ್ವವೇದ : ಮಾಂಡೂಕೀ ಶಿಕ್ಷಾ.

೬. ಛಂದಸ್ಸು : ಪ್ರಸ್ತುತ ವೈದಿಕ ಛಂದಸ್ಸಿನ ನಿರ್ದೇಶನವು ಮುಖ್ಯವಾಗಿ ಈ ಕೆಳಕಂಡ ಗ್ರಂಥಗಳಲ್ಲಿ ಕಂಡುಬರುತ್ತವೆ – ಗಾರ್ಗಪ್ರೋಕ್ತ ಉಪನಿಧಾನ ಸೂತ್ರ (ಸಾಮವೇದೀಯ), ಪಿಂಗಳನಾಗ ಪ್ರೋಕ್ತ ಛಂದಃ ಸೂತ್ರ (ಛಂದೋವಿಚಿತಿ), ವೆಂಕಟ ಮಾಧವ ಕೃತ ಛಂದೋಽನುಕ್ರಮಣೀ ಹಾಗೂ ಜಯದೇವ ಛಂದಃಸೂತ್ರ. ಲೌಕಿಕ ಛಂದಗಳ ಬಗ್ಗೆಯೂ ಕೃತಿಗಳಿವೆ. ಮುಖ್ಯವಾದುವು – ಛಂದಃಶಾಸ್ತ್ರ (ಹಲಾಯುಧ ವೃತ್ತಿ), ಛಂದೋ ಮಂಜರಿ, ವೃತ್ತರತ್ನಾಕರ, ಶ್ರುತ ಬೋಧ, ಜಾನಾಶ್ರಯಿ ಛಂದೋವಿಚಿತಿ–ಇತ್ಯಾದಿ ಅನೇಕ ಗ್ರಂಥಗಳಿವೆ.

## ೩. ಉಪವೇದ

ಪ್ರತಿಯೊಂದು ವೇದಕ್ಕೂ ಒಂದೊಂದು ಉಪವೇದವಿದೆ. ಋಗ್ವೇದಕ್ಕೆ ಅರ್ಥವೇದ, ಯಜುರ್ವೇದಕ್ಕೆ ಧನುರ್ವೇದ, ಸಾಮವೇದಕ್ಕೆ ಗಾಂಧರ್ವವೇದ, ಅಥರ್ವವೇದಕ್ಕೆ ಆಯುರ್ವೇದ ಉಪವೇದಗಳಾಗಿವೆ.

೧. ಅರ್ಥವೇದ : 'ಬೃಹಸ್ಪತೇಃ ಅರ್ಥಾಧಿ ಕಾರಿಕಮ್' ಎಂಬುದರಿಂದ ಬಾರ್ಹಸ್ಪತ್ಯ ಅರ್ಥಶಾಸ್ತ್ರವಿರುವುದು ಗೊತ್ತಾಗುತ್ತದೆ. ಆದರೆ ಇಂದಿರುವ ಈ ಗ್ರಂಥವು ತುಂಬಾ ಕಿರುಪ್ರಮಾಣದ್ದು. ಕೌಟಿಲ್ಯನ ಅರ್ಥಶಾಸ್ತ್ರವು ಈ ನಿಟ್ಟಿನಲ್ಲಿನ ತುಂಬಾ ಮಹತ್ವಪೂರ್ಣವಾದ ಗ್ರಂಥವಾಗಿದೆ. ಇದೇ ಅಲ್ಲದೆ ಸೋಮದೇವ ಭಟ್ಟನ ನೀತಿ ವಾಕ್ಯಾಮೃತಸೂತ್ರ, ಚಾಣಕ್ಯಸೂತ್ರ, ಕಾಮಂದಕ, ಶುಕ್ರನೀತಿ-ಎಂಬ ಗ್ರಂಥಗಳೂ ಅರ್ಥಶಾಸ್ತ್ರವನ್ನು ಕುರಿತಾದ ಗ್ರಂಥಗಳಾಗಿವೆ.

೨. ಧನುರ್ವೇದ : ಈ ವಿಷಯಕ್ಕೆ ಸಂಬಂಧಪಟ್ಟ ಹಾಗೆ ವೈಶಂಪಾಯನನ ಧನುರ್ವೇದ (ವೈಶಂಪಾಯನ ನೀತಿ–ಪ್ರಕಾಶಿಕಾ), ವೃದ್ಧ ಶಾರ್ಙ್ಗಧರ,

ಯುಕ್ತಿ ಕಲ್ಪತರು, ಸಮರಾಂಗಣಸೂತ್ರಧಾರ ಎನ್ನುವ ಗ್ರಂಥಗಳು ದೊರೆಯುತ್ತವೆ.

ಧನುರ್ವೇದಗಳಲ್ಲಿ ಅಸ್ತ್ರ ಶಸ್ತ್ರಗಳ ನಿರ್ಮಾಣ ಹಾಗೂ ಅವುಗಳ ಪ್ರಯೋಗದ ವರ್ಣನೆ ಇದೆ. ಈ ಶಾಸ್ತ್ರದಲ್ಲಿ ಪ್ರಯೋಗಮಾಡುತ್ತ – ಕಲಿಯುವುದನ್ನೂ ನಿರ್ಮಾಣ ಮಾಡುವುದನ್ನೂ ವಿವರಿಸಲಾಗಿದೆ. ಪ್ರಯೋಗ ಮಾಡುವ ಈ ಪರಂಪರೆಯು ಪೂರ್ತಿ ನಿಂತುಹೋಗಿರುವುದರಿಂದ ಇದು ಲುಪ್ತವಾಗಿದೆಯೆಂದೇ ಹೇಳಬಹುದು.

೩. ಗಂಧರ್ವವೇದ : ಇದರಲ್ಲಿ ನೃತ್ಯ ಹಾಗೂ ಗಾಯನಕ್ಕೆ ಸಂಬಂಧಪಟ್ಟ ವಿಷಯಗಳಿವೆ. ರಾಗ–ರಾಗಿಣಿ, ತಾಳ–ಸ್ವರ, ವಾದ್ಯಗಳು ಹಾಗೂ ನೃತ್ಯಗಳ ಭೇದೋಪಭೇದ ವರ್ಣನೆಗಳು ಇವೆ. ಬಹಳ ಪ್ರಾಚೀನಕಾಲದಿಂದಲೂ ಗಾನವಿದ್ಯೆಯು ಪ್ರಚಾರದಲ್ಲಿದೆ. ಇದಕ್ಕೆ ಸಂಬಂಧಪಟ್ಟ 'ಘರಾನೆ' ಗಳೂ ಇವೆ. ಆದರೂ ಸಾಮಗಾನದ 'ಆರಣ್ಯಗಾನ' ಹಾಗೂ 'ಗೇಯಗಾನ' - ಇವೆರಡೂ ಪ್ರಾಕಾರಗಳು ಪೂರ್ತಿಯಾಗಿ ಲುಪ್ತವಾಗಿವೆ. ಪ್ರಾಚೀನ ಗಾಯನ ಶಾಸ್ತ್ರದ ಅನೇಕ ಗ್ರಂಥಗಳು ಇಂದಿಗೂ ದೊರೆಯುತ್ತವೆ. ಇವುಗಳಲ್ಲಿ ಮುಖ್ಯವಾದುವು–ಭರತಮುನಿಯ ಭರತ ನಾಟ್ಯಶಾಸ್ತ್ರ (ಇದರ ಬಗ್ಗೆ ಅಭಿನವಗುಪ್ತನ ಟೀಕೆ ಇದೆ), ದತ್ತಿಲಮುನಿಯ ದತ್ತಿಲಮ್, ಶಾರ್ಙ್ಗದೇವನ ಸಂಗೀತರತ್ನಾಕರ (ಇದರ ಬಗ್ಗೆ ಮಲ್ಲಿನಾಥ ಇತ್ಯಾದಿಯವರುಗಳ ಟೀಕೆಗಳು ಇವೆ) ಮತ್ತು ದಾಮೋದರ ಕೃತ 'ಸಂಗೀತ ದರ್ಪಣ' ಎಂಬವುಗಳು.

೪. ಆಯುರ್ವೇದ : ಶರೀರದ ರಚನೆ, ರೋಗದ ಕಾರಣ, ಲಕ್ಷಣ, ಔಷಧಿ, ಗುಣ, ವಿಧಾನ ಹಾಗೂ ಚಿಕಿತ್ಸೆಯ ವರ್ಣನೆಗಳು ಈ ಶಾಸ್ತ್ರದಲ್ಲಿದೆ. ಆಯುರ್ವೇದ ಗ್ರಂಥಗಳಲ್ಲಿ ಅಶ್ವಿನೀ ಕುಮಾರ ಸಂಹಿತಾ, ಬ್ರಹ್ಮಸಂಹಿತಾ, ಭೇಲ ಸಂಹಿತಾ ಹಾಗೂ ಅಗ್ನಿಪ್ರಸೂತ್ರರಾಜ–ಇವು ತುಂಬಾ ಪ್ರಾಚೀನವಾದ ಗ್ರಂಥಗಳು. ಇವಲ್ಲದೆ ಸುಶ್ರುತ ಸಂಹಿತಾ, ಧಾತುವಾದ, ಜಾಬಾಲಿಸೂತ್ರ, ಇಂದ್ರಸೂತ್ರ, ಶಬ್ದಕುತೂಹಲ ಹಾಗೂ ದೇವಲ ಸೂತ್ರಗಳೂ ಕೂಡ ಪ್ರಾಚೀನ ಗ್ರಂಥಗಳಾಗಿವೆ. ಇವುಗಳೊಂದಿಗೆ ಚರಕ ಸಂಹಿತಾ ಹಾಗೂ ಅಷ್ಟಾಂಗ ಹೃದಯಗಳೂ ಕೂಡ ಪ್ರಾಚೀನವಾದರೂ ಲಭ್ಯವಿದೆ.

ಆಯುರ್ವೇದದಲ್ಲಿ ಸಹಸ್ರಾರು ಗ್ರಂಥಗಳಿವೆ. ಇವುಗಳಲ್ಲಿ ಕೆಲವು

ಮಾನವನಿಗೆ ಸಂಬಂಧಪಟ್ಟವುಗಳಾಗಿವೆ, ಇನ್ನು ಕೆಲವು ಅಶ್ವ, ಗೋವು, ಗಜ ಹಾಗೂ ಇತರೇ ಪಶುಪಕ್ಷಿಗಳ ಚಿಕಿತ್ಸೆಗಳು ಹಾಗೂ ಅವುಗಳ ಉಪಾಯಗಳ ವರ್ಣನೆಗಳನ್ನು ಒಳಗೊಂಡಿವೆ.

ಹೀಗೆ ಈ ವೇದ, ವೇದಾಂಗ, ಉಪವೇದಗಳು ಹಿಂದೂ ಜನಜೀವನದ ಒಂದು ಭಾಗವಾಗಿ ಶತಶತಮಾನಗಳಿಂದಲೂ ಹಿಂದೂ ಧರ್ಮದ ಮೇಲೆ ಪ್ರಭಾವ ಬೀರುತ್ತಾ ಉಳಿದುಬಂದಿವೆ.

ಹಿಂದೂ ಧರ್ಮಕ್ಕೆ ವೇದ, ವೇದಾಂಗ, ಉಪವೇದಗಳು ಬಲಗಣ್ಣಿನಂತಿದ್ದರೆ, ಇತಿಹಾಸ, ದರ್ಶನ, ಆಗಮಗಳು ಎಡಗಣ್ಣಿದ್ದಂತೆ.

## ೪. ಇತಿಹಾಸ

ಇತಿಹಾಸ ಪುರಾಣಾಭ್ಯಾಂ
ವೇದಂ ಸಮುಪಬೃಂಹಯೇತ್

ಇತಿಹಾಸ – ಪುರಾಣಗಳಲ್ಲಿ ವೇದಾರ್ಥದ ಸಂಪೂರ್ಣ ವಿವೇಚನೆ ಅಡಗಿದೆ. ಅದುದರಿಂದಲೇ ಇತಿಹಾಸ–ಪುರಾಣಗಳನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಲಾಗುವುದಿಲ್ಲ. ಇದರಿಂದಲೇ ಇತಿಹಾಸ ಪುರಾಣಗಳನ್ನು ವೇದಗಳ ಉಪಾಂಗಗಳೆಂದು ಕರೆಯಲಾಗುತ್ತದೆ.

ವಾಲ್ಮೀಕಿ ಮಹರ್ಷಿಯ ರಾಮಾಯಣ ಹಾಗೂ ಭಗವಾನ್ ವೇದ ವ್ಯಾಸರ ಮಹಾಭಾರತ–ಮುಖ್ಯ ಇತಿಹಾಸ ಗ್ರಂಥಗಳಾಗಿವೆ. ಹರಿವಂಶವು ಮಹಾ ಭಾರತದ ಪರಿಶಿಷ್ಟವಾಗಿರುವುದರಿಂದ, ಅದನ್ನೂ ಇತಿಹಾಸವೆಂದೇ ಕರೆಯಲಾಗುತ್ತದೆ. ಇವೇ ಅಲ್ಲದೆ ಅಧ್ಯಾತ್ಮರಾಮಾಯಣ, ಯೋಗವಾಸಿಷ್ಠ ಇತ್ಯಾದಿ ಅನೇಕ ಇತಿಹಾಸ ಗ್ರಂಥಗಳಿವೆ.

## ೫. ಪುರಾಣಗಳು

ನಾಲ್ಕು ರೀತಿಯ ಪುರಾಣಗಳಿವೆ – ೧. ಮಹಾಪುರಾಣ, ೨. ಪುರಾಣ, ೩. ಅತಿಪುರಾಣ, ಹಾಗೂ ೪. ಉಪಪುರಾಣ.

ಇವುಗಳಲ್ಲಿ ಪ್ರತಿಯೊಂದೂ ಹದಿನೆಂಟು, ಹದಿನೆಂಟು ಇವೆ ಎಂದು ಹೇಳಲಾಗುತ್ತದೆ. ಸಾಧಾರಣವಾಗಿ ಮಹಾಪುರಾಣಗಳನ್ನೇ ಪುರಾಣಗಳೆಂಬ ಹೆಸರಿನಿಂದ ಕರೆಯಲಾಗುತ್ತದೆ.

ಮುಖ್ಯ ಮಹಾಪುರಾಣಗಳೆಂದರೆ – ೧. ಬ್ರಹ್ಮಪುರಾಣ, ೨. ಪದ್ಮ ಪುರಾಣ, ೩. ಶಿವಪುರಾಣ, ೪ ವಿಷ್ಣುಪುರಾಣ, ೫. ಶ್ರೀಮದ್ಭಾಗವತ, ೬. ನಾರದೀಯ ಪುರಾಣ, ೭. ಮಾರ್ಕಂಡೇಯ ಪುರಾಣ, ೮. ಅಗ್ನಿಪುರಾಣ, ೯. ಭವಿಷ್ಯಪುರಾಣ, ೧೦. ಬ್ರಹ್ಮವೈವರ್ತ ಪುರಾಣ, ೧೧. ಲಿಂಗಪುರಾಣ, ೧೨. ವರಾಹ ಪುರಾಣ, ೧೩. ಸ್ಕಂದ ಪುರಾಣ, ೧೪. ವಾಮನ ಪುರಾಣ, ೧೫. ಕೂರ್ಮ ಪುರಾಣ, ೧೬. ಮತ್ಸ್ಯ ಪುರಾಣ, ೧೭. ಗರುಡ ಪುರಾಣ, ೧೮. ಬ್ರಹ್ಮಾಂಡ ಪುರಾಣ.

ವೇದಗಳಲ್ಲಿ ಹೇಳಲ್ಪಟ್ಟಿರುವ ಎಲ್ಲ ವಿಷಯಗಳೂ ಪುರಾಣಗಳಲ್ಲಿ ವಿಸ್ತಾರ ರೂಪದಲ್ಲಿ ವಿವರಿಸಲಾಗಿದೆ.

## ೬. ಸ್ಮೃತಿಗಳು

ಹಿಂದೂ ಧರ್ಮ ಹಾಗೂ ಹಿಂದೂ ಸಮಾಜದ ಮುಖ್ಯ ಸಂಚಾಲಕರೆಂದರೆ ಸ್ಮೃತಿಗಳು. ಸ್ಮೃತಿಗಳಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ – ಈ ನಾಲ್ಕೂ ಪುರುಷಾರ್ಥಗಳ ವಿವೇಚನೆ ಇದೆ. ಇವುಗಳಲ್ಲಿ ವರ್ಣ, ಆಶ್ರಮ ವ್ಯವಸ್ಥೆಗಳು, ವರ್ಣಾಶ್ರಮಧರ್ಮ, ವಿಶೇಷ ಸಂದರ್ಭಗಳಲ್ಲಿ ನಡೆಸಬೇಕಾದ ಕರ್ಮಗಳು, ಪ್ರಾಯಶ್ಚಿತ್ತ, ಶಾಸನಗಳನ್ನು ಮಾಡುವ ರೀತಿಗಳು, ದಂಡವ್ಯವಸ್ಥೆ ಹಾಗೂ ಮೋಕ್ಷದ ಸಾಧನಗಳ ವರ್ಣನೆ ಇದೆ.

ನೂರಕ್ಕಿಂತಲೂ ಹೆಚ್ಚಿನ ಸ್ಮೃತಿಗಳು ಲಭ್ಯವಾಗಿವೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ–ಮನು, ಯಾಜ್ಞವಲ್ಕ್ಯ, ಅತ್ರಿ, ವಿಷ್ಣು, ಹಾರೀತ, ಔಶನಸ, ಆಂಗೀರಸ, ಯಮ, ಆಪಸ್ತಂಭ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ವಸಿಷ್ಠ, ಪ್ರಜಾಪತಿ – ಇತ್ಯಾದಿಯವುಗಳು.

ಇವುಗಳಲ್ಲಿಯೂ ಕೂಡ ಮನುಸ್ಮೃತಿ ಹಾಗೂ ಯಾಜ್ಞವಲ್ಕ್ಯ ಸ್ಮೃತಿಗಳು ತುಂಬಾ ಪ್ರಖ್ಯಾತವಾದವು. ಆದರೆ ಕಲಿಯುಗಕ್ಕೆ ಸಂಬಂಧಪಟ್ಟ ಹಾಗೆ ಮಾತ್ರ 'ಪರಾಶರಸ್ಮೃತಿ'ಯು ತುಂಬಾ ಮುಖ್ಯವಾದುದೆಂದು ನಂಬಲಾಗಿದೆ.

## ೭. ದರ್ಶನಗಳು

'ದೃಶ್ಯತೆ ಯಥಾರ್ಥ ತಯಾ ವಸ್ತು ಪದಾರ್ಥ ಜ್ಞಾನಮಿತಿ ದರ್ಶನಮ್'

ಎನ್ನುವುದರ ಅನುಸಾರ ಶಾಸ್ತ್ರಗಳ 'ತತ್ತ್ವಜ್ಞಾನ ಸಾಧಕ' ಭಾಗಗಳೇ ದರ್ಶನ ಶಾಸ್ತ್ರವೆಂಬ ಹೆಸರನ್ನು ಪಡೆದಿದೆ.

ಸೃಷ್ಟಿ ಹಾಗೂ ಜೀವಿಯ ಜನನ-ಮರಣಗಳಿಗೆ ಕಾರಣನಾರು ? ಅವುಗಳ ಗತಿ ವಿಧಾನಗಳಿಗೆ ಪ್ರೇರಕನಾರು ? ಎನ್ನುವ ಪ್ರಶ್ನೆಗಳಿಗೆ ಶಾಸ್ತ್ರಾರ್ಥ ವಿವರ ನೀಡುವುದೇ 'ದರ್ಶನಗಳ' ಕೆಲಸ.

ಮುಖ್ಯವಾದ ದರ್ಶನಗಳೆಂದರೆ – ೧. ವೈಶೇಷಿಕ, ೨. ಸಾಂಖ್ಯ, ೩. ಯೋಗ, ೪. ನ್ಯಾಯ, ೫. ಪೂರ್ವಮೀಮಾಂಸಾ ಹಾಗೂ ೬. ಉತ್ತರ ಮೀಮಾಂಸಾ.

ಇವುಗಳಲ್ಲಿ ಪ್ರತಿಯೊಂದೂ ಅನೇಕ ಭೇದಗಳಿವೆ. ಈ ಭೇದಗಳು ಬೇರೆ ಬೇರೆ ಆಚಾರ್ಯರುಗಳ ಕಾರಣದಿಂದ ಆಗಿವೆ. ಇವುಗಳಲ್ಲಿ ಸಾಂಖ್ಯದರ್ಶನದ ಮೂಲ ಸೂತ್ರಗ್ರಂಥದ ಬಗ್ಗೆಯೇ ಶಂಕೆಯನ್ನು ವ್ಯಕ್ತಗೊಳಿಸಲಾಗಿದೆ. ಅದರ 'ಕಾರಿಕಾ' ಮುಖ್ಯವಾದುದು.

ಉತ್ತರ ಮೀಮಾಂಸ ದರ್ಶನ ಬ್ರಹ್ಮಸೂತ್ರದ ಭಾಷ್ಯಗಳ ಆಧಾರದ ಮೇಲೆ ವೈದಿಕ ಸಂಪ್ರದಾಯಗಳು ನಿರ್ಮಾಣವಾಗಿವೆ. ಇದರಿಂದಾಗಿ ಪ್ರತಿ ಯೊಂದೂ ದರ್ಶನದ ಮೇಲೂ ಭಾಷ್ಯ ಟೀಕೆ ಹಾಗೂ ವಿವೇಚನೆಗಳ ಬಗ್ಗೆ ಸಾವಿರಾರು ಗ್ರಂಥಗಳಿವೆ. ಇವುಗಳ ಬಗ್ಗೆ ಸ್ವತಂತ್ರಗ್ರಂಥಗಳೂ ಇವೆ.

## ೮. ನಿಬಂಧಗಳು

ಇವು ಕೂಡ ಒಂದು ರೀತಿಯ ಸ್ಮೃತಿ – ಗ್ರಂಥಗಳೆಂದೇ ಹೇಳಬೇಕು. ಇವುಗಳ ರಚನೆಯು ಮಧ್ಯಯುಗದಲ್ಲಾದರೂ ಕೂಡ ಇವು ಸ್ವತಂತ್ರ ಗ್ರಂಥ ಗಳಾಗಿಯೇ ಇವೆ. ಸ್ಮೃತಿಗಳು ಹಾಗೂ ಪುರಾಣಗಳಲ್ಲಿ ಧಾರ್ಮಿಕ ಆಚರಣೆಯ ನಿರ್ದೇಶಗಳಿವೆ. ಅವುಗಳನ್ನು ಹೆಚ್ಚು ವಿಸ್ತಾರರೂಪದಲ್ಲಿ ಸಂಕಲನಗೊಳಿಸ ಲಾಗಿದೆ. ಇವುಗಳಲ್ಲಿ ಕಂಡುಬರುವ ಪರಸ್ಪರ ಭಿನ್ನತೆ ಅಥವಾ ಅಸ್ಪಷ್ಟತೆಗಳನ್ನು ನಿಬಂಧಕಾರರು ಏಕವಾಕ್ಯಗಳ ಮುಖಾಂತರ ಸ್ಪಷ್ಟೀಕರಿಸಿದ್ದಾರೆ. ವಿಸ್ತಾರ ರೀತಿಯ ಪ್ರಮಾಣಗಳನ್ನು ನೀಡಿ, ಪ್ರತಿಯೊಂದು ವಿಷಯವನ್ನೂ ವಿವೇಚನೆ ಮಾಡಿದ್ದಾರೆ. ಆದುದರಿಂದ ಧರ್ಮಶಾಸ್ತ್ರಜ್ಞರು ಇವುಗಳನ್ನು ಸ್ಮೃತಿಗಳಿಗೆ ಸಮನಾದ ಪ್ರಮಾಣಗಳೆಂದು ನಂಬುತ್ತಾರೆ.

ದಯಾಭಾಗ, ಕಾಲ ವಿವೇಕ ಹಾಗೂ ವ್ಯವಹಾರ ಮಾತೃಕಾ ಎನ್ನುವ ಜೀಮೂತವಾಹನನ ಮೂರು ಗ್ರಂಥಗಳಿವೆ. ಶೂಲಪಾಣಿಯ 'ಸ್ಮೃತಿ ವಿವೇಕ' ಪೂರ್ಣಗ್ರಂಥ ದೊರೆಯುವುದಿಲ್ಲ. ರಘುನಂದನನ 'ಸ್ಮೃತಿ ತತ್ವ' ಎನ್ನುವುದು ಬೃಹತ್ತಾದ ಇಪ್ಪತ್ತೆಂಟು ಭಾಗಗಳ ಗ್ರಂಥವಾಗಿದೆ. ಅನಿರುದ್ಧನ ಹಾರಲತಾ, ಆಶೌಚ ವಿವರಣ, ಪಿತೃದಯಿತಾ ಎನ್ನುವ ಮೂರು ಗ್ರಂಥಗಳಿವೆ. ಬಲ್ಲಾಳ ಸೇನನವು ಆಚಾರಸಾಗರ, ಪ್ರತಿಷ್ಠಾಸಾಗರ, ದಾನ ಸಾಗರ ಹಾಗೂ ಅದ್ಭುತ ಸಾಗರ ಎನ್ನುವ ನಾಲ್ಕು ಗ್ರಂಥಗಳಿವೆ. ಇವೆಲ್ಲ ಗ್ರಂಥಗಳೂ ಬಂಗಾಳಾದ ನಿಬಂಧಕಾರರದ್ದಾಗಿವೆ.

ಆಚಾರಾದರ್ಶ, ಸಮಯಪ್ರದೀಪ ಹಾಗೂ ಶ್ರಾದ್ಧಕಲಾ ಎನ್ನುವವು ಶ್ರೀದತ್ತ ಉಪಾಧ್ಯಾಯನ ಮೂರು ಮುಖ್ಯ ಗ್ರಂಥಗಳಾಗಿವೆ. 'ಸ್ಮೃತಿ ರತ್ನಾಕರ' ಎನ್ನುವುದು ಛಂಡೇಶ್ವರನ ಒಂದು ಬೃಹತ್ ಗ್ರಂಥವಾಗಿದೆ. ವಾಚಸ್ಪತಿ ಮಿಶ್ರನ 'ವಿವಾದ ಚಿಂತಾಮಣಿ'ಯೂ ಒಂದು ಪ್ರಮುಖಗ್ರಂಥ. ಇವೇ ಅಲ್ಲದೆ ಆಚಾರವಿಚಾರಕ್ಕೆ ಸಂಬಂಧಪಟ್ಟ ಇನ್ನೂ ಅನೇಕ ಗ್ರಂಥಗಳಿವೆ. ಇವುಗಳಲ್ಲಿ ಮುಖ್ಯವಾದವು – ೧. ಆಚಾರ ಚಿಂತಾಮಣಿ, ೨. ಆಹ್ನಿಕ ಚಿಂತಾಮಣಿ, ೩. ಕೃತ್ಯಚಿಂತಾಮಣಿ, ೪. ತೀರ್ಥ ಚಿಂತಾಮಣಿ, ೫. ವ್ಯವಹಾರ ಚಿಂತಾಮಣಿ, ೬. ಶುದ್ಧಿ ಚಿಂತಾಮಣಿ, ೭. ಶ್ರಾದ್ಧ ಚಿಂತಾಮಣಿ, ೮. ತಿಥಿ ನಿರ್ಣಯ, ೯. ದ್ವೈತ ನಿರ್ಣಯ, ೧೦. ಶುದ್ಧಿ ನಿರ್ಣಯ ಹಾಗೂ ೧೧. ಮಹಾದಾನ.

ಮೇಲೆ ತಿಳಿಸಿರುವವೆಲ್ಲವೂ ಮೈಥಿಲೀ ನಿಬಂಧಕಾರರಿಂದ ರಚಿಸಲ್ಪಟ್ಟಿರುವವುಗಳು.

ದೇವಣ್ಣಭಟ್ಟನ 'ಸ್ಮೃತಿ ಚಂದ್ರಿಕಾ' ಒಂದು ವಿಸ್ತೃತವಾದ ಗ್ರಂಥ. ಹೇಮಾದ್ರಿಯ 'ಚತುರ್ವರ್ಗ ಚಿಂತಾಮಣಿ'ಯು ಧರ್ಮಶಾಸ್ತ್ರದ ಒಂದು ವಿಶ್ವಕೋಶವಾಗಿದೆ.

ಈ ನಿಟ್ಟಿನಲ್ಲಿ ರಚಿತವಾದ ಕಾಲಮಾಧವ, ಪರಾಶರಮಾಧವ, ದತ್ತಕ ಮೀಮಾಂಸಾ, ಗೋತ್ರಪ್ರವರ–ನಿರ್ಣಯ, ಮುಹೂರ್ತ ಮಾಧವ, ಸ್ಮೃತಿ ಸಂಗ್ರಹ ಹಾಗೂ ವ್ರಾತ್ಯಸ್ತೋಮ ಪದ್ಧತಿ – ಎನ್ನುವ ಏಳು ಗ್ರಂಥಗಳು ಮಾಧವಾಚಾರ್ಯರದ್ದಾಗಿವೆ.

ತ್ರಿಸ್ಥಲೀಸೇತು, ಅಂತ್ಯೇಷ್ಟಿ ಪದ್ಧತಿ ಹಾಗೂ ಪ್ರಯೋಗರತ್ನಾಕರ – ಈ ಮೂರೂ ನಾರಾಯಣಭಟ್ಟನ ಗ್ರಂಥಗಳಾಗಿವೆ.

ಶ್ರಾದ್ಧಕಲ್ಪಲತಾ, ಶುದ್ಧಿ ಚಂದ್ರಿಕಾ, ತತ್ವಮುಕ್ತಾವಳೀ ಹಾಗೂ ದತ್ತಕ ಮೀಮಾಂಸಾ – ಎಂಬವು ನಂದ ಪಂಡಿತನ ಗ್ರಂಥಗಳಾಗಿವೆ.

ಕಮಲಾಕರ ಭಟ್ಟನು ರಚಿಸಿರುವ ೨೨ ಗ್ರಂಥಗಳಲ್ಲಿ ನಿರ್ಣಯ ಸಿಂಧು, ಶೂದ್ರಿಕಮಲಾಕರ, ದಾನಕಮಲಾಕರ, ಪೂರ್ತ ಕಮಲಾಕರ, ವೇದರತ್ನ ವಿವಾದತಾಂಡವ ಹಾಗೂ ಪ್ರಾಯಶ್ಚಿತ್ತರತ್ನ–ಎಂಬವು ಮುಖ್ಯವಾದುವು.

ನೀಲಕಂಠ ಭಟ್ಟನ ಭಗವಂತ ಭಾಸ್ಕರ ಹಾಗೂ ಮಿತ್ರಮಿಶ್ರನ ವೀರ ಮಿತ್ರೋದಯ–ಇವು ತುಂಬಾ ದೊಡ್ಡ ಗ್ರಂಥಗಳಾಗಿವೆ.

ಲಕ್ಷ್ಮೀಧರನ ಕೃತ್ಯಕಲ್ಪತರುವೂ ಕೂಡ ಅನೇಕ ಭಾಗಗಳಲ್ಲಿವೆ.

ಜಗನ್ನಾಥ ತರ್ಕಪಂಚಾನನನ 'ವಿವಾದಾರ್ಣವ'ವು ಕಾನೂನಿನ ದೃಷ್ಟಿಯಿಂದ ಮಹತ್ವಪೂರ್ಣವಾದ ಕೃತಿಯಾಗಿದೆ.

ಇವೆಲ್ಲವೂ ಕಾಶೀಯ ನಿಬಂಧಕಾರರ ಗ್ರಂಥಗಳಾಗಿವೆ.

ಇವೇ ಅಲ್ಲದೆ ಕಾಶೀನಾಥ ಉಪಾಧ್ಯಾಯ ಇತ್ಯಾದಿಯವರುಗಳ ಧರ್ಮ ಸಿಂಧು, ನಿರ್ಣಯಾಮೃತ, ಪುರುಷಾರ್ಥ ಚಿಂತಾಮಣಿ ಇತ್ಯಾದಿ ಅನೇಕ ನಿಬಂಧಗಳಿವೆ.

## ಭಾಷ್ಯ ಟೀಕೆ ಹಾಗೂ ಸಾಂಪ್ರದಾಯಿಕ ಗ್ರಂಥಗಳು

ವೈದಿಕ ಗ್ರಂಥಗಳಿಂದ ಹಿಡಿದು ನಿಬಂಧಗ್ರಂಥಗಳವರೆಗೆ ಅವುಗಳ ಮೇಲೆ ಅನೇಕ ಟೀಕಾಗ್ರಂಥಗಳಿವೆ. ಇವುಗಳಲ್ಲಿ ಭಾಷ್ಯಗಳಿವೆ, ಟೀಕೆಗಳಿವೆ, ಕಾರಿಕಾ ಗ್ರಂಥಗಳಿವೆ, ಸಂಕ್ಷಿಪ್ತಸಾರ ಸಂಗ್ರಹಗಳಿವೆ. ಈ ಭಾಷ್ಯ–ಟೀಕೆಗಳ ಮೇಲೂ ಕೂಡ ಟೀಕೆಗಳಿವೆ.

ಈ ಭಾಷ್ಯ ಹಾಗೂ ಟೀಕಾಗ್ರಂಥಗಳು ಸ್ವತಂತ್ರ ರೂಪದಲ್ಲಿಯೂ ಕೂಡ ಬಹಳಷ್ಟು ಮಹತ್ವವನ್ನು ಹೊಂದಿವೆ. ಈ ರೀತಿಯಲ್ಲಿ ಈ ಕಾರಣ ಸ್ವತಂತ್ರ ಸಂಪ್ರದಾಯವು ಮುಂದುವರೆದಿದೆ.

ಶ್ರೀ ಶಂಕರಾಚಾರ್ಯರ ಅದ್ವೈತವಾದ, ಶ್ರೀರಾಮಾನುಜಾಚಾರ್ಯರ ವಿಶಿಷ್ಟಾದ್ವೈತವಾದ, ಶ್ರೀ ನಿಂಬಾರ್ಕಾಚಾರ್ಯರ ದ್ವೈತಾದ್ವೈತವಾದ, ಶ್ರೀ ವಲ್ಲಭಾಚಾರ್ಯರ ಶುದ್ಧಾದ್ವೈತವಾದ ಹಾಗೂ ಶ್ರೀ ಮಧ್ವಾಚಾರ್ಯರ ದ್ವೈತ ವಾದದ ಸಂಪ್ರದಾಯ ಹಾಗೂ ಗೌಡೀಯ ಸಂಪ್ರದಾಯದ ಅಂಚಿಂತ್ಯಭೇದಾ ಭೇದವಾದ–ಇವು ಎಲ್ಲ ಭಾಷ್ಯಗಳನ್ನೂ ಅವಲಂಬಿಸಿದೆ.

ಇವೇ ಅಲ್ಲದೆ ಶೈವ, ಶಾಕ್ತ ಹಾಗೂ ಇತರೇ ಸಂಪ್ರದಾಯಗಳ ಮೇಲೂ ಭಾಷ್ಯಗಳಿವೆ. ಈ ಭಾಷ್ಯಗಳು ಸಂಸ್ಕೃತ ಹಾಗೂ ಇತರೇ ಭಾಷೆಗಳಲ್ಲೂ ಇವೆ.

ಇದೇ ರೀತಿಯಲ್ಲಿ ನ್ಯಾಯ, ಪೂರ್ವಮೀಮಾಂಸಾ ಇತ್ಯಾದಿ ದರ್ಶನಗಳ ಮೇಲೂ ಭಾಷ್ಯಗಳಿವೆ. ಈ ಭಾಷ್ಯಗಳ ಆಧಾರದ ಮೇಲೆ ಆ ಸಂಪ್ರದಾಯಗಳು ನೆಲೆಸಿವೆ. ಆ ಸಂಪ್ರದಾಯಗಳಲ್ಲೂ ಕೂಡ ನೂರಾರು ಗ್ರಂಥಗಳು ಇವೆ.

ವಿಶಾಲ ಹಿಂದೂ ಧರ್ಮವು ನೂರಾರು ಶಾಖೆಗಳನ್ನು ಹೊಂದಿದೆ. ಜೈನ, ಬೌದ್ಧ, ಸಿಖ್ ಧರ್ಮಗಳು ಹಿಂದೂ ಧರ್ಮದ ಶಾಖೆಗಳಾಗಿವೆ.

ಇದೇ ರೀತಿಯಲ್ಲಿ ಕಬೀರಪಂಥ, ರಾಧಾಸ್ವಾಮಿ ಮತ, ದಾದೂ ಪಂಥ, ರಾಮಸ್ನೇಹೀ, ಪ್ರಣಾಮಿ, ಚರಣದಾಸೀ ಇತ್ಯಾದಿ ಅನೇಕ ಸಂಪ್ರದಾಯಗಳು ಹಿಂದೂ ಧರ್ಮದಲ್ಲಿವೆ. ಜೈನ ಹಾಗೂ ಬೌದ್ಧಧರ್ಮಗಳ ಗ್ರಂಥಗಳು ಅಸಂಖ್ಯಾತವಾಗಿವೆ. ಸಿಖ್, ಕಬೀರಪಂಥ, ದಾದಾಪಂಥೀ, ರಾಧಾಸ್ವಾಮಿ, ರಾಮಸ್ನೇಹೀ, ಪ್ರಣಾಮಿ ಇತ್ಯಾದಿ ಪಂಥಗಳಲ್ಲಿ ಅವರವರ ಗುರುಗಳ ಗ್ರಂಥಗಳನ್ನು ಪ್ರಮಾಣ ಗ್ರಂಥಗಳನ್ನು ಪ್ರಮಾಣಗ್ರಂಥಗಳೆಂದು ನಂಬಲಾಗಿದೆ. ಅವುಗಳ ಸಂಖ್ಯೆಯೂ ಹೆಚ್ಚಿನ ಪ್ರಮಾಣದಲ್ಲಿವೆ.

## ಆಗಮ (ತಂತ್ರಗ್ರಂಥಗಳು)

ವೇದಗಳಿಂದ ಹಿಡಿದು ನಿಬಂಧ ಗ್ರಂಥಗಳವರೆವಿಗಿನ ಪರಂಪರೆಯನ್ನು 'ನಿಗಮ' ಎಂದು ಕರೆಯಲಾಗುತ್ತದೆ. ಇದಕ್ಕೆ ಸಮಾನವಾದ ಮತ್ತೊಂದು ಅನಾದಿ ಪರಂಪರೆ ಇದೆ. ಇದನ್ನು 'ಆಗಮ' ಎಂದು ಕರೆಯಲಾಗಿದೆ.

ಆಗಮದಲ್ಲಿ ಎರಡು ಭಾಗಗಳಿವೆ – ದಕ್ಷಿಣಾಗಮ (ಸಮಯ ಮತ) ಹಾಗೂ ವಾಮಾಗಮ (ಕೌಲಮತ).

ಸನಾತನಧರ್ಮದಲ್ಲಿ ನಿಗಮ ಹಾಗೂ ಆಗಮ (ದಕ್ಷಿಣಾಗಮ) ಈ ಎರಡನ್ನೂ ಪ್ರಮಾಣಗಳನ್ನಾಗಿ ಪರಿಗಣಿಸಲಾಗಿದೆ.

ದಕ್ಷಿಣಾಗಮದ ಮೂಲ ಶ್ರುತಿಗಳಲ್ಲಿದೆ. ಹಾಗೂ ಪುರಾಣಗಳಲ್ಲಿ ಅದರ ವಿಸ್ತೃತ ವಿವರಣೆ ಇದೆ. ಈ ಆಗಮ ಶಾಸ್ತ್ರದ ವಿಷಯ – 'ಉಪಾಸನೆ'.

೧. ವೈಷ್ಣವಾಗಮ : ದೇವತೆಗಳ ಸ್ವರೂಪ, ಗುಣ, ಕರ್ಮ, ಅವರುಗಳ ಮಂತ್ರಗಳ ಉದಾಹರಣೆ, ಮಂತ್ರ, ಧ್ಯಾನ, ಪೂಜಾವಿಧಿಗಳ ವಿವೇಚನೆಯು ಆಗಮ ಗ್ರಂಥಗಳಲ್ಲಿರುತ್ತವೆ.

ವೈಷ್ಣವಾಗಮಗಳನ್ನು ಸ್ಮೃತಿಗಳಿಗೆ ಸಮಾನವಾದ ಪ್ರಮಾಣವೆಂದು ನಂಬಲಾಗಿದೆ.

ವೈಷ್ಣವಾಗಮಗಳಲ್ಲಿ ಪಾಂಚರಾತ್ರ ಹಾಗೂ ವೈಖಾನಸ ಆಗಮ-ಎನ್ನುವ ಎರಡು ರೀತಿಯ ಗ್ರಂಥಗಳು ಕಂಡುಬರುತ್ತವೆ.

ಪಾಂಚರಾತ್ರ ಸಂಹಿತೆಗಳಲ್ಲಿ ಕೇವಲ ೧೩ ಸಂಹಿತೆಗಳು ಮಾತ್ರ ದೊರೆಯುತ್ತವೆ. ಅವು ಯಾವುವೆಂದರೆ – ೧. ಅಹಿರ್ಬುಧ್ನ್ಯ ಸಂಹಿತೆ, ೨. ಈಶ್ವರ ಸಂಹಿತೆ, ೩. ಕಪಿಂಜಲ ಸಂಹಿತೆ, ೪. ಜಯಾಖ್ಯ ಸಂಹಿತೆ, ೫. ಪರಾಶರ ಸಂಹಿತೆ, ೬ ಪಾದ್ಮ ತಂತ್ರ, ೭. ಬೃಹತ್ ಬ್ರಹ್ಮ ಸಂಹಿತೆ, ೮. ಭಾರದ್ವಾಜ ಸಂಹಿತೆ, ೯. ಲಕ್ಷ್ಮೀತಂತ್ರ, ೧೦. ವಿಷ್ಣು ತಿಲಕ, ೧೧. ಶ್ರೀ ಪ್ರಶ್ನಸಂಹಿತೆ, ೧೨. ವಿಷ್ಣು ಸಂಹಿತೆ ಹಾಗೂ ೧೩. ಸಾತ್ವತ ಸಂಹಿತೆ.

೨. ಶೈವಾಗಮ : ಭಗವಾನ್ ಶಂಕರನ ಮುಖದಿಂದ ೨೮ ತಂತ್ರಗಳು ಪ್ರಕಟವಾದುವೆಂದು ಹೇಳಲಾಗುತ್ತದೆ. ಉಪತಂತ್ರಗಳೂ ಸೇರಿ ಇವುಗಳ ಒಟ್ಟು ಸಂಖ್ಯೆ ೨೦೮ ಆಗುತ್ತದೆ. ಇವುಗಳಲ್ಲಿ ೬೪ ಮಾತ್ರ ಮುಖ್ಯವಾದುವೆಂದು ನಂಬಲಾಗಿದೆ. ಆದರೆ ಇವೆಲ್ಲವೂ ಈಗ ಲಭ್ಯವಿಲ್ಲ.

ಶಿವಾಚಾರ್ಯರ ಪ್ರಾಮಾಣಿಕ ಗ್ರಂಥಗಳೆಂದರೆ ಪಾಶುಪತ ಸೂತ್ರ, ನರೇಶ್ವರ ಪರೀಕ್ಷಾ ತತ್ವ ಸಂಗ್ರಹ, ತತ್ವತ್ರಯ, ಭೋಗ ಕಾರಿಕಾ, ಮೋಕ್ಷ ಕಾರಿಕಾ, ಪರಮೋಕ್ಷ ನಿರಾಶಕಾರಿಕಾ, ಶ್ರುತಿ ಸೂಕ್ತಿಮಾಲಾ, ಚತುರ್ವೇದ – ತಾತ್ಪರ್ಯ ಸಂಗ್ರಹ, ತತ್ವಪ್ರಕಾಶಿಕಾ, ಸೂತ ಸಂಹಿತಾ, ನಾದಕಾರಿಕಾ ಹಾಗೂ ರತ್ನತ್ರಯ.

ವೀರ ಶೈವಧರ್ಮದ ಪ್ರಮಾಣ ಗ್ರಂಥವೆಂದರೆ 'ಸಿದ್ಧಾಂತ ಶಿಖಾಮಣಿ' ಎಂಬುದು. ಪ್ರತ್ಯಭಿಜ್ಞಾ ಮಾರ್ಗದಲ್ಲಿ ೧೨ ಆಗಮಗಳನ್ನು ಪ್ರಮಾಣ ಗ್ರಂಥಗಳೆಂದು ನಂಬಲಾಗಿದೆ.

ಇವುಗಳಲ್ಲಿ ಮುಖ್ಯವಾದವು ಮೂರು-ಸಿದ್ಧಾಂತ ತಂತ್ರ, ನಾಮಕ ತಂತ್ರ ಹಾಗೂ ಮಾಲಿನೀ ತಂತ್ರ–ಎಂಬವು. ಈ ಮೂರೂ ಗ್ರಂಥಗಳನ್ನು 'ತ್ರಿಕ್' ಎಂದು ಕರೆಯಲಾಗುತ್ತದೆ. ಇವು ಶಿವ ಸೂತ್ರಗಳ ಮೇಲೆ ಆಧಾರಪಟ್ಟಿವೆ.

ಇವೇ ಅಲ್ಲದೆ ಸ್ಪಂದಸರ್ವಸ್ವ, ಶಿವದೃಷ್ಟಿ, ಪರಾತ್ರಿಂಶಿಕಾ, ತ್ರಿವೃತ್ತಿ, ಈಶ್ವರ ಪ್ರತ್ಯಭಿಜ್ಞಾಕಾರಿಕಾ, ಸಿದ್ಧಿತ್ರಯೀ, ಶಿವ ಸ್ತೋತ್ರಾವಳೀ, ತಂತ್ರ

ಲೋಕ–ಎನ್ನುವವು ಈ ಮತದ ಪ್ರಧಾನ ಗ್ರಂಥಗಳಾಗಿವೆ.

೩. ಶಾಕ್ತಾಗಮ : ಇವುಗಳಲ್ಲಿ ಮೂರು ರೀತಿಯಗ್ರಂಥಗಳಿವೆ.

ಸಾತ್ವಿಕ ಗ್ರಂಥಗಳನ್ನು 'ತಂತ್ರ' ಅಥವಾ 'ಆಗಮ'ಗಳೆಂದೂ, ರಾಜಸಕ್ಕೆ ಸಂಬಂಧಪಟ್ಟವುಗಳನ್ನು 'ಯಾಮಳ' ಎಂದೂ ಹಾಗೂ ತಾಮಸಕ್ಕೆ ಸಂಬಂಧ ಪಟ್ಟವುಗಳನ್ನು 'ಡಾಮರ' ಎಂದೂ ಕರೆಯಲಾಗುತ್ತವೆ.

ಸೃಷ್ಟಿಯ ಪ್ರಾರಂಭದಿಂದಲೂ ರಾಜಸ, ತಾಮಸ ಸ್ವಭಾವದ ವ್ಯಕ್ತಿಗಳು, ಪ್ರಾಣಿಗಳು ಜೀವಿಸುತ್ತಿದ್ದರು. ದೈತ್ಯ ದಾನವ, ಅಸುರ ಅಥವಾ ಅವರುಗಳಿಗೆ ಸಮಾನ ಸ್ವಭಾವದ ವ್ಯಕ್ತಿಗಳಿಗಾಗಿ ಸಾಧನೆವಂತೂ ಇರಲೇ ಬೇಕಲ್ಲವೆ ? ಆದುದರಿಂದ ಅವರಿಗಾಗಿ ಈ ರಾಜಸ – ತಾಮಸ ಗ್ರಂಥಗಳು ನಿರ್ಮಾಣವಾ ದುವು. ಅಸುರರ ಪರಂಪರಾಗತ ಮುಖ್ಯ ಶಾಸ್ತ್ರವೆಂದರೆ 'ವಾಮಾಗಮ'.

ಶಾಕ್ತಾಗಮದಲ್ಲಿಯೂ ಕೂಡ ೬೪ ಗ್ರಂಥಗಳನ್ನು ಮುಖ್ಯವೆಂದು ಭಾವಿಸ ಲಾಗಿದೆ. ಇವೆಲ್ಲವೂ ದೊರೆಯುವುದೂ ಇಲ್ಲ. ಕೌಲೋಪನಿಷತ್, ಅರುಣೋ ಪನಿಷತ್, ಅದ್ವೈತ ಭಾವೋಪನಿಷತ್, ಕಾಳಿಕೋಪನಿಷತ್, ಬಹ್ವೃಚೋಪನಿ ಷತ್, ತ್ರಿಪುರೋಪನಿಷತ್ ಹಾಗೂ ತಾರೋಪನಿಷತ್ – ಇವು ತಂತ್ರಮತ ವನ್ನು ಪ್ರತಿಪಾದಿಸುವ ಗ್ರಂಥಗಳಾಗಿವೆಯೆಂದು ನಂಬಲಾಗಿದೆ. ಇವುಗಳಿಗೂ ಕೂಡ ಭಾಷ್ಯ–ಟೀಕೆಗಳು ಇವೆ.

ಮಿಶ್ರಮಾರ್ಗದ ಎಂಟು ಗ್ರಂಥಗಳಿವೆ – ಚಂದ್ರಿಕ, ಜ್ಯೋತ್ಸ್ನಾವತೀ, ಕಳಾನಿಧಿ, ಕುಲಾರ್ಣವ, ಕುಲೇಶ್ವರೀ, ಭುವನೇಶ್ವರೀ, ಬಾರ್ಹಸ್ಪತ್ಯ ಹಾಗೂ ದುರ್ವಾಸನ – ಎಂಬುವು.

ಸಮಯಾಚಾರದಲ್ಲಿ 'ಶುಭಾಗಮ ಪಂಚಕ' ಎಂಬ ವಾಶಿಷ್ಠ, ಸನಕ, ಶುಕ, ಸನಂದನ ಹಾಗೂ ಸನತ್ಕುಮಾರ ಸಂಹಿತೆಗಳು ಪ್ರಮಾಣವೆಂದು ನಂಬಲಾಗಿದೆ.

ಶಾಕ್ತ ತಂತ್ರಗಳು ಸಹಸ್ರ ಸಂಖ್ಯೆಗಿಂತಲೂ ಹೆಚ್ಚಾಗಿವೆ. ಆದರೆ ಉಪ ಲಬ್ಧವಿರುವ ಗ್ರಂಥಗಳಲ್ಲಿ ಮುಖ್ಯವಾದವುಗಳೆಂದರೆ – ಕುಲಾರ್ಣವ, ಕುಲ ಚೂಡಾಮಣಿ, ತಂತ್ರರಾಜ, ಶಕ್ತಿ ಮಹಾನಿರ್ವಾಣ, ರುದ್ರಯಾಮಳ, ತ್ರಿಪುರಾರಹಸ್ಯ ಹಾಗೂ ದಕ್ಷಿಣಾಮೂರ್ತಿ ಸಂಹಿತೆಗಳು. ಪ್ರಪಂಚಸಾರ, ಶಾರದಾತಿಲಕಗಳಲ್ಲಿ ತಾಂತ್ರಿಕ ರಹಸ್ಯಗಳ ಉತ್ತಮ ಸಂಗ್ರಹವಿದೆ. ಮಂತ್ರ

ಮಹಾರ್ಣವ ಕೃತಿಯಂತೂ ತಾಂತ್ರಿಕ ವಿಶ್ವಕೋಶವೆಂದೇ ಕರೆಯಬಹುದು.

ಶ್ರೀವಿದ್ಯಾಎನ್ನುವ ಶಾಸ್ತ್ರಜ್ಞನ ಸಂತಾನಪರಂಪರೆಯಲ್ಲಿನ ಎರಡು ಮುಖ್ಯ ಕೃತಿಗಳಾದ 'ಲೋಪಾಮುದ್ರಾ', 'ಸಂತಾನ ಪರಂಪರೆ'ಗಳು ಲುಪ್ತವಾಗಿ ಹೋಗಿವೆ.

ಈ ಆಗಮ ಗ್ರಂಥಗಳಲ್ಲಿಯೂ ಕೂಡ ಬಹಳಷ್ಟು ಕೃತಿಗಳ ಮೇಲೆ ಭಾಷ್ಯ, ಟೀಕೆ, ಕಾರಿಕಾಗಳು ಹಾಗೂ ಸಾರಸಂಕ್ಷಿಪ್ತಗ್ರಂಥಗಳು ಹೊರಬಂದಿವೆ. ಸೂಕ್ಷ್ಮವಿದ್ಯೆಗಳನ್ನು ಕುರಿತಾದ ವಿವರಗಳು ಈ ತಂತ್ರ ಗ್ರಂಥಗಳಲ್ಲಿ ಬಹಳಷ್ಟು ಇದ್ದು, ಒಂದು ಬೃಹತ್ ಭಂಡಾರವೇ ಅವುಗಳಲ್ಲಿ ಇದೆಯೆಂದರೆ ತಪ್ಪಾಗ ಲಾರದು.

ಇದುವರೆವಿಗೆ ಸಿಕ್ಕಿರುವ ಗ್ರಂಥಗಳೇ ಅಲ್ಲದೆ ಇನ್ನೂ ಸಾವಿರಾರು ತಂತ್ರ ಗ್ರಂಥಗಳು ನೇಪಾಳದಲ್ಲಿ ಸುರಕ್ಷಿತವಾಗಿ ಸಂರಕ್ಷಿಸಲ್ಪಟ್ಟಿವೆಯೆಂದು ಹೇಳ ಲಾಗುತ್ತದೆ.

ಭಾರತದಲ್ಲಿಯೂ ಕೂಡ ಇಂತಹ ಸಾವಿರಾರು ಗ್ರಂಥಗಳು ಅಧಿಕ ಸಂಖ್ಯೆ ಯಲ್ಲಿ ಅಜ್ಞಾತದಲ್ಲಿವೆ ಎಂದು ಹೇಳಲಾಗುತ್ತದೆ. ಬೆಳಕಿಗೆ ಬರದೆ ದೇವರ ಮನೆಗಳಲ್ಲಿ, ಪೂಜಾಸ್ಥಳಗಳಲ್ಲಿ ಕೊಳೆಯುತ್ತಿರುವ ಗ್ರಂಥಗಳು ಎಷ್ಟೋ ಇವೆ. ಅವೆಲ್ಲವೂ ಬೆಳಕಿಗೆ ಬಂದು, ವೈಜ್ಞಾನಿಕ ರೀತಿಯಲ್ಲಿ ಅಧ್ಯಯನ ಮಾಡಿದ್ದೇ ಆದರೆ ಆಗ ಭಾರತಕ್ಕೆ ಹೊಸತೊಂದು ಲೋಕದ ಅನುಭವವಾಗುವುದರಲ್ಲಿ ಅನುಮಾನವೇ ಇಲ್ಲ.

## 2. ಧರ್ಮ ಮತ್ತು 'ಶಾಸ್ತ್ರ'

ಧೃಞ್–ಧಾರಣೆ ಮಾಡುವುದು, ಧರಿಸುವುದು ಎಂದರ್ಥ. ಧಾತುವಿನಿಂದ 'ಧರ್ಮ' ಶಬ್ದ ಹುಟ್ಟುತ್ತದೆ. ಈ ಶಬ್ದದ ವ್ಯಾಖ್ಯೆ ಈ ರೀತಿ ಇದೆ — 'ಧರತಿ ಲೋಕಾನ್ ಧ್ರಿಯತೆ ಪುಣ್ಯಾತ್ಮಭಿಃ ಇತಿ ವಾ' ಅಂದರೆ ಯಾವುದು ಲೋಕ ಗಳನ್ನು ಧಾರಣೆ ಮಾಡುತ್ತದೆಯೊ ಅಥವಾ "ಯಾವುದು ಪುಣ್ಯಾತ್ಮಗಳ ಮುಖಾಂತರ ಧಾರಣೆ ಮಾಡುವುದೋ" ಅದು "ಧರ್ಮ" ವಾಗಿರುತ್ತದೆ.

ಋಗ್ವೇದದಲ್ಲಿ "ಧರ್ಮ" ಶಬ್ದವು ಹೆಚ್ಚು ಕಡಿಮೆ 56 ಸಲ ಬರುತ್ತದೆ. ಈ ಶಬ್ದವನ್ನು ಕೆಲವು ಕಡೆಗಳಲ್ಲಿ "ಗುಣವಾಚಕ"ವಾಗಿಯೂ, ಮತ್ತೆ ಕೆಲವು ಕಡೆಗಳಲ್ಲಿ "ನಾಮಪದ" ವಾಗಿಯೂ ಉಪಯೋಗಿಸಲಾಗಿದೆ. ಋಗ್ವೇದದಲ್ಲಿ ಕೆಲವು ಕಡೆಯಲ್ಲಿ "ಪೋಷಣೆ ಮಾಡುವುದು" ಎನ್ನುವ ಅರ್ಥದಲ್ಲಿ ಧರ್ಮ ಶಬ್ದವನ್ನು ಪ್ರಯೋಗಿಸಲಾಗಿದೆ, ಮತ್ತೆ ಕೆಲವು ಕಡೆಯಲ್ಲಿ "ನೈತಿಕ ನಿಯಮ" ಹಾಗೂ "ಆಚಾರ" ಎನ್ನುವ ಅರ್ಥದಲ್ಲಿ, ಮತ್ತೆ ಕೆಲವು ಕಡೆಗಳಲ್ಲಿ "ಪ್ರಾಚೀನ ನೀತಿ ನಿಯಮ"ಗಳು ಎನ್ನುವ ಅರ್ಥದಲ್ಲಿ ಈ ಶಬ್ದವನ್ನು ಪ್ರಯೋಗಿಸಲಾಗಿದೆ.

ಅಥರ್ವವೇದ (11–9–17)ದಲ್ಲಿ "ಧರ್ಮ" ಶಬ್ದದ ಅರ್ಥ "ಧಾರ್ಮಿಕ ಆಚರಣೆಯಿಂದ ದೊರೆಯುವ ಪುಣ್ಯ" ಎಂದಿದೆ. ವಾಜಸನೇಯಿ ಸಂಹಿತಾ (2–3)ದಲ್ಲಿ "ಧೃವೇಣ ಧರ್ಮಣಾ" ಎನ್ನುವ ಅರ್ಥದಲ್ಲಿ ಧರ್ಮ ಶಬ್ದವನ್ನು ಉಪಯೋಗಿಸಲಾಗಿದೆ. ಛಾಂದೋಗ್ಯ ಉಪನಿಷತ್ (2–23)ನಲ್ಲಿ "ನಾಲ್ಕು ಆಶ್ರಮಗಳ ವಿಶಿಷ್ಟ ಕರ್ತವ್ಯ" ಎನ್ನುವ ಅರ್ಥದಲ್ಲಿ ಧರ್ಮ ಶಬ್ದವನ್ನು ಉಪಯೋಗಿಸಲಾಗಿದೆ.

ತೈತ್ತರೀಯ ಉಪನಿಷತ್ (1–11) ನಲ್ಲಿ "ಸತ್ಯಂ ವದ, ಧರ್ಮಂ ಚರ" (ಸತ್ಯವನ್ನು ಹೇಳು, ಧರ್ಮಾನುಸಾರ ನಡೆದುಕೊ) ಎನ್ನುವ ರೀತಿಯಲ್ಲಿ ಧರ್ಮ ಶಬ್ದವನ್ನು ಉಪಯೋಗಿಸಲಾಗಿದೆ. ಮನುಸ್ಮೃತಿ (1–2) ಯಲ್ಲಿ ಧರ್ಮ ಶಬ್ದದ ಅರ್ಥ "ವರ್ಣಾಶ್ರಮ ವಿಹಿತ ಕರ್ತವ್ಯ" ಎಂದಾಗಿದೆ. ಇದೇ ರೀತಿಯಲ್ಲಿ "ಯಾಜ್ಞವಲ್ಕ್ಯ ಸ್ಮೃತಿ", "ಶ್ರೀಮದ್ಭಗವದ್ಗೀತೆ" (3/35) ಇತ್ಯಾದಿಗಳಲ್ಲಿ ಧರ್ಮದ ಬೇರೆ ಬೇರೆ ಅರ್ಥಗಳನ್ನು ಕೊಡಲಾಗಿದೆ.

ಮಹರ್ಷಿ ಕಣಾದ ಪ್ರಣೀತವಾದ "ವೈಶೇಷಿಕ–ದರ್ಶನ"ದಲ್ಲಿ ಹೀಗೆಂದು ಹೇಳಲಾಗಿದೆ–

"ಯತೋಽಭ್ಯುದಯನಿಃ ಶ್ರೇಯಸ ಸಿದ್ಧಿಃ ಸ ಧರ್ಮಃ |"

ಆಶ್ವಲಾಯನ ಗೃಹ್ಯ ಸೂತ್ರದಲ್ಲಿ "ಧರ್ಮ"ದ ವಿಷಯದ ಬಗ್ಗೆ ಹೀಗೆಂದು ಹೇಳಲಾಗಿದೆ–

"ಧಾರಣಾತ್ ಶ್ರೇಯ ಆದಧಾತಿ ಇತಿ ಧರ್ಮಃ"

ಅಂದರೆ ಯಾವುದನ್ನು ಅನುಸರಿಸುವುದರಿಂದ ಮಾನವನಿಗೆ ಶ್ರೇಯಸ್ಸು (ಕಲ್ಯಾಣವು) ಉಂಟಾಗುತ್ತದೆಯೊ, ಯಶ, ಉನ್ನತಿ, ಹಾಗೂ ಮೋಕ್ಷಗಳು

ಪ್ರಾಪ್ತವಾಗುತ್ತವೆಯೊ, ಅದನ್ನು "ಧರ್ಮ"ವೆಂದು ಕರೆಯಲಾಗುತ್ತದೆ.

ಮಹರ್ಷಿ ಜೈಮಿನಿ ಪ್ರಣೀತವಾದ ಪೂರ್ವ ಮೀಮಾಂಸಾದಲ್ಲಿ ಧರ್ಮದ ಬಗ್ಗೆ "ಚೋದನಾಲಕ್ಷಣೋಽರ್ಥೋ ಧರ್ಮಃ" ಅಂದರೆ ಉಪದೇಶದಿಂದ, ಆಜ್ಞೆಯಿಂದ ಹಾಗೂ ವಿಧಿಯಿಂದ ಜ್ಞಾತವಾಗುವ ಶ್ರೇಯಸ್ಕರ ಅರ್ಥವೇ "ಧರ್ಮ"ವಾಗಿದೆ. ವ್ಯಕ್ತಿ ಹಾಗೂ ಸಮಾಜದ ಐಹಿಕ (ಲೌಕಿಕ) ಹಾಗೂ ಪಾರಮಾರ್ಥಿಕ (ಪಾರಲೌಕಿಕ) ಉನ್ನತಿಗಾಗಿ ಪ್ರಾಚೀನ ಮಹಾನ್ ಋಷಿ ಮುನಿಗಳ ಆಜ್ಞೆಯೇ "ಧರ್ಮ"ವಾಗಿದೆ.

ಮನುಸ್ಮೃತಿಯಲ್ಲಿ (2–6) ಧರ್ಮದ ಲಕ್ಷಣ ಮತ್ತು ಆಧಾರದ ವಿಷಯಗಳಲ್ಲಿ ಈ ರೀತಿಯ ಸ್ಪಷ್ಟೀಕರಣ ನೀಡಲಾಗಿದೆ–

ವೇದೋಽಖಿಲೋ ಧರ್ಮ ಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ |
ಆಚಾರಶ್ಚೈವ ಸಾಧೂನಾಮ್ ಆತ್ಮನಸ್ತುಷ್ಟಿರೇವ ಚ ||

ಅಂದರೆ ಸಮಗ್ರ ವೇದ, ಸ್ಮೃತಿ, ವೇದವೇತ್ತರ ಶೀಲ ಹಾಗೂ ಆಚಾರ ಮತ್ತು ಧಾರ್ಮಿಕ ಸಂತ–ಸಜ್ಜನರ ಆತ್ಮ ಸಂತೋಷವೇ "ಧರ್ಮ"ದ ಮೂಲ ಆಧಾರವಾಗಿದೆ.

ಮಹರ್ಷಿ ಯಾಜ್ಞವಲ್ಕ್ಯರು ಹೀಗೆಂದು ಹೇಳುತ್ತಾರೆ–

ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ |
ಸಮ್ಯಕ್ ಸಂಕಲ್ಪಜಃ ಕಾಮಿಂ ಧರ್ಮ ಮೂಲಮಿದಂ ಸ್ಮೃತಮ್ ||
[ಯಾಜ್ಞವಲ್ಕ್ಯ ಸ್ಮೃತಿ –1–7]

ಅಂದರೆ ವೇದ, ಸ್ಮೃತಿ, ಧರ್ಮಶಾಸ್ತ್ರಾದಿ ಶಿಷ್ಟಜನರ ಹಾಗೂ ಸಜ್ಜನರ ಆಚಾರ (ಆಚರಣೆ) ಹಾಗೂ ಅವರ ಉಪದೇಶಾನುಸಾರ ಹಾಗೂ ತಮ್ಮ ವಿವೇಕ, ಬುದ್ಧಿಗಳಿಗೆ ಅನುಸಾರ, ಆತ್ಮ ಸಂತೋಷಾನುಸಾರ, ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಆಚರಣೆಯನ್ನು ಇಟ್ಟುಕೊಳ್ಳಬೇಕು.

ಮಹರ್ಷಿ ಯಜ್ಞವಲ್ಕ್ಯನು ಮುಂದುವರಿದು ಹೀಗೆನ್ನುತ್ತಾನೆ–

ಇಜ್ಯಾಚಾರದ ಮಾಹಿಂಸಾದಾನಸ್ವಾಧ್ಯಾಯ ಕರ್ಮಣಾಮ್ |
ಅಯಂ ತು ಪರಮೋ ಧರ್ಮೋ ಯದ್ಯೋಗೇನಾತ್ಮ ದರ್ಶನಮ್ ||
(ಯಾ. ಆ. 1–8)

ಅಂದರೆ 'ಹೋಮ-ಹವನ, ಸದಾಚಾರ, ಇಂದ್ರಿಯ ದಮನ, ಅಹಿಂಸೆ, ದಾನ, ವೇದ-ಶಾಸ್ತ್ರಗಳ ಅಧ್ಯಯನ, ಶಾಸ್ತ್ರೋಕ್ತ ಕರ್ಮಗಳ ಅನುಷ್ಠಾನ - ಇವೆಲ್ಲವುಗಳಲ್ಲಿ "ಯೋಗ"ದ ಮುಖಾಂತರ "ಆತ್ಮದರ್ಶನ" (ಸ್ವ ಸ್ವರೂಪಾನುಭೂತಿ) ವನ್ನು ಹೊಂದುವುದೇ ಸರ್ವೋತ್ತಮವಾದ "ಧರ್ಮ"ವಾಗಿದೆ.'

ಇವೆಲ್ಲ ಆಧಾರಗಳನ್ನು ವಿವೇಚಿಸಿದಲ್ಲಿ ತಿಳಿದು ಬರುವ ಅಂಶವೇನೆಂದರೆ ಶೃತಿ, ಸ್ಮೃತಿ ಹಾಗೂ ಸದಾಚಾರಗಳು ಧರ್ಮದ ಮೂಲಾಧಾರವಾಗಿದೆ. "ಉತ್ತರ ಮೀಮಾಂಸೆ" (ವೇದಾಂತ ದರ್ಶನ)ಯ ಪ್ರವರ್ತಕರಾದ ಮಹರ್ಷಿ ವ್ಯಾಸರು ಮಹಾಭಾರತದಲ್ಲಿ ಶಾಂತಿ ಪರ್ವ 109-10ರಲ್ಲಿ ಧರ್ಮದ ಬಗ್ಗೆ-

ಪ್ರಭವಾರ್ಥಾಯ ಭೂತಾನಾಂ ಧರ್ಮ ಪ್ರವಚನಂ ಕೃತಂ |
ಯಃ ಸ್ಯಾತ್ ಪ್ರಭವ ಸಂಯುಕ್ತಃ ಸ ಧರ್ಮ ಇತಿ ನಿಶ್ಚಯಃ ||

ಎಂದು ಹೇಳಿದ್ದಾರೆ. ಹೀಗೆಂದರೆ - "ಸಮಸ್ತ ಜೀವಿ (ಮಾನವ ಹಾಗೂ ಪ್ರಾಣಿ) ಗಳ ಅಭ್ಯುದಯ ಮತ್ತು ಕಲ್ಯಾಣಕ್ಕಾಗಿ ಧರ್ಮದ ಪ್ರವಚನವನು ಮೀಸಲಾಗಿಡಲಾಗಿದೆ. ಆದುದರಿಂದ ಯಾರು ಈ ಉದ್ದೇಶವನ್ನು ಹೊಂದಿರುವರೊ, ಯಾವುದರಿಂದ ಅಭ್ಯುದಯ ಹಾಗೂ ನಿಃಶ್ರೇಯಸ್ಸು ಪ್ರಾಪ್ತವಾಗುವುದೇ ಅದೇ ಧರ್ಮವಾಗಿರುತ್ತದೆ. ಇದೇ ಧರ್ಮವೇತ್ತರ ನಿಶ್ಚಯ ಹಾಗೂ ತೀರ್ಮಾನ" ಇದರ ಮುಂದಿನ ಶ್ಲೋಕವಾದ-

ಧಾರಣಾದ್ಧರ್ಮಮಿತ್ಯಾಹುಃ ಧರ್ಮೇಣ ವಿಧೃತಾಃ ಪ್ರಜಾಃ |
ಯಃ ಸ್ಯಾದ್‌ಧಾರಣ ಸಂಯುಕ್ತಃ ಸ ಧರ್ಮ ಇತಿ ನಿಶ್ಚಯಃ ||

ಎಂದು ತಿಳಿಸಲಾಗಿದೆ. ಅಂದರೆ - "ಯಾವ ಶಕ್ತಿಯ ಮುಖಾಂತರ ಸಂಪೂರ್ಣ ಸೃಷ್ಟಿಕ್ರಿಯೆಯು "ಧೃತ" ರಕ್ಷಿತವಾಗಿರುತ್ತದೆಯೊ, ಅದುವೆ "ಧರ್ಮ"ವಾಗಿದೆ - ಎಂದರ್ಥ

"ಆಚಾರ ಲಕ್ಷಣೋ ಧರ್ಮಃ" ಅಂದರೆ ಯಾವ ರೀತಿಯ ಆಚರಣೆಯಿಂದ ಮನಸ್ಸು ಮತ್ತು ಹೃದಯಗಳ ವಿಕಾಸವಾಗುತ್ತದೆಯೊ, ಆ ಆಚರಣೆಯನ್ನು "ಧರ್ಮ" ವೆಂದು ಕರೆಯಲಾಗುತ್ತದೆ.

ಮಹಾಭಾರತ (ಶಾಂತಿ ಪರ್ವ 193/31)ದಲ್ಲಿ

ಮಾನಸಂ ಸರ್ವಭೂತಾನಾಂ ಧರ್ಮಮಾಹುರ್ಮನೀಕ್ಷಿಣಃ |
ತಸ್ಮಾತ್ ಸರ್ವೇಷು ಭೂತೇಷು ಮನಸಾ ಶಿವಮಾಚರೇತ್ ||

ಎಂದು ಹೇಳಲಾಗಿದೆ. ಹೀಗೆಂದರೆ ಮಾನವನ ಸ್ವಾಭಾವಿಕವಾದ ಸಾತ್ವಿಕ ಪ್ರವೃತ್ತಿಯೇ ಧರ್ಮ. ಎಲ್ಲ ಜೀವಿಗಳಿಗಾಗಿ ಮನಸ್ಸಿನ ಮುಖಾಂತರ ಮಾಡಿರುವ "ಧರ್ಮ" ಸೇವೆಯೇ ಶ್ರೇಷ್ಠವಾದುದು. ಆದುದರಿಂದ ಮನಃಪೂರ್ವಕವಾಗಿ ಎಲ್ಲ ಜೀವಿಗಳಿಗೂ ಒಳ್ಳೆಯ (ಕಲ್ಯಾಣವ)ದನ್ನೇ ಕೋರಬೇಕು. ಜಡ ಚೇತನದಲ್ಲಿ ಅಸ್ತಿತ್ವವನ್ನು ತುಂಬಿಸುವ ಶಕ್ತಿಯೇ "ಧರ್ಮ".

ನಾರಾಯಣ ಉಪನಿಷತ್ತಿನಲ್ಲಿಯೂ ಇದರ ಬಗ್ಗೆ ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ....ಧರ್ಮೇ ಸರ್ವಂ ಪ್ರತಿಷ್ಠಿತಂ || ಎಂದು ಹೇಳಲಾಗಿದೆ. ಅಂದರೆ ಜಗತ್ತಿನ ಜೀವಂತಿಕೆಗೆ ಧರ್ಮವೇ ಮೂಲ. ಈ ಧರ್ಮದ ಆಧಾರದ ಮೇಲೆ ಜಗತ್ತಿನ ಜೀವನವು ನಿಂತಿದೆ, ಆಧಾರ ಪಟ್ಟಿದೆ."

"ಧರ್ಮ"ದ ಮುಖಾಂತರ ಅಭ್ಯುದಯ (ಲೌಕಿಕ ಸುಖಪ್ರಾಪ್ತಿ) ಹಾಗೂ ನಿಃಶ್ರೇಯಸ್ಸು (ಅತ್ಯಂತ ಉಚ್ಚತನು ಸುಖ-ಮೋಕ್ಷ ಪ್ರಾಪ್ತಿ) ಲಭಿಸುತ್ತವೆ. "ದಕ್ಷ ಸ್ಮೃತಿ" (3/23)ಯಲ್ಲಿ.

ಸುಖಂ ವಾಂಛಂತಿ ಸರ್ವೇ ಹಿ ತಚ್ಚ ಧರ್ಮ ಸಮುದ್ಭವಂ |
ತಸ್ಮಾದ್ ಧರ್ಮಃ ಸದಾ ಕಾರ್ಯಃ ಸರ್ವವರ್ಣೈಃ ಪ್ರಯತ್ನತಃ ||

ಎಂದು ತಿಳಿಸಲಾಗಿದೆ. ಅಂದರೆ ಎಲ್ಲ ಜೀವಿಗಳೂ ಸುಖಾಪೇಕ್ಷಿಗಳೇ ಆಗಿವೆ. ಈ ಸುಖವು "ಧರ್ಮ" ದಿಂದಲೇ ಉತ್ಪನ್ನವಾಗುತ್ತದೆ. ಆದುದರಿಂದ ಎಲ್ಲ ವರ್ಣಗಳ ಸರ್ವಾಂಗೀಣ ಉನ್ನತಿಗಾಗಿ ಧರ್ಮದ ಆಚರಣೆಯಲ್ಲಿ ತೊಡಗುವುದು ಅತ್ಯಂತ ಅವಶ್ಯಕ.

ಧರ್ಮವನ್ನು ಮೂರು ಭಾಗಗಳಾಗಿ ವಿಭಾಗಿಸಲಾಗಿದೆ – 1. ಸಾಮಾನ್ಯ ಧರ್ಮ, 2. ವಿಶೇಷ ಧರ್ಮ ಮತ್ತು 3. ಆಪದ್ಧರ್ಮ.

**1. ಸಾಮಾನ್ಯ ಧರ್ಮ :** ಯಾವ ಪದ್ಧತಿ (ಆಚರಣೆ) ಯಿಂದ ವ್ಯಕ್ತಿ ಮತ್ತು ಸಮಾಜದ "ಅಭಿವೃದ್ಧಿ (ಅಭ್ಯುದಯ)"ಯಾಗಿ, ಅವಕ್ಕೆ ನಿಃಶ್ರೇಯಸ್ಸು ಪ್ರಾಪ್ತವಾಗುತ್ತದೆಯೊ, ಅದೇ "ಸಾಮಾನ್ಯ ಧರ್ಮ" ವಾಗಿರುತ್ತದೆ. ಇದನ್ನು ಮನುಸ್ಮೃತಿಯಲ್ಲಿ ಹೀಗೆಂದು ವಿವರಿಸುತ್ತದೆ –

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯ ನಿಗ್ರಹಃ |
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇ ಅಬ್ರವೀನ್ ಮನುಃ ||

ಅಹಿಂಸೆ, ಸತ್ಯ, ಅಸ್ತೇಯ (ಕಳ್ಳತನ ಮಾಡದಿರುವುದು), ಶೌಚ (ಅಂತರ್ ಬಾಹ್ಯ ಶುಚಿತ್ವ) ಹಾಗೂ ಇಂದ್ರಿಯ ನಿಗ್ರಹ – ಈ ಐದೂ ನಾಲ್ಕು ವರ್ಣದವರಿಗೆ ಸಾಮಾನ್ಯ ಧರ್ಮವಾಗಿದೆ. ಮನುಸ್ಮೃತಿಯಲ್ಲಿ ಅಕಾಮ (ನಿಃಸ್ವಾರ್ಥತೆ), ಅಕ್ರೋಧ, ಅಲೋಭ ಹಾಗೂ ಎಲ್ಲ ಜೀವಿಗಳಿಗೂ ಪ್ರೀತಿ ಹಾಗೂ ಹಿತಕರ ಭಾವಗಳನ್ನು ತೋರುವುದು–ಇವುಗಳನ್ನು ಸಾಮಾನ್ಯ ಧರ್ಮದಲ್ಲಿ ಸೇರಿಸಲಾಗಿದೆ. ಇದರೊಂದಿಗೆ ಧೃತಿ (ಸಂತೋಷ), ಕ್ಷಮೆ, ದಮ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹ, ಧೀ (ತತ್ತ್ವಜಿಜ್ಞಾಸುಬುದ್ಧಿ), ವಿದ್ಯಾ (ಆತ್ಮ–ಜ್ಞಾನ), ಸತ್ಯ ಮತ್ತು ಅಕ್ರೋಧಗಳನ್ನು ಈ ಧರ್ಮದ ಹತ್ತು ಲಕ್ಷಣಗಳೆಂದು ಮನುಧರ್ಮಶಾಸ್ತ್ರವು (6/92) ತಿಳಿಸುತ್ತದೆ. ಸಾಮಾನ್ಯ ಧರ್ಮವನ್ನು "ನೀತಿ ಧರ್ಮ" ವೆಂದೂ ಕರೆಯಲಾಗುತ್ತದೆ. ಇವೆಲ್ಲವನ್ನೂ ಸಮಾನ ರೀತಿಯಲ್ಲಿ ಆಚರಿಸಬೇಕಾದುದು ಅತ್ಯಂತ ಅಗತ್ಯ.

**2. ವಿಶೇಷ ಧರ್ಮ** : ವರ್ಣಾಶ್ರಮ ವ್ಯವಸ್ಥೆಗೆ ಅನುಸಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆನ್ನುವ ನಾಲ್ಕು ವರ್ಣಗಳವರು, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಹಾಗೂ ಸನ್ಯಾಸ – ಎನ್ನುವ ನಾಲ್ಕೂ ಆಶ್ರಮಗಳಿಗಾಗಿರುವ ವಿಶಿಷ್ಟ, ವಿಹಿತ ಸ್ವಧರ್ಮವನ್ನು ಆಚರಿಸುವುದೇ "ವಿಶೇಷ ಧರ್ಮ" ವೆಂದು ಕರೆಯಲಾಗುತ್ತದೆ.

**3. ಆಪದ್ಧರ್ಮ** : ಯಾವುದಾದರೊಂದು ರೀತಿಯ ಆಪತ್ತು ಉಂಟಾಗಿ, ಅದರಿಂದ ಕೆಲವು ಅನಾನುಕೂಲಗಳಾಗುತ್ತವೆ; ತೊಂದರೆಗಳಾಗುತ್ತವೆ – ಎಂದುಕೊಳ್ಳೋಣ. ಆಗ ಅವುಗಳನ್ನೂ ದೇಶ–ಕಾಲ–ಪಾತ್ರ–ಸನ್ನಿವೇಶಗಳಿಗೆ ಅನುಸಾರ ಸದ್ಭಾವನೆಯ ಆಧಾರದ ಮೇಲೆ ಶಾಸ್ತ್ರದ ಮರ್ಯಾದೆಯನ್ನು ಕಾಪಾಡಲು ಧರ್ಮದ ಪರಿಪಾಲನೆ ಮಾಡಿದ್ದಲ್ಲಿ, ಅಂತಹ ಧರ್ಮವನ್ನು ಆಪದ್ಧರ್ಮ ಎಂದು ಕರೆಯಲಾಗುತ್ತದೆ.

ಆಪದ್ಧರ್ಮವೆಂದು ಪರಧರ್ಮವನ್ನು ಸ್ವೀಕರಿಸುವುದು, ಅಥವಾ ಅದನ್ನು ಅವಲಂಬಿಸುವುದೂ ಕೂಡ ಶಾಸ್ತ್ರದಲ್ಲಿ ನಿಯಮವೆಂದು ತಿಳಿಸಿದೆ. ಆದರೆ ತಮ್ಮ ಮನಸ್ಸಿಗೆ ಬಂದಂತೆ ಆಚರಿಸದೆ ಶಾಸ್ತ್ರದ ಅವಲಂಬನದಂತೆಯೇ ನಡೆಯುವುದನ್ನೇ ಮಾನ್ಯಮಾಡಲಾಗಿದೆ. ಆ ಆಪತ್ತು ದೂರವಾದ ಮೇಲೆ ಆ ವ್ಯಕ್ತಿಯು ತನ್ನ ಮೂಲ ಧರ್ಮವನ್ನು ಮತ್ತೆ ಅಂಗೀಕರಿಸುವುದನ್ನು ಧರ್ಮಶಾಸ್ತ್ರವು

ಒಪ್ಪಿದೆ. ಈ ನಿಯಮವನ್ನು ಧರ್ಮಶಾಸ್ತ್ರವು ಸ್ಪಷ್ಟವಾಗಿ ಉಲ್ಲೇಖಿಸಿದೆ.

ಆಪದ್ಧರ್ಮದ ಸಮಯದಲ್ಲಿ ಶಿಷ್ಟಜನರ ಆಜ್ಞೆಯನ್ನು ಪಾಲಿಸಬೇಕೆಂದು ತಿಳಿಸಿದೆ. ಈರ್ಷ್ಯೆ, ಅಹಂಕಾರ, ಲೋಲುಪತೆ, ದರ್ಪ, ಮಾನ, ಮೋಹ, ಕ್ರೋಧ ರಹಿತನಾಗಿರುವವನನ್ನು 'ಶಿಷ್ಟ' (ಸಜ್ಜನ) ನೆಂದು ಕರೆಯಲಾಗಿದೆ. ಈ ಆಪದ್ಧರ್ಮವನ್ನು ಕೇವಲ ಆಪತ್ಕಾಲದಲ್ಲಿ ಮಾತ್ರ ಅನುಸರಿಸಬೇಕು. ಅನಂತರದಲ್ಲೂ ಅದನ್ನು ಅನುಸರಿಸುವವರನ್ನು "ಪಾಪಕರ್ಮದ ಭಾಗಿಗಳು" ಎಂದು ಧರ್ಮ ಶಾಸ್ತ್ರವು ತಿಳಿಸುತ್ತದೆ.

"ಶಾಸ್ತ್ರ" ಶಬ್ದದ ವ್ಯುತ್ಪತ್ತಿಯನ್ನು ಈ ರೀತಿಯಲ್ಲಿ ವಿವರಿಸಬಹುದು – "ಶಿಷ್ಯತೇನೇನೇತಿ ಶಾಸ್ತ್ರಂ" ಎಂದು. ಅಂದರೆ ಯಾವುದರ ಮುಖಾಂತರ ಶಾಸನ ಮಾಡಬಹುದೊ ಅಥವಾ ಶಾಸನ ಮಾಡಲು ಸಾಧ್ಯವೊ ಅದನ್ನು "ಶಾಸ್ತ್ರ" ವೆಂದು ಕರೆಯಲಾಗುತ್ತದೆ.

ವ್ಯವಹಾರ ರೂಪದಲ್ಲಿ "ಶಾಸ್ತ್ರ" ಎನ್ನುವ ಪದಕ್ಕೆ ಅನೇಕ ಅರ್ಥಗಳಿವೆ. ಅವುಗಳಲ್ಲಿ ಮುಖ್ಯವಾದುದು – ವಿದ್ಯಾಪ್ರಾಪ್ತಿಯಲ್ಲಿ ಯಾವುದು ಸಹಾಯ ಮಾಡುತ್ತದೆಯೊ ಅದೇ ಶಾಸ್ತ್ರ ಎಂಬುದು. ಇಂತಹ ವಿದ್ಯೆಯನ್ನು ಪಡೆಯುವ ರೀತಿಯನ್ನು ಯಾವುದರಲ್ಲಿ ವಿವರಿಸಿರುತ್ತದೆಯೊ, ತಿಳಿಸಿರುತ್ತದೆಯೊ, ಅದೇ ನಿಜವಾದ "ಶಾಸ್ತ್ರ" ಎಂದು ಹೇಳಲಾಗುತ್ತದೆ.

ವಿದ್ಯಾಪ್ರಾಪ್ತಿಗೆ "14 ಪ್ರಸ್ಥಾನ"ಗಳಿವೆ. ಇವುಗಳಲ್ಲಿ ಉಪನಿಷತ್ತು ಮತ್ತು ಉಪವೇದಗಳ ಸಹಿತ 4 ವೇದಗಳು, 6 ವೇದಾಂಗಗಳು ಮತ್ತು 4 ಉಪಾಂಗಗಳು ಸಮಾವಿಷ್ಟಗೊಂಡಿವೆ. ಇವೆಲ್ಲವೂ ವಿದ್ಯಾಪ್ರಾಪ್ತಿಗೆ ಸಾಧನ ವಾಗಿರುವುದರಿಂದ ಇವನ್ನು "ಶಾಸ್ತ್ರ"ಗಳೆಂದು ಕರೆಯಲಾಗುತ್ತದೆ.

"ಶಾಸ್ತ್ರ" ಶಬ್ದದ ಒಂದು ವ್ಯಾಖ್ಯೆಯು ಈ ರೀತಿ ಇದೆ–

ಪ್ರವೃತ್ತಿಶ್ಚ ನಿವೃತ್ತಿಶ್ಚ ಪುಂಸಾಂ ಯೇನೋಪದಿಶ್ಯತೇ |
ತದ್ಧರ್ಮಾಶ್ಚೋಪದಿಶ್ಯಂತೆ ಶಾಸ್ತ್ರಂ ಶಾಸ್ತ್ರವಿದೋ ವಿದುಃ ||

ಅಂದರೆ ಯಾವುದರಲ್ಲಿ ಪ್ರವೃತ್ತಿ, ನಿವೃತ್ತಿ ಹಾಗೂ ಮಾನವನ ಧರ್ಮವು ಸಮಾವೇಶಗೊಂಡಿವೆಯೋ, ಅದನ್ನು ಶಾಸ್ತ್ರವೇತ್ತರು "ಶಾಸ್ತ್ರ" ಎಂದು ಕರೆಯುವರು.

"ಭಗವದ್ಗೀತೆ" (16-23)ಯಲ್ಲಿ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಶಾಸ್ತ್ರ ಮರ್ಯಾದೆಯ ಬಗ್ಗೆ ಉಪದೇಶವನ್ನು ನೀಡುತ್ತಾ

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ||

ಎಂದು ತಿಳಿಸಿದ್ದಾನೆ ಅಂದರೆ ಯಾವ ಅವಿವೇಕಿ ವ್ಯಕ್ತಿಯು ಶಾಸ್ತ್ರವಿಧಿಯನ್ನು ತ್ಯಾಗ ಮಾಡಿ, ತನ್ನ ಇಷ್ಟಾನುಸಾರ ಸ್ವಚ್ಛಂದತೆಯಿಂದ ವರ್ತಿಸುವನೋ, ಅವನು ಎಂದೆಂದಿಗೂ ಸಿದ್ಧಿ, ಸುಖ ಹಾಗೂ ಉತ್ತಮ ಗತಿಯನ್ನು ಪಡೆಯುವುದಿಲ್ಲ.

ಇದರ ತಾತ್ಪರ್ಯವಿಷ್ಟೆ — "ಶಾಸ್ತ್ರವಿಧಿಯನ್ನು ಪರಿತ್ಯಾಗ ಮಾಡಿ ಮನಸ್ಸಿಗೆ ಬಂದಂತೆ ನಡೆದುಕೊಳ್ಳುವ ವ್ಯಕ್ತಿಯು ಕಡೆಯಲ್ಲಿ ಅಧೋಗತಿಯನ್ನು ಹೊಂದುವನು."

ಪರಮಪದದ ಪ್ರಾಪ್ತಿ ಇಲ್ಲದೆ ನಿಜವಾದ ಸುಖ ಹಾಗೂ ಶಾಶ್ವತ ಶಾಂತಿ ಎಂದಿಗೂ ಸಿಗುವುದಿಲ್ಲ. ಆದುದರಿಂದ ಬುದ್ಧಿವಂತ ವ್ಯಕ್ತಿಯು ಶಾಸ್ತ್ರವಿಧಿಯನುಸಾರ ಕರ್ಮಗಳನ್ನು ಮಾಡುವನು. ಹೀಗೆ ಮಾಡುವುದರಿಂದಲೇ ಪರಮಪದವು ಪ್ರಾಪ್ತವಾಗುವುದು ಎಂಬ ಸಿದ್ಧಾಂತವೂ ಇದೆ.

"ಶಾಸ್ತ್ರವಿಧಿ"ಯ ಅರ್ಥವೆಂದರೆ "ಶಾಸ್ತ್ರದ ಆಜ್ಞೆ"ಯನುಸಾರದ "ಶಾಸ್ತ್ರದ ನಿಯಮ" ಶಾಸ್ತ್ರದ ಆಜ್ಞೆಯೆಂದರೆ – ಶಾಸ್ತ್ರೀಯ ನಿಯಮಗಳನ್ನು ಆಚರಣೆಯಲ್ಲಿ ತರುವುದು ಎಂದರ್ಥ.

"ವೇದ"ದಲ್ಲಿಯೂ ಕೂಡ "ವಿಧಿವಾಕ್ಯ"ವು ಒಳಗೊಂಡಿದೆ. "ವಿಧಿ" ಎನ್ನುವುದೇ "ಆಜ್ಞೆ ನೀಡುವ ವಾಕ್ಯ." "ವೇದ"ದ ಆಜ್ಞಾವಾಕ್ಯದ ಪಾಲನೆ ಮಾಡುವ ವ್ಯಕ್ತಿಯು ಬಹಳ ಬೇಗ "ಪರಮಪದ"ವನ್ನು ತಪ್ಪದೆ ಪಡೆಯುವನು.

ಇದನ್ನೇ ಭಗವದ್ಗೀತೆಯು ಹೀಗೆಂದು ವಿವರಿಸಿದೆ –

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ |
ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ||

# 3. ಭಾರತೀಯ ಧರ್ಮ ಸೂತ್ರಗಳು

ಮಾನವನ ಜೀವನಕ್ಕೆ ಸಂಬಂಧಪಟ್ಟಂತೆ ಪ್ರಾಚೀನ ಕಾಲದಿಂದಲೂ ಕೆಲವೊಂದು ನಿರ್ಬಂಧಗಳಿದ್ದವು. ಮಾನವನು ಕ್ರಮಬದ್ಧವಾದ ಜೀವನವನ್ನು ನಡೆಸಬೇಕಾದರೆ ಯಾವ ಯಾವ ನಿಯಮಗಳನ್ನು ಅನುಸರಿಸಬೇಕು ಎಂಬುದನ್ನು ಅಂದಿನ ಹಿರಿಯರು ರೂಪಿಸಿದರು. ಇದನ್ನೆ ಧಾರ್ಮಿಕ ರೀತಿ ಎಂದು ಕರೆದರು. ಬೇರೆಯವರಿಗೆ ತೊಂದರೆಯಾಗದಂತೆ ನಡಾವಳಿಗಳನ್ನು ಅನುಸರಿಸುವುದೇ ಧರ್ಮಮಾರ್ಗ. ಇದನ್ನು ನಿಯಮಾವಳಿಗಳ ಮುಖಾಂತರ ಅನುಸರಿಸಲು ರೂಪಿಸಲಾದ ನಿಯಮಗಳೇ ಸೂತ್ರಗಳು. ಇವೇ ಧರ್ಮಸೂತ್ರಗಳು, ಇವು ಸರ್ವಜನ ಸಮ್ಮತವಾಗಿದ್ದು, ಸಮಾಜಕ್ಕೆ ವಿಹಿತವಾಗಿದ್ದುದರಿಂದ ಇವು ಸಾಮಾಜಿಕಗಳೂ ಆದುವು. ಈ ರೀತಿಯಲ್ಲಿ ಭಾರತೀಯ ಜೀವನವು ತುಂಬಾ ಕಟ್ಟುನಿಟ್ಟಿನ ಜೀವನವಾಗಿದ್ದು, 'ಸರ್ವೇ ಜನಾಃ ಸುಖಿನೋ ಭವಂತು' ಎನ್ನುವುದಕ್ಕೆ ತಕ್ಕಂತಿತ್ತು. ಇದು ಧಾರ್ಮಿಕ ಜೀವನದ ತಳಹದಿಯಾಯಿತು. ಈ ನಿಯಮಗಳಿಗೆ ಅನುಸಾರವಾಗಿ ನಡೆದುಕೊಳ್ಳುತ್ತಿದ್ದುದರಿಂದಲೇ ಭಾರತೀಯ ಸಂಸ್ಕೃತಿಯು ಇಂದಿನವರೆಗೂ ಉಳಿದುಬರಲು ಸಾಧ್ಯವಾಯಿತು. ವೇದ ವೇದಾಂಗಗಳು ಧಾರ್ಮಿಕ ಜೀವನಕ್ಕೆ ಆಧಾರ ಗ್ರಂಥಗಳಾದುವು. ಆದರೆ ಜನಸಾಮಾನ್ಯರಿಗಾಗಿ ರೂಪುಗೊಂಡ ನಿಯಮಗಳು ಧರ್ಮಸೂತ್ರಗಳಾಗಿ ರೂಢಿಗೆ ಬಂದುವು. ಇವು ಹೆಚ್ಚಾಗಿ ಗೃಹ್ಯಸೂತ್ರಗಳಿಗೆ ಹೊಂದಿಕೊಂಡಿದ್ದರಿಂದ ಅನೇಕ ಸಂಸ್ಕಾರಗಳು ಗೃಹಕ್ಕೆ ಸಂಬಂಧಪಟ್ಟದ್ದಾಗಿದ್ದು, ಸಮಾಜವೇ ಒಂದು ಗೃಹ ಎಂಬ ಹೇಳಿಕೆಯು ರೂಢಿಗೆ ಬಂದಿತು. ಈ ರೀತಿಯಲ್ಲಿ ಗೃಹ್ಯ ಸೂತ್ರಗಳು ಪ್ರಾಚೀನ ಭಾರತೀಯ ಜೀವನದ ಆಳವಾದ ನೋಟವನ್ನು ನೀಡುವ ಒಂದು 'ಜಾನಪದ ಗ್ರಂಥ' ವೆನಿಸಿಕೊಂಡಿತು.

ಈ ಸೂತ್ರಗಳು ಹೀಗೆ 'ಮಾನವ ಜೀವನದ' ಮಾರ್ಗದರ್ಶಿಗಳಾಗಿ, ಪ್ರಾರಂಭದಲ್ಲಿ ಮೌಖಿಕವಾಗಿ, ನಂತರ ಗ್ರಂಥರೂಪಕ್ಕೆ ಬಂದುವು. ಹೀಗೆ ಗ್ರಂಥಸ್ಥ ಮಾಡುವಾಗ, ಯಾರು ಗ್ರಂಥ ರೂಪದಲ್ಲಿ ನೀಡಿದರೊ ಅವರ ಹೆಸರನ್ನೇ ಆ ಕೃತಿಗೆ ಇಡಲಾಯಿತು. ಹೀಗಾಗಿ ಗೌತಮಧರ್ಮ ಸೂತ್ರ, ಆಪಸ್ತಂಭ ಧರ್ಮ ಸೂತ್ರಗಳು ಬೆಳಕಿಗೆ ಬಂದುವು.

ಈ ಧರ್ಮ ಸೂತ್ರಗಳು ತುಂಬಾ ಪ್ರಾಚೀನವಾದುವೆಂದೂ, ನಂತರ ವಿಸ್ತೃತ ರೂಪದಲ್ಲಿ ಇವೇ ಧರ್ಮಶಾಸ್ತ್ರಗಳಾದುವೆಂದೂ ಹೇಳಲಾಗುತ್ತದೆ. ಆದರೆ ಕೆಲವು ಧರ್ಮಸೂತ್ರಗಳಲ್ಲಿ ಮನು ಮುಂತಾದ ಸೂತ್ರಕಾರರ ಹೆಸರುಗಳು ಬಂದಿರುವುದರಿಂದ ಇದು ಅಷ್ಟು ಸಮಂಜಸವಲ್ಲ ಎಂದೆನಿಸುತ್ತದೆ. ಹೀಗಾಗಿ 'ಧರ್ಮಸೂತ್ರ'ಗಳಲ್ಲಿ ಕೆಲವು ಮುಂಚೆಯೇ ರಚಿತವಾಗಿದ್ದರೂ ಕಾಲಾಂತರದಲ್ಲಿ ಸಮಸಮನಾಗಿ ಧರ್ಮಸೂತ್ರಗಳೂ, ಧರ್ಮಶಾಸ್ತ್ರಗಳೂ ನಿರ್ಮಾಣ ಆಗಿರ ಬಹುದು ಎಂದೆನ್ನಿಸುತ್ತದೆ. ಗಮನವಿಟ್ಟು ನೋಡಿದಲ್ಲಿ ಧರ್ಮಸೂತ್ರಗಳು ಹಾಗೂ ಗೃಹಸೂತ್ರಗಳಲ್ಲಿ ತದ್ರೂಪಗಳಾಗಿರುವುದು ಕಂಡು ಬರುತ್ತವೆ. ಇದೇ ರೀತಿಯಲ್ಲಿ ಧರ್ಮಸೂತ್ರಗಳಿಂದ ಸ್ಮೃತಿಗಳೂ ನಿರ್ಮಾಣವಾಗಿರಬಹುದು; ಅಂತೆಯೇ ನಿಬಂಧಗಳೂ ಕೂಡ.

ಹೀಗೆ ವೇದಗಳ ಕಾಲದ ನಂತರದಲ್ಲಿ ಧರ್ಮ ಸೂತ್ರಗಳು ನಿರ್ಮಾಣ ವಾಗಿರಬಹುದೆಂದು ನಂಬಲಾಗಿದೆ.

ಪ್ರಾಚೀನ ಕಾಲದಿಂದಲೂ ಧರ್ಮಶಾಸ್ತ್ರಗಳಲ್ಲಿ ವಿವಿಧ ವಿಷಯಗಳ ವರ್ಣನೆಗಳು ಇರುವುದನ್ನು ಕಾಣುತ್ತಿದ್ದೇವೆ. ಇಂತಹ ಧರ್ಮಶಾಸ್ತ್ರಗಳಲ್ಲಿ ಮುಖ್ಯವಾಗಿ ಧರ್ಮ ಸೂತ್ರಗಳು, ಸ್ಮೃತಿಗಳು ಹಾಗೂ ನಿಬಂಧ ಗ್ರಂಥಗಳು ಅಂತರ್ಗತವಾಗಿ, ಸಮಾವಿಷ್ಟವಾಗಿವೆ.

ಗೌತಮ, ಬೋಧಾಯನ, ಆಪಸ್ತಂಭ ಹಾಗೂ ವಸಿಷ್ಠ ಧರ್ಮ ಸೂತ್ರ ಗಳಲ್ಲಿ ಪ್ರಧಾನವಾಗಿ ವರ್ಣ, ಆಶ್ರಮ, ಧರ್ಮಗಳ ವಿಶೇಷಾಧಿಕಾರಗಳು ಹಾಗೂ ಕರ್ತವ್ಯಗಳು, ಷೋಡಶ ಸಂಸ್ಕಾರಗಳು, ಬ್ರಹ್ಮಚಾರಿಗಳು ಹಾಗೂ ಸ್ನಾತಕರ ಕರ್ತವ್ಯಗಳು, ಪಂಚ ಮಹಾಯಜ್ಞ, ಅಶೌಚ, ರಾಜಧರ್ಮ ಹಾಗೂ ವ್ಯವಹಾರಗಳ ವಿವೇಚನೆಯನ್ನು ಮಾಡಲಾಗಿದೆ.

ಇಷ್ಟೇ ಅಲ್ಲದೆ, ಇವುಗಳೊಂದಿಗೆ ಧರ್ಮಶಾಸ್ತ್ರ ಸಂಬಂಧದ ಕೆಲವು ಗ್ರಂಥ ಗಳಲ್ಲಿ ವ್ರತಗಳು, ಉತ್ಸರ್ಗ ಹಾಗೂ ಪ್ರತಿಷ್ಠೆಗಳು, ದೇವಾಲಯ, ಧರ್ಮಶಾಲೆ (ಛತ್ರ) ಹಾಗೂ ಕೊಳಗಳು ಇತ್ಯಾದಿಗಳ ನಿರ್ಮಾಣ, ತೀರ್ಥ ಹಾಗೂ ಇತ್ಯಾದಿಗಳ ಸವಿಸ್ತಾರ ವರ್ಣನೆಗಳು ದೊರೆಯುತ್ತವೆ.

ಮೇಲೆ ತಿಳಿಸಿದ ಧರ್ಮಶಾಸ್ತ್ರಗಳ ವಿಷಯಗಳ ಬಗ್ಗೆ ವಿಹಂಗಮ ದೃಷ್ಟಿ ಯನ್ನು ಬೀರುವುದರಿಂದ ಸ್ಪಷ್ಟವಾಗುವ ಅಂಶವೆಂದರೆ ಪ್ರಾಚೀನ ಕಾಲದಲ್ಲಿ

ಧಾರ್ಮಿಕ ವಿಷಯಗಳ ಬಗ್ಗೆ ಜನರು ಹೆಚ್ಚು ವ್ಯಾಪಕವಾದ ಧಾರಣಶಕ್ತಿಯನ್ನು ಹೊಂದಿದ್ದುದೇ ಅಲ್ಲದೆ ಮಾನವ ಜೀವನವು ಸಂಪೂರ್ಣವಾಗಿ ಧಾರ್ಮಿಕ ಭಾವನೆಗಳೊಂದಿಗೆ ಒಂದಾಗಿತ್ತು ಎಂದು ಹೇಳಬಹುದು.

ಧರ್ಮ ಶಾಸ್ತ್ರಾನುಸಾರ 'ಧರ್ಮ'ವು ಯಾವುದೇ ಒಂದು ಸಂಪ್ರದಾಯದ ಹಾಗೂ ಮತದ ಕುರುಹಾಗಿ, ದ್ಯೋತಕವಾಗಿರಲಿಲ್ಲ. ಅದು ಜೀವನದ ಒಂದು ಆಚಾರ ಸಂಹಿತೆಯಾಗಿತ್ತು. ಇದು ಮಾನವನ ಕರ್ತವ್ಯಗಳನ್ನು ಸರಿಯಾದ ರೀತಿಯಲ್ಲಿ ವ್ಯವಸ್ಥಿತ ಗೊಳಿಸುತ್ತಿತ್ತು. ಸನ್ಮಾರ್ಗದಲ್ಲಿ ಮುನ್ನಡೆದು, ಉತ್ತಮ ಗುರಿಯನ್ನು ಜೀವನದಲ್ಲಿ ತಲುಪಲು ಯೋಗ್ಯತಾ ಸಿದ್ಧಿಯನ್ನು ನೀಡುತ್ತಿತ್ತು, ನೀಡುವುದು.

ಧರ್ಮದ ಅರ್ಥ ಧಾರಣೆ ಮಾಡುವುದು ಎಂದು. ಇದರಲ್ಲಿ ಸಂಪೂರ್ಣ ವಿಶ್ವವನ್ನು ಧಾರಣೆ ಮಾಡುವ ಕ್ಷಮತೆಯ ಸಮರ್ಥತೆ ಇರುವುದು. ಇದನ್ನೇ ಧರ್ಮ ಎಂದು ಕರೆಯುವುದು.

ಸ್ಮೃತಿಕಾರರ ಅನುಸಾರ ಧರ್ಮಕ್ಕೆ ಐದು ಸ್ವರೂಪಗಳಿರುತ್ತವೆ. ವರ್ಣ ಧರ್ಮ, ಆಶ್ರಯ ಧರ್ಮ, ವರ್ಣಾಶ್ರಮ ಧರ್ಮ, ನೈಮಿತ್ತಿ ಧರ್ಮ ಹಾಗೂ ಗುಣಧರ್ಮ. ಮಾನವನಿಗಿರುವ ವಿಶೇಷಾಧಿಕಾರಗಳು, ಕರ್ತವ್ಯಗಳು, ಆಚಾರ-ವಿಚಾರಗಳು ಹಾಗೂ ವರ್ಣಾಶ್ರಮಗಳ ಧರ್ಮವನ್ನು ಇವು ಪ್ರತಿಪಾದಿಸುತ್ತವೆ.

ಮುಖ್ಯವಾಗಿ ಧರ್ಮವು ಶ್ರೌತ ಹಾಗೂ ಸ್ಮಾರ್ತ ಎಂದು ಎರಡು ಭಾಗ ಗಳಾಗಿ ವಿಭಾಜಿತವಾಗಿದೆ. ವೈದಿಕ ಸಂಹಿತೆಗಳ ಹಾಗೂ ಬ್ರಾಹ್ಮಣಗಳೊಂದಿಗೆ ಪ್ರಮುಖ ಸಂಬಂಧವನ್ನು ಹೊಂದಿರುವ ಸಂಸ್ಕಾರಗಳನ್ನು ಹೊಂದಿರುವುದೇ ಶ್ರೌತಧರ್ಮ. ಮೂರು ಪವಿತ್ರ ಅಗ್ನಿಗಳ ಪೂಜೆ, ಪೌರ್ಣಮಿ ಹಾಗೂ ಪ್ರತಿ ಪದಗಳ ಯಜ್ಞ ಹಾಗೂ ಸೋಮ ಕೃತ್ಯ ಇತ್ಯಾದಿಗಳು ಈ ಧರ್ಮದಲ್ಲಿ ಪ್ರಮುಖವಾದವುಗಳಾಗಿವೆ.

ಸ್ಮೃತಿಗಳಲ್ಲಿ ವಿಶೇಷತಃ ವರ್ಣಿತವಾಗಿದ್ದು, ವರ್ಣಾಶ್ರಮದೊಂದಿಗೆ ಸಂಬದ್ಧವಾಗಿರುವ ವಿಷಯಗಳು ಸ್ಮಾರ್ತಧರ್ಮದಲ್ಲಿ ಪ್ರಮುಖವಾದವುಗಳಾಗಿವೆ. ಇದಕ್ಕೆ ಮತ್ಸ್ಯಪುರಾಣದ 145/30-31ನೇ ಶ್ಲೋಕ ಭಾಗಗಳು ಆಧಾರ ವಾಗಿವೆ —

ದಾರಾಗ್ನಿ ಹೋತ್ರ ಸಂಬಂಧವಿಜ್ಯಾ ಶ್ರೌತಸ್ಯ ಲಕ್ಷಣಂ |
ಸ್ಮಾರ್ತೋ ವರ್ಣಾಶ್ರಮಾಚಾರೋ ಯಮೈಶ್ಚ ನಿಯಮೈರ್ಯುತಃ ||

ಅಗ್ನ್ಯಾಧಾನಾದಿ ಪೂರ್ವಕೋऽಧೀತ ಪ್ರತ್ಯಕ್ಷ ವೇದ ಮೂಲೋ ದರ್ಶಪೌರ್ಣಮಾಸಾದಿಃ ಶ್ರೌತಃ | ಅನುಮಿತ ಪರೋಕ್ಷಶಾಖಾಮೂಲಃ ಶೌಚಾಚಮನಾದಿಃ ಸ್ಮಾರ್ತಃ | [ಪರಾ. ಮಾ. 1. ಭಾಗ ೧]

ಮಹಾಭಾರತದ ಅನುಶಾಸನ ಪರ್ವದ 141/65ರಲ್ಲಿ ತಿಳಿಸಿರುವ

ವೇದೋಕ್ತಃ ಪರಮೋ ಧರ್ಮಃ ಸ್ಮೃತಿ ಶಾಸ್ತ್ರಗತೋऽಪರಃ |
ಶಿಷ್ಟಾಚೀರ್ಣೋऽಪರಃ ಪ್ರೋಕ್ತಸ್ತ್ರಯೋ ಧರ್ಮಾಃ ಸನಾತನಃ ||

ಎಂಬ ಶ್ಲೋಕದಂತೆ ಶ್ರೌತ, ಸ್ಮಾರ್ತ ಹಾಗೂ ಶಿಷ್ಟಾಚಾರದ ರೂಪದಲ್ಲಿಯೂ ಧರ್ಮವನ್ನು ವಿಭಾಜಿಸಬಹುದು. ಇನ್ನೂ ಕೆಲವು ಗ್ರಂಥಗಳಲ್ಲಿ ಈ ರೀತಿಯಲ್ಲಿ ವಿಭಾಜಿಸಲಾಗಿದೆ.

## ಧರ್ಮ ಸೂತ್ರಗಳು

ಪ್ರಾರಂಭದಲ್ಲಿ ಬಹಳಷ್ಟು ಧರ್ಮಸೂತ್ರಗಳ ಅಧ್ಯಯನವನ್ನು ಕಲ್ಪ ಸೂತ್ರಗಳ ಅಂಗಗಳ ರೂಪದಲ್ಲಿನ ಚರಣ (ನುಡಿ)ಗಳ ಮುಖಾಂತರ ಮಾಡಲಾಗುತ್ತಿತ್ತು. ಕೆಲವೊಂದು ವಿಷಯಗಳು ಇವೇ ಚರಣಗಳಿಂದ ತಿಳಿದು ಬರುತ್ತಿದ್ದವು. ಇವು ಗೃಹ್ಯ ಸೂತ್ರಗಳ ರೂಪದಲ್ಲಿಯೂ ಇದ್ದವು. ಎಲ್ಲ ಚರಣಗಳ ಗೃಹ್ಯ ಸೂತ್ರಗಳೂ ಇಂದು ಲಭ್ಯವಿಲ್ಲ.

ಆಶ್ವಲಾಯನ ಶ್ರೌತ ಹಾಗೂ ಗೃಹ್ಯಸೂತ್ರ; ಮಾನವ ಶ್ರೌತ ಹಾಗೂ ಗೃಹ್ಯಸೂತ್ರ ಹಾಗೂ ಶಾಂಖಾಯನ–ಶ್ರೌತ ಹಾಗೂ ಗೃಹ್ಯಸೂತ್ರಗಳಿಗೆ ಧರ್ಮಸೂತ್ರಗಳಿಲ್ಲ.

ಆದರೆ ಆಪಸ್ತಂಭ, ಹಿರಣ್ಯಕೇಶೀ ಹಾಗೂ ಬೌಧಾಯನರ ಚರಣಗಳಲ್ಲಿ ಮೂರು ಶ್ರೌತಗಳು, ಗೃಹ್ಯ ಹಾಗೂ ಧರ್ಮಸೂತ್ರಗಳಿವೆ. ಈ ಧರ್ಮ ಸೂತ್ರಗಳ ಸಂಬಂಧವು ಆರ್ಯರ ಆಚಾರ–ನಿಯಮಗಳೊಂದಿಗೆ ಇತ್ತು. ಇದರ ಪರಿಣಾಮವಾಗಿ ಕಾಲಾಂತರದಲ್ಲಿ ಎಲ್ಲ ಧರ್ಮ ಸೂತ್ರಗಳು, ಎಲ್ಲ ಶಾಖೆಗಳ ವರೆಗೂ ಪ್ರಮಾಣ ರೂಪವಾಗಿರುವಂತೆ ಮಾನ್ಯ ಮಾಡಲ್ಪಟ್ಟವು. ಹೀಗಾಗಿ ಧರ್ಮಸೂತ್ರಗಳಲ್ಲಿನ ಮುಖ್ಯ ಪ್ರತಿಪಾದ್ಯ ವಿಷಯವು ಆಚಾರ, ವಿಧಿ–ನಿಯಮ ಹಾಗೂ ಕ್ರಿಯಾ ಸಂಸ್ಕಾರಗಳ ವರ್ಣನೆಗಳಾಗಿವೆ.

# 4. ಭಾರತೀಯ ಸ್ಮೃತಿಗಳು

'ಸ್ಮೃತಿ' ಎಂದರೆ ಹಿಂದೆ ತಿಳಿದಿದ್ದುದರ ಜ್ಞಾನದ ನೆನಪು ಎಂದು ಒಂದರ್ಥವಾದರೆ, ಇನ್ನೊಂದರ್ಥದಲ್ಲಿ ವೇದಗಳನ್ನು ಆಳವಾಗಿ ಅಭ್ಯಾಸಮಾಡಿ, ಅವುಗಳಲ್ಲಿನ ಉಪದೇಶಗಳನ್ನು ಹೃದ್ಗತ ಮಾಡಿಕೊಂಡ ನಂತರ ನೆನಪಿನಲ್ಲಿ ಇಟ್ಟುಕೊಂಡ ವಿಷಯಗಳನ್ನು ಮಹರ್ಷಿಗಳು ಲಿಖಿತ ರೂಪದಲ್ಲಿ ಬರೆದರು. ಹಾಗೆ ನೆನಪಿನಿಂದ ಬರೆದವುಗಳನ್ನು 'ಸ್ಮೃತಿ'ಗಳು ಎಂದು ಕರೆದರು. ಅಂದರೆ ಇವು ವೇದಗಳ ಸಂಗ್ರಹ ರೂಪ ಎಂದು ಹೇಳಬಹುದು.

ಮತ್ತೊಂದು ದೃಷ್ಟಿಯಿಂದ ಸ್ಮೃತಿಗಳನ್ನು ಎರಡು ಅರ್ಥಗಳಲ್ಲಿ ವಿಭಾಜಿಸಲಾಗಿದೆ. ಒಂದು ಅರ್ಥದಲ್ಲಿ ವೈದಿಕ ವಾಙ್ಮಯ ಗ್ರಂಥಗಳಾದ ಶ್ರೌತ, ಗೃಹ್ಯ, ಧರ್ಮಸೂತ್ರ, ಮನು ಹಾಗೂ ಯಾಜ್ಞವಲ್ಕ್ಯರೊಂದಿಗೆ ಸಂಬಂಧವನ್ನು ಹೊಂದಿರುವ ಗ್ರಂಥಗಳೆಂಬುದು; ಮತ್ತೊಂದು ಅರ್ಥದಲ್ಲಿ ಮನು (2/10) ಹೇಳಿದಂತೆ.

ಶ್ರುತಿಸ್ತು ವೇದೋ ವಿಜ್ಞೇಯೊ ಧರ್ಮಶಾಸ್ತ್ರಂ ತು ವೈ ಸ್ಮೃತಿಃ ।

ಧರ್ಮಶಾಸ್ತ್ರಗಳ ಮತ್ತೊಂದು ರೂಪವೇ ಸ್ಮೃತಿಗಳು ಎಂದು ಕರೆಯಿಸಿಕೊಳ್ಳುತ್ತವೆ. ಆದರೂ ಧರ್ಮಶಾಸ್ತ್ರಗಳಿಗೂ, ಸ್ಮೃತಿಗಳಿಗೂ ತುಂಬಾ ವ್ಯತ್ಯಾಸವಿದೆ. ಧರ್ಮಶಾಸ್ತ್ರಗಳು ವಿಸ್ತೃತ ರೂಪಗಳಾದರೆ, ಸ್ಮೃತಿಗಳು ಸಂಕ್ಷಿಪ್ತ ರೂಪದ್ದಾಗಿದ್ದು, ಸಮಾಜದ ಅನೇಕ ವಿಷಯಗಳನ್ನು, ಜನಜೀವನದ ವಿವಿಧ ಮಗ್ಗಲುಗಳನ್ನು ಸ್ಪರ್ಶಿಸುತ್ತವೆ. ಜನರಿಗೆ ಧರ್ಮ ಶಾಸ್ತ್ರಗಳಿಗಿಂತ ಸ್ಮೃತಿಗಳು ತುಂಬಾ ಹತ್ತಿರದ್ದಾಗಿರುತ್ತವೆ.

ಗೌತಮ ಹಾಗೂ ವಸಿಷ್ಠರು ಸ್ಮೃತಿಗಳನ್ನು ಧರ್ಮದ ಉಪಾದಾನ ಎಂದು ಕರೆಯುತ್ತಾರೆ. ವಿಭಿನ್ನ ಉಲ್ಲೇಖಗಳ ಅನುಸಾರ ಸ್ಮೃತಿಗಳ ಸಂಖ್ಯೆ ಹೆಚ್ಚು ಕಡಿಮೆ 100 ಸಂಖ್ಯೆಯಷ್ಟಿವೆ.

ಇವುಗಳಲ್ಲಿ ಕೆಲವು ಸ್ಮೃತಿಗಳು ಪೂರ್ಣರೂಪದ ಗದ್ಯರೂಪದಲ್ಲಿವೆ. ಕೆಲವು ಗದ್ಯ-ಪದ್ಯದ ಮಿಶ್ರಿತ ಚಂಪೂ ಶೈಲಿಯಲ್ಲಿವೆ. ಉಳಿದವು ಪದ್ಯರೂಪದಲ್ಲಿವೆ.

ಋಷಿ ಮುನಿಗಳಿಂದ ರಚಿತವಾದ ಈ ಸ್ಮೃತಿಗಳು ಪುರುಷಕೃತ. ವೇದಗಳು ಅಪೌರುಷೇಯ, ಪುರುಷಕೃತವಲ್ಲ ಎಂಬ ನಂಬಿಕೆ. ಈ ಕಾರಣದಿಂದ ಇವುಗಳು ಸ್ವತಃ ಪ್ರಮಾಣ. ಆದರೆ ಸ್ಮೃತಿಗಳು ಪುರುಷಕೃತವಾದರೂ ಪ್ರಮಾಣವೇ. ಏಕೆಂದರೆ ಅವು ವೇದಗಳಿಂದ ಅಗಾಧ ಜ್ಞಾನ ಪಡೆದಿದ್ದ ಋಷಿ ಮುನಿಗಳಿಂದ ಬಂದಿರುವುದು ಎಂದು. ಇದಕ್ಕೆ ಆಧಾರ 'ಸ್ಮೃತಿ ಶೀಲೇಚ ತದ್ವಿದಾಮ್' ಎಂಬುದು. ಸ್ಮೃತಿಗಳಲ್ಲಿನ ವಿಷಯಗಳು ವೇದಗಳಿಗೆ ಅನುರೂಪ ಉಪದೇಶಗಳನ್ನು ಅವಲಂಬಿಸಿದೆ ಎಂಬುದೇ ಆಗಿದೆ.

ಹಿಂದೊಮ್ಮೆ ಸ್ಮೃತಿಗಳು ಜನಜೀವನದ ಆಚಾರ ವ್ಯವಹಾರದ ವಿಧಿಗಳ ರೂಪದಲ್ಲಿ ಸಮಸ್ತ ಭಾರತದಲ್ಲಿ ಅಧಿಕಾರ ಸ್ಥಾಪಿಸಿದ್ದವು. ದೇಶಾಚಾರಗಳು ಎಲ್ಲ ಶಾಸನಗಳನ್ನು ಮೀರಿದ್ದುದರಿಂದ ಯಾವ ರೀತಿಯ ಕಷ್ಟವೂ ಇರಲಿಲ್ಲ. ಆದರೆ ವಿದೇಶೀಯ ಹರಿವು ಭಾರತದೊಳಗೆ ಹರಿದು ಬಂದಿದ್ದರಿಂದ, ಅವರುಗಳ ಆಚಾರ ವಿಚಾರಗಳೂ ಸ್ಮೃತಿಗಳ ಮೇಲೆ ಪ್ರಭಾವ ಬೀರಿದುವು. ಹೀಗಾಗಿ ಅಲ್ಪಸ್ವಲ್ಪ ಬದಲಾವಣೆಗಳಾಗಿ, ಹೊಸ ರೂಪವನ್ನು ಪಡೆದುವು. ಆದರೂ ಪ್ರಾಚೀನ ಪರಂಪರೆ, ವೇದಗಳ ಹಿನ್ನಲೆ ಹಾಗೆಯೇ ಉಳಿದುಕೊಂಡಿತು.

ಸ್ಮೃತಿಗಳು ಶಾಸನ ಗ್ರಂಥಗಳಷ್ಟೇ ಅಲ್ಲದೆ, ಲೌಕಿಕ ವ್ಯವಹಾರ, ಶಿಕ್ಷೆ ನೀಡುವ ನಿಯಮಗಳು, ಕುಟುಂಬ ಹಾಗೂ ವಿವಾಹದ ನಿಯಮಗಳು, ಉತ್ತರಾಧಿಕಾರಿಯ ನಿಯಮಗಳು, ಇನ್ನೂ ಅನೇಕ ನಿಯಮಗಳನ್ನು ಒಳಗೊಂಡಿವೆ. ಪ್ರತಿ ವ್ಯಕ್ತಿಯ ಜೀವನದ ನಿಯಮಾವಳಿಗಳು ಇವುಗಳಲ್ಲಿ ಅಡಕವಾಗಿವೆ. ನಾಡಿನ ಆಂತರಿಕ ಹಾಗೂ ಬಾಹ್ಯ ವ್ಯವಹಾರಗಳು, ರಾಜ ಮತ್ತಿತರ ಆಡಳಿತಾದ ಅಧಿಕಾರಿಗಳ ಕರ್ತವ್ಯಗಳು–ಇವುಗಳಲ್ಲಿ ಸೇರಿವೆ. ಹೀಗೆ ವ್ಯಕ್ತಿಯೋರ್ವನ ಜೀವನದ ಎಲ್ಲ ಮುಖಗಳ ವಿವರಗಳು ಇದರಲ್ಲಿ ಸೇರಿದ್ದು, ದೇವತೆಗಳ ಪೂಜೆ ಅರ್ಚನೆಗಳು, ಶ್ರಾದ್ಧಗಳು, ಹುಟ್ಟು–ಸಾವಿನ ಮೈಲಿಗೆಗಳು, ಪ್ರಾಯಶ್ಚಿತ್ತಗಳು, ದಿನ ನಿತ್ಯದ ಪದ್ಧತಿಗಳು ಹಾಗೂ ರೀತಿನೀತಿಗಳು–ಇನ್ನೂ ಅನೇಕವು ಇವುಗಳಲ್ಲಿ ಸಂಯುಕ್ತವಾಗಿದ್ದು, ಸರ್ವವ್ಯಾಪಕತ್ವವನ್ನು ಪಡೆದಿವೆ.

ವೇದಗಳ ಕಾಲಕ್ಕೆ ಹಿಂದಿನಿಂದಲೂ ಜನರ ನಡವಳಿಕೆಗೆ ಮಾರ್ಗದರ್ಶಿಯಾಗುವ ಕೆಲವೊಂದು ನಿಯಮಾವಳಿಗಳು ಇದ್ದಿರಬಹುದು. ಇವೇ ಬಹುಶಃ ಸ್ಮೃತಿಗಳ ಪ್ರಾರಂಭ ರೂಪ ಎಂದು ಕಾಣುತ್ತದೆ. ಇವು ಗುರುಗಳಿಂದ ಶಿಷ್ಯನಿಗೆ

ಉಪದೇಶ ರೂಪದಲ್ಲಿ ಹಸ್ತಾಂತರವಾಗುತ್ತಿತ್ತು. ಆಗ ಕೆಲವೊಮ್ಮೆ ಸೂತ್ರಗಳು ಹಾಗೂ ಶ್ಲೋಕ ರೂಪದ ಸ್ಮೃತಿಗಳೂ ನಿರ್ಮಾಣವಾಗಿರಬಹುದು. ಇವುಗಳ ಆಧಾರದ ಮೇಲೆ, ಪ್ರಾಗ್ವೈದಿಕ ಕಾಲದಲ್ಲಿ ಇದ್ದ ರೂಢಿ, ಸಂಪ್ರದಾಯಗಳು, ವೈದಿಕ ಶಾಖೆಗಳ ಕೈಪಿಡಿಗಳಾಗಿ, ಸುಮಾರು 1500 ವರ್ಷಗಳ ಹಿಂದೆ ಇವು ಗ್ರಂಥರೂಪದಲ್ಲಿ ಕಾಣಿಸಿಕೊಂಡಿರಬಹುದು ಎಂದು ವಿದ್ವಜ್ಜನರ ಅಭಿಪ್ರಾಯ.

ಮಾನವನು ಧರ್ಮದ ಮರ್ಮವನ್ನು ಅರಿಯಲು, ಶುದ್ಧ ಆಚರಣೆಯ ಮಹತ್ವವನ್ನು ತಿಳಿಯಲು, ಪಾಪ-ಪುಣ್ಯ, ನೀತಿ-ಅನೀತಿಗಳನ್ನು ತಿಳಿಯುವ ಸಾಮರ್ಥ್ಯವನ್ನು ತಿಳಿಯಲು, ದೇವ ಪಿತೃಗುರು ಇತ್ಯಾದಿಯವರುಗಳ ಬಗ್ಗೆ ತನ್ನ ಕರ್ತವ್ಯವನ್ನು ವ್ಯಕ್ತಿಯು ಅರಿಯಲು ಸ್ಮೃತಿಗ್ರಂಥಗಳು ದಾರಿ ತೋರುತ್ತವೆ. ಅವುಗಳ ಪ್ರಧಾನ ಉದ್ದೇಶವೂ ಇದೇ ಆಗಿದೆ.

ಋಷಿ-ಮುನಿಗಳು ತಿಳಿಸಿದಂತೆ ಭಗವಂತನ ಆಜ್ಞೆಗಳನ್ನಷ್ಟೆ ಮಾನವರಿಗೆ ಮಾರ್ಗದರ್ಶನಕ್ಕಾಗಿ ಸ್ಮೃತಿಗಳ ರೂಪದಲ್ಲಿ ರಚನೆಗಳನ್ನು ಮಾಡಿದೆವೆಂದು ತಿಳಿಸಿದ್ದಾರೆ. 'ಶೃತಿ ಸ್ಮೃತಿ ಮಮೈವಾಜ್ಞೆ' ಎಂದು ಪರಮಾತ್ಮನು ತಿಳಿಸಿರುವನೆಂದು ವಾಧೂಲನು (181) ತಿಳಿಸಿದ್ದಾನೆ. ಶೃತಿ (ವೇದ), ಮನ್ವಾದಿ ಸ್ಮೃತಿಗಳು ತನ್ನ ಆಜ್ಞೆಗಳೆಂದು ಆತ ತಿಳಿಸಿದ್ದಾನೆಂದು ಹೇಳಲಾಗಿದೆ.

ಮಾನವನ ಹಿತಕ್ಕಾಗಿ ಶೃತಿ, ಸ್ಮೃತಿಗಳ ರೂಪದಲ್ಲಿ ಆಜ್ಞೆಗಳನ್ನು ನೀಡಲಾಗಿದೆ, ಇದು ಸಂಪೂರ್ಣ ವಿಶ್ವದ ಶಾಸನ ವಿಧಾನವಾಗಿದೆ-'ಶಾಸನಾಚ್ಛಂಸನಾಚ್ಛಾಸ್ತ್ರಮ್' ಎಂದು ಮಹರ್ಷಿ ಪರಾಶರನು ತಿಳಿಸಿದ್ದಾನೆ.

ಸಣ್ಣ ಸಣ್ಣ ರಾಷ್ಟ್ರಗಳ ಆಡಳಿತಕ್ಕಾಗಿ ಶಾಸನ-ವಿಧಾನದ ಆವಶ್ಯಕತೆ ಇರುವಾಗ, ಸಂಪೂರ್ಣ ವಿಶ್ವದ ಸಂಚಲನೆಗಾಗಿ ವಿಧಿ-ವಿಧಾನಗಳನ್ನು ರೂಪಿಸಬೇಕಾದ ಆವಶ್ಯಕತೆಯನ್ನು ಪರಮಾತ್ಮನು ಅರಿತನು. ಇಂತಹ ಶಾಸನ-ವಿಧಾನವೇ ಶಾಸ್ತ್ರವಾಯಿತು. ಆದುದರಿಂದಲೇ ವೇದವನ್ನು 'ವಿಧಾನ' ಶಬ್ದದಿಂದಲೂ ಕೂಡ ಪ್ರತಿಪಾದಿಸಲಾಗುತ್ತದೆ —

ತ್ವಮೇಕೋ ಹ್ಯಸ್ಯ ಸರ್ವಸ್ಯ ವಿಧಾನಸ್ಯ ಸ್ವಯಂಭುವಃ ।

(ಮನು 1/3)

ಮುಖ್ಯ ರೂಪದಲ್ಲಿ ಸ್ಮೃತಿಗಳು ವೇದಾರ್ಥವನ್ನೇ ಪ್ರತಿಪಾದನೆ ಮಾಡು ತ್ತವೆ. ಅಂತೆಯೇ ಅವು ವೈದಿಕ ಧರ್ಮದ ವ್ಯಾಖ್ಯೆಯನ್ನು ಮಾಡುತ್ತವೆ. ಧರ್ಮಾಚರಣೆ ಹಾಗೂ ಸದಾಚಾರಗಳೇ ಇವುಗಳ ಮುಖ್ಯ ವಿಷಯಗಳಾಗಿವೆ. ಧರ್ಮಶಾಸ್ತ್ರದಲ್ಲಿ ಸ್ಮೃತಿಗಳೊಂದಿಗೆ ವೇದಧಾರೆಯ ಸೂತ್ರ-ಸಾಹಿತ್ಯವೂ ಕೂಡ ವಿಶೇಷ ಮಹತ್ವವನ್ನು ಪಡೆದಿವೆ. ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ, ಶುಲ್ಬಸೂತ್ರ ಇತ್ಯಾದಿಗಳು ಪ್ರಮುಖವಾದವುಗಳಾಗಿವೆ. ಧರ್ಮಸೂತ್ರ ಹಾಗೂ ಗೃಹ್ಯಸೂತ್ರಗಳು ಸ್ಮೃತಿಗಳ ಪೂರ್ವ ಪೀಠಿಕಾ ರೂಪಗಳೆಂದು ಪ್ರಸಿದ್ಧಿ ಪಡೆದಿವೆ.

ಸ್ಮೃತಿಗಳು ವ್ಯಾಪಕ ಕ್ಷೇತ್ರವನ್ನು ಹೊಂದಿವೆ. ವಿಶಾಲ ಹಾಗೂ ವಿಸ್ತೃತ ರೂಪದಲ್ಲಿ ಇವು ನಮಗೆ ದೊರೆತಿವೆ. ಸ್ಮೃತಿಗಳಲ್ಲಿ ಮೂರು ಮುಖ್ಯ ವಿಚಾರಗಳ ವಿವೇಚನೆಯನ್ನು ಕಾಣಬಹುದು. ಅವು ಯಾವುವೆಂದರೆ ಆಚಾರ, ವ್ಯವಹಾರ ಹಾಗೂ ಪ್ರಾಯಶ್ಚಿತ್ತ.

**1. ಆಚಾರ :** ಇದರಲ್ಲಿ ನಾಲ್ಕೂ ವರ್ಣಗಳ ಕರ್ತವ್ಯಕರ್ಮಗಳ ವಿವೇಚನೆ ಇದೆ. ಗೃಹಸ್ಥನ ಕರ್ತವ್ಯಗಳಾದ ಅತಿಥಿ ಸತ್ಕಾರ, ಪಂಚ ಮಹಾ ಯಜ್ಞ, ದಾನ ಹಾಗೂ ಶ್ರಾದ್ಧ – ಇತ್ಯಾದಿಗಳ ವಿವರಣೆ ಇದರಲ್ಲಿದೆ. ಬೇರೆ ಆಶ್ರಮಗಳ ಬಗ್ಗೆ ಅದರ ವ್ಯವಹಾರವೂ ವರ್ಣಿತವಾಗಿದೆ. ಇದೇ ರೀತಿಯಲ್ಲಿ ವಾನ ಪ್ರಸ್ಥದ ಜೀವನ ಹಾಗೂ ಅದರ ಕರ್ತವ್ಯಗಳು, ಸನ್ಯಾಸಿಯ ಲಕ್ಷಣಗಳು, ಅದರ ಧರ್ಮ, ಅವನ ದೈನಂದಿನ ಆಚಾರಗಳು, ವ್ಯಕ್ತಿಯ ವೃತ್ತಿಗಳು – ಇತ್ಯಾದಿಗಳ, ಅನೇಕ ವಿಷಯಗಳ ರೋಚಕಪೂರ್ಣವಾದ ವರ್ಣನೆಯು ಸ್ಮೃತಿ ಗಳಲ್ಲಿ ದೊರೆಯುತ್ತವೆ.

ಬ್ರಹ್ಮಚಾರಿ ಅಥವಾ ವಿದ್ಯಾರ್ಥಿಯ ಇರುವಿಕೆ, ರೀತಿನೀತಿಗಳು, ಕರ್ತವ್ಯ ಮತ್ತು ವ್ಯವಹಾರಾದಿಗಳ ವರ್ಣನೆಗಳೂ ಕೂಡ ಆಚಾರದಲ್ಲಿ ಅಂತರ್ಗತ ವಾಗಿದೆ. ಈ ವಿಷಯಗಳೇ ಅಲ್ಲದೆ ರಾಜನ (ಅಂದರೆ ಇಂದಿನ ಕಾರ್ಯಾಂಗ, ಶಾಸಕಾಂಗಗಳ) ಕರ್ತವ್ಯ, ಹೊಣೆ, ಜವಾಬ್ದಾರಿಗಳು, ಪ್ರಜೆಗಳ ಬಗ್ಗೆ ಅವನು

(ಅವುಗಳು) ತೋರುವ ವ್ಯವಹಾರ, ಆವುಗಳ ಮುಖಾಂತರ (ನ್ಯಾಯಾಂಗವು) ಶಿಕ್ಷಾ-ವಿಧಾನದ ಪಾಲನೆಯ ವಿಸ್ತೃತ ವಿವೇಚನೆಗಳಿವೆ.

**2.** ವ್ಯವಹಾರ : ಈ ಖಂಡದಲ್ಲಿ ವ್ಯವಹಾರದ ಪ್ರಕ್ರಿಯೆ, ಅಗ್ನಿ ಶುದ್ಧಿ, ಕಾನೂನಿನಿಂದ ಕೂಡಿದ ದಂಡನೆ, ಅದರ ರೀತಿ ನೀತಿಗಳು, ಸಾಕ್ಷಿ ಮತ್ತು ಅದರ ಪ್ರಕಾರಗಳು, ಶಪಥಗಳು, ನ್ಯಾಯಾಧೀಶನ ಗುಣಗಳು, ನ್ಯಾಯ ನಿರ್ಣಯದ ರೀತಿ ನೀತಿಗಳು – ಇತ್ಯಾದಿಗಳ ವರ್ಣನೆಗಳಿವೆ.

ನ್ಯಾಯ ಮತ್ತು ದಂಡನೀತಿಗಳು ಧರ್ಮಶಾಸ್ತ್ರದ ಅಭಿನ್ನ ಅಂಗಗಳು. ಜನಜೀವನದಿಂದ ಸತ್ಯ ಹಾಗೂ ಧರ್ಮಗಳು ಯಾವಾಗ ಪಲಾಯನ ಮಾಡುತ್ತವೆಯೊ, ಆಗ ನ್ಯಾಯ ಹಾಗೂ ದಂಡನೆಗಳ ಅವಶ್ಯಕತೆ ಉಂಟಾಗುತ್ತದೆ. ಪವಿತ್ರವಾದ ಆಚರಣೆ ಹಾಗೂ ಶುದ್ಧ ವ್ಯವಹಾರದ ನಿಮಿತ್ತವೇ ದಂಡನೆಯು ಒಂದು ಸಾಧನವಾಗಿ ಪರಿಣಮಿಸಿದೆ. ಇದರ ಭಯದಿಂದಲೇ ವ್ಯಕ್ತಿಯು ಅಂತರಂಗ–ಪಾಪ ಅಥವಾ ಅನೀತಿ ಕರ್ಮಗಳಿಂದ ರಕ್ಷಿಸಲ್ಪಡುತ್ತಾನೆ.

ಈ ರೀತಿಯಲ್ಲಿ ಧರ್ಮ-ಶಾಸ್ತ್ರದಲ್ಲಿ ನ್ಯಾಯ ಮತ್ತು ದಂಡನೀತಿಗಳ ಮಾಧ್ಯಮದ ಮುಖಾಂತರ ನಮಗೆ ನ್ಯಾಯ, ನ್ಯಾಯ ನಿರ್ಧಾರದ ನೀತಿ, ಅಪರಾಧ ಮತ್ತು ದಂಡ ನೀತಿ ಹಾಗೂ ಅವುಗಳ ಪ್ರಯೋಗದ ಪದ್ಧತಿ ಇತ್ಯಾದಿಗಳು ತಿಳಿದು ಬರುತ್ತವೆ.

ಇದೇ ಅಲ್ಲದೆ ಸಂಪತ್ತಿನ (ಆಸ್ತಿಪಾಸ್ತಿಗಳ) ವಿಭಜನೆ, ದಾಯ (ಸಂಪತ್ತಿನ) ಅಧಿಕಾರ, ದಾಯದ ಅಂಶ, ಸ್ತ್ರೀಧನ ಹಾಗೂ ಕರ–ಗ್ರಹಣದ ವ್ಯವಸ್ಥೆ ಇತ್ಯಾದಿಗಳ ವಿಷಯಗಳೂ ಕೂಡ ಸ್ಮೃತಿಗಳಲ್ಲಿ ವರ್ಣಿತವಾಗಿವೆ.

**3. ಪ್ರಾಯಶ್ಚಿತ್ತ :** ಈ ಖಂಡದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳನ್ನು ಮಾಡದೆ ಇರುವುದರಿಂದ ಹಾಗೂ ಅವುಗಳನ್ನು ಅವಹೇಳನ ಮಾಡುವುದರಿಂದ ಹೊಂದುವ ಪಾಪವನ್ನು ಹೋಗಲಾಡಿಸಿಕೊಳ್ಳಲು ಆಚರಿಸುವ ಪ್ರಾಯಶ್ಚಿತ್ತದ ವಿಧಾನಗಳನ್ನು ವಿವರಿಸಲಾಗಿದೆ.

ಈ ಪ್ರಾಯಶ್ಚಿತ್ತದ ವಿಧಾನದಡಿಯಲ್ಲಿ ಕೃಚ್ಛ್ರ-ಚಂದ್ರಾಯಣ, ಸಂತಾಪ ಇತ್ಯಾದಿಗಳ ವ್ರತ, ಗೋದಾನ, ಭೂದಾನ, ತುಲಾ ದಾನ ಇತ್ಯಾದಿ ವಿವಿಧ ದಾನಗಳ ಪ್ರಸಂಗಗಳು ಹಾಗೂ ಜಪ, ತಪ, ಉಪವಾಸ ಮತ್ತು ತೀರ್ಥ ಯಾತ್ರೆ ಹಾಗೂ ಪಂಚಗವ್ಯ ಸೇವನೆ ಇತ್ಯಾದಿಗಳ ಕಾರ್ಯ ವಿಧಾನಗಳನ್ನು ಇದರಲ್ಲಿ ತಿಳಿಸಲಾಗಿದೆ.

'ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್' ಎನ್ನುವ ಹೇಳಿಕೆಯನುಸಾರ ಶುಭ-ಅಶುಭ ಕರ್ಮಗಳ ಫಲವನ್ನು ನಾವು ಅನುಭವಿಸಲೇ ಬೇಕಾಗುತ್ತದೆ. ಆದುದರಿಂದ 'ಕರ್ಮ ವಿಪಾಕ'ವೂ ಕೂಡ ಸ್ಮೃತಿಗಳ ಒಂದು ಮುಖ್ಯ ವಿಷಯವಾಗಿದೆ. ಧರ್ಮಶಾಸ್ತ್ರದಲ್ಲಿ ದುಷ್ಕರ್ಮಗಳ ಹಾಗೂ ಪಾಪ ಗಳ ಫಲವನ್ನು ಅನುಭವಿಸುವುದಕ್ಕೆ 'ಕರ್ಮ-ವಿಪಾಕ' ಎನ್ನುವ ಶಬ್ದದಿಂದ ಅಭಿವ್ಯಕ್ತಗೊಳಿಸಲಾಗಿದೆ.

ಜೀವವು ದುಷ್ಕರ್ಮ ಹಾಗೂ ಪಾಪಕರ್ಮಗಳನ್ನು ಮಾಡುವಾಗ ಅವು ಗಳಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಿಲ್ಲ. ಆಗ ಧರ್ಮಶಾಸ್ತ್ರವು ಇಂತಹ ಜೀವಿಗಳನ್ನು ನರಕಯಾತನೆಗಳನ್ನು ಅನುಭವಿಸುವಂತೆ ಮಾಡಿ, ಆ ನಂತರದಲ್ಲಿ ಪಾಪಕೃತ್ಯಗಳ ಚಿಹ್ನ ಸ್ವರೂಪವಾಗಿ ಪಶು, ಪಕ್ಷಿ, ಕ್ರಿಮಿ-ಕೀಟ ಗಳು ಅಥವಾ ನಿಮ್ನ ವರ್ಗದ ಜೀವಿಗಳನ್ನಾಗಿ ಅಥವಾ ವೃಕ್ಷಗಳು ಇತ್ಯಾದಿಗಳ ಜನ್ಮಪಡೆಯುವ ವಿಚಾರವನ್ನು ತಿಳಿಸುತ್ತದೆ.

ಈ ರೀತಿಯಲ್ಲಿ ಪಾಪಗಳಿಂದ ಕೂಡಿದ ಜೀವವು ತನ್ನ ಪಾಪಗಳನ್ನು ದೂರ ಮಾಡಿಕೊಳ್ಳದೆ ಮಾನವನಾಗಿ ಜನಿಸಿದ್ದೇ ಆದರೆ, ಪ್ರಾಯಶ್ಚಿತ್ತ ಮಾಡಿ ಕೊಳ್ಳದೆ ಇರುವುದರಿಂದ ರೋಗಗಳಿಂದ ಅಥವಾ ಶಾರೀರಿಕ ದೋಷ (ಲೋಪ) ಗಳಿಂದ ಕೂಡಿದವನಾಗಿರುತ್ತಾನೆ. ಈ ರೀತಿಯಲ್ಲಿ ಕರ್ಮವಿಪಾಕದ ಭೋಗ ಗಳಿಂದ ಅನಾವೃತನಾದ ನಂತರ ಸಾಂಸಾರಿಕ ಜೀವವು ಜನನ – ಮರಣಗಳ ದಾರುಣ ದುಃಖದಿಂದ ಮುಕ್ತವಾಗಿ ಅನಂತ ಆನಂದದಲ್ಲಿ ಲೀನವಾಗುತ್ತದೆ. ಅರ್ಥಾತ್ ಪರಮಾತ್ಮನ ಸನ್ನಿಧಿಯನ್ನು ಸೇರುವ ಅಧಿಕಾರವನ್ನು ಪಡೆಯುತ್ತದೆ.

ಸ್ಮೃತಿಗಳಲ್ಲಿ ವರ್ಣಧರ್ಮ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ), ಆಶ್ರಮ ಧರ್ಮ (ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಹಾಗೂ ಸನ್ಯಾಸ ಧರ್ಮ), ಸಾಮಾನ್ಯ ಧರ್ಮ, ವಿಶೇಷ ಧರ್ಮ, ಗರ್ಭಾದಾನದಿಂದ ಅಂತ್ಯೇಷ್ಟಿಯ ವರೆಗಿನ ಸಂಸ್ಕಾರ, ದಿನಚರ್ಯೆ, ಪಂಚ ಮಹಾಯಜ್ಞ, ಬಲಿವೈಶ್ವದೇವ, ಭೋಜನ ವಿಧಿ, ಶಯನ ವಿಧಿ, ಸ್ವಾಧ್ಯಾಯ, ಯಜ್ಞ – ಯಾಗಾದಿಗಳು, ಇಷ್ಟಾಪೂರ್ತ ಧರ್ಮ, ಪ್ರಾಯಶ್ಚಿತ್ತ, ಕರ್ಮ ವಿಪಾಕ, ಶುದ್ಧಿತತ್ತ್ವ, ಪಾಪ-ಪುಣ್ಯ, ತೀರ್ಥ, ವ್ರತ, ದಾನ, ಪ್ರತಿಷ್ಠಾ, ಶ್ರಾದ್ಧ, ಸದಾಚಾರ–ಶೌಚಾಚಾರ, ಆಶೌಚ (ಜನನಾಶೌಚ, ಮರಣಾಶೌಚ), ಭಕ್ಷ್ಯಾ ಭಕ್ಷ್ಯವಿಚಾರ, ಆಪದ್ಧರ್ಮ, ದಾಯ–ವಿಭಾಗ (ಆಸ್ತಿಪಾಸ್ತಿಯ ಹಂಚಿಕೆ), ಸ್ತ್ರೀಧನ, ಪುತ್ರರ ವರ್ಗಗಳು, ದತ್ತಕ ಪುತ್ರ ಮೀಮಾಂಸೆ, ರಾಜ ಧರ್ಮ, ಮೋಕ್ಷ ಧರ್ಮ, ಅಧ್ಯಾತ್ಮಜ್ಞಾನ-ಇತ್ಯಾದಿಗಳ ಸವಿಸ್ತಾರದ ವರ್ಣನೆ ಇದೆ.

ಸ್ಮೃತಿ ಗ್ರಂಥಗಳ ಮೇಲೆ ಅನೇಕ ಆಚಾರ್ಯರ ಟೀಕೆಗಳು, ಭಾಷ್ಯಗಳು ಇವೆ. ಅಲ್ಲದೆ ಈ ವಿಷಯಗಳನ್ನು ಬಿಡಿ ಬಿಡಿಯಾಗಿ ಆರಿಸಿಕೊಂಡು ಒಂದೊಂದು ವಿಷಯದ ಮೇಲೂ ಸ್ವತಂತ್ರ ನಿಬಂಧ ಗ್ರಂಥಗಳೂ ರಚನೆಯಾಗಿವೆ. ಕೆಲವು ಗಳಲ್ಲಿ ವಿವಿಧ ವಿಷಯಗಳನ್ನು ಒಟ್ಟುಗೂಡಿಸಿ, ಸಂಗ್ರಹ ರೂಪದಲ್ಲಿ ನೀಡ ಲಾಗಿದೆ. ಅನೇಕ ಭಾಷ್ಯಕಾರರು ಹಾಗೂ ನಿಬಂಧಕಾರರು ತಮ್ಮ ರಚನೆಗಳ ಮುಖಾಂತರ ಧರ್ಮಶಾಸ್ತ್ರಗಳನ್ನು ವಿಕಾಸಗೊಳಿಸಿ, ತಮ್ಮನ್ನು ತಾವು ಧನ್ಯ ರನ್ನಾಗಿಸಿಕೊಂಡಿದ್ದಾರೆ.

ಈ ರೀತಿಯಲ್ಲಿ ಧರ್ಮಶಾಸ್ತ್ರ ಹಾಗೂ ಸ್ಮೃತಿಗಳಲ್ಲಿ ಮಾನವನ ಇಹ ಲೋಕ ಹಾಗೂ ಪರಲೋಕದ ಎಲ್ಲ ವಿಷಯಗಳನ್ನು ಸವಿಸ್ತಾರವಾಗಿ ವಿವೇಚಿಸ ಲಾಗಿದೆ. ನಮ್ಮನ್ನು ಉತ್ತಮ ಆಚಾರವಂತರನ್ನಾಗಿ ಮಾಡಲು ಅವು ನಮಗೆ ಶಿಕ್ಷಣ ನೀಡುತ್ತವೆ, ಸದ್ ವ್ಯವಹಾರವನ್ನು ಕಲಿಸುತ್ತವೆ. ಉತ್ತಮ ಹಾಗೂ ಸಚ್ಚಾರಿತ್ರ್ಯದ ಮಾನವನಾಗುವ ಪ್ರೇರಣೆಯನ್ನು ನೀಡುತ್ತಾ ತಮ್ಮ ಕರ್ತವ್ಯ ಗಳನ್ನು ಅವಬೋಧಗೊಳಿಸುತ್ತವೆ. ಈ ದೃಷ್ಟಿಯಿಂದ ಧರ್ಮಶಾಸ್ತ್ರೀಯ ನಿಯಮಗಳು ಎಲ್ಲರಿಗಾಗಿ, ಎಲ್ಲ ಸಮಯಗಳಲ್ಲಿ ಪರಮ ಕಲ್ಯಾಣಕಾರಿಯಾಗಿ ರುತ್ತವೆ.

ಈಗ ಕೆಲವೊಂದು ಮುಖ್ಯವಾದ ಸ್ಮೃತಿಗಳ ಬಗ್ಗೆ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಳ್ಳೋಣ.



## ಪ್ರಮುಖ ಸ್ಮೃತಿಗಳು

# 1. ವಾಧೂಲ ಸ್ಮೃತಿಯ ಆಚಾರ ಸಂಹಿತೆ

ನಮ್ಮಲ್ಲಿ ಅನೇಕರು 'ವಾಧೂಲ' ಗೋತ್ರಕ್ಕೆ ಸೇರಿದವರಾಗಿರುತ್ತೇವೆ. ಇಂತಹ ಗೋತ್ರಕ್ಕೆ ಸೇರಿದ ನಾವುಗಳು ನಮ್ಮ ಮೂಲ ಋಷಿಯ ಬಗ್ಗೆ, ಆತನು ನೀಡಿರುವ ಸಂದೇಶದ ಬಗ್ಗೆ, ನಿರ್ಮಿಸಿರುವ ಆಚಾರ ಸಂಹಿತೆಯ ಬಗ್ಗೆ ಕೆಲವು ವಿವರಗಳನ್ನು ಇಲ್ಲಿ ತಿಳಿಯಲು ಪ್ರಯತ್ನಿಸುವ.

ಇವರು 'ವಾಧೂಲ ಸ್ಮೃತಿ' ಎನ್ನುವ ಗ್ರಂಥವೊಂದನ್ನು ರಚಿಸಿದ್ದಾರೆ. ಇದರಲ್ಲಿ ನಿತ್ಯ-ನೈಮಿತ್ತಿಕ ಕರ್ಮಗಳಿಗೆ ಸಂಬಂಧಪಟ್ಟ ಪ್ರಮುಖ ವಿವರಗಳಿವೆ. ಇದರಿಂದ ಇದು ಭಾರತೀಯ ಜನಜೀವನದಲ್ಲಿ ಒಂದು ಪ್ರಮುಖ ಆಚಾರ ಸಂಹಿತೆ ಯಾಗಿದೆ. ಪ್ರಾತಃಕಾಲದಲ್ಲಿನ ಜಾಗರಣೆಯಿಂದ ಹಿಡಿದು ಮಲಗುವವರೆಗೆ ಅನುಸರಿಸುವ ಕರ್ಮಗಳ, ವಿಧಿ-ವಿಧಾನಗಳ ಬಗೆಗೆ ಬಹಳ ಸುಂದರವಾದ ವರ್ಣನೆಗಳಿವೆ.

ಬ್ರಾಹ್ಮ ಮುಹೂರ್ತದಾರಭ್ಯ ತ್ರಿಕಾಲೇ ವಿಹಿತಂ ತಥಾ |
ನಿತ್ಯಂ ನೈಮಿತ್ತಿಕಂ ಚೈವ ಪ್ರವಕ್ಷ್ಯಾಮಿ ಯಥಾಮತಿ || 3 ||

ಮಾನವನು ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ಸ್ವಾಧ್ಯಾಯ, ಪಿತೃ ತರ್ಪಣ, ದೇವರ ಪೂಜೆ, ವೈಶ್ವೇದೇವ ಪೂಜೆ ಇತ್ಯಾದಿ ಪ್ರತಿ ದಿನ ನಡೆಸುವ ಕರ್ಮ ವಿಧಾನಗಳ ವಿವರಗಳನ್ನು ಸ್ಮೃತಿಯೂ ನೀಡುತ್ತದೆ. ಮೋಹ ವಶರಾಗಿ ಈ ಅವಶ್ಯಕ ಕರ್ಮಗಳನ್ನು ಯಾರು ನಡೆಸುವುದಿಲ್ಲವೋ ಅಂತಹವ ರನ್ನು ಚಾಂಡಾಲರೆಂದೇ ತಿಳಿಯಬೇಕು.

ಸ್ನಾನಂ ಸಂಧ್ಯಾಂ ಜಪಂ ಹೋಮಂ ಸ್ವಾಧ್ಯಾಯಂ ಪಿತೃ ತರ್ಪಣಮ್ |
ದೇವತಾರಾಧಿನಂ ಚೈವ ವೈಶ್ವದೇವಂ ಯಥಾವಿಧ |
ನ ಕುರ್ಯಾದ್ಯದಿ ಮೋಹನ ಸ ಚಂಡಾಲೋ ನ ಸಂಶಯಃ || 224 ||

### ಶೃತಿ – ಸ್ಮೃತಿಗಳ ಪ್ರಮಾಣ

ವೇದಾದಿ ಶಾಸ್ತ್ರಗಳು ಹಾಗೂ ಸ್ಮೃತಿಗಳಲ್ಲಿ ತಿಳಿಸಿರುವ ಕೆಲವು ನಿರ್ದಿಷ್ಟ ಹೇಳಿಕೆಗಳು ಸಾಕ್ಷಾತ್ ಪರಮಾತ್ಮನು ನೀಡಿರುವ ಆಜ್ಞೆಗಳೆಂದೇ ತಿಳಿಯಬೇಕು

ಎಂದು ಮಹರ್ಷಿ ವಾಧೂಲರು ತಿಳಿಸುತ್ತಾರೆ. ಆದುದರಿಂದ ಈ ಹೇಳಿಕೆಗಳನ್ನು ತಪ್ಪದೆ ಅನುಸರಿಸಬೇಕಾದುದು ಅತ್ಯಗತ್ಯ ಎಂದು ಅವರು ತಿಳಿಸುತ್ತಾರೆ. ಇದನ್ನು ಉಲ್ಲಂಘಿಸುವುದು ಎಂದರೆ ಶಾಸ್ತ್ರ ಮರ್ಯಾದೆಯನ್ನು ಪಾಲಿಸದೆ ಇರುವುದು ಎಂದರ್ಥ. ಇದಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳುವವರು ಪರಮಾತ್ಮನ ಆಜ್ಞೆಯನ್ನು ಉಲ್ಲಂಘಿಸಿದಂತೆಯೇ ಸರಿ. ಇಂತಹವರು ಭಗವದ್ಭಕ್ತರಾಗಲು ಸಾಧ್ಯವೇ ಇಲ್ಲ. ಅಂತಹವರು ಶ್ರೀ ವೈಷ್ಣವರಾಗಲಂತೂ ಸಾಧ್ಯವೇ ಇರದಂತಹ, ಸತ್ಯಕ್ಕೆ ದೂರವಾದ ಮಾತು.

ಶೃತಿ ಹಾಗೂ ಸ್ಮೃತಿಗಳು ಬ್ರಾಹ್ಮಣತ್ವದ ಎರಡು ಕಣ್ಣುಗಳಿದ್ದಂತೆ. ಇವುಗಳ ಪರಿಜ್ಞಾನವಿಲ್ಲದವನು ವಕ್ರದೇಹದವನಿಗೆ ಸಮ. ಈ ಎರಡರ ಜ್ಞಾನವಿಲ್ಲದವನನ್ನು ಅಂಧನೆಂದೇ ಹೇಳಬೇಕು.

ಶೃತಿ ಸ್ಮೃತೀ ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ |
ಆಜ್ಞಾ ಚ್ಛೇದೀ ಮಮದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ ||189||
ಶೃತಿ ಸ್ಮೃತೀ ತು ವಿಪ್ರಾಣಾಂ ಚಕ್ಷುಷೇ ದ್ವೆ ವಿನಿರ್ಮಿತೇ ||190||
ಕಾಣಸ್ತತ್ರೈಕಯಾ ಹೀನೋ ದ್ವಾಭ್ಯಾಮಂಧಃ ಪ್ರಕೀರ್ತಿತಃ ||191||

## ಬ್ರಾಹ್ಮೀ ಮುಹೂರ್ತದಲ್ಲಿ ಎಚ್ಚರಗೊಳ್ಳುವುದು

ಸೂರ್ಯೋದಯಕ್ಕೆ ನಾಲ್ಕು ಘಳಿಗೆಗಳ ಮುಂಚಿನ ಸಮಯವನ್ನು (ಸುಮಾರು ಒಂದೂವರೆ ಘಂಟೆ ಮುಂಚೆ) ಬ್ರಾಹ್ಮೀ ಮುಹೂರ್ತ ಎಂದು ಕರೆಯುತ್ತಾರೆ. ಈ ಸಮಯದಲ್ಲಿ ಮಲಗುವುದು ಶಾಸ್ತ್ರ ನಿಷಿದ್ಧವಾದುದು. ಬ್ರಾಹ್ಮೀ ಮುಹೂರ್ತದಲ್ಲಿ ನಿದ್ದೆಮಾಡುವುದು ಪುಣ್ಯ ನಾಶ ಮಾಡುತ್ತದೆ. ಈ ಸಮಯದಲ್ಲಿ ಮಲಗಿರುವವನು ಅಪವಿತ್ರನಾಗಿರುವನು. ಇಲ್ಲಿಂದ ಮುಂದೆ ಮಾಡುವ ಎಲ್ಲ ರೀತಿಯ ಧರ್ಮಕಾರ್ಯಗಳ ಅನುಷ್ಠಾನಕ್ಕೆ ಅನರ್ಹನಾಗುತ್ತಾನೆ.

ಆದುದರಿಂದಲೇ ಇಂತಹ ಬ್ರಾಹ್ಮೀ ಮುಹೂರ್ತದಲ್ಲಿ ಸದಾ ಎಚ್ಚರವಾಗಿರಬೇಕು. ನಿದ್ದೆಯನ್ನು ತ್ಯಜಿಸಿ, ಪ್ರಸನ್ನ ಮನಸ್ಸಿನಿಂದ ಇರಬೇಕು. ಕೈಕಾಲುಗಳನ್ನು ತೊಳೆದುಕೊಂಡು, ಆಚಮನ ಮಾಡುವುದರ ಮುಖಾಂತರ ಪವಿತ್ರನಾಗಿ, ಪ್ರಾತಃಕಾಲದ ಮಂಗಲ ಶ್ಲೋಕಗಳು ಹಾಗೂ ಪುಣ್ಯ ಶ್ಲೋಕ

ಗಳನ್ನು ಪಠಿಸಬೇಕು. ಭಗವನ್ನಾಮಗಳನ್ನು ಪಠಿಸುತ್ತಾ ಅವರ ಸಂಕೀರ್ತನೆಯನ್ನು ಮಾಡಬೇಕಾಗಿದೆ. ಹೀಗೆ ಮಾಡುವುದರಿಂದ ಎಲ್ಲ ರೀತಿಯ ಶುಭಗಳೂ ಉಂಟಾಗುವುದು.

ಬ್ರಾಹ್ಮೇ ಮುಹೂರ್ತೇ ಸಂಪ್ರಾಪ್ತೇ ತ್ಯಕ್ತನಿದ್ರಃ ಪ್ರಸನ್ನಧೀಃ |
ಪ್ರಕ್ಷಾಳ್ಯ ಪಾದಾವಾಚಮ್ಯ ಹರಿಸಂಕೀರ್ತನಂ ಚರೇತ್ || 4 ||
ಬ್ರಾಹ್ಮ ಮುಹೂರ್ತೇ ನಿದ್ರಾಂಚ ಕುರುತೆ ಸರ್ವದಾ ತು ಯಃ |
ಅಶುಚಿಂ ತು ವಿಜಾನೀಯಾದನರ್ಹಃ ಸರ್ವ ಕರ್ಮಸು || 5 ||

## ಎರಡು ರೀತಿಯ ಶೌಚಾಚಾರ

ಪ್ರಾತಃಕಾಲದ ಉದಯದಲ್ಲಿ ನಡೆಸಬೇಕಾದ ಕೆಲಸ ಕಾರ್ಯಗಳನ್ನು ಮುಗಿಸಿಕೊಂಡ ನಂತರ ಶೌಚಾದಿಗಳಿಂದ ನಿವೃತ್ತನಾಗಬೇಕು. ವಾಧೂಲ ಸ್ಮೃತಿಯಲ್ಲಿ ಅತ್ಯಂತ ವಿಸ್ತಾರ ರೂಪದಲ್ಲಿ ಶೌಚ ವಿಧಿಯನ್ನು ತಿಳಿಸಲಾಗಿದೆ. ಬಾಹ್ಯ ಹಾಗೂ ಅಭ್ಯಂತರ–ಎನ್ನುವ ಎರಡು ರೀತಿಯ ಶೌಚಾಚಾರಗಳನ್ನು ಹೇಳಲಾಗಿದೆ.

ಮಣ್ಣು ಮತ್ತು ನೀರಿನಿಂದ ಮಾಡಿಕೊಳ್ಳುವ ಶೌಚ ಕಾರ್ಯವು 'ಬಾಹ್ಯ ಶೌಚಾಚಾರ' ವಾಗಿರುತ್ತದೆ.

ಮನಸ್ಸಿನಿಂದ ಭಾವನೆಗಳನ್ನು ಶುದ್ಧಿಗೊಳಿಸುವುದನ್ನು 'ಅಭ್ಯಂತರ ಶೌಚ' ಎಂದು ಹೇಳಲಾಗುತ್ತದೆ. ಬೇರೆಯವರ ಬಗೆಗೆ ಈರ್ಷ್ಯೆ, ದ್ವೇಷ, ಕ್ರೋಧ, ಲೋಭ, ಮೋಹ ಹಾಗೂ ನಿಕೃಷ್ಟತೆಗಳಿಂದ ನೋಡುವುದರಿಂದ ದೂರವಾಗಿ, ಎಲ್ಲರ ಬಗೆಗೂ ಪ್ರೇಮ, ಕರುಣೆಗಳಿಂದ ನೋಡುವುದು - ಇಂತಹ ಶೌಚಾಚಾರವಾಗಿರುತ್ತದೆ. ಪ್ರತಿಯೊಬ್ಬ ಜೀವಿಯ ಬಗೆಗೂ ಆದರ ಭಾವವನ್ನು ತೋರುವುದು ತುಂಬಾ ಆವಶ್ಯಕ.

ಬಾಹ್ಯ ಶೌಚವು 'ಸ್ಥೂಲ ಶೌಚ' ವಾಗಿರುತ್ತದೆ. ಆದರೆ ಅಭ್ಯಂತರ ಶೌಚವು ಅಂತಃಕರಣದ ಪವಿತ್ರತೆಯನ್ನು ಹೊರಗೆಡುವುದರಿಂದ, ಅದನ್ನು 'ಸೂಕ್ಷ್ಮ ಶೌಚ' ಎಂದು ಕರೆಯುತ್ತಾರೆ.

ಇವೆರಡರಲ್ಲಿ ಅಭ್ಯಂತರ ಶೌಚವೇ ಬಹಳ ಮುಖ್ಯವಾದುದು. ವ್ಯಕ್ತಿಯು ತನ್ನ ದೇಹವನ್ನು ಎಷ್ಟೇ ಮಣ್ಣು, ನೀರಿನಿಂದ ಶುದ್ಧಿಗೊಳಿಸಿದರೂ ಏನು

ಪ್ರಯೋಜನ ? ಅಂತರ್ಯದ ಶುದ್ಧಿ ಇಲ್ಲದಿದ್ದಲ್ಲಿ, ಅಂತಹವನ ಜೀವನ ನಿಷ್ಪ್ರಯೋಜನ.

ಆದುದರಿಂದ ಅಭ್ಯಂತರ (ಅಂತರಿಕ) ಶುದ್ಧತೆಯ ಕಡೆಗೇ ಸದಾ ಪ್ರಯತ್ನಶೀಲರಾಗಿರಬೇಕಾದುದು ಅವಶ್ಯಕ.

ಈ ರೀತಿಯ ಶೌಚಾಚಾರವನ್ನು ಇರಿಸಿಕೊಳ್ಳದವನ ಕೆಲಸ ಕಾರ್ಯಗಳೆಲ್ಲವೂ ನಿಷ್ಪ್ರಯೋಜಕವಾದವುಗಳು. 'ಶೌಚಾಚಾರವಿಹೀನಸ್ಯ ಸಮಸ್ತಾ ನಿಷ್ಫಲಾಃ ಕ್ರಿಯಾಃ ।' ಎಂದು ವಾಧೂಲರು ತಮ್ಮ 20ನೇ ಶ್ಲೋಕದಲ್ಲಿ ತಿಳಿಸಿರುತ್ತಾರೆ.

## ದಂತಧಾವನ

ಶೌಚಾದಿಗಳ ನಂತರ ಕೈಕಾಲುಗಳನ್ನು ಚನ್ನಾಗಿ ತೊಳೆದುಕೊಂಡು, ಮುಖ ತೊಳೆದು ಕೊಳ್ಳುವುದಕ್ಕೆ ಮುಂಚೆ ಹಲ್ಲುಗಳನ್ನು ಶುಭ್ರಮಾಡಿ ಕೊಳ್ಳುವುದು ಅಗತ್ಯ.

ಹಲ್ಲುಗಳನ್ನು ಉಜ್ಜಿಕೊಳ್ಳುವಾಗ ಈ ಕೆಳಗೆ ತಿಳಿಸಿರುವ ಶ್ಲೋಕವನ್ನು ಮನಸ್ಸಿನಲ್ಲಿ ಹೇಳಿಕೊಳ್ಳಬೇಕು.

ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸ್ಥಾನಿಚ ।
ಬ್ರಹ್ಮ ಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತಿ ॥ 35 ॥

ಹಲ್ಲುಗಳನ್ನು ಈ ಮಂತ್ರದಿಂದ ಅಭಿಮಂತ್ರಿಸಬೇಕು. ಹೀಗೆ ಮಾಡುವುದರಿಂದ, ಆಯು, ಬಲ, ಯಶ, ತೇಜ, ಪ್ರಜೆಗಳು, ಪಶು, ಧನ, ಬ್ರಹ್ಮಜ್ಞಾನ, ಮೇಧಸ್ಸು ಇತ್ಯಾದಿಗಳು ಈ ಪ್ರಾರ್ಥನೆಯಿಂದ ಲಭಿಸುವುವು.

## ಸ್ನಾನ

ಈ ರೀತಿಯಲ್ಲಿ ಮುಖ ಶುದ್ಧಿಯನ್ನು ಮಾಡಿದ ನಂತರ ಆಚಮನ ಮಾಡಿ ದೇಹ ಶುದ್ಧಿಗಾಗಿ ಸ್ನಾನ ಮಾಡಬೇಕು. ನಿದ್ದೆಯಿಂದ ಎದ್ದ ನಂತರದ ಶರೀರದ ಮೇಲೆ ಜೊಲ್ಲು-ಬೆವರು ಇತ್ಯಾದಿಗಳು ಹರಡಿರುತ್ತವೆ. ನವರಂಧ್ರಗಳಿಂದ ಅತ್ಯಂತ ಮಲಿನ ಅಂಶಗಳು ಹೊರಹೊರಟು, ಶರೀರದಾದ್ಯಂತ ಹರಡಿರುತ್ತವೆ. ಹೀಗೆ ಹೊರಟ ಮಲಿನಗಳನ್ನು ಅಪವಿತ್ರವಾದವುಗಳೆಂದು ತಿಳಿಯಬೇಕು. ಆದುದರಿಂದ ಪ್ರಾತಃಕಾಲದಲ್ಲಿ ಸ್ನಾನ ಮಾಡುವುದರಿಂದ ಶರೀರವು ಶುದ್ಧ

ನಾಗುವುದು. ಈ ಪ್ರಾತಃಕಾಲದ ಸ್ನಾನದ ನಂತರ ವ್ಯಕ್ತಿಯು ಶುದ್ಧನಾಗಿ ಜಪ, ದೇವರ ಪೂಜೆ, ಸಂಧ್ಯಾವಂದನಾದಿ ಎಲ್ಲ ಕರ್ಮಗಳಿಗೂ ಯೋಗ್ಯನಾಗುತ್ತಾನೆ. ವೇದ ಮತ್ತಿತರ ಶಾಸ್ತ್ರಗಳಲ್ಲಿ ಹೇಳಲಾಗಿರುವ ಎಲ್ಲ ಕರ್ಮಗಳೂ ಸ್ನಾನದ ನಂತರವೇ ಮಾಡಬೇಕಾಗಿದೆ. ಸ್ನಾನ ಮತ್ತಿತರ ಶುದ್ಧೀಕರಣಗೊಳಿಸುವ ಆಚರಣೆಗಳನ್ನು ಅನುಸರಿಸದೆ ಇರುವವನು ಮಾಡುವ ಕರ್ಮಗಳು ನಿಷ್ಫಲ ವಾಗುತ್ತವೆ.

ಲಾಲಾಸ್ವೇದ ಸಮಾಕೀರ್ಣಃ ಶಯನಾದುತ್ಥಿತಃ ಪುಮಾನ್ |
ಅಶುಚಿಂ ತಂ ವಿಜಾನೀಯಾದನರ್ಹಃ ಸರ್ವ ಕರ್ಮಸು || 68 ||
ಸ್ನಾನಮೂಲಾಃ ಕ್ರಿಯಾಃ ಸರ್ವಾಃ ಸಂಧ್ಯೋಪಾಸನಮೇವಚ
ಸ್ನಾನಾಚಾರವಿಹೀನಸ್ಯ ಸರ್ವಾಃ ಸ್ಯುರ್ನಿಷ್ಫಲಾಃ ಕ್ರಿಯಾಃ || 69 ||

## ಸ್ನಾನ – ವಿಧಿ

ಸ್ನಾನ ಸಂಕಲ್ಪ ಮಾಡಿದ ನಂತರ ಮಾರ್ಜನವನ್ನು ಮಾಡಬೇಕು.

ಆಪೋ ಅಸ್ಮಾನಿತಿ ಯಚಾಮುಕ್ತ್ವಾ ಮಜ್ಜನ ಮಾಚರೇತ್ || 84 ||
ಆಪೋ ಅಸ್ಮಾನ್ ಮಾತರಃ ಶುಂಧಯಂತು
ಘೃತೇನ ನೋ ಘೃತಪ್ವಃ ಪುನಂತು |
ವಿಶ್ವಂ ಹಿ ರಿಪ್ರಂ ಪ್ರವಹಂತಿ ದೇವೀರುದಿದಾಭ್ಯಃ ಶುಚಿರಾ ಪೂತ ಏಮಿ ||
(ಋಗ್ವೇದ 10–17–10, ಯಜು 4–2)

ಈ ಮಂತ್ರಗಳನ್ನು ಹೇಳಿಕೊಳ್ಳುತ್ತಾ ಅಭಿಷೇಕ ಮಾಡಿಕೊಳ್ಳಬೇಕು. ಅಘಮರ್ಷಣ ಮಾಡಿಕೊಳ್ಳಬೇಕು. ಹಾಗೂ ಶುದ್ಧ ಸ್ಥಳದಲ್ಲಿನ ಮಣ್ಣನ್ನು ತೆಗೆದುಕೊಂಡು ಅದನ್ನು ಶರೀರದ ಮೇಲೆ ಸವರಿಕೊಳ್ಳಬೇಕು. ಆ ನಂತರ ಸ್ನಾನ ಮಾಡುವ ನೀರಿಗೆ ನಮಸ್ಕಾರ ಮಾಡಬೇಕು. ನೀರಿನಲ್ಲಿ ಬಲಗೈನಿಂದ ಚೌಕಾಕಾರ ಪೀಠದ ಅಂಕಿತವನ್ನು ಮೂರು ಸಲ ಮಾಡಬೇಕು. ಇದನ್ನು 'ತೀರ್ಥಪೀಠ' ಎಂದು ಕರೆಯುತ್ತಾರೆ. ತದನಂತರದಲ್ಲಿ ಕೈಜೋಡಿಸಿ ಗಂಗೆಯ ಈ ಉಕ್ತಿಗಳನ್ನು ಹೇಳಬೇಕು.

ನಂದಿನೀ ನಳಿನೀ ಸೀತಾ ಮಾಲತೀ ಚ ಮಹಾಪಗಾ |
ವಿಷ್ಣು ಪಾದಾಬ್ಜ ಸಂಭೂತಾ ಗಂಗಾ ತ್ರಿಪಥಗಾಮಿನೀ ||
ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ |

ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯಃ ||
ಸ್ನಾನೋದ್ಯತಃ ಸ್ಮರೇನ್ನಿತ್ಯಂ ತತ್ರ ತತ್ರ ವಸಾಮ್ಯಹಮ್ ||

ಸ್ನಾನದ ಸಮಯದಲ್ಲಿ ಯಾರು, ಎಲ್ಲಿ, ಯಾವ ಸ್ಥಿತಿಯಲ್ಲಿ ನನ್ನನ್ನು ಸ್ಮರಣೆ ಮಾಡುವರೋ, ಅಂತಹ ನೀರಿನಲ್ಲಿ ನಾನು ಸಿದ್ಧಳಾಗಿರುತ್ತೇನೆ-ಎನ್ನುವ ಅರ್ಥದ ಈ ಶ್ಲೋಕಗಳಿಗೆ ಆಧಾರ ವಾಧೂಲ ಸ್ಮೃತಿಯ 82ನೇ ಶ್ಲೋಕವಾದ 'ನಂದಿನೀತ್ಯಾದಿ ನಾಮಾನಿ ಬದ್ಧಾಂಜಲಿಪುಟೋ ಭವೇತ್' || ಎಂಬುದು.

ಸಾಧಾರಣ ಭಾವಿ, ಕೊಳಗಳಲ್ಲಿನ ನೀರಿನಲ್ಲಿ ಗಂಗಾಮಾತೆಯ ಆವಾಹನೆಯ ಅತ್ಯಂತ ಆವಶ್ಯಕ. ಬೇರೆ ಪವಿತ್ರ ನದಿಗಳಲ್ಲಿಯೂ ಕೂಡ ಈ ರೀತಿಯಲ್ಲಿ ಗಂಗಾಜಲವನ್ನು ಆವಾಹನೆ ಮಾಡಬಹುದು. ಇದಕ್ಕೆ ವಾಧೂಲ ಸ್ಮೃತಿಯಲ್ಲಿನ 84ನೇ ಶ್ಲೋಕವಾದ 'ಇಮಂ ಮೇ ಗಂಗ ಇತ್ಯುಕ್ತ್ವಾ ಪುಣ್ಯ ತೀರ್ಥಾನಿ ಚ ಸ್ಮರೇತ್' ಎನ್ನುವುದು ಆಧಾರ.

ಆವಾಹಯಾಮಿ ತ್ವಾಂ ದೇವಿ ಸ್ನಾನಾರ್ಥಮಿಹ ಸುಂದರಿ |
ಏಹಿ ಗಂಗೆ ನಮಸ್ತುಭ್ಯಂ ಸರ್ವ ತೀರ್ಥ ಸಮನ್ವಿತೆ || 83 ||

ಈ ರೀತಿಯಲ್ಲಿ ಹೇಳಿ, ನಂತರ

ಇಮಂ ಮೇ ಗಂಗೇ ಯಮುನೇ ಸರಸ್ವತಿ
ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ |
ಅಸಿಕ್ನ್ಯಾ ಮರುದ್ ವೃಧೆ ವಿತಸ್ತ-
ಯಾಽಽರ್ಜೀಕಿಯೇ ಶೃಣುಹ್ಯಾಸುಷೋಮಯಾ ||

(ಋಗ್ವೇದ 10-5-5)

ಎನ್ನುವ ಮಂತ್ರವನ್ನು ಉಚ್ಚರಿಸಿ, ಪುಣ್ಯತೀರ್ಥ ಜಲಗಳನ್ನು ಸ್ನಾನ ಮಾಡುವ ನೀರಿನಲ್ಲಿ ಆವಾಹಿಸಬೇಕು ಈ ನಂತರದಲ್ಲಿ

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ |
ದಿವೀವ ಚಕ್ಷುರಾತತಮ್ ||

(ಯಜು 6-5)

ತದ್ವಿಷ್ಣೋರಿತಿ ಮಂತ್ರೇಣ ಮಜ್ಜೇದಪ್ಸು ಪುನಃ ಪುನಃ |
ಗಾಯತ್ರೀ ವೈಷ್ಣವೀ ಹ್ಯೇಷಾ ವಿಷ್ಣೋಃ ಸಂಸ್ಮರಣಾಯವೈ || 89 ||

ಎನ್ನುವ ಶ್ಲೋಕಗಳನ್ನು ಪಠಿಸುತ್ತಾ ಮತ್ತೆ ಮತ್ತೆ ನೀರಿನಲ್ಲಿ ಮುಳುಗು ಹಾಕಬೇಕು ಇಲ್ಲವೆ ನೀರನ್ನು ದೇಹದ ಮೇಲೆ ಸುರಿದುಕೊಳ್ಳಬೇಕು. ಈ ಮಂತ್ರವನ್ನು 'ವೈಷ್ಣವ–ಗಾಯಿತ್ರೀ ಮಂತ್ರ' ಎಂದು ಕರೆಯಲಾಗುತ್ತದೆ.

## ಸ್ನಾನಾಂಗ ತರ್ಪಣ

ಸ್ನಾನದ ನಂತರ ನೀರಿನಲ್ಲಿ ನಿಂತುಕೊಂಡೇ ಸ್ನಾನದ ಅಂಗವಾಗಿ 'ದೇವರ್ಷಿ–ಪಿತೃ–ತರ್ಪಣ'ವನ್ನು ಬಿಡಬೇಕಾದುದು ಅವಶ್ಯಕ.

ಪೂರ್ವಾಶಾಭಿಮುಖೋ ದೇವಾನುತ್ತರಾಭಿಮುಖಸ್ತ್ವೃಷೀನ್ |
ಪಿತೃಂಸ್ತು ದಕ್ಷಿಣಾಸ್ಯಸ್ತು ಜಲಮಧ್ಯೇ ತು ತರ್ಪಯೇತ್ || 57 ||

ಪೂರ್ವಾಭಿಮುಖನಾಗಿ ದೇವತೆಗಳ, ಉತ್ತರದ ಕಡೆ ಮುಖ ಮಾಡಿ ಋಷಿಗಳ ಹಾಗೂ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಪಿತೃಗಳಿಗೆ ತರ್ಪಣಗಳನ್ನು ನೀಡಿ ಅವರನ್ನು ಸಂತೃಪ್ತಿಗೊಳಿಸಬೇಕು.

ಸ್ನಾನಾರ್ಥ ಮಭಿಗಚ್ಛಂತಂ ದೇವಾಃ ಪಿತೃಗಣೈಃ ಸಹ || 58 ||
ವಾಯುಭೂತಾಸ್ತು ಗಚ್ಛಂತಿ ತೃಷಾರ್ತಾಃ ಸಲಿಲಾರ್ಥಿನಃ |
ತಸ್ಮಾನ್ನ ಪೀಡಯೋದ್ವಸ್ತ್ರಮಕೃತ್ವಾ ಪಿತೃ ತರ್ಪಣಮ್ || 59 ||
ನಿರಾಶಾಸ್ತೇ ನಿವರ್ತಂತೇ ವಸ್ತ್ರ ನಿಷ್ಪೀಡನೆ ಕೃತೇ |
ತಸ್ಮಾನ್ನ ಪೀಡಯೇದ್ವಸ್ತ್ರಂ ಯೇ ಕೇಚ ಇತಿ ಮಂತ್ರತಃ || 60 ||

ಸ್ನಾನಕ್ಕಾಗಿ ಹೋಗುತ್ತಿರುವ ವ್ಯಕ್ತಿಯನ್ನು ನೋಡಿ, ಬಾಯಾರಿಕೆಯಿಂದ ವ್ಯಾಕುಲರಾಗಿ ಕುಡಿಯುವ ನೀರು ಬೇಕೆನ್ನುವ ಇಚ್ಛೆಯಿಂದ ದೇವಗಣ ಪಿತೃಗಳು ಅವರ ಹಿಂದೆ ಹಿಂದೆ ಬರುವರು. ಆದುದರಿಂದ ಪಿತೃ ತರ್ಪಣಕ್ಕೆ ಮುಂಚೆ ದೇಹವನ್ನು ಒರೆಸಿಕೊಳ್ಳಬಾರದು. ಸ್ನಾನ ಮಾಡಿದ ತೇವದ ಟವಲನ್ನು ಕೂಡ ಬಿಚ್ಚಿ ಹಿಂಡಬಾರದು. ಏಕೆಂದರೆ, ತೇವದ ಬಟ್ಟೆಯಿಂದ ತೊಟ್ಟಿಕ್ಕುವ ಜಲಬಿಂದುಗಳನ್ನು ದೇವತೆಗಳು ಹಾಗೂ ಪಿತೃಗಳು ಸ್ವೀಕರಿಸುವರು. ವಸ್ತ್ರ ನಿಷ್ಪೀಡನ ಮಾಡುವುದರಿಂದ ಅವರು ನಿರಾಶರಾಗಿ ಹೊರಟು ಹೋಗುವರು.

ತರ್ಪಣವಾದ ನಂತರ ನೀರಿನಿಂದ (ಸ್ನಾನದ ಮನೆಯಿಂದ) ಹೊರಬಂದು, ತೆಗೆದ ತೇವದ ಟವಲನ್ನು ನಾಲ್ಕು ಬಾರಿ ಮಡಿಚಿ, ಚಚ್ಚೌಕ ಮಾಡಿ ಹಿಂಡ

ಬೇಕು. ಆ ವಸ್ತ್ರವನ್ನು ಎಡಗಡೆ ಇಟ್ಟು ಎರಡು ಸಲ ಆಚಮನ ಮಾಡಿ ಶುದ್ಧಿಗೊಳ್ಳಬೇಕು.

ವಸ್ತ್ರಂ ಚತುರ್ಗುಣೀಕೃತ್ಯ ನಿಷ್ಪೀಡ್ಯ ಚ ಜಲಾದ್ಬಹಿಃ |
ವಾಮ ಪ್ರಕೋಷ್ಠೇ ನಿಕ್ಷಿಪ್ಯ ದ್ವಿರಾಚಮಯ್ಯ ಶುಚಿರ್ಭವೇತ್ || 61 ||

ಕಟಿಪ್ರದೇಶದವರೆಗಿನ ನೀರಿನಲ್ಲಿ ನಿಂತು ಸ್ನಾನ ಮಾಡಿ, ಒದ್ದೆ ಬಟ್ಟೆಯಿಂದಲೇ ತರ್ಪಣ, ಆಚಮನ ಹಾಗೂ ತರ್ಪಣಗಳನ್ನು ನೀರಿನಲ್ಲೇ ಮಾಡಬೇಕು. ಒಂದು ವೇಳೆ, ಒಣಗಿದ ಬಟ್ಟೆಗಳನ್ನು ಧರಿಸಿ ಈ ಕ್ರಿಯೆಗಳನ್ನು ಮಾಡಬೇಕೆಂದರೆ, ನೀರಿನಿಂದ ಹೊರಬಂದು ನೆಲದ ಮೇಲೆ ಮಾಡಬೇಕು.

ಆರ್ದ್ರವಾಸಾ ಜಲೇ ಕುರ್ಯಾತ್ ತರ್ಪಣಾ ಚಮನಂ ಜಪಂ |
ಶುಷ್ಕವಾಸಾಃ ಸ್ಥಲೇ ಕುರ್ಯಾತ್ ತರ್ಪಣಾಚಮನಂ ಜಪಂ || 30 ||

## ಸಂಧ್ಯೋಪಾಸನೆ

ಎಲ್ಲ ರೀತಿಗಳಲ್ಲೂ ಶುದ್ಧರಾಗಿ, ಪವಿತ್ರವಾದ ನಂತರ ತ್ರಿಕಾಲ 'ಗಾಯತ್ರಿಯ ಉಪಾಸನೆ' ಮಾಡಬೇಕು. ದ್ವಿಜರಿಗೆ ಸಂಧ್ಯೋಪಾಸನೆಯು ಬಹಳ ಅವಶ್ಯಕವಾದ ಕರ್ಮವಾಗಿದೆ.

ಯಾವಂತೋಽಸ್ಯಾಂ ಪೃಥಿವ್ಯಾಂ ತು ವಿಕರ್ಮಸ್ಥಾ ದ್ವಿಜಾತಯಃ |
ತೇಷಾಂ ಹಿ ಪಾವನಾರ್ಥಾಯ ಸಂಧ್ಯಾಂ ಸೃಷ್ಟಾ ಸ್ವಯಂಭುವಾ || 3 ||
ಗಾಯತ್ರೀ ನಾಮ ಪೂರ್ವಾಹ್ಣೇ ಸಾವಿತ್ರೀ ಮಧ್ಯಮೇ ದಿನೇ |
ಸರಸ್ವತೀ ಚ ಸಾಯಾಹ್ನೇ ಸೈವ ಸಂಧ್ಯಾ ತ್ರಿಧಾ ಸ್ಮೃತಾ || 4 ||
ಪ್ರತಿಗ್ರಹಾದನ್ನದೋಷಾತ್ ಪಾತಕಾದುಪಪಾತಕಾತ್ |
ಗಾಯತ್ರೀ ಪ್ರೋಚ್ಯತೇ ಯಸ್ಮಾದ್ ಗಾಯಂತಂ ತ್ರಾಯತೆ ಯತಃ ||5||
ಸವಿತೃದ್ಯೋತನಾಚ್ಚೈವ ಸಾವಿತ್ರೀ ಪರಿಕೀರ್ತಿತಾ |
ಜಗತಃ ಪ್ರಸವಿತ್ರೀ ಸಾ ವಾಗ್ರೂಪತ್ವಾತ್ ಸರಸ್ವತೀ || 6 ||

ಈ ಪ್ರಪಂಚದಲ್ಲಿ ವಿಕರ್ಮಗಳಲ್ಲಿ ಮಗ್ನರಾಗಿರುವ ದ್ವಿಜರು, ಮತ್ತಿತರ ವರ್ಗಗಳವರು ಪವಿತ್ರರಾಗಲು ಬ್ರಹ್ಮನು ಈ ಪಾಪಿ ಮಾನವರ ಮೇಲೆ ಕರುಣೆ ಇಟ್ಟು 'ಸಂಧ್ಯೆ'ಯನ್ನು ಸೃಷ್ಟಿಮಾಡಿದನು. ಈ ಸಂಧ್ಯೆಯು ಪೂರ್ವಾಹ್ನದಲ್ಲಿ ಗಾಯತ್ರಿಯಾಗಿಯೂ, ಸಾಯಂಕಾಲದಲ್ಲಿ ಸರಸ್ವತಿಯಾಗಿಯೂ ಇರುವಳು.

ಆದ್ದರಿಂದಲೇ ಆಕೆಗೆ ಈ ಮೂರು ಹೆಸರುಗಳು. ಪ್ರತಿಗ್ರಹ–ದೋಷ, ಅನ್ನ ದೋಷ, ಪಾತಕ ಹಾಗೂ ಉಪಪಾತಕ ಇತ್ಯಾದಿ ದೋಷ ಪಾಪಗಳಿಂದ ಮುಕ್ತರಾಗಲು ಜಪಾವಿಗಳು, ಅವುಗಳ ಉಚ್ಚಾರಣೆಗಳು ಸಹಾಯಕವಾಗಿ, ಅವರನ್ನು ರಕ್ಷಿಸುತ್ತವೆ. ಅದರಿಂದಲೇ ಇದಕ್ಕೆ 'ಗಾಯಿತ್ರಿ' ಎಂಬ ಹೆಸರು ಬಂದಿದೆ ಇವರಿಂದ ಇದು ಸೂರ್ಯದೇವನ ದ್ಯೋತಕವಾಗುವುದು. ಆದರಿಂದ ಇದನ್ನು 'ಸಾವಿತ್ರಿ' ಎಂದು ಕರೆಯಲಾಗಿದೆ. ಅಂತೆಯೇ ಪ್ರಪಂಚದ ಉತ್ಪನ್ನ ಮಾಡುವ ಪ್ರಸವಿತ್ರಿ ಕ್ರಿಯೆ ಉಂಟುಮಾಡುವುದರಿಂದ ಈ ವಾಗ್ರೂಪಾ ಸಂಧ್ಯೆಯನ್ನು 'ಸರಸ್ವತೀ' ಎಂದು ಕರೆಯಲಾಗುವುದು. ಈ ರೀತಿಯಲ್ಲಿ ಬ್ರಹ್ಮನಿಂದ ಸೃಷ್ಟಿಯಾದ ಸಂಧ್ಯೆಯು ಗಾಯತ್ರೀ, ಸಾವಿತ್ರೀ ಹಾಗೂ ಸರಸ್ವತೀ–ಎನ್ನುವ ಮೂರು ರೂಪಗಳಿಂದ ಪ್ರಕಾಶಿಸುತ್ತಾಳೆ.

## ಸಂಧ್ಯೋಪಾಸನೆಯ ಸಮಯ

ಸಂಧ್ಯೆಯ ವಂದನೆಯನ್ನು ಪ್ರಾತಃ, ಮಧ್ಯಾಹ್ನ ಹಾಗೂ ಸಾಯಂ – ಈ ಮೂರೂ ಕಾಲಗಳಲ್ಲಿ ಮಾಡಲಾಗುತ್ತದೆ. ಪ್ರಾತಃಕಾಲದಲ್ಲಿ ನಕ್ಷತ್ರಗಳು ಇರುವ ಕಾಲದಿಂದ ಹಿಡಿದು, ಸೂರ್ಯೋದಯದ ಪರ್ಯಂತ ಇರುವ ಸಮಯವನ್ನು ವೇದಜ್ಞ ಮಹರ್ಷಿಗಳು 'ಪ್ರಾತಃ ಸಂಧ್ಯಾ' ಎಂದು ಕರೆಯುತ್ತಾರೆ. ಸೂರ್ಯನು ಆಕಾಶದಲ್ಲಿ ಮಧ್ಯದಲ್ಲಿದ್ದಾಗ, ನಮಗೆ ನಡುನೆತ್ತಿಯ ಮೇಲೆ ಬಂದಾಗಿನ ಸಮಯವನ್ನು 'ಮಧ್ಯಾಹ್ನ–ಕಾಲ'ವೆಂದೂ, ಸಾಯಂಕಾಲದಲ್ಲಿ ಸೂರ್ಯನು ಹೆಚ್ಚು ಕಡಿಮೆ ಮುಳುಗಿರುವ ಸಮಯವನ್ನು 'ಸಾಯಂ ಸಂಧ್ಯೆ' ಯೆಂದೂ ಕರೆಯಲಾಗುತ್ತದೆ. ಇದಕ್ಕೆ ಆಧಾರ, ಇದೇ ವಾಧೂಲ ಋಷಿಯ ಈ ಕೆಳಗಿನ ಶ್ಲೋಕಗಳು—

ನಕ್ಷತ್ರ ಜ್ಯೋತಿರಾರಭ್ಯ ಸೂರ್ಯಸ್ಯೋದಯನಂ ಪ್ರತಿ
ಪ್ರಾತಃ ಸಂಧ್ಯೇತಿ ತಾಂ ಪ್ರಾಹುಃ ಶ್ರುತಯೋ ಮುನಿಸತ್ತಮಾಃ ||68||

ಪ್ರಾತಃ ಸಂಧ್ಯಾ ಸನಕ್ಷತ್ರಾಮುಪಾಸೀತ ಯಥಾವಿಧಿಃ |
ಸಾವಿತ್ರ್ಯಾಂ ಪಶ್ಚಿಮಾಂ ಸಂಧ್ಯಾಮರ್ಧಾಸ್ತಮಿತ ಭಾಸ್ಕರಾತ್ ||69||

## ಅಶೌಚದಲ್ಲಿ ಸಂಧ್ಯೋಪಾಸನೆ

ಜನ್ಮ ಶೌಚ ಹಾಗೂ ಮರಣ ಶೌಚವಿದ್ದಾಗ ಸಂಧ್ಯಾವಂದನೆಯನ್ನು ಮಾಡಬಹುದೆ, ಬೇಡವೆ ಎನ್ನುವ ಸಮಸ್ಯೆಗೆ ಮಹರ್ಷಿ ವಾಧೂಲರು ಸೂಕ್ತ ಉತ್ತರ ನೀಡಿದ್ದಾರೆ —

ಸೂತಕೆ ಮೃತಕೆ ವಾಪಿ ಸಂಧ್ಯಾಕರ್ಮವ್ ನ ಸಂತ್ಯಜೇತ್ ।
ಮನಸೋಚ್ಚಾರಯೇನ್ಮಂತ್ರಾನ್ ಪ್ರಾಣಾಯಾಮಮೃಃ ದ್ವಿಜಃ ॥ 32 ॥
ಪ್ರಣವೇನ ತು ಸಂಯುಕ್ತಾ ವ್ಯಾಹತೀಃ ಸಪ್ತ ನಿತ್ಯಶಃ ।
ಸಾವಿತ್ರೀಂ ಶಿರಸಾ ಸಾರ್ಧಂ ಮನಸಾ ತ್ರಿಃ ಪಠೇದ್ ದ್ವಿಜಃ ॥ 33 ॥

ಅಶೌಚಗಳು ಇದ್ದಾಗ್ಯೂ ಸಂಧ್ಯೋಪಾಸನೆಯನ್ನು ಮಾಡಬೇಕು, ಹಾಗೆ ಮಾಡುವುದಕ್ಕೆ ಯಾವ ಅಡ್ಡಿಯೂ ಇರಬಾರದು – ಎಂದು ಮಹರ್ಷಿ ವಾಧೂಲರು ತಿಳಿಸುತ್ತಾ, ಅದನ್ನು ಆಚರಿಸುವ ರೀತಿಯನ್ನು ತಿಳಿಸುತ್ತಾರೆ. ಜನನ ಹಾಗೂ ಮರಣ ಅಶೌಚಗಳು ಬಂದಾಗ ಸಂಧ್ಯಾವಂದನೆಯಲ್ಲಿ ಪ್ರಾಣಾಯಾಮವನ್ನು ಬಿಟ್ಟು ಉಳಿದ ಕರ್ಮಗಳನ್ನು ಮನಸ್ಸಿನಲ್ಲಿ ಮಂತ್ರಗಳನ್ನು ಹೇಳಿಕೊಳ್ಳುವುದರ ಮುಖಾಂತರ ಆಚರಿಸಬೇಕು. ಪ್ರಣವಪೂರ್ವಕ ಸಪ್ತ ವ್ಯಾಹೃತಿಗಳ ಸಹಿತ ಗಾಯತ್ರಿ–ಮಂತ್ರವನ್ನು ಮನಸ್ಸಿನಲ್ಲಿ ಮೂರು ಸಲ ಹೇಳಿಕೊಳ್ಳಬೇಕು. ಇದನ್ನೇ 'ಮಾನಸೀ–ಸಂಧ್ಯಾ' ಎಂದು ಕರೆಯುತ್ತಾರೆ.

## ಸಂಭವಿಸುವ ಘಟನೆಗಳು

ಭವಿಷ್ಯದಲ್ಲಿ ಸಂಭವಿಸುವ ಘಟನೆಗಳ ಬಗ್ಗೆ ಮಹರ್ಷಿ ವಾಧೂಲರು 'ಅವಶ್ಯಂ ಭಾವಿತಾ' ಎಂದು ಕರೆಯುವರು. ಯಾವ ದೇಶದಲ್ಲಿ, ಯಾವ ಸಮಯದಲ್ಲಿ, ಯಾವ ಮುಹೂರ್ತದಲ್ಲಿ, ಯಾವ ದಿನದಂದು ಹಾನಿ, ವೃದ್ಧಿ, ಯಶ ಹಾಗೂ ಲಾಭಗಳಿಗೆ ಸಂಬಂಧಪಟ್ಟ ಹಾಗೆ ಯಾವ ಯಾವ ಘಟನೆಗಳು ಸಂಭವಿಸುತ್ತವೆಯೋ ಅವು ಅವಶ್ಯವಾಗಿ ಸಂಭವಿಸಲೇಬೇಕು. ಅವನ್ನು ಯಾರು, ಯಾವ ರೀತಿಯಲ್ಲೂ ತಡೆಯಲು, ಬದಲಾಯಿಸಲು ಸಾಧ್ಯವಿಲ್ಲ. ಇದನ್ನು ಪ್ರತಿಯೊಬ್ಬರೂ ಅರಿತು ತನ್ನ ತಮ್ಮ ಆತ್ಮಕಲ್ಯಾಣದಲ್ಲಿ, ಆತ್ಮೋದ್ಧಾರದಲ್ಲಿ ನಿರತರಾಗ ಬೇಕಾದುದು ಅವಶ್ಯಕ ಎಂದು ಮಹರ್ಷಿ ವಾಧೂಲರು ತಿಳಿಸುತ್ತಾರೆ.

ಪ್ರಯತ್ನ ಮಾಡುವುದು ನಮ್ಮ ಕೈನಲ್ಲಿ. ಆದರೆ ಫಲಾಫಲಗಳು ಏನಾಗುತ್ತದೆಯೊ ಅದೇ ಆಗುತ್ತದೆ. ಯಾವುದೇ ಒಂದು ಪ್ರಯತ್ನದ ಫಲಿತ ಏನಾಗುತ್ತದೆ ಎಂಬುದನ್ನು ಯೋಚಿಸದೆ ನಮ್ಮ ಕರ್ತವ್ಯವನ್ನು ನಾವು ಮಾಡುವುದು ಆವಶ್ಯಕ.

ಯಸ್ಮಿನ್ ದೇಶೇ ಯದಾ ಕಾಲೇ ಯನ್ಮೂಹೂರ್ತೇಽಚ ಯದ್ದಿನೇ ।
ಹಾನಿವೃದ್ಧಿರ್ಯಶೋ ಲಾಭಾಸ್ತತ್ ತಥಾನ ತದನ್ಯಥಾ ॥175॥

ಮಹರ್ಷಿ ವಾಧೂಲರು ಕಡೆಯದಾಗಿ ಒಂದು ಎಚ್ಚರಿಕೆಯನ್ನು ನೀಡುತ್ತಾರೆ. ಅದೇನೆಂದರೆ ಧರ್ಮದ ಸೂಕ್ಷ್ಮತತ್ತ್ವವನ್ನು ಅರಿಯದೆ ಯಾರೇ ಆಗಲಿ ಇಷ್ಟ ಬಂದಂತೆ ತೀರ್ಮಾನಗಳನ್ನು ತೆಗೆದುಕೊಳ್ಳಬಾರದು. ತಪ್ಪಿದಲ್ಲಿ. ಪಾಪೀ ವ್ಯಕ್ತಿಯ ಪಾಪವು ನೂರರಷ್ಟಾಗಿ ಹೇಳಿದ ವ್ಯಕ್ತಿಯ ವಿಧಿಯಲ್ಲಿ ಸೇರಿ ಹೋಗುತ್ತದೆ. ವೇದ ಪಾರಂಗತರಾದ ವಿದ್ವಾಂಸರು ಯಾವ ತೀರ್ಮಾನವನ್ನು ನೀಡುವರೊ, ಅದನ್ನೇ ಮಾನ್ಯ ಮಾಡುವುದು ಅಗತ್ಯ. ಇದಕ್ಕೆ ವ್ಯತಿರೇಕವಾಗಿ, ಸಾವಿರ ಜನ ಸಾವಿರ ಮಾತು ಹೇಳಿದರೂ ಅದು ಪ್ರಾಮಾಣಿಕವಾದುದಾಗಲಾರದು. ಧರ್ಮತತ್ತ್ವಜ್ಞರಿಗೆ ಶಾಸ್ತ್ರ ಪ್ರತಿಪಾದಿತವಾದ ಧರ್ಮವೇ ಮುಖ್ಯ ಧರ್ಮವಾಗುತ್ತದೆ. ಇದಕ್ಕೆ ವಿರುದ್ಧವಾದುದು ಅಧರ್ಮವಾಗುತ್ತದೆ.

ಅಜ್ಞಾತ್ವಾ ಧರ್ಮಶಾಸ್ತ್ರಾಣಿ ಪ್ರಾಯಶ್ಚಿತ್ತಂ ವದಂತಿ ಯೇ ।
ತತ್ಪಾಪಂ ಶತಧಾ ಭೂತ್ವಾ ತದ್ವಕ್ತ್ರ ಮಧಿಗಚ್ಛತಿ ॥ 176 ॥
ಚತ್ವಾರೋ ವಾ ತ್ರಯೋ ವಾಪಿ ಯದ್‌ಬ್ರೂಯುಃ ವೇದ ಪಾರಗಾಃ ।
ಸ ಧರ್ಮ ಇತಿ ವಿಜ್ಞೇಯೋ ನೇತರಸ್ತು ಸಹಸ್ರಶಃ ॥ 177 ॥

## 2. ನಾರಾಯಣ ಸ್ಮೃತಿ

ನೈಮಿಶಾರಣ್ಯವು ಪುಣ್ಯಕ್ಷೇತ್ರ, ಪುಣ್ಯತೀರ್ಥವೆಂದೇ ಪ್ರಸಿದ್ಧಿ ಪಡೆದಿದೆ. ಇಲ್ಲಿ ಬ್ರಹ್ಮವಾದೀ ಋಷಿಗಳು ಹಾಗೂ ಮಹರ್ಷಿಗಳು ಸ್ವಾಧ್ಯಾಯ, ಸತ್ಸಂಗ, ಕಥಾಲಾಪ ಹಾಗೂ ಯಜನಪೂಜನಗಳನ್ನು ಮಾಡುತ್ತಿದ್ದರು. ಆದುದರಿಂದ ಈ ಕ್ಷೇತ್ರವನ್ನು 'ಜ್ಞಾನಸತ್ರ' ಎನ್ನುವ ಹೆಸರಿನಿಂದಲೂ ಕರೆಯಲಾಗುತ್ತಿತ್ತು.

ಶೌನಕ ಇತ್ಯಾದಿ 28 ಸಾವಿರ ಋಷಿ – ಮಹರ್ಷಿಗಳ ಮುಖಾಂತರ ಪುರಾಣಗಳ ಪ್ರವಚನಗಳು ಇಲ್ಲಿಯೇ ನಡೆದವು.

ಒಮ್ಮೆ ಇದೇ ರೀತಿಯಲ್ಲಿ ಸ್ವಾಧ್ಯಾಯ – ಸತ್ಸಂಗವು ಮುಂದುವರಿಯುತ್ತಿತ್ತು. ಆಗ ಮಹಾಯೋಗಿ ನಾರಾಯಣನು ಧರ್ಮತತ್ತ್ವವೇತ್ತನಾದ ದೂರ್ವಾಸನೊಂದಿಗೆ ತನಗೆ ಧರ್ಮೋಪದೇಶವನ್ನು ನೀಡುವಂತೆ ಪ್ರಾರ್ಥನೆ ಮಾಡಿದ. ಆಗ ದೂರ್ವಾಸನು ಅವನಿಗೆ ಉಪದೇಶ ನೀಡಿದ. ಆತನು ಪ್ರತಿಪಾದಿಸಿದ ವಿಷಯಗಳ ಸಂಗ್ರಹವೇ 'ನಾರಾಯಣ ಸ್ಮೃತಿ' ಎನ್ನುವ ಕೃತಿ.

ಈ ಕೃತಿಯು ದೂರ್ವಾಸ ಹಾಗೂ ನಾರಾಯಣರ ಸಂವಾದ ರೂಪದಲ್ಲಿದೆ. ಇದರ ಮುಖ್ಯ ಶ್ರೋತಾರನು ನಾರಾಯಣ ಮುನಿಯಾದುದರಿಂದ ಇದನ್ನು 'ನಾರಾಯಣ ಸ್ಮೃತಿ' ಎಂದು ಕರೆಯಲಾಯಿತು.

ಈ 'ನಾರಾಯಣ ಸ್ಮೃತಿ'ಯಲ್ಲಿ ಒಂಭತ್ತು ಅಧ್ಯಾಯಗಳಿದ್ದು, ಸುಮಾರು 200 ಶ್ಲೋಕಗಳಿವೆ. ಇದರಲ್ಲಿ ಪ್ರತಿಪಾದಿಸುವ ವಿಷಯವೆಂದರೆ – ಪಾತಕ, ಉಪಪಾತಕ, ಮಹಾಪಾತಕ ಹಾಗೂ ಅವುಗಳಿಗೆ ನೀಡುವ ಪ್ರಾಯಶ್ಚಿತ್ತದ ವಿಧಾನಗಳ ವಿವರಣೆ.

ಸ್ಮೃತಿಯ ಪ್ರಾರಂಭದಲ್ಲಿ ಮಹಾಮುನಿ ನಾರಾಯಣನು ಮಹರ್ಷಿ ದೂರ್ವಾಸನೊಂದಿಗೆ ಜಿಜ್ಞಾಸೆಯನ್ನು ಮಾಡುವನು.

"ಹೇ, ಧರ್ಮಜ್ಞರಲ್ಲಿ ಸರ್ವಶ್ರೇಷ್ಠನಾದ ಮಹರ್ಷಿಯೇ ! ಕಲಿಯುಗದಲ್ಲಿ ಭೂಮಿಯ ಮೇಲೆ ಧರ್ಮ ಹಾಗೂ ಪುಣ್ಯಗಳು ಲೋಪವಾದಾಗ, ಪಾಪಗಳು ಹೆಚ್ಚಾದಾಗ, ಅಂತಹ ಸಮಯದಲ್ಲಿ ಮಾನವನು ಯಾವ ರೀತಿಯಲ್ಲಿ ಪಾಪಗಳಿಂದ ಬಿಡುಗಡೆ ಪಡೆಯಲು ಸಾಧ್ಯ ? ಆ ಪ್ರಾಯಶ್ಚಿತ್ತ ವಿಧಾನಗಳನ್ನು ತಿಳಿಸುವ ಕೃಪೆ ಮಾಡು !"

ಇದಕ್ಕೆ ಮಹರ್ಷಿ ದೂರ್ವಾಸನು ಹೀಗೆಂದು ಉತ್ತರಿಸಿದನು.

"ಹೇ ಮಹಾಯೋಗಿ ! ಸತ್ಯಯುಗದಲ್ಲಿ ಪುಣ್ಯ ಹಾಗೂ ಚತುಷ್ಪಾದ ಧರ್ಮಗಳು ಎಂದಿನಂತೆ ನಿತ್ಯಸ್ಥಿತಿಯಲ್ಲಿ ಇರುತ್ತವೆ. ಧರ್ಮವು ನಿರಂತರವಾಗಿ ವರ್ಧಿಸುತ್ತಾ ಹೋಗುತ್ತದೆ. ವೃಷಭ ರೂಪದ ಧರ್ಮವು ತನ್ನ ನಾಲ್ಕು ಪಾದ (ಸತ್ಯ, ಶೌಚ, ತಪ ಹಾಗೂ ದಾನ) ಗಳಿಂದ ಸತ್ಯಯುಗದಲ್ಲಿ ಪ್ರತಿಷ್ಠಿತ

ಗೊಂಡಿರುತ್ತದೆ. ಇದರಿಂದ ಎಲ್ಲೆಡೆ ಸುಖ, ಶಾಂತಿ ಹರಡಿರುತ್ತದೆ. ಎಲ್ಲೆಡೆ ಧರ್ಮದ ಅನುಷ್ಠಾನವಾಗಿರುತ್ತದೆ. ಎಲ್ಲ ಪ್ರಜೆಗಳು ಸದಾಚಾರ ಸಂಪನ್ನರೂ, ಧರ್ಮಾತ್ಮರೂ ಹಾಗೂ ಪುಣ್ಯಾತ್ಮರೂ ಆಗಿರುವರು.

"ನಾಲ್ಕು ಪಾದಗಳಲ್ಲಿ ಇರಬೇಕಾದ ಧರ್ಮರೂಪೀ ವೃಷಭವು ತ್ರೇತಾ ಯುಗದಲ್ಲಿ ಒಂದು ಪಾದವನ್ನು ಕಳೆದುಕೊಳ್ಳುತ್ತದೆ. ಮೂರು ಚರಣಗಳು ಧರ್ಮದ್ದಾಗಿದ್ದು ಒಂದು ಚರಣವು ಪಾಪದ್ದಾಗಿರುತ್ತದೆ."

'ದ್ವಾಪರಯುಗದಲ್ಲಿ ಇದೇ ಚತುಷ್ಪಾದ ಧರ್ಮವು, ಎರಡು ಚರಣಗಳಲ್ಲಿದ್ದ ಧರ್ಮರೂಪ ಹಾಗೂ ಎರಡು ಚರಣಗಳಲ್ಲಿ ಅಧರ್ಮ ರೂಪವನ್ನು ಹೊಂದಿರುತ್ತದೆ.'

'ಆದರೆ ಕಲಿಯುಗದಲ್ಲಿ ಒಂದು ಪಾದದ ಧರ್ಮವಿದ್ದು, ಮೂರು ಪಾದಗಳ ಅಧರ್ಮವಿರುತ್ತದೆ. 'ತತಃ ಕಲಿಯುಗೆ ಪ್ರಾಪ್ತೆ ಪಾದೇನೈಕೇನ ತಿಷ್ಠತಿ' (ನಾರಾ. 1/6). ಈ ಕಾರಣ ಧರ್ಮರೂಪ ವೃಷಭವು ಕುಂಟು ಕಾಲಿನದ್ದಾಗಿರುತ್ತದೆ. ಈ ಘೋರ ಕಲಿಕಾಲದಲ್ಲಿ ಪಾಪಗಳ ಕಾರ್ಯಗಳು ಹೆಚ್ಚಾಗಿ, ಉಚ್ಚಸ್ತರವನ್ನು ತಲುಪಿ, ಯುಗಾಂತದಲ್ಲಿ ಪ್ರಳಯವಾಗುತ್ತದೆ.'

"ಇದರ ನಂತರ ಮತ್ತೆ ಕೃತಯುಗದ ಕೆಲಸ ಕಾರ್ಯಗಳು ಪ್ರಾರಂಭವಾಗುತ್ತವೆ."

'ನಾರಾಯಣ ಸ್ಮೃತಿ'ಯಲ್ಲಿ ಪಾಪಗಳು ಒಂಭತ್ತು ಕೋಟಿ ಸಂಖ್ಯೆಯಷ್ಟಿವೆ ಎಂದು ತಿಳಿಸಲಾಗಿದೆ. ಒಂದೊಂದು ಕೋಟಿಯಲ್ಲೂ ಅನೇಕ ಪಾತಕಗಳ ಗಣನೆ ಇದೆ. ಇವುಗಳಲ್ಲಿ ನವವಿಧ ಪಾತಕಗಳು ಗಮನಾರ್ಹವಾದುದು. ಈ ನವಪಾತಕಗಳೆಂದರೆ ಮಹಾಪಾತಕಗಳು (ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣ ಸ್ತೇಯ, ಗುರುತಲ್ಪಗಮನ ಹಾಗೂ ಇವುಗಳೊಂದಿಗಿನ ಸಂಸರ್ಗ), ಗೋವಧ ಇತ್ಯಾದಿ, ಉಪಪಾತಕಗಳು, ಸಂಕರೀಕರಣ, ಮಲಿನೀಕರಣ, ಅಪಾತ್ರೀಕರಣ, ಜಾತಿಭ್ರಂಶಕರಣ ಹಾಗೂ ಪ್ರಕೀರ್ಣ ಪಾಪ ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ (ನಾರಾ. 1/10-15).

ಅನಂತರದಲ್ಲಿ ಪ್ರತಿಯೊಂದು ಪಾಪಕ್ಕೆ ತಕ್ಕಂತಹ ಪ್ರಾಯಶ್ಚಿತ್ತ ವಿಧಾನವನ್ನೂ ತಿಳಿಸಲಾಗಿದೆ. ಇದರೊಂದಿಗೆ ಪಾಪ ಕರ್ಮಗಳಿಂದ ಯಾವಾಗಲೂ ದೂರವಿರಬೇಕಾದ ಅಗತ್ಯಗಳನ್ನು ತಿಳಿಸಲಾಗಿದೆ.

ಪಾಪಗಳ ಕಾರಣ, ಮಾನವನು ಮರಣಾನಂತರ ನರಕವನ್ನು ಪ್ರವೇಶಿಸಿ, ಅಲ್ಲಿ ತಕ್ಕ ಶಿಕ್ಷೆಯನ್ನು ಪಡೆಯಬೇಕಾದುದು ಅವಶ್ಯ. ಅವು ಯಾವ ಯಾವ ರೀತಿಯವು ಎಂಬುದನ್ನು ವಿವರಿಸಲಾಗಿದೆ.

ಆದುದರಿಂದ ನರಕಯಾತನೆಗಳನ್ನು ತಪ್ಪಿಸಿಕೊಳ್ಳಲು ಹಾಗೂ ಅವುಗಳಿಂದ ದೂರವಿರಲು ಪಾಪದ ಕೆಲಸಗಳನ್ನು ಮಾಡಲೇಬಾರದು, ಯಾವಾಗಲೂ ಧರ್ಮಾಚರಣೆಯನ್ನೇ ಅನುಸರಿಸಬೇಕಾಗಿದೆ – ಎಂದು ಈ ಸ್ಮೃತಿಯು ತಿಳಿಸುತ್ತದೆ.

ತಸ್ಮಾತ್ ಪಾಪಂ ನ ಕರ್ತವ್ಯಂ
ನರೈರ್ನರಕಭಿರುಚಿಃ ॥ (ನಾರಾ. 2/6)

ಮಹಾಮುನಿ ನಾರಾಯಣನು ಮಹರ್ಷಿ ದೂರ್ವಾಸನನ್ನು ಹೀಗೆಂದು ಪ್ರಶ್ನಿಸುತ್ತಾನೆ,

" ಹೇ ಭಗವನ್ ! ದೀರ್ಘಕಾಲದಿಂದ ಪಾಪ ಕರ್ಮಗಳನ್ನು ಮಾಡುತ್ತಿರುವವರು, ಅದರಲ್ಲಿ ನಿರತರಾಗಿರುವವರು, ಅವುಗಳಿಂದ ದೂರವಿರಲು ಸಾಧ್ಯವಿಲ್ಲದವರಾಗಿದ್ದಾರೆ. ಇಂತಹ ದೂಷಿತ ವ್ಯಕ್ತಿಗಳಿಗೆ ಪಾಪಗಳಿಂದ ಬಿಡುಗಡೆಯಾಗುವುದಾದರೂ ಹೇಗೆ ? ಕೃಪೆ ಇಟ್ಟು ಇದನ್ನು ತಿಳಿಸಿ."

ಇದಕ್ಕೆ ಮಹರ್ಷಿ ದೂರ್ವಾಸನು,

" ಜನ್ಮಜನ್ಮಾಂತರಗಳ ತಾಮಸೀ ಗುಣದ ಪ್ರಭಾವದಿಂದ ಹೀಗಾಗುವುದು ಸಹಜ ಪ್ರಕ್ರಿಯೆ. ಇಂತಹ ಸ್ಥಿತಿಯಲ್ಲಿ ಪಾಪದಿಂದ ಪರಿಹಾರ ಹೊಂದಲು 'ಅಘಮರ್ಷಣ ಸೂಕ್ತ'ದ ಜಪ, ಸಹಸ್ರ ಕಲಶಾಭಿಷೇಕ ಹಾಗೂ ಪಂಚಗವ್ಯಗಳನ್ನು ಸೇವಿಸುವುದರಿಂದ ಎಲ್ಲ ರೀತಿಯ ಪಾಪಗಳಿಂದ ಆ ವ್ಯಕ್ತಿಯು ಬಿಡುಗಡೆ ಹೊಂದುತ್ತಾನೆ.

ಪಂಚಗವ್ಯಪ್ರಾಶನಂ ಚ ಸರ್ವಂ
ಕೃತ್ವಾ ವಿಶುದ್ಧ್ಯತಿ ॥ " (ನಾರಾ. 5/29)
ಎಂದು ಹೇಳುವನು.

ಈ ರೀತಿಯಲ್ಲಿ ನಾರಾಯಣಸ್ಮೃತಿಯಲ್ಲಿ ಎಲ್ಲ ರೀತಿಯ ಪಾಪಗಳಿಗೂ ಪರಿಹಾರ ಏನೇನು ಎಂಬುದನ್ನು ಸ್ಪಷ್ಟವಾಗಿ ವಿವರಿಸಲಾಗಿದೆ. ಇವುಗಳ ಅನುಸರಣೆಯು ಮಾನವರಿಗೆ ತುಂಬಾ ಅವಶ್ಯಕವಾದುದು. ಈ ದೃಷ್ಟಿಯಿಂದ

ಎಲ್ಲರೂ ಈ ಸ್ಮೃತಿಯನ್ನು ಪಠಿಸಬೇಕಾದುದು ಆವಶ್ಯ. ಇದರಲ್ಲಿ ನೀಡಿರುವ ಸೂಚನೆಗಳನ್ನು ಸ್ವಂತ ಜೀವನಕ್ಕೆ ಪ್ರತಿಯೊಬ್ಬರೂ ಅಳವಡಿಸಿಕೊಳ್ಳುವುದು ಅಗತ್ಯ.

ಈ ಸ್ಮೃತಿಯು ಕೊನೆಯಲ್ಲಿ ಕಲಿವರ್ಜ್ಯ – ಪ್ರಕರಣವಿದೆ. ಅಂತೆಯೇ ವರ್ಜಿತ ಕರ್ಮಗಳನ್ನು ಮಾಡುವುದಕ್ಕೆ ಸಂಬಂಧಪಟ್ಟ ಪ್ರಾಯಶ್ಚಿತ್ತಗಳನ್ನೂ ತಿಳಿಸಲಾಗಿದೆ.

ಈ ವರ್ಜಿತ ಕರ್ಮಗಳನ್ನು ನಡೆಸಬೇಕೆನ್ನುವವರು ವರ್ಷಪೂರ್ತಿ ವಿಧಿ ಪೂರ್ವಕವಾಗಿ, ನಿಯಮಿತ ರೀತಿಯಲ್ಲಿ ಗಂಗಾ ಸ್ನಾನ ಹಾಗೂ ಒಂದು ತಿಂಗಳ ವರೆಗೆ ಸೇತು ಬಂಧ ರಾಮೇಶ್ವರದಲ್ಲಿ ಸ್ನಾನ ಮಾಡುವುದರಿಂದ ಪಾಪಗಳಿಂದ ದೂರವಾಗಿ, ಶುದ್ಧರಾಗುವರು – ಎಂದು ಈ ಸ್ಮೃತಿಯಲ್ಲಿ ತಿಳಿಸಲಾಗಿದೆ. ಆ ನಂತರವೇ ಅಂತಹವರು ಮತ್ತೆ ಸಾಮಾನ್ಯ ವ್ಯವಹಾರಗಳನ್ನು ನಡೆಸುವ ಯೋಗ್ಯತೆಯನ್ನು ಪಡೆಯುವರು–ಎಂದು ಈ ಸ್ಮೃತಿ ತಿಳಿಸುತ್ತದೆ –

ಗಂಗಾಸ್ನಾನಂ ವರ್ಷಮಾತ್ರಂ ಮಾಸಂ ಸೇತು ನಿಮಜ್ಜನಮ್ |
ಸಾಂಗಂ ಚ ವಿಧಿವತ್ ಕೃತ್ವಾ ವ್ಯಾವಹಾರ್ಯೋ ಭವೇದಿಹ ||
(ನಾರಾ. 8/5)

‘ ಯಾರು ಸಮರ್ಥರೊ, ಶಕ್ತಿವಂತರೊ, ಧನವಂತರೊ ಅಂತಹವರು ಎರಡು ಚಂದ್ರಾಯಣ ವ್ರತಗಳು, ಸಹಸ್ರ ಕಳಶಸ್ನಾನ, ಪಂಚವಾರುಣ ಹೋಮ, ಕೂಷ್ಮಾಂಡ ಹೋಮ, ವಿರಜಾಹೋಮ, ಗಾಯತ್ರೀಹೋಮ, ದ್ವಾದಶ ಗೋದಾನ ಹಾಗೂ ಸಹಸ್ರ ಬ್ರಾಹ್ಮಣರಿಗೆ ಭೋಜನ ನೀಡುವ – ಇತ್ಯಾದಿ ಕಲಿವರ್ಜಿತ ಕರ್ಮಗಳನ್ನು ತಪ್ಪದೆ ನಡೆಸಬೇಕಾದುದು ಅಗತ್ಯ ’ (ನಾರಾ. 8/10–14) ಎಂದು ಈ ಸ್ಮೃತಿಯು ತಿಳಿಸುತ್ತದೆ.

## 3. ವ್ಯಾಘ್ರಪಾದ ಸ್ಮೃತಿ

‘ವ್ಯಾಘ್ರಪಾದ ಸ್ಮೃತಿ’ಯ ರಚಯಿತನಾದ ವ್ಯಾಘ್ರಪಾದನು ಉಪ ಮನ್ಯುವಿನ ತಂದೆ, ಉಪಮನ್ಯುವು ಕೃಷ್ಣಪರಮಾತ್ಮನ ದೀಕ್ಷಾಗುರುವಾಗಿದ್ದನು.

ಮಹರ್ಷಿ ವ್ಯಾಘ್ರಪಾದನು ಋಗ್ವೇದದ ಅನೇಕ ಮಂತ್ರಗಳ ಹಾಗೂ ಸೂಕ್ತಗಳ ದ್ರಷ್ಟಾರನು. ಈತನ ಹೆಸರಿನಿಂದ ಗೋತ್ರ ಪ್ರವರ್ತನವೂ ಆಗಿದೆ. ಈತನು ವೇದಜ್ಞರಲ್ಲೇ ಸರ್ವಶ್ರೇಷ್ಠನು ಹಾಗೂ ಬಹಳ ಬುದ್ಧಿವಂತನೂ ಆಗಿದ್ದನು. ತಪಸ್ಸು, ಭಗವತ್ ಸೇವೆ ಹಾಗೂ ಪೂಜೆ, ಸದಾಚಾರ ಪಾಲನೆ ಹಾಗೂ ಬ್ರಹ್ಮಚಿಂತನೆ – ಇವೆಲ್ಲವೂ ಈತನ ಯೋಗಚರ್ಯೆಯ ವಿಷಯಗಳಾಗಿದ್ದುವು.

ಈತನು ಪ್ರತಿನಿತ್ಯ ಅಗ್ನಿಹೋತ್ರದ ಪೂಜೆ ಮಾಡುತ್ತಿದ್ದನು. ಸಾಕ್ಷಾತ್ ಪರಮೇಶ್ವರನಲ್ಲಿ ಈತನಿಗೆ ಅತ್ಯಂತ ನಿಷ್ಠೆ. ಆದುದರಿಂದ ಶಿವಭಕ್ತರಲ್ಲಿ ಈತನಿಗೆ ವಿಶೇಷ ಸ್ಥಾನವಿದೆ. ಉಪಮನ್ಯುವಿಗೆ ಈತನಿಂದಲೇ ಶಿವ–ದೀಕ್ಷೆಯು ಪ್ರಾಪ್ತವಾಯಿತು.

ಶಿವಭಕ್ತರ ಪರಂಪರೆಯಲ್ಲಿ ಒಂದು ಕಥಾನಕವಿದೆ.

ಮಹರ್ಷಿ ವ್ಯಾಘ್ರಪಾದನು ಅರ್ಧರಾತ್ರಿಯ ನಂತರವೇ ಪರಮಶಿವನ ಪೂಜೆಗೆ ಅಗತ್ಯವಿರುವ ಹೂವು, ಬಿಲ್ವಪತ್ರೆ ಇತ್ಯಾದಿಗಳನ್ನು ಹುಡುಕಿ ಸಂಗ್ರಹಿಸುವುದರಲ್ಲಿ ಮಗ್ನನಾಗಿರುತ್ತಿದ್ದನು. ಹೀಗೆ ಮಾಡುವಾಗ ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ದೂರದೂರದವರೆಗೆ ಹೋಗಬೇಕಾಗುತ್ತಿತ್ತು. ರಾತ್ರಿ ಹೊತ್ತಿನಲ್ಲಿ, ಏಕಾಂಗಿಯಾಗಿ ಹೀಗೆ ಹೋಗುತ್ತಿದ್ದುದರಿಂದ ಈತನ ಕಾಲುಗಳಲ್ಲಿ ಮುಳ್ಳುಗಳು ಚುಚ್ಚಿ ಕಲ್ಲುಗಳು ಕಾಲುಗಳಿಗೆ ತಾಕಿ, ಪಾದಗಳು ಸೀಳಿ ರಕ್ತ ಒಸರುತ್ತಿತ್ತು. ಆದರೆ ಇವುಗಳ ಬಗ್ಗೆ ಈತನಿಗೆ ಗಮನವೇ ಇರುತ್ತಿರಲಿಲ್ಲ. ಇದು ಪ್ರತಿ ದಿನ ನಡೆಯುತ್ತಿದ್ದ ವಿಷಯವೇನೇ !

ಈ ರೀತಿಯಲ್ಲಿ ಹೂವು, ಬಿಲ್ವಪತ್ರೆ–ಇತ್ಯಾದಿಗಳನ್ನು ಸಂಗ್ರಹಿಸಿ, ಬಹಳ ಸಮಯದವರೆಗೆ ಶಿವನನ್ನು ಪೂಜಿಸುವುದರಲ್ಲಿ ಮಗ್ನನಾಗಿರುತ್ತಿದ್ದನು.

ತನ್ನ ಭಕ್ತನ ಈ ಅವಸ್ಥೆಗಳನ್ನು ಗಮನಿಸುತ್ತಿದ್ದ ಪರಮೇಶ್ವರನಿಗೆ, ಇನ್ನು ಹೆಚ್ಚು ಪರೀಕ್ಷಿಸುವುದು ಬೇಡವೆಂದುಕೊಂಡು, ಒಮ್ಮೆ ಇದ್ದಕ್ಕಿದ್ದಂತೆ ಅವನ ಎದುರುಗಡೆ ಪ್ರತ್ಯಕ್ಷನಾಗಿ, ಏನು ವರವನ್ನು ಬೇಕೋ ಕೇಳಿಕೋ ಎಂದನು.

ವ್ಯಾಘ್ರಪಾದನು ಪರಮೇಶ್ವರನ ವಿನಮ್ರ ಭಕ್ತನು. ತನ್ನ ಹೃದಯದಾತನ, ಆರಾಧ್ಯ ದೈವದ ದರ್ಶನವನ್ನಲ್ಲದೆ ಮತ್ತೇನು ತಾನೆ ಇಚ್ಛಿಸಿಯಾನು ?

ಪರಮೇಶ್ವರನಲ್ಲಿ ಬೇಡಲು ಯಾವ ಇಚ್ಛೆಯೂ ಆತನಲ್ಲಿ ಇರಲಿಲ್ಲ. ಪರಮೇಶ್ವರನ ದರ್ಶನವಂತೂ ಆಗಿಯೇ ಬಿಟ್ಟಿತು. ಮತ್ತೇನು ಬೇಕು ? ಏನೂ ಬೇಡವೆಂದ.

ಆದರೆ ಭಕ್ತರ ಆರಾಧ್ಯನಾದ ಈಶ್ವರನಿಗೆ ತೃಪ್ತಿಯಾಗಲಿಲ್ಲ. ಆದರಿಂದ ಏನಾದರೂ ವರವನ್ನು ಕೇಳುವಂತೆ ಒತ್ತಾಯಿಸಿದ.

ಬೇರೆ ದಾರಿ ಕಾಣದೆ ವ್ಯಾಘ್ರಪಾದನು ವರವನ್ನೇನೋ ಕೇಳಿದ. ಅದೂ ಎಂತಹ ವರ ಗೊತ್ತೇ ?

" ಪರಮಾತ್ಮ ! ನಿನ್ನ ಸೇವೆಯಲ್ಲಿ, ನಿನ್ನ ಪೂಜೆಯಲ್ಲಿ ನನಗೆ ತುಂಬಾ ಆನಂದ ದೊರೆಯುತ್ತದೆ. ಹಾಗಿದ್ದೂ ನೀನು ನನಗೆ ವರವನ್ನು ಕೊಡಲೇ ಬೇಕೆಂದಿದ್ದರೆ, ನನ್ನ ಕಾಲುಗಳನ್ನು ವ್ಯಾಘ್ರದ ಪಾದದ ಸಮಾನ ಕಠೋರ ವನ್ನಾಗಿ ಮಾಡು. ಇದರಿಂದ ಹೂವು ಇತ್ಯಾದಿ ನಿನ್ನ ಪೂಜಾ ಸಾಮಗ್ರಿಗಳನ್ನು ಅರಿಸುವಲ್ಲಿ ನನಗೆ ಇನ್ನೂ ಹೆಚ್ಚು ಅನುಕೂಲವಾಗುತ್ತದೆ."

ತನ್ನ ಭಕ್ತನ ಈ ರೀತಿಯ ನಿರ್ಮಲಾಂತಃಕರಣವನ್ನು ಕಂಡು, ಪರಮೇಶ್ವರನು ತುಂಬಾ ಆನಂದಗೊಂಡನು. ಅಂತೆಯೇ ತಥಾಸ್ತು ಎಂದು ಹೇಳಿ ಅಂತರ್ಧಾನನಾದನು.

ಈ ವರದ ಪ್ರಭಾವದಿಂದ ಆತನ ಪಾದಗಳು ಹುಲಿಯ ಪಾದದ ಸಮಾನ ವಾದವು. ಇದರಿಂದ ಆತನಿಗೆ ' ವ್ಯಾಘ್ರಪಾದ ' ಅಥವಾ ' ವ್ಯಾಘ್ರಪದ ' ಎನ್ನುವ ಹೆಸರು ಬಂದಿತು.

ಈ ಆಖ್ಯಾನದಿಂದ ಈತನ ಜ್ಞಾನ ಶಕ್ತಿ, ಮಂತ್ರ ಶಕ್ತಿ, ವಿದ್ವತ್ತು, ಧರ್ಮಪ್ರಿಯತೆ, ನ್ಯಾಯಪ್ರಿಯತೆ, ಹಾಗೂ ಭಕ್ತಿಪಾರಮ್ಯತೆ ಎಷ್ಟಿತ್ತು ಎಂಬುದು ತಿಳಿದುಬರುವುದು.

ಮಹರ್ಷಿ ವ್ಯಾಘ್ರಪಾದನ ಹೆಸರಿನಲ್ಲಿ ಒಂದು ಸ್ಮೃತಿ ಇರುವುದು ಕಂಡು ಬಂದಿದೆ. ಇದನ್ನು ' ವ್ಯಾಘ್ರಪಾದ ಸ್ಮೃತಿ ' ಎಂದು ಕರೆಯಲಾಗುತ್ತದೆ. ಇದನ್ನು ಎಲ್ಲ ವಿದ್ವಾಂಸರೂ, ಜನ ಸಾಮಾನ್ಯರೂ, ಆದರ ಭಾವದಿಂದ ನೋಡುವರು. ಈ ಸ್ಮೃತಿಯಲ್ಲಿ ಸುಮಾರು 400 ಶ್ಲೋಕಗಳಿವೆ. ಋಷಿ-ಮಹರ್ಷಿಗಳು ಧರ್ಮಜಿಜ್ಞಾಸಾ ಪೂರ್ವಕವಾದ ಪ್ರಶ್ನಾವಳಿಗೆ ಈತನಿಂದ ಪಡೆದ ಉತ್ತರವೇ ಈ ಸ್ಮೃತಿಯ ತಿರುಳು.

ಋಷಿಮೋಕ್ಶಾಂತ ಮಾಸೀನಂ ವ್ಯಾಘ್ರಂ ಮತಿಮತಾಂ ತರಮ್ |
ಪಪ್ರಚ್ಛುರ್ವರ್ಣನಿಯಃ ಸರ್ವೇ ಧರ್ಮಶಾಸ್ತ್ರ ಕಥಾನಕಮ್ || 1 ||

ಈ ಧರ್ಮಶಾಸ್ತ್ರದ ಮಹಿಮೆಯ ಬಗ್ಗೆ ಮಾತನಾಡುತ್ತ, ಸ್ವತಃ ಮಹರ್ಷಿ ವ್ಯಾಘ್ರಪಾದನೇ ಹೀಗೆಂದು ಹೇಳಿದ್ದಾನೆ –

"ನಾಲ್ಕೂ ವರ್ಣಗಳ ಧರ್ಮ ವ್ಯವಸ್ಥೆ ಹಾಗೂ ಸದಾಚಾರ ಸಂಹಿತೆಯ ರೂಪದಲ್ಲಿ ನಾನು ಈ ಧರ್ಮಶಾಸ್ತ್ರವನ್ನು ರಚಿಸಿದ್ದೇನೆ. ಈ ಧರ್ಮಶಾಸ್ತ್ರವನ್ನು ಪಠಿಸುವುದರಿಂದ ಹಾಗೂ ಪಾಲಿಸುವುದರಿಂದ ಎಲ್ಲ ರೀತಿಯ ಪಾಪಗಳೂ ಸಮೂಲವಾಗಿ ನಾಶವಾಗುತ್ತವೆ. ಅಂತೆಯೇ ಎಲ್ಲ ರೀತಿಯ ಸಂಶಯಗಳೂ, ಆಶಂಕೆಗಳೂ ದೂರವಾಗುತ್ತವೆ. ಇದರ ಅಧ್ಯಯನದಿಂದ ಹೃದಯವು ಪ್ರಕಾಶಮಾನಗೊಳ್ಳುತ್ತದೆ. ಪಾಪಿಗಳು, ಧರ್ಮದೂಷಕರೂ ಕೂಡ ಈ ಧರ್ಮಶಾಸ್ತ್ರ ಪಠಣವನ್ನು ಆಲಿಸುವುದರಿಂದ ಎಲ್ಲ ಪಾಪಗಳಿಂದ ಮುಕ್ತರಾಗುವರು.

ಸರ್ವಪಾಪಹರಂ ದಿವ್ಯಂ ಸರ್ವಸಂಶಯ ನಾಶನಮ್ |
ಚತುರ್ಣಾಮಪಿ ವರ್ಣಾನಾಂ ವ್ಯಾಘ್ರಃ ಶಾಸ್ತ್ರಮಕಲ್ಪಯತ್ || 6 ||
ಯೇ ಚ ಪಾಪಕೃತೋ ಲೋಕೇ ಯೇ ಚಾನ್ಯೇ ಧರ್ಮದೂಷಕಾಃ |
ಸರ್ವಪಾಪೈಃ ಪ್ರಮುಚ್ಯಂತೆ ಶೃತ್ವೇದಂ ಶಾಸ್ತ್ರಮುತ್ತಮಮ್ || 7 ||

ಮುಖ್ಯವಾಗಿ ಈ ಸ್ಮೃತಿಯಲ್ಲಿ ಯುಗಧರ್ಮ, ವರ್ಣಧರ್ಮ, ವೇದಾಧ್ಯಯನದ ಮಹಿಮೆ, ಪಿಂಡದಾನ, ಪಿತೃ ತರ್ಪಣದ ಮಹತ್ವ, ತೀರ್ಥ ಹಾಗೂ 'ಗಯಾ ಶ್ರಾದ್ಧ'ದ ಮಹಿಮೆ, ಪತ್ನಿಯ ಎಡಗಡೆ ಹಾಗೂ ಬಲಗಡೆ ಕುಳಿತುಕೊಳ್ಳುವುದರ ವ್ಯವಸ್ಥೆ, ಶ್ರಾದ್ಧ ಹಾಗೂ ತರ್ಪಣಗಳನ್ನು ಮಾಡದಿರುವುದರ ಫಲ ಇತ್ಯಾದಿಗಳೊಂದಿಗೆ ಶ್ರಾದ್ಧಕ್ಕೆ ಸಂಬಂಧಪಟ್ಟ ಹಾಗೆ ಅನೇಕ ವಿಷಯಗಳನ್ನು ಇದರಲ್ಲಿ ವಿವರಿಸಲಾಗಿದೆ. ಇದರಲ್ಲಿ ಅಭಿವಾದನಕ್ಕೆ ಯೋಗ್ಯ ಹಾಗೂ ಅಯೋಗ್ಯ ವ್ಯಕ್ತಿಗಳ ಪರಿಗಣನೆಯನ್ನೂ ನೀಡಲಾಗಿದೆ.

ಯಾವ ವಿಷಯವನ್ನು ಮಹರ್ಷಿ ವ್ಯಾಘ್ರಪಾದನು ಒತ್ತಿಹೇಳಲು ಇಚ್ಛಿಸುವನೋ, ಅಥವಾ ಪ್ರಮುಖವೆಂದು ತಿಳಿಸಬೇಕೆಂದಿರುವನೋ, ಅಂತಹ ಕಡೆ 'ವ್ಯಾಘ್ರೇಣ ಯಥಾ ಪ್ರೋಕ್ತಮಂ' 'ವ್ಯಾಘ್ರಸ್ಯ ವಚನಂ ಯಥಾ' ಎಂದು ಹೇಳಿ ತನ್ನ ಸ್ಪಷ್ಟ ಅಭಿಮತವನ್ನು ತಿಳಿಯಪಡಿಸಿದ್ದಾನೆ.

## ಸ್ವಧರ್ಮಪಾಲನೆ

ಶಾಸ್ತ್ರಗಳಲ್ಲಿ ನಾಲ್ಕೂ ವರ್ಣಗಳಿಗಾಗಿ ಯಾವ ಧರ್ಮಾಚರಣೆಯನ್ನು ಪ್ರತಿಪಾದನೆ ಮಾಡಲಾಗಿದೆಯೋ, ಅವನ್ನು ಆಯಾ ವರ್ಣದವರು ತಪ್ಪದೆ ಪಾಲಿಸಿ, ತಮ್ಮ ತಮ್ಮ ವರ್ಣಮರ್ಯಾದೆಯನ್ನು ಕಾಪಾಡಿ, ರಕ್ಷಿಸಬೇಕಾದುದು ಆವಶ್ಯಕ. ಇದು ಶಾಸ್ತ್ರ ಪ್ರತಿಪಾದಿತ ಧರ್ಮವಾಗಿದೆ. ಇದಕ್ಕೆ ವ್ಯತಿರೇಕವಾದ ಆಚರಣೆಯನ್ನು ಮಾಡಿದ್ದೇ ಆದರೆ ಅಂತಹವರು ಪಾಪಿಗಳಾಗುತ್ತಾರೆ. ಆದುದರಿಂದ ಸ್ವಧರ್ಮ ಪರಿಪಾಲನೆಯೆ ಶ್ರೇಯಸ್ಕರವಾದುದು.

ಯೇ ಯಸ್ಯ ವಿಹಿತೊ ಧರ್ಮಸ್ತೇನ ಧರ್ಮೇಣ ಕಾರಯೇತ್ |
ವಿಪರೀತಂ ಚರೇದ್ಯಸ್ತು ಕಿಲ್ಬಿಷೀ ಸ ನಿಗದ್ಯತೆ || 30 ||

## ದೇಶಾಚಾರಕ್ಕೆ ಮಾನ್ಯತೆ

ಪ್ರತಿಯೊಂದು ದೇಶದಲ್ಲೂ, ಪ್ರತಿಯೊಂದು ಕಾಲದಲ್ಲೂ ಅದರದೇ ಆದ ವಿಚಾರ – ಆಚಾರಗಳು ಇರುತ್ತವೆ. ಅವು ಆ ಗುಂಪುಗಳಲ್ಲಿ ರೂಢಿಯೂ ಆಗಿರುತ್ತವೆ. ಇವುಗಳನ್ನು ಮಾನ್ಯ ಮಾಡಬೇಕಾದುದು ಧರ್ಮ. ಆದುದರಿಂದ ಶಾಸ್ತ್ರ ಮರ್ಯಾದೆಯೊಂದಿಗೆ, ದೇಶ ಹಾಗೂ ಕುಲದ ಪರಂಪರೆಯ ಮರ್ಯಾದೆಯನ್ನು ರಕ್ಷಿಸಬೇಕಾದುದು ಆವಶ್ಯಕವಾಗಿದೆ. ಇವುಗಳನ್ನು 'ದೇಶಾಚಾರ' ಅಥವಾ 'ಕುಲಾಚಾರ' ಎಂದು ಕರೆಯಲಾಗಿದೆ.

ಅನ್ಯೇ ಚ ಬಹವೋ ಧರ್ಮಾ ದೇಶೇ ದೇಶೇ ವ್ಯವಸ್ಥಿತಾಃ |
ತೇ ತೇ ಧರ್ಮಾಃ ಸದಾ ಕಾರ್ಯಾ ವ್ಯಾಘ್ರಸ್ಯ ವಚನಂ ಯಥಾ ||33||

## ಶ್ರಾದ್ಧದಲ್ಲಿ ಅಶೌಚ

ಪ್ರತಿ ವರ್ಷ ನಡೆಸುವ ಶ್ರಾದ್ಧ ಕರ್ಮದ ಸಮಯದಲ್ಲಿ ಯಾವುದಾದರೊಂದು ಅಶೌಚವು ಸಂಭವಿಸಿದಲ್ಲಿ, ಅಂತಹ ಅಶೌಚ (ಮೈಲಿಗೆ) ಉಂಟಾದಾಗ ಶ್ರಾದ್ಧವನ್ನು ಮಾಡಬಾರದು. ಆ ಅಶೌಚ (ಮೈಲಿಗೆ) ಪೂರ್ತಿಯಾಗಿ ಮುಗಿದು, ಶುದ್ಧಿಯಾದ ನಂತರವೇ ಆ ವಾರ್ಷಿಕ ಶ್ರಾದ್ಧವನ್ನು ಆಚರಿಸಬೇಕು.

ಆಬ್ದಿಕೆ ಸಮನುಪ್ರಾಪ್ತೆ ಅಶೌಚಂ ಯದಿ ಜಾಯತೇ |
ಅಶೌಚೇ ತು ವ್ಯತಿಕ್ರಾಂತೇ ತತ್ರ ಶ್ರಾದ್ಧಂ ಪ್ರದೀಯತೇ || 59 ||

## ಸ್ತ್ರೀಯ ಸಪಿಂಡನದ ವಿಚಾರ

ಓರ್ವ ಸ್ತ್ರೀಗೆ ಪತಿಯು ಮರಣ ಹೊಂದುತ್ತಾನೆ ಎಂದಿಟ್ಟುಕೊಳ್ಳೋಣ. ಆ ಸ್ತ್ರೀಗೆ ಗಂಡುಮಕ್ಕಳೂ ಇರುವುದಿಲ್ಲವೆನ್ನಿ. ಅಂತಹ ಸ್ತ್ರೀಯು ಮರಣಿಸಿದ ಬಳಿಕ, ಪತಿಗೆ ಪಿಂಡಪ್ರದಾನ ಮಾಡುವಾಗ ಆ ಸ್ತ್ರೀಯ ಪಿಂಡವನ್ನು ಅದರೊಂದಿಗೆ ಮಿಶ್ರ ಮಾಡಬೇಕು. ಒಂದು ವೇಳೆ ಅಂತಹ ಸ್ತ್ರೀಯ ಪತಿಯು ಜೀವಿತನಾಗಿದ್ದಲ್ಲಿ, ಆಕೆಯ ಮಾವ, ಆತನ ಮಾವ ಹಾಗೂ ಆತನ ಮಾವಂದಿರೊಂದಿಗೆ ಉತ್ತರೋತ್ತರ ಸಂಪಿಂಡೀಕರಣವನ್ನು ಮಾಡಬೇಕು.

## ಪತಿಯ ಬಳಿ ಪತ್ನಿಯು ಕುಳಿತುಕೊಳ್ಳುವಿಕೆ

'ವ್ಯಾಘ್ರಪಾದ ಸ್ಮೃತಿ'ಯಲ್ಲಿ ಮುಖ್ಯವಾಗಿ ಹೇಳಿರುವುದೇನೆಂದರೆ –

ಕನ್ಯಾದಾನೇ ವಿವಾಹೇ ಚ ಪ್ರತಿಷ್ಠಾ ಯಜ್ಞ ಕರ್ಮಣಿ |
ಸರ್ವೇಷು ಧರ್ಮ ಕಾರ್ಯೇಷು ಪತ್ನೀ ದಕ್ಷಿಣತಃ ಸ್ಮೃತಾಃ || 84 ||
ದಕ್ಷಿಣೆ ವಸತಿ ಪತ್ನೀ ಹವನೆ ದೇವತಾರ್ಚನೆ |
ಶುಶ್ರೂಷಾರತಿ ಕಾಲೇ ಚ ವಾಮಭಾಗೇ ಪ್ರಶಸ್ಯತೇ || 85 ||
ಜಾತಕರ್ಮಾದಿ ಕರ್ಮಾಣಾಂ ಕರ್ಮಕರ್ತ್ರುಶ್ಚ ದಕ್ಷಿಣೆ |
ತಿಷ್ಠೇದ್ವರಸ್ಯ ವಾಮೇ ಚ ವಿಪ್ರಾಶೀರ್ವಚನಂ ತಥಾ || 86 ||
ತ್ರಿಷು ಸ್ಥಾನೇಷು ಸಾ ಪತ್ನೀ ವಾಮಭಾಗೇ ಪ್ರಶಸ್ಯತೇ |
ಪಾದ ಶೌಚೆ ಪಿತೃಣಾಂ ಚ ರಥಾರೋಹೇ ಋತೌ ತಥಾ || 87 ||
ಶ್ರಾದ್ಧೇ ಪತ್ನೀಚ ವಾಮಾಂಗೇ ಪಾದ ಪ್ರಕ್ಷಾಳನೇ ತಥಾ |
ನಾಂದೀ ಶ್ರಾದ್ಧೇ ಚ ಸೋಮೇ ಚ ಮಧುಪರ್ಕೇ ಚ ದಕ್ಷಿಣೆ || 88 ||

ಕನ್ಯಾದಾನ, ಮದುವೆ, ದೇವಸ್ಥಾನ ಹಾಗೂ ಮನೆ ಇತ್ಯಾದಿಗಳ ಪ್ರತಿಷ್ಠೆ (ಪ್ರವೇಶ) ಯಜ್ಞ-ಯಾಗಾದಿಗಳು, ಹವನ, ದೇವರ ಪೂಜೆ, ಜಾತಕರ್ಮ ಇತ್ಯಾದಿ ಸಂಸ್ಕಾರಗಳು, ನಾಂದೀ ಶ್ರಾದ್ಧ, ಸೋಮಯಜ್ಞ ಹಾಗೂ ಮಧುಪರ್ಕ-ಇತ್ಯಾದಿ ಧಾರ್ಮಿಕ ಶುಭ ಕಾರ್ಯಗಳನ್ನು ನಡೆಸುವಾಗ ಧರ್ಮಪತ್ನಿಯು ತನ್ನ ಪತಿಯ ಬಲಗಡೆ ಕುಳಿತುಕೊಳ್ಳಬೇಕು.

ಅಂತೆಯೇ ಸೇವಾಕಾರ್ಯದಲ್ಲಿ, ಮಲಗುವ ಸಮಯದಲ್ಲಿ, ಬ್ರಾಹ್ಮಣರ ಮುಖಾಂತರ ಆಶೀರ್ವಾದವನ್ನು ಸ್ವೀಕರಿಸುವ ಸಮಯದಲ್ಲಿ, ಶ್ರಾದ್ಧದಲ್ಲಿ

ಬ್ರಾಹ್ಮಣರ ಪಾದ ಪ್ರಕ್ಷಾಳನ ಮಾಡುವಾಗ, ರಥ ಇತ್ಯಾದಿಗಳ ಯಾನ (ರೈಲು, ಬಸ್ಸು, ವಿಮಾನ ಇತ್ಯಾದಿಗಳ ಪ್ರವಾಸ) ಕಾಲದಲ್ಲಿ ಸ್ತ್ರೀಯು ತನ್ನ ಪತಿಯ ಎಡಗಡೆಯಲ್ಲಿ ಕುಳಿತುಕೊಳ್ಳಬೇಕು.

## ಕರ್ಮಗಳಲ್ಲಿ ಆಚಮನ ಯಾವಾಗ ??

ಶ್ರಾದ್ಧಾರಂಭೇವಸಾನೇ ಚ ಪಾದ ಶೌಚೇ ತಥಾರ್ಚನೆ ।
ಪಿತರೆ ಪಿಂಡದಾನೇ ಚ ಷಟ್ಸು ಆಚಮನಂ ಸ್ಮೃತಮ್ ||108||

ಶ್ರಾದ್ಧ ಕರ್ಮದ ಪ್ರಾರಂಭದಲ್ಲಿ, ಶ್ರಾದ್ಧವನ್ನು ಮುಗಿಸುವ ಸಂದರ್ಭದಲ್ಲಿ, ಬ್ರಾಹ್ಮಣರ ಪಾದ ಪ್ರಕ್ಷಾಳನ ಮಾಡುವ ಸಮಯದಲ್ಲಿ, ಬ್ರಾಹ್ಮಣರನ್ನು ಪೂಜಿಸುವ ಸಮಯದಲ್ಲಿ, ಶ್ರಾದ್ಧದ ವಿಕಿರ – ದಾನದ ಸಮಯದಲ್ಲಿ ಹಾಗೂ ಪಿಂಡಪ್ರದಾನ ಮಾಡುವಾಗ ಈ ಆರು ಕರ್ಮಗಳನ್ನು ಮಾಡುವ ಸಮಯದಲ್ಲಿ ಆಚಮನವನ್ನು ತಪ್ಪದೆ ಮಾಡಬೇಕು.

## ಜಲಧಾರೆಯಲ್ಲಿ ಮಾಡಬಾರದು

ನೀರು ಸತತವಾಗಿ ಧುಮುಕುವ (ಜಲಪಾತಗಳ ಬಳಿ) ಸ್ಥಳಗಳಲ್ಲಿ ಮಾರ್ಜನ, ತರ್ಪಣ ಹಾಗೂ ಶ್ರಾದ್ಧ ಕರ್ಮಗಳನ್ನು ಮಾಡಬಾರದು. ಗೊತ್ತಿಲ್ಲದೆ (ಅಜ್ಞಾನ ವಶ) ಹಾಗೆ ಮಾಡಿದ್ದೇ ಆದರೆ ಅಂತಹವನಿಗೆ ತಪ್ಪದೆ ನರಕಪ್ರಾಪ್ತಿಯಾಗುತ್ತದೆ.

ಮಾರ್ಜನಂ ತರ್ಪಣಂ ಶ್ರಾದ್ಧಂ ನ ಕುರ್ಯಾದ್ವಾರಿಧಾರಯಾ ।
ಮೋಹಾದ್ವಾ ಕುರುತೇ ಯಸ್ತು ಸ ವಿಪ್ರೋ ನರಕಂ ವ್ರಜೇತ್||152||

## ಬ್ರಾಹ್ಮಣಾರ್ಥಕ್ಕೆ ಯಾರು ಶ್ರೇಷ್ಠರು ?

ತಿಥಿಗಳನ್ನು ಮಾಡುವಾಗ ಬ್ರಾಹ್ಮಣಾರ್ಥ ಸ್ವಾಮಿಗಳನ್ನು ನಿಯೋಜಿಸಿಕೊಳ್ಳುವುದು ರೂಢಿ ಇದೆ. ಶ್ರಾದ್ಧದ ಬ್ರಾಹ್ಮಣಾರ್ಥ ಸ್ವಾಮಿಗಳು ಯಾರಿದ್ದರೆ ಉತ್ತಮ ?

ಭಾಗಿನೇಯೋ ದಶಾವಿಪ್ರೇಷ ದೌಹಿತ್ರಃ ಶತಮುಚ್ಯತೆ ।
ಭಾಗಿನೀಭರ್ತಾ ಸಹಸ್ರೇಷು ಅನಂತಂ ದುಹಿತಾ ಪತಿಃ ||160||

ಇಂತಹ ಬ್ರಾಹ್ಮಣಾರ್ಥಕ್ಕೆ ಹತ್ತು ಬ್ರಾಹ್ಮಣರಿಗಿಂತ ಓರ್ವ ಸೋದರಿಯ ಮಗ ಉತ್ತಮನು. ನೂರು ಬ್ರಾಹ್ಮಣರಿಗಿಂತ ದೌಹಿತ್ರನು (ಮಗಳ ಮಗ–

ಮೊಮ್ಮಗ) ಉತ್ತಮನು. ಸಾವಿರ ಬ್ರಾಹ್ಮಣರಿಗಿಂತ ಸಹೋದರಿಯ ಪತಿಯು ಉತ್ತಮನು. ಎಲ್ಲರಿಗಿಂತಲೂ ಅಳಿಯನು ಅನೇಕ ಪಟ್ಟು ಶ್ರೇಷ್ಠನು.

ವ್ಯಾಘ್ರಪಾದನು ಮುಂದುವರೆದು, ಈ ರೀತಿಯ ಬ್ರಾಹ್ಮಣಾರ್ಥ ಸ್ವಾಮಿಗಾಗಿ ಆಹ್ವಾನ ಬಂದಾಗ, ಮೇಲೆ ತಿಳಿಸಿದ ಬಂಧುಗಳು ತಪ್ಪದೆ ಆ ಆಹ್ವಾನವನ್ನು ಸ್ವೀಕರಿಸಬೇಕು. ತಪ್ಪಿದಲ್ಲಿ ಅಂತಹವರಿಗೆ ರೌರವ ನರಕವು ಪ್ರಾಪ್ತವಾಗುತ್ತದೆ – ಎಂದೂ ತಿಳಿಸಿದ್ದಾನೆ.

## ಸೂಕ್ತ ಸಮಯದಲ್ಲಿ ಕರ್ಮ ಮಾಡುವುದರ ಫಲ

ಪ್ರತಿಯೊಂದು ಕಾರ್ಯವನ್ನೂ ಯಾವ ಸಮಯದಲ್ಲಿ ಮಾಡಬೇಕೆಂದು ನಿಯಮಿತ ವಾಗಿರುತ್ತದೆಯೋ ಅದೇ ಸಮಯದಲ್ಲಿ ಮಾಡಿದರೆ, ಅದರಿಂದ ಪೂರ್ಣ ಸಿದ್ಧಿಯಾಗುತ್ತದೆ.

ಆ ಸಮಯದಲ್ಲಿ ಮಾಡದ ಯಾವುದೇ ಕ್ರಿಯೆಯು ನಿಷ್ಪ್ರಯೋಜನವಾಗುತ್ತದೆ. ಅದು ಸಫಲವಾಗುವುದಿಲ್ಲ.

ಆದುದರಿಂದ ಗೊತ್ತಾದ ಸಮಯದಲ್ಲಿ ಆಯಾಯಾ ಕೆಲಸಗಳನ್ನು ಮಾಡಬೇಕು.

ಸೂರ್ಯ, ಚಂದ್ರ ಇತ್ಯಾದಿ ಎಲ್ಲ ದೇವತೆಗಳೂ ಕಾಲದ ಮರ್ಯಾದೆಯನ್ನು ಕಾಪಾಡುತ್ತವೆ. ಸೂರ್ಯನೇನಾದರೂ ಉದಯಿಸಬೇಕಾದ ಸಮಯದಲ್ಲಿ ಉದಯಿಸಲಿಲ್ಲವೆಂದರೆ ಪ್ರಪಂಚದ ಗತಿಯೇನಾದೀತು ?

ಆದುದರಿಂದ ಕಾಲದ ಮರ್ಯಾದೆಯನ್ನು ಕಾಪಾಡುವುದು ದೇವತೆಗಳ, ದೇವತ್ವದ ಕುರುಹು.

ಸಮಯದಲ್ಲಿ ನೀಡುವ ಔಷಧದ ಒಂದು ಹನಿಯೂ ಆ ರೋಗಿಯನ್ನು ಕಾಪಾಡುವುದಿಲ್ಲವೇ ? ಹಾಗೆ ಇದೂನೂ.

ಸಮಯವನ್ನು ಗಮನದಲ್ಲಿಟ್ಟುಕೊಳ್ಳದೆ ಯಾರು ಕಾರ್ಯವನ್ನು ಮಾಡುವರೋ, ಗೊತ್ತಾದ ಸಮಯದಲ್ಲಿ ಯಾರು ಕಾರ್ಯವನ್ನು ಮಾಡುವುದಿಲ್ಲವೋ, ಸಮಯ ಕಳೆದುಹೋದ ಮೇಲೆ ಕೆಲಸವನ್ನು ಮಾಡಲು ಯಾರು ಯತ್ನಿಸುವರೋ, ಅಂತಹವರ ಆ ಪ್ರಯತ್ನವು ನಿಷ್ಫಲವೂ, ನಿಷ್ಪ್ರಯೋಜನವೂ ಆಗುತ್ತದೆ – ಎಂದು ತಿಳಿಯಬೇಕು.

ಕಾಲಾತೀತ ತು ಯತ್ಕರ್ಪು
ಅಕೃತಂ ತಂ ವಿನಿರ್ದಿಶೇತ್ (ವ್ಯಾಘ್ರಪಾ–165)

ಶ್ರಾದ್ಧದಲ್ಲಿ ಸ್ವಯಂಪಾಕ ಮಾಡುವಿಕೆ

ಶ್ರಾದ್ಧದಲ್ಲಿ ಪಿತೃಗಳ ನಿಮಿತ್ತ ಯಾರು ಊಟವನ್ನು ಸಿದ್ಧ ಮಾಡುವರೋ, ಅದನ್ನು ಶ್ರಾದ್ಧಕರ್ತನು ಸಿದ್ಧಗೊಳಿಸಬೇಕು. ಇಲ್ಲವೆ ಶ್ರಾದ್ಧಕರ್ತನ ಪತ್ನಿ ಸಿದ್ಧಗೊಳಿಸಬೇಕು. ಇಲ್ಲವೆ ಮಗ ಸಿದ್ಧಗೊಳಿಸಬೇಕು. ಈ ಮೂರು ಜನ ಸಿದ್ಧಗೊಳಿಸುವ ಅಡುಗೆಯೇ ಶ್ರೇಷ್ಠವಾದುದು. ಇವುಗಳಲ್ಲಿ ಶ್ರಾದ್ಧಕರ್ತನು ಮಾಡುವ ಅಡುಗೆಯನ್ನು 'ಆತ್ಮಪಾಕ' ಎಂದು ಕರೆಯಲಾಗುತ್ತದೆ. ಇದು ಪರಮ ಪವಿತ್ರವಾದುದೆಂದು ಹೇಳಲಾಗುತ್ತದೆ. (ವ್ಯಾಘ್ರಪಾ–222–23)

ದೋಷರಹಿತ ವಸ್ತುಗಳು

ಅಗ್ನಿರಾವಿಕ ವಸ್ತ್ರಂ ಹಿ ವಿಪ್ರಾಸ್ತಿಲಾಃ ಕುಶಾ ಯವಾಃ ।
ಏತೇಷಾಂ ನ ಕೃತೋ ದೋಷೋ ವ್ಯಾಘ್ರಸ್ಯ ವಚನಂ ಯಥಾ॥305॥

ಅಗ್ನಿ, ಕುರಿಯ ಉಣ್ಣೆಯಿಂದ ತಯಾರಿಸಿದ ಕಂಬಳಿ ಅಥವಾ ಬಟ್ಟೆಗಳು, ಬ್ರಾಹ್ಮಣ, ಎಳ್ಳು, ಕುಶ ಹಾಗೂ ಜವೆ ಗೋಧಿ – ಇವುಗಳಲ್ಲಿ ಸ್ಪರ್ಶಾಸ್ಪರ್ಶ ಇತ್ಯಾದಿ ಯಾವುದೇ ದೋಷವೂ ಬರುವುದಿಲ್ಲ – ಹೀಗೆಂದು ವ್ಯಾಘ್ರಪಾದನು ಹೇಳುತ್ತಾನೆ.

## 4. 'ಗೌತಮ ಸ್ಮೃತಿ'

ಪ್ರಸ್ತುತ ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಗೌತಮರೂ ಒಬ್ಬರು. ಇದಕ್ಕೆ ಶ್ರೀಮದ್ಭಾಗವತ ಹಾಗೂ ವಿಷ್ಣು ಪುರಾಣಗಳಲ್ಲಿನ ಈ ಶ್ಲೋಕ ಆಧಾರ –

ಕಶ್ಯಪೋಽತ್ರಿರ್ವಸಿಷ್ಠಶ್ಚ ವಿಶ್ವಾಮಿತ್ರೋಽಥ ಗೌತಮಃ ।
ಜಮದಗ್ನಿರ್ಭರದ್ವಾಜ ಇತಿ ಸಪ್ತರ್ಷಯಃ ಸ್ಮೃತಾಃ ॥

ಇವರು ಬ್ರಹ್ಮನ ಮಾನಸ ಪುತ್ರರು. ಗೌತಮರ ಪತ್ನಿ ದೇವೀ ಅಹಲ್ಯಾ. ಈಕೆಯೂ ಕೂಡಾ ಬ್ರಹ್ಮನಿಂದ ವಿಶಿಷ್ಟ ರೀತಿಯಲ್ಲಿ ಸೃಷ್ಟಿಸಲ್ಪಟ್ಟವಳೇನೇ !

ಗೌತಮ ಮಹರ್ಷಿಯ ಜೀವನವು ಅಲೌಕಿಕವಾದುದು. ಇವರ ತರಹ ತ್ಯಾಗ, ವೈರಾಗ್ಯ, ತಪಸ್ಸು ಹಾಗೂ ಧರ್ಮಾಚರಣನಿಷ್ಠರು ಇನ್ನೊಬ್ಬರಿಲ್ಲ. ಅನೇಕ ಸ್ಥಳಗಳಲ್ಲಿ ಇವರ ಆಶ್ರಮಗಳ ಉಲ್ಲೇಖ ದೊರೆಯುತ್ತದೆ.

ಗೌತಮರು ಪಾರಿಯಾತ್ರ ಪರ್ವತದ ಮೇಲೆ ಅರವತ್ತು ಸಾವಿರ ವರ್ಷಗಳವರೆಗೆ ತಪಸ್ಸು ಮಾಡಿದರು. ಇವರ ತಪಸ್ಸಿನಿಂದ ಪ್ರಸನ್ನನಾದ ಯಮ ಧರ್ಮರಾಜನು ಇವರ ಆಶ್ರಮದ ಬಳಿಗೆ ಬಂದಿದ್ದನು.

ಗೌತಮರು ನ್ಯಾಯದರ್ಶನ ಇತ್ಯಾದಿ ಅನೇಕ ವಿಷಯಗಳ ಬಗ್ಗೆ ಆಚಾರ್ಯರೆಂದು ಹೇಳಲಾಗುತ್ತದೆ. ಪ್ರಾಚೀನತಮ ಧರ್ಮಾಚರಣೆಯಲ್ಲಿ ಗೌತಮರ ಹೆಸರು ತುಂಬಾ ಆದರಣೀಯವಾಗಿ ಪರಿಗಣಿಸಲಾಗಿದೆ. ಆಚಾರ್ಯ ಯಾಜ್ಞವಲ್ಕ್ಯರು ಧರ್ಮಶಾಸ್ತ್ರ ಪ್ರಣೀತರಲ್ಲಿ ಗೌತಮರು ಪ್ರಮುಖರು ಹಾಗೂ ಶ್ರೇಷ್ಠರು ಎಂದು ತಿಳಿಸಿದ್ದಾರೆ. (ಯಾಜ್ಞ 1/5).

ಮಹರ್ಷಿ ಗೌತಮರ ಹೆಸರಿನಲ್ಲಿ ಒಂದು ಧರ್ಮಶಾಸ್ತ್ರ (ಸೂತ್ರ) ಹಾಗೂ ಒಂದು ಸ್ಮೃತಿ ದೊರೆತಿದ್ದು, ಭಾರತೀಯ ಜನಜೀವನವನ್ನು ಅವು ನಿರ್ದೇಶಿಸುತ್ತವೆ.

## 1. ಗೌತಮ ಧರ್ಮಸೂತ್ರ

ಧರ್ಮಶಾಸ್ತ್ರೀಯ ವ್ಯವಸ್ಥೆಯಲ್ಲಿ ಗೌತಮ ಧರ್ಮಸೂತ್ರವು ಸರ್ವಾಧಿಕ ಪ್ರಾಚೀನ ಹಾಗೂ ಅತ್ಯಧಿಕ ಪ್ರಾಮಾಣಿಕ ಗ್ರಂಥವೆಂದು ಪರಿಗಣಿಸಲಾಗಿದೆ. ಈ ಧರ್ಮಸೂತ್ರವು ಹೆಚ್ಚಾಗಿ ಸಾಮವೇದದೊಂದಿಗೆ ಸಂಬಂಧವನ್ನು ಹೊಂದಿದೆ. ಇದನ್ನು ಸೂತ್ರಗಳಲ್ಲಿ ರೂಪಿಸಲಾಗಿದೆ. ಸಂಪೂರ್ಣವಾಗಿ ಇದು ಗದ್ಯ ರೂಪದಲ್ಲಿದೆ. ಉದಾಹರಿಸುವುದಕ್ಕೆ ಕೂಡ ಇದರಲ್ಲಿ ಒಂದು ಶ್ಲೋಕ ದೊರೆಯುವುದಿಲ್ಲ. ಆಚಾರ್ಯ ಹರದತ್ತ, ಆಚಾರ್ಯ ಮಸ್ಕರೀ ಹಾಗೂ ಅಸಹಾಯ – ಇವರುಗಳು ಈ ಗ್ರಂಥಕ್ಕೆ ಭಾಷ್ಯಗಳನ್ನು ಬರೆದಿರುವರು.

ಈ ಧರ್ಮಸೂತ್ರ ಗ್ರಂಥದಲ್ಲಿ ಚಿಕ್ಕ ಚಿಕ್ಕ 29 ಅಧ್ಯಾಯಗಳಿವೆ. 20ನೇ ಅಧ್ಯಾಯಕ್ಕೆ ಭಾಷ್ಯವನ್ನು ಬರೆಯಲಾಗಿಲ್ಲ.

ಈ ಅಧ್ಯಾಯಗಳಲ್ಲಿ ವರ್ಣಿಸಿರುವ ವಿಷಯಗಳು ಈ ರೀತಿ ಇವೆ –

ಅಧ್ಯಾಯ 1– ಆಚಾರ, ದ್ವಿಜಾತಿಯ ಉಪನಯನದ ಕಾಲ.

2–3. ಬ್ರಹ್ಮಚರ್ಯ ಅನುಸರಿಸುವವನ ನಿತ್ಯನೈಮಿತ್ತಿಕ ಕರ್ಮ ಹಾಗೂ ನಿಯಮಗಳು.

4. ಎಂಟು ರೀತಿಯ ವಿವಾಹಗಳ ವರ್ಣನೆ.

5–6. ಗೃಹಸ್ಥ ಧರ್ಮದ ವರ್ಣನೆ, ಗೃಹಸ್ಥನ ಕರ್ತವ್ಯ, ಅಭಿವಾದನದ ವಿಧಿ ಹಾಗೂ ಸಮ್ಮಾನದ ವಿವರ.

7. ಆಪದ್ಧರ್ಮ.

8. ಸಂಸ್ಕಾರಗಳ ಮಹಿಮೆ ಹಾಗೂ 40 ಸಂಸ್ಕಾರಗಳು ಹಾಗೂ ದಯಾ, ಕ್ಷಾಂತಿ, ಅಸೂಯೆ ಇಲ್ಲದಿರುವುದು, ಶೌಚ, ಆಯಾಸವಿಲ್ಲದಿರುವುದು, ಮಂಗಳ, ಅಕಾರ್ಪಣ್ಯ ಹಾಗೂ ಅಸ್ಪೃಹಾ – ಈ ಎಂಟು ಆತ್ಮಗುಣಗಳ ಹೆಸರುಗಳ ವರ್ಣನೆ.

9. ಸ್ನಾತಕ (ಶಿಕ್ಷಣ ಪಡೆಯುವವನು) ಹಾಗೂ ಗೃಹಸ್ಥನು ಅನುಸರಿಸಬೇಕಾದ ನಿಯಮಗಳು.

10. ನಾಲ್ಕೂ ವರ್ಣಗಳ ಕರ್ತವ್ಯಗಳು ಹಾಗೂ ಅವರ ಕರ್ಮಗಳ ವಿವರಣೆ.

11. ರಾಜನ ಧರ್ಮ ಹಾಗೂ ಅವನ ಪುರೋಹಿತನಿಗಿರ ಬೇಕಾದ ಗುಣಗಳು.

12. ದಂಡ ವಿಧಾನ.

13. ಸಾಕ್ಷಿಗಳ ವರ್ಣನೆ.

14. ಅಶೌಚ.

15. ಶ್ರಾದ್ಧ – ವಿಧಾನ.

16. ಅನಧ್ಯಾಯ.

17. ಭಕ್ಷ್ಯಾಭಕ್ಷ್ಯ ವಿವೇಚನೆ.

18. ಋತುಕಾಲ ಹಾಗೂ ಪತಿ–ಪತ್ನಿಯರ ಪರಸ್ಪರರ ಧರ್ಮ.

19. ನಿಷಿದ್ಧ ವಸ್ತುಗಳ ವ್ಯವಹಾರ ಮಾಡುವುದರ ಪ್ರಾಯಶ್ಚಿತ್ತ.

20–21. ಕರ್ಮವಿಪಾಕ ಹಾಗೂ ಶಾಂತಿಕರ್ಮ.

23–26. ಪ್ರಾಯಶ್ಚಿತ್ತ ವಿಧಾನ.

27–28. ಕೃಚ್ಛ್ರಚಾಂದ್ರಾಯಣಾದಿ ವ್ರತ ಹಾಗೂ

29. ಸಂಪತ್ತಿನ ವಿಭಾಜನ, ದ್ವಾದಶ ರೀತಿಯ ಪುತ್ರರು, ಸ್ತ್ರೀಧನ ಹಾಗೂ ಮರಣಶಾಸನ ಇತ್ಯಾದಿಗಳ ವರ್ಣನೆ.

ಈ ರೀತಿಯಲ್ಲಿ ಗೌತಮರು ಜೀವನದ ಎಲ್ಲ ಕ್ಷೇತ್ರಗಳಲ್ಲಿ ಧರ್ಮದ ಮರ್ಯಾದೆಯನ್ನು ಕಾಪಾಡುವುದೇ ಮುಖ್ಯ ಹಾಗೂ ಅದರ ಅನುಸಾರ ತಮ್ಮ ತಮ್ಮ ಕರ್ತವ್ಯಗಳ ಪರಾಮರ್ಶೆಯನ್ನು ನೀಡುವುದರ ಮುಖಾಂತರ ವಿವರಿಸಿದ್ದಾರೆ ಎನ್ನುವುದು ಮೇಲೆ ತಿಳಿಸಿದ ಸಂಕ್ಷಿಪ್ತ ಸೂಚಿಯಿಂದ ತಿಳಿದುಬರುತ್ತದೆ.

ಅವರು ಧರ್ಮಸೂತ್ರಗಳ ಪ್ರಾರಂಭದಲ್ಲಿಯೇ 'ವೇದೋ ಧರ್ಮ ಮೂಲಮ್' ಎಂದು ಧರ್ಮದ ಮೂಲ ವೇದಗಳು ಎಂಬುದನ್ನು ತಿಳಿಸಿದ್ದಾರೆ. ಗೃಹಸ್ಥ ಧರ್ಮವನ್ನು ವಿವರಿಸುತ್ತಾ ಗೃಹಸ್ಥನು ಪ್ರತಿ ನಿತ್ಯವೂ ದೇವ, ಪಿತೃ, ಮನುಷ್ಯ ಇತ್ಯಾದಿ ಪಂಚಮಹಾಯಜ್ಞಗಳನ್ನು ನೆರವೇರಿಸಬೇಕು ಎಂದು ಅವರು ತಿಳಿಸಿದ್ದಾರೆ. ಅತಿಥಿ, ಬಾಲಕ, 'ರೋಗಿ, ಗರ್ಭಿಣೀ ಸ್ತ್ರಿ, ಸೌಭಾಗ್ಯವತೀ, ಸ್ತ್ರೀ, ವೃದ್ಧ ಹಾಗೂ ಚಿಕ್ಕವರು ಊಟ ಮಾಡಿದ ನಂತರವೇ ವೈಶ್ವೇ ದೇವ (ಮನೆಯ ಯಜಮಾನ) ನು ಊಟ ಮಾಡಬೇಕೆಂದು –

ಭೋಜಯೇತ್ ಪೂರ್ವಮತಿಥಿ ಕುಮಾರ ವ್ಯಾಧಿತ |
ಗರ್ಭಿಣೀ ಸುವಾಸಿನೀ ಸ್ಥವಿರಾನ್ ಜಘನ್ಯಾಂಶ್ಚ || (ಅ. 5)

ಮಹರ್ಷಿ ಗೌತಮರು ಇನ್ನೂ ಮುಂದೆ ಹೋಗಿ,

ಯೋಗಕ್ಷೇಮಾರ್ಥ ಮೀಶ್ವರಮಧಿಗಚ್ಛೇತ್ |
ನಾನ್ಯಮನ್ಯತ್ರ ದೇವಗುರು ಧಾರ್ಮಿಕೇಭ್ಯಃ || (ಅ. 9)

ಮಾನವನು ತನ್ನ ಯೋಗಕ್ಷೇಮಕ್ಕಾಗಿ ಈಶ್ವರ, ದೇವತೆ, ಪಿತೃ, ಗುರು ಹಾಗೂ ಧರ್ಮಾತ್ಮರ ಆಶ್ರಯವನ್ನು ಪಡೆಯಬೇಕು ಎಂದು ಉಪದೇಶಿಸಿದ್ದಾರೆ.

.... ಯಚ್ಛಾತ್ಮವಂತೋ ವೃದ್ಧಾಃ ಸಮ್ಯಗ್ವಿನೀತಾ ದಂಭಲೋಭ ಮೋಹವಿಯುಕ್ತಾ ವೇದವಿದ ಆಚಕ್ಷತೇ ತತ್ ಸಮಾಚರೇತ್. (ಅ. 9)

ಎಂದು ಗೌತಮರು ತಿಳಿಸುತ್ತಾ ಆತ್ಮಜ್ಞಾನೀ ವೃದ್ಧರು, ಒಳ್ಳೆಯ ವಿನಯ ಸಂಪನ್ನರು, ಡಂಭ, ಲೋಭ, ಮೋಹ ರಹಿತರು ಹಾಗೂ ವೇದಗಳನ್ನು ಬಲ್ಲ ವಿದ್ವಾಂಸರು ಯಾವ ಕರ್ಮಗಳನ್ನು ಮಾಡಲು ತಿಳಿಸುವರೊ, ಅದೇ ಕರ್ಮಗಳನ್ನು ಮಾಡಬೇಕು, ಬೇರೆ ಯಾವುಗಳಲ್ಲ ಎಂದು ತಿಳಿಸುತ್ತಾರೆ.

ಅವರು ಮುಂದುವರೆದು –

'ಧಾರ್ಮಿಕಾಧಿಷ್ಠಿತಂ ನಿಕೇತನಮಾವಸಿತುಂ ಯತೇತ್ | '

ಧರ್ಮಾತ್ಮ ಮಹಾಪುರುಷರ ಹಾಗೂ ಭಗವದ್ಭಕ್ತರ ಅಧಿಷ್ಠಿತ, ಸೇವಿತ ಸ್ಥಳಗಳನ್ನು ವಾಸ ಮಾಡಲು ಯೋಗ್ಯವಾದುದೆಂದು ಉತ್ತಮ ಕೆಲಸ ಮಾಡುವವರು ಅರಿಸಿಕೊಳ್ಳಲಿ ಎಂದು ತಿಳಿಸುತ್ತಾರೆ.

ಪ್ರಶಸ್ತ ಮಂಗಲ್ಯ ದೇವತಾಯತನ
ಚತುಷ್ಪಥಾದೀನ್ ಪ್ರದಕ್ಷಿಣ ಮಾವರ್ತೇತ || (ಅ 9)

ಎಂದರೆ ಪ್ರಶಸ್ತ, ಮಂಗಳ ಜನಕ ವಸ್ತುಗಳು ಹಾಗೂ ಗೋವು ಇತ್ಯಾದಿ ಪ್ರಾಣಿಗಳು, ದೇವ ಮಂದಿರ ಹಾಗೂ ಚತುಷ್ಪಥ ಇತ್ಯಾದಿಗಳು ಬಲಗಡೆ ಬರುವಂತೆ ನಾವು ನಡೆದಾಡಬೇಕು ಹಾಗೂ ಅವುಗಳ ಪ್ರದಕ್ಷಿಣೆ ಮಾಡಬೇಕು. ಅಂದರೆ ಇಂತಹವುಗಳ ಎಡಗಡೆ ನಡೆದಾಡಬೇಕು ಎಂದರ್ಥ.

ಅವರು ಮುಂದುವರೆದು –

'ಸತ್ಯ ಧರ್ಮಾ, ಆರ್ಯವೃತ್ತಃ....ಅಹಿಂಸ್ರೋ ಮೃದುದ್ಧೃಢಕಾರೀ
ದಮದಾನಶೀಲ |' (ಅ 9)

ಎಂದು ತಿಳಿಸುತ್ತಾ ವ್ಯಕ್ತಿಯು ಸತ್ಯ-ಧರ್ಮಗಳ ಆಚರಣೆ ಮಾಡಬೇಕು, ಶ್ರೇಷ್ಠ ಜನರು ಯಾವ ವಿಧಿ, ಧರ್ಮಗಳನ್ನು ಪರಿಪಾಲಿಸುವರೋ ಅಂತಹವನ್ನೇ ಪಾಲಿಸಬೇಕು, ಅಹಿಂಸಾ ವ್ರತವನ್ನು ಆಚರಿಸಬೇಕು, ಇತರರೊಂದಿಗೆ ಮೃದುವಾಗಿ ನಡೆದುಕೊಳ್ಳಬೇಕು, ದೃಢತೆಯಿಂದ ಪರಿಪೂರ್ಣವಾಗಿ ಸತ್ಸಂಕಲ್ಪಗಳನ್ನು ಅನುಸರಿಸಬೇಕು, ಇಂದ್ರಿಯಗಳ ಮೇಲೆ ನಿಗ್ರಹವನ್ನು ಹೊಂದಿರಬೇಕು, ದಾನಧರ್ಮಗಳನ್ನು ಪಾಲಿಸಬೇಕು ಹಾಗೂ ಶೀಲ ಮತ್ತು ವಿನಯಗಳಿಂದ ಕೂಡಿರಬೇಕು ಎನ್ನುತ್ತಾರೆ.

ಈ ರೀತಿಯ ಧರ್ಮಾಚರಣೆ ಮಾಡುವ ಸದ್ಗೃಹಸ್ಥರು
ಶಾಶ್ವತ ಬ್ರಹ್ಮಲೋಕಾನ್ನ ಚ್ಯವತೀನ ಚ್ಯವತೇ || (ಅ 9)

ಎನ್ನುವಂತೆ ಶಾಶ್ವತ ಬ್ರಹ್ಮಲೋಕವನ್ನು ಪಡೆಯುವರು : ಅಂತಹವರು ಅಲ್ಲಿಂದ ಕದಲುವುದೂ ಇಲ್ಲ ಎಂದು ಅವರು ತಿಳಿಸುತ್ತಾರೆ. ಅಂದರೆ ಅಂತಹವರು ಶಾಶ್ವತ ಬ್ರಹ್ಮಲೋಕವನ್ನು ಪಡೆಯುವರು–ಎನ್ನುತ್ತಾರೆ.

## 2. ವೃದ್ಧ ಗೌತಮ ಸ್ಮೃತಿ

ಗೌತಮರ ಹೆಸರಿನಲ್ಲಿ ಒಂದು ಸ್ಮೃತಿಯೂ ಇದೆ. ಇದನ್ನು 'ವೃದ್ಧ ಗೌತಮ ಸ್ಮೃತಿ' ಎಂದು ಕರೆಯಲಾಗುತ್ತದೆ. ಇದರಲ್ಲಿ 22 ಅಧ್ಯಾಯಗಳಿವೆ.

ಇವುಗಳಲ್ಲಿ ಮುಖ್ಯವಾಗಿ ಧರ್ಮ ಮತ್ತು ಧರ್ಮಾಚರಣೆಯ ಮಹಿಮೆ, ದಾನ, ಬ್ರಾಹ್ಮಣರ ಲಕ್ಷಣಗಳು, ಶುಭ ಮತ್ತು ಅಶುಭ ಕರ್ಮಗಳ ಲಕ್ಷಣ, ಪಂಚ ಮಹಾಯಜ್ಞ, ಕಪಿಲಾದಾನದ ಮಹಿಮೆ, ಸಾಮಾನ್ಯ ಧರ್ಮ, ಭೋಜನ ವಿಧಿ, ಆಪದ್ಧರ್ಮ, ದ್ವಾದಶ ಮಾಸ ಧಾರ್ಮಿಕ ವಿಧಿಗಳು, ಪುಣ್ಯ ತೀರ್ಥಗಳ ಮಹಿಮೆ ಹಾಗೂ ಭಕ್ತಿಯ ಮಹಿಮೆಗಳ ವರ್ಣನೆ ಇದೆ.

ಈ ಸ್ಮೃತಿಯಲ್ಲಿ ವಿವಿಧ ರೀತಿಯ ದಾನಗಳ ಮಹಿಮೆ ಹಾಗೂ ಗೋದಾನದ ವಿಶೇಷತೆಯನ್ನು ಬಹಳ ವಿಸ್ತಾರದ ರೀತಿಯಲ್ಲಿ ನಿರೂಪಿಸಲಾಗಿದೆ. ಈ ಸ್ಮೃತಿಯು ಶ್ರೀಕೃಷ್ಣ – ಯುಧಿಷ್ಠಿರನ ಸಂವಾದ ರೂಪದಲ್ಲಿದೆ. ಇದರ ವರ್ಣನೆಯನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು –

## ಧರ್ಮ ಮಹಿಮೆ

ಈ ಸ್ಮೃತಿಯ ಪ್ರಾರಂಭದಲ್ಲಿ ಶ್ರೀ ಕೃಷ್ಣ ಪರಮಾತ್ಮನು ಯುಧಿಷ್ಠರನಿಗೆ ಹೀಗೆಂದು ಹೇಳುತ್ತಾನೆ –

ಧರ್ಮಃ ಪಿತಾಚ ಮಾತಾಚ ಧರ್ಮಶ್ಚ ಸುಹೃದಸ್ತಥಾ |
ಧರ್ಮೋ ಭ್ರಾತಾ ಸಖಾ ಚೈವ ಧರ್ಮಃ ಸ್ವಾಮಿೀ ಪರಂತಪ ||30||
ಧರ್ಮೋಽದರ್ಥಶ್ಚ ಕಾಮಶ್ಚ ಧರ್ಮಾದ್ಭೋಗಾಃ ಸುಖಾನಿ ಚ |
ಧರ್ಮಾದೈಶ್ವರ್ಯಮೇಕಂ ಚ ಧರ್ಮಃ ಸ್ವರ್ಗಗತಿಃ ಪ್ರಭೋ ||31||

‘ ಹೇ ರಾಜನ್ ! ಧರ್ಮವೇ ತಂದೆ – ತಾಯಿಯರು, ಸುಹೃದ, ಸಹೋದರ, ಸ್ನೇಹಿತ ಹಾಗೂ ಸ್ವಾಮಿ – ಎಲ್ಲವೂ ಆಗಿದೆ. ಧರ್ಮದಿಂದಲೇ ಅರ್ಥ, ಕಾಮ, ಭೋಗ, ಸುಖ, ಐಶ್ವರ್ಯ ಹಾಗೂ ಸ್ವರ್ಗಾದಿ ಲೋಕಗಳೂ ಪ್ರಾಪ್ತವಾಗುತ್ತವೆ.’

ಆದುದರಿಂದ ದುರ್ಲಭವಾದ ಮಾನವ ಜನ್ಮವನ್ನು ಪಡೆದು, ಸದಾ ಧರ್ಮಾಚರಣೆಯಲ್ಲಿ ನಿರತನಾಗು –

ತಸ್ಮಾದ್ಧರ್ಮಃ ಸದಾ ಕಾರ್ಯೋ ಮನುಷ್ಯಂ ಪ್ರಾಪ್ಯದುರ್ಲಭಮ್ ||

## ವಿಪ್ರ ಪ್ರಶಂಸಾ

ಉತ್ತಮ ವಿಪ್ರನು ಯಾರು – ಎಂಬುದನ್ನು ವಿವರಿಸುತ್ತಾ ಭಗವಾನ್ ಕೃಷ್ಣನು ಯುಧಿಷ್ಠಿರನೊಂದಿಗೆ ಹೇಳುತ್ತಾನೆ.

ವಿಪ್ರ ಪ್ರಸಾದಾದ್ಧರಣೀಧರೋಽಹಂ ವಿಪ್ರಪ್ರಸಾದಾದ ಸುರಾಂಜಯಾಮಿ |
ವಿಪ್ರ ಪ್ರಸಾದಾಚ್ಚ ಸದಕ್ಷಿಣೋಽಹಂ ವಿಪ್ರಪ್ರಸಾದಾದ ಜಿತೋಽಹಮಸ್ಮಿ ||

'ನಾನು ಬ್ರಾಹ್ಮಣರ ಕೃಪಾ ಪ್ರಸಾದದಿಂದ ಪೃಥ್ವಿಯನ್ನು ಧಾರಣೆ ಮಾಡುವುದರಲ್ಲಿ ಸಮರ್ಥನಾಗಿದ್ದೇನೆ. ಆದುದರಿಂದ ನಾನು ' ಧರಣೀಧರ ' ಎಂದು ಕರೆಸಿಕೊಳ್ಳುತ್ತೇನೆ. ಬ್ರಾಹ್ಮಣರ ಕೃಪೆಯಿಂದ ನಾನು ರಾಕ್ಷಸರನ್ನು ಗೆಲ್ಲಲು ಸಮರ್ಥನಾದೆ. ಬ್ರಾಹ್ಮಣರ ಪ್ರಸಾದದಿಂದಲೇ ನಾನು ಎಲ್ಲೆಡೆ ಮಾನ್ಯತೆಗೊಳಗಾಗಿದ್ದೇನೆ ; ಅದರಿಂದ ಪುಣ್ಯವಂತನಾಗಿದ್ದೇನೆ. ಅವರ ಪ್ರಸಾದ ದಿಂದಲೇ ನಾನು ಎಲ್ಲೆಡೆ ಅಜೇಯನಾಗಿ ಉಳಿದಿದ್ದೇನೆ.'

## ಪುಣ್ಯಾತ್ಮ, ಪಾಪಾತ್ಮರ ಗತಿ

ಯಾವಾಗಲೂ ಧರ್ಮಾಚರಣೆಯಲ್ಲಿ ಇರಬೇಕೆಂದು ಗೌತಮರು ನಿರ್ದೇಶಿಸುತ್ತಾ ದುಷ್ಕೃತ್ಯಗಳನ್ನು ಹಾಗೂ ಪಾಪಕರ್ಮಗಳನ್ನು ಮಾಡುವವರು ಘೋರ ನರಕವನ್ನು ಅನುಭವಿಸುವರು, ನರಕಕ್ಕೆ ಹೋಗುವ ದಾರಿಯಲ್ಲಿ ಹಸಿವು ಬಾಯಾರಿಕೆಗಳಿಂದ ಪರಿತಪಿಸುತ್ತಾ ಅನೇಕ ಕಷ್ಟಗಳನ್ನು ಅನುಭವಿಸುತ್ತಾರೆ ಎಂದು ಹೇಳುತ್ತಾರೆ. ಅಂತಹವರಿಗೆ ಯಮಲೋಕದಲ್ಲಿ ಯಮದೂತರು ಅನೇಕ ರೀತಿಯ ಹಿಂಸೆಗಳನ್ನು ನೀಡುತ್ತಾರೆ. ಅಂತಹವರಿಗೆ ಯಮಧರ್ಮರಾಯನು ಭಯಂಕರ, ಭೀಷಣನಾದ ಕಾಲನ ರೂಪದಲ್ಲಿ ಕಂಡುಬರುವನು. ಅಲ್ಲಿ ಮಾನ ವನ ಪ್ರಾಣವು ತಾನು ಮಾಡಿದ ಕರ್ಮಗಳಿಗಾಗಿ ಪಶ್ಚಾತ್ತಾಪ ಪಡುತ್ತದೆ. ಆದರೆ ಅದಕ್ಕೆ ಅಲ್ಲಿ ಸಹಾಯ ಮಾಡುವವರು ಯಾರೂ ಇರುವುದಿಲ್ಲ. ಅಂತಹ ವರಿಗೆ ಯಮದೂತರೂ ಕೂಡಾ ಮತ್ತೆ ಮತ್ತೆ ಹಿಂಸೆ ನೀಡುತ್ತಲೇ ಇರುತ್ತಾರೆ. ಈ ರೀತಿಯಾಗಿ ಪಾಪಾತ್ಮ ವ್ಯಕ್ತಿಯು ನರಕದಲ್ಲಿ ಮಹಾನ್ ಕ್ಲೇಶವನ್ನು ಅನುಭವಿಸುತ್ತಾನೆ.

ಇದಕ್ಕೆ ವ್ಯತಿರೇಕವಾಗಿ ಯಾರು ಈ ಜಗತ್ತಿನಲ್ಲಿ ಸತತವಾಗಿ ಧರ್ಮಾ-ಚರಣೆಯಲ್ಲಿ ತೊಡಗಿರುವರೋ ಅಂತಹವರು ಪುಣ್ಯಕಾರ್ಯವನ್ನು ಮಾಡುವರು, ಪರೋಪಕಾರವನ್ನು ಮಾಡುವರು, ಹಾಗೂ ಜಪ, ತಪ, ನಿಯಮ, ಸ್ವಾಧ್ಯಾಯ ಗಳಿಂದ ಈಶ್ವರನಲ್ಲಿ ಭಕ್ತಿಯನ್ನು ತೋರುವರು. ಅಂತಹವರು ದೀನದುಃಖಿಗಳ ಸೇವೆ ಮಾಡುವರು, ಅನೇಕ ರೀತಿಯ ದಾನಗಳನ್ನು ಮಾಡುವರು, ಅಂತಹವರಿಗೆ ಯಮ ಮಾರ್ಗವೂ ಕೂಡ ಎಲ್ಲ ರೀತಿಯಲ್ಲೂ ಸುಖೋಪಭೋಗಗಳಿಂದ

ಕೂಡಿದ್ದು, ರಮಣೀಯವು, ಆನಂದದಾಯಕವೂ ಆಗಿರುತ್ತದೆ. ಯಮ ದೂತರೂ ಕೂಡ ಅಂತಹ ಪುಣ್ಯಾತ್ಮರನ್ನು ಬಹಳ ಆದರ, ಭಕ್ತಿಗಳಿಂದ ವಿಮಾನದ ಮುಖಾಂತರ ಕರೆದುಕೊಂಡು ಹೋಗುವರು. ಧರ್ಮಾತ್ಮಜನ ಭಯಂಕರ ಕಾಲ ರೂಪವು ಸೌಮ್ಯ ರೂಪದಲ್ಲಿದ್ದು, ಅವರಿಗೆ ಪ್ರಸನ್ನ ವಾಗಿರುತ್ತದೆ.

ವೈವಸ್ವತಂ ಚ ಪಶ್ಯಂತಿ ಸುಖಚಿತ್ತಂ ಸುಖಸ್ಥಿತಮ್ ||

ಎಂದು ಯಮನು ಅಂತಹವರಿಗೆ ಸುಖಾಸೀನನಾಗಿರುವಂತೆ ಕಂಡು ಬರುತ್ತಾನೆ. ಹಾಗೆಯೇ ನಗು ಮುಖದ ದರ್ಶನ ನೀಡುತ್ತಾನೆ.

ಇದರಿಂದ ಧರ್ಮಾತ್ಮರು

ತೇ ತು ತೃಪ್ತಿಂ ಪರಾಂ ಪ್ರಾಪ್ತಾಃ ಸುಖಂ ಯಾಂತಿ ಮಹಾಪಥಮ್ ||

ಎನ್ನುವಂತೆ ತೃಪ್ತರಾಗಿ ಸುಖಪೂರ್ವಕವಾಗಿ ಮಹಾಪಥದ ಕಡೆ ಪ್ರಯಾಣ ಮಾಡುತ್ತಾರೆ.

ಭಗವಾನ್ ಕೃಷ್ಣನು ಯುಧಿಷ್ಠರನಿಗೆ ಹೀಗೆಂದು ಹೇಳುತ್ತಾನೆ –

ಯೋ ಮಾಮೇಕಾತ್ಮಭಾವೇನ ಭಕ್ತ್ಯಾ ತ್ರ್ಯಂಬಕಮೇವ ವಾ ||119||
ಪೂಜಯಂತಿ ನಮಸ್ಯಂತಿ ಸ್ತುವಂತಿ ಚ ದಿನೇ ದಿನೇ ।
ಧರ್ಮರಾಜಪುರಂ ಯಾಂತಿ ಯಾನೈಃ ಸ್ತವಸಮಪ್ರಭೈಃ ||120||
ಪೂಜಿತಾಸ್ತತ್ರ ಧರ್ಮೇಣ ಸ್ವಧರ್ಮಾದ್ಯಾದಿಭಿರ್ಗುಣೈಃ |
ಯಾಂತ್ಯೇವ ಮಮ ಲೋಕಂ ವಾ ರುದ್ರಲೋಕಮಥಾಪಿ ವಾ ||121||

ಯಾವ ಪುಣ್ಯಾತ್ಮರು ಪ್ರತಿದಿನ ಏಕಾತ್ಮ ಭಾವದಿಂದ ಭಕ್ತಿಪೂರ್ವಕ ವಾಗಿ ನನ್ನ ಅಥವಾ ಭಗವಾನ್ ಶಂಕರನ ಪೂಜೆಯನ್ನು ಮಾಡುವರೋ, ನಮಸ್ಕಾರ ಮಾಡುವರೋ, ಸ್ತುತಿ–ಗಾನಗಳನ್ನು ಮಾಡುವರೋ, ಅವರುಗಳು ಅನೇಕ ಜಾಜ್ವಲ್ಯಮಾನ ವಿಮಾನಗಳ ಮುಖಾಂತರ ಭಗವತ್ ಸ್ತೋತ್ರ ಮಾಡುತ್ತಾ ಧರ್ಮಪುರಿಯನ್ನು ಸೇರುವರು. ಅಲ್ಲಿ ಅವರು ತಮ್ಮ ಕರ್ತವ್ಯಾನುಷ್ಠಾನದ ಕಾರಣ ಸಾಕ್ಷಾತ್ ಧರ್ಮಮೂರ್ತಿ ಯಮಧರ್ಮರಾಯ ನಿಂದ ಪೂಜಿಸಲ್ಪಡುವರು. ಮುಂದೆ ಅವರು ವೈಷ್ಣವ ಲೋಕ ಇಲ್ಲವೆ ಶಿವ ಲೋಕವನ್ನು ತಲುಪುವರು.

ಹಾಗೆಯೇ ಮಹರ್ಷಿ ಗೌತಮರು ಮುಂದುವರೆದು, ಶ್ರೀ ಕೃಷ್ಣನು

ಯುಧಿಷ್ಠಿರನಿಗೆ ಹೀಗೆ ಹೇಳುವರೆಂದು ತಿಳಿಸುವರು –

ಪ್ರಾಯೇಣ ಮರಣಂ ನಾಮ ಪಾಪಿನಾಮೇವ ಪಾಂಡವ ।
ಯೇಷಾಂ ತು ನ ಗತಿಃ ಪುಣ್ಯಾ ತೇಷಾಂ ಮರಣಮುಚ್ಯತೇ ॥ 5 ॥
ಪ್ರಾಯೇಣಾಕೃತಕೃತ್ಯತ್ವಾದ್ ಭೂಯ ಉದ್ವಿಜತೆ ಜನಃ ।
ಕೃತಕೃತ್ಯಾಃ ಪ್ರತೀಕ್ಷಂತೆ ಮೃತ್ಯುಂ ಪ್ರಿಯಮಿವಾತಿಥಿಮ್ ॥6॥ (ಅ-8)

'ಎಲೌ ಯುಧಿಷ್ಠಿರನೇ ! 'ಮರಣ' ಅಥವಾ 'ಮೃತ್ಯು' ಎನ್ನುವ ಶಬ್ದವು ಕೇವಲ ಪಾಪಿಗಳಿಗಾಗಿ ಇರುವಂತಹುದು. ಇಂತಹವರಿಗೆ ಪುಣ್ಯಗತಿ ಇರುವುದೇ ಇಲ್ಲ. ಅಂತಹವರಿಗೆ 'ಮರಣ' ಶಬ್ದದ ಪ್ರಯೋಗವೇ ಸರಿಯಾದುದು. ಏಕೆಂದರೆ ಮಾಡಲು ಯೋಗ್ಯವಲ್ಲದ ಕರ್ಮಗಳು ಅಕೃತ್ಯಗಳಾಗಿದ್ದು ಅವು ನಿಷಿದ್ಧವೂ, ಪಾಪ ಕರ್ಮಗಳೂ ಆಗಿರುತ್ತವೆ. ಅಂತಹವುಗಳನ್ನು ಮಾಡಿದುದರ ಕಾರಣ ಮಾನವನು ಮೃತ್ಯುವಿನಿಂದ (ಯಮಯಾತನೆಯಿಂದ) ಭಯಭೀತನಾಗಿರಬೇಕಾಗುತ್ತದೆ. ನಾವು ಕೆಟ್ಟ ಕೆಲಸ ಮಾಡಿದ್ದೇವೆ, ಆದರಿಂದ ನಾವು ಯಮಯಾತನೆಯನ್ನು ಅನುಭವಿಸಬೇಕಾಗಿರುವುದು ಎಂಬ ಭಯ ಅವರಲ್ಲಿ ಇದ್ದೇ ಇರುತ್ತದೆ. ಆದರೆ ಯಾರು ಕೃತಕೃತ್ಯರಾಗಿರುವರೋ, ಪುಣ್ಯಾತ್ಮಾ-ಧರ್ಮಾತ್ಮಾ ವ್ಯಕ್ತಿಗಳಾಗಿರುವರೋ ಅಂತಹವರಿಗೆ ಯಾವುದೇ ಮೃತ್ಯುವಿನ ಭಯವಿರುವುದಿಲ್ಲ. ಅಂತಹವರು ಮೃತ್ಯುವನ್ನು ಸದಾ ಸ್ವಾಗತಿಸುತ್ತಿರುತ್ತಾರೆ, ಅದಕ್ಕಾಗಿ ತಾವೇ ಸಿದ್ಧರಾಗಿರುತ್ತಾರೆ. ಸದ್ಗೃಹಸ್ಥನು ಅತಿಥಿಗಾಗಿ ಕಾಯುವಂತೆ, ಪುಣ್ಯಾತ್ಮನು ತನ್ನ ಅಂತ್ಯದ ಸ್ವಾಗತಕ್ಕಾಗಿ ಕಾದಿರುತ್ತಾನೆ. ಬಂದ ಕೂಡಲೇ ಆನಂದದಿಂದ ಅದನ್ನು ಅಪ್ಪುವನು.'

ಪುಣ್ಯಾತ್ಮ-ಧರ್ಮಾತ್ಮ ವ್ಯಕ್ತಿಗೆ ಮರಣವೂ ಸುಖಪ್ರದವಾಗಿರುತ್ತದೆ. ಅಂತಹವರಿಗೆ ಯಮಲೋಕದಲ್ಲಿ ತುಂಬಾ ಗೌರವವಿರುತ್ತದೆ. ಅಂತಹವರಿಗೆ ಯಮನು ವಿಷ್ಣುವಿನ ತರಹ ಸೌಮ್ಯ ಮುದ್ರೆಯಲ್ಲಿ ದರ್ಶನ ನೀಡುವನು.

ಇದರ ಪರಿಣಾಮವೆಂದರೆ ಮಾನವನು ಸುಕೃತ ಹಾಗೂ ದುಷ್ಕೃತ್ಯಗಳ ಫಲವನ್ನು ಅರಿತು, ಒಳ್ಳೆಯ ಕಾರ್ಯಗಳನ್ನು ಮಾಡುವುದರಲ್ಲಿ ಮಗ್ನನಾಗಿರಬೇಕಾದುದು ಅಗತ್ಯ.

## ಗೋ – ಮಹಿಮೆ

ವೃದ್ಧ ಗೌತಮ ಸ್ಮೃತಿಯಲ್ಲಿ ಕಪಿಲಾ-ಗೋದಾನ ಎನ್ನುವ ಪ್ರಕರಣ

ವೊಂದಿದೆ. ಇದರಲ್ಲಿ ಬಹಳ ವಿಸ್ತಾರವಾಗಿ ಗೋಮಹಿಮೆ ನಿರೂಪಿತವಾಗಿದೆ. ಗೋವಿನ ವಿಶ್ವರೂಪ ದರ್ಶನವನ್ನು ವಿವರಿಸುತ್ತಾ ಅದರ ಶರೀರದಲ್ಲಿ ಎಲ್ಲ ದೇವತೆಗಳು, ಎಲ್ಲ ತೀರ್ಥಗಳು ನೆಲೆಸಿವೆ (ಅಧ್ಯಾಯ 10) ಎಂದು ತಿಳಿಸ ಲಾಗಿದೆ. ವೃಷಭವನ್ನು ತಂದೆಯ ರೂಪದಲ್ಲೂ, ಹಸುವನ್ನು ಮಾತೃ ರೂಪ ದಲ್ಲೂ ಕಾಣಲಾಗಿದೆ. ಆದುದರಿಂದ ಗೋವನ್ನು ಪೂಜಿಸುವುದರಿಂದ

ಪಿತರಾ ವೃಷಭಾ ಜ್ಞೇಯಾ ಗಾವೋ ಲೋಕಸ್ಯ ಮಾತರಃ |
ತಾಸಾಂ ತು ಪೂಜಯಾ ರಾಜನ್ ಪೂಜಿತಾಃ ಪಿತೃ ಮಾತರಃ ||೨೨||

## ಗೋಗ್ರಾಸ ನೀಡುವಾಗಿನ ಮಂತ್ರ

ಗಾವೋ ಮೇ ಮಾತರಃ ಸರ್ವಾಃ ಪಿತರಶ್ಚೈವ ಮೇ ವೃಷಾಃ |
ಗ್ರಾಸಮುಷ್ಟಿಂ ಮಯಾ ದತ್ತಾಂ ಪ್ರತಿಗೃಹ್ಣಂತು ಮಾತರಃ ||೨೫||

ಈ ಮಂತ್ರದ ಭಾವವೆಂದರೆ 'ಗೋವೇ ನನ್ನ ತಾಯಿ, ವೃಷಭವೇ ನನ್ನ ತಂದೆ. ನನ್ನ ಮುಖಾಂತರ ನೀಡುತ್ತಿರುವ ಈ ಗ್ರಾಸ (ಹುಲ್ಲು, ತೌಡು ಇತ್ಯಾದಿ)ದ ಹಿಡಿಯನ್ನು ಗೋಮಾತೆಯರು ಸ್ವೀಕರಿಸಲಿ.'

## ಅಂತಿಮ ಸಂದೇಶ

ಈ ಸ್ಮೃತಿಯಲ್ಲಿ ಕೃಷ್ಣನು ಕಡೆಯಲ್ಲಿ ಯುಧಿಷ್ಠರನಿಗೆ ಹೀಗೆಂದು ಹೇಳುತ್ತಾನೆ –

ಚಿಂತಯಸ್ವ ಸದಾ ವಿಷ್ಣುಮಪ್ರಮತ್ತಃ ಕುರೂದ್ವಹ |
ಲೋಕಾ ಗಚ್ಛಂತಿ ನಾನ್ಯೇನ ತದ್ವಿಷ್ಣೋಃ ಪರಮಂ ಪದಂ ||೪೭||

'ಎಲೈ ಯುಧಿಷ್ಠರನೇ ! ನೀನು ಸಮಾಧಾನ ಚಿತ್ತದಿಂದ ಯಾವಾಗಲೂ ಭಗವಾನ್ ವಿಷ್ಣುವಿನ ಬಗ್ಗೆಯೇ ಚಿಂತಿಸುತ್ತಿರು, ಧ್ಯಾನ ಮಾಡುತ್ತಿರು. ಇದೇ ಪರಮ ಧರ್ಮ. ಏಕೆಂದರೆ ಭಗವಾನ್ ವಿಷ್ಣುವಿನ ಪರಮಪದವನ್ನು ಪಡೆಯಲು ಬೇರೆ ಯಾವುದೇ ಮಾರ್ಗವಿಲ್ಲ. ಈ ಭಗವಚ್ಚಿಂತನದಿಂದಲೇ ಆ ಪರಮಪದವು ಪ್ರಾಪ್ತವಾಗುತ್ತದೆ.'

ಈ ಸಂದೇಶ ಎಲ್ಲರಿಗೂ ಶುಭಪ್ರದವಾದುದು.



# 5. ಭಾರದ್ವಾಜ ಸ್ಮೃತಿ

ಮಹರ್ಷಿ ಭಾರದ್ವಾಜರು ಪ್ರಾಚೀನತಮ ವೈದಿಕ ಮಂತ್ರದ್ರಷ್ಟಾ ಋಷಿಗಳಾಗಿದ್ದಾರೆ. ಇವರು ಋಗ್ವೇದದ ಆರನೇ ಮಂಡಲದ ದ್ರಷ್ಟಾರರಾಗಿದ್ದಾರೆ. ಆದುದರಿಂದಲೇ ಋಗ್ವೇದದ ಆರನೇ ಮಂಡಲವನ್ನು ' ಭಾರದ್ವಾಜ ಮಂಡಲ ' ಎಂದು ಕರೆಯಲಾಗುತ್ತದೆ.

ವೈದಿಕ ಮಂತ್ರಗಳು ಹಾಗೂ ಸೂಕ್ತಗಳ ದ್ರಷ್ಟಾರರಾಗಿರುವುದರೊಂದಿಗೆ ಇವರು 'ಭಾರದ್ವಾಜ-ಶ್ರೌತಸೂತ್ರ' ಹಾಗೂ 'ಭಾರದ್ವಾಜ ಗೃಹ್ಯ ಸೂತ್ರ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಕೃಷ್ಣಯಜುರ್ವೇದದ ಶ್ರೌತ ಹಾಗೂ ಗೃಹ್ಯ ಸೂತ್ರಕಾರರೂ ಆಗಿದ್ದಾರೆ.

ಇಷ್ಟೇ ಅಲ್ಲದೆ ತೈತ್ತರೀಯ ಪ್ರಾತಿಶಾಖ್ಯದಲ್ಲಿ ಇವರನ್ನು ಉಲ್ಲೇಖಿಸಲಾಗಿದೆ. ಅಲ್ಲಿ ಆಚಾರ್ಯರ ರೂಪದಲ್ಲಿ ಇವರನ್ನು ಕಾಣಲಾಗಿದೆ. ಅಲ್ಲದೆ ಅಷ್ಟಾಧ್ಯಾಯೀಯಲ್ಲಿ 'ಋತೋ ಭಾರದ್ವಾಜಸ್ಯ' (7-2-63) ಎಂದು ಇವರನ್ನು ಕರೆದು, ಇವರನ್ನು ವೈಯಾಕರಣರ ರೂಪದಲ್ಲಿಯೂ ಕಾಣಲಾಗಿದೆ.

ಇವೆಲ್ಲಕ್ಕಿಂತಲೂ ಬಹಳ ಮುಖ್ಯವಾದ ವಿಚಾರವೆಂದರೆ ಇಂದಿನ ಎಲ್ಲ ಶ್ರೇಷ್ಠ ವೈಜ್ಞಾನಿಕ ಸಂಶೋಧನೆಗಳಿಗೆ ಇವರೇ ಮೂಲ ದ್ರಷ್ಟಾರರಾಗಿದ್ದಾರೆ. ಇವರ 'ಯಂತ್ರಸರ್ವಸ್ವ' ಎನ್ನುವ ಗ್ರಂಥವು ವಿಮಾನ ತಯಾರಿಕಾ ಕಲೆ ಹಾಗೂ ಅದಕ್ಕೆ ಸಂಬಂಧಪಟ್ಟ ಎಲ್ಲ ಯಾಂತ್ರಿಕ ವಿಧಾನಗಳ ಮೂಲಸ್ರೋತವಾಗಿದೆ. ಇದೇ ಅಲ್ಲದೆ ವಿಮಾನ ಕಲೆಯನ್ನು ಕುರಿತ ವಿಶೇಷವಾದ 'ಅಂಶುಮತಂತ್ರ' ಮತ್ತು 'ಆಕಾಶ ಶಾಸ್ತ್ರ' ಎನ್ನುವ ಎರಡು ಪ್ರಮುಖ ಗ್ರಂಥಗಳನ್ನು ಇವರು ರಚಿಸಿದ್ದಾರೆ.

ಬ್ರಾಹ್ಮಣ ಗ್ರಂಥಗಳಲ್ಲಿ ಮಹರ್ಷಿ ಭಾರದ್ವಾಜರು ವೇದಾಧ್ಯಯನಕ್ಕಾಗಿ ಒಂದೊಂದು ಸಾವಿರ ವರ್ಷಗಳು – ಹೀಗೆ ಮೂರು ಸಾವಿರ ವರ್ಷಗಳವರೆಗೆ ಒಂದೇ ಸಮನಾಗಿ ತಪಸ್ಸನ್ನು ಮಾಡಿ, ಆಯುಸ್ಸನ್ನು ಬೆಳೆಯಿಸಿಕೊಂಡರೆಂಬ ವಿಚಾರದ ಉಲ್ಲೇಖವಿದೆ. ಈ ಅಭಿಪ್ರಾಯವು ಅವರು ವೇದಾಧ್ಯಯನಕ್ಕೆ ಎಷ್ಟೊಂದು ಗಮನ ನೀಡುತ್ತಿದ್ದರೆಂಬ ಅಂಶ ಸ್ಪಷ್ಟವಾಗುತ್ತದೆ.

ಇವರು ಅಧ್ಯಾತ್ಮವಿದ್ಯೆ ಹಾಗೂ ಬ್ರಹ್ಮವಿದ್ಯೆಗಳ ಸೂಕ್ಷ್ಮತಮ ಜ್ಞಾನ ವನ್ನು ಹೊಂದಿದ್ದರು ಎಂದೂ ಹೇಳಲಾಗುತ್ತದೆ. ಇದರ ಬಗೆಗೆ ಬ್ರಾಹ್ಮಣ, ಆರಣ್ಯಕ ಹಾಗೂ ಮುಂಡಕ ಇತ್ಯಾದಿಗಳ ಉಪನಿಷತ್ತುಗಳಲ್ಲಿ ನಿರ್ದೇಶನ ನೀಡಲಾಗಿದೆ.

ಇವೆಲ್ಲದರ ಜೊತೆಗೆ ಇವರನ್ನು ಸಪ್ತರ್ಷಿಗಳೊಳಗೆ ಒಬ್ಬರೆಂದು ನಿರ್ಣೀತ ವಾಗಿದೆ.

ಗೋತ್ರ ಪ್ರವರ್ತಕ ಋಷಿಗಳಲ್ಲಿ ಇವರ ಹೆಸರು ಪ್ರಥಮ ಶ್ರೇಣಿಯಲ್ಲಿ ಕಂಡು ಬರುತ್ತದೆ. ಇಂದಿಗೂ 'ಭಾರದ್ವಾಜ' ಗೋತ್ರದವರೇ ಹೆಚ್ಚಿನವರು ಇರುವುದು. ವಾಲ್ಮೀಕಿ ರಾಮಾಯಣ ಹಾಗೂ ಯೋಗ ವಾಸಿಷ್ಠ ಇತ್ಯಾದಿ ವಿಶಿಷ್ಟ ಭಕ್ತಿ–ಜ್ಞಾನಗಳ ಆಗರ ಗ್ರಂಥಗಳ ಪ್ರಾರಂಭವೂ ಕೂಡ ಭಾರದ್ವಾಜ–ವಾಲ್ಮೀಕಿ ಸಂವಾದದ ರೂಪದಲ್ಲಿ ಕಂಡು ಬರುತ್ತದೆ. ಇದರಿಂದ ಮಹರ್ಷಿ ಭಾರದ್ವಾಜರ ಅಧ್ಯಯನ ಪ್ರಿಯತೆ ಹಾಗೂ ತಪಸ್ಯಾದಿಗಳ ಪ್ರಭಾವದ ಅನುಭವವಾಗುತ್ತದೆ.

ಪುರಾಣಗಳು ಹಾಗೂ ರಾಮಚರಿತ ಮಾನಸದಲ್ಲಿ ಇವರ ಜನನದ ವಿಚಾರವಿದೆ. ಅದರ ಪ್ರಕಾರ ಇವರು ದೇವಗುರು ಬೃಹಸ್ಪತಿಯ ಸಹೋದರ ಉಪಥ್ಯರ ಪುತ್ರರಾಗಿದ್ದು, ಶ್ರೀರಾಮ ಕಥಾಶ್ರವಣದ ಅನನ್ಯ ಭಕ್ತರಾಗಿದ್ದರು.

ಇವರು ಬ್ರಹ್ಮನಿಷ್ಠರು, ಶ್ರೋತ್ರಿಯರು, ತಪಸ್ವಿಗಳು ಹಾಗೂ ಪರಮಾತ್ಮನ ಶ್ರೇಷ್ಠ ಭಕ್ತರೂ ಆಗಿದ್ದರು. ಅಂತೆಯೇ ತೀರ್ಥಗಳ ರಾಜನಾದ ಪ್ರಯಾಗದ ಗಂಗಾ–ಯಮುನಾ ನದಿಗಳ ಸಂಗಮ ಸ್ಥಾನದಿಂದ ಸ್ವಲ್ಪವೇ ದೂರದಲ್ಲಿ ಇವರ ಆಶ್ರಮವು ಇತ್ತು. ಸಹಸ್ರಾರು ಬ್ರಹ್ಮಚಾರಿಗಳು ಇವರ ಆಶ್ರಮದಲ್ಲಿದ್ದು, ಇವರಿಂದ ವಿದ್ಯಾಧ್ಯಯನ, ಶಿಕ್ಷಣವನ್ನು ಪಡೆಯು ತ್ತಿದ್ದರು. ಬಹಳಷ್ಟು ವಿರಕ್ತ ಸಾಧಕರು ಇವರ ಬಳಿ ಇದ್ದು, ತಮ್ಮ ತಮ್ಮ ಯೋಗ್ಯತಾನುಸಾರ ಯೋಗ, ಉಪಾಸನೆ, ತತ್ತ್ವಾನುಸಂಧಾನ ಇತ್ಯಾದಿ ಪಾರಮಾರ್ಥಿಕ ಸಾಧನೆಗಳನ್ನು ಮಾಡಿ, ಆತ್ಮಕಲ್ಯಾಣವನ್ನು ಪಡೆಯು ತ್ತಿದ್ದರು.

ಈ ಭಾರದ್ವಾಜರಿಗೆ ಇಬ್ಬರು ಹೆಣ್ಣುಮಕ್ಕಳಿದ್ದರು. ಇವರಲ್ಲಿ ಒಬ್ಬಳನ್ನು ಯಾಜ್ಞವಲ್ಕ್ಯ ಮಹರ್ಷಿಗಳಿಗೆ ನೀಡಿ, ಮದುವೆ ಮಾಡಲಾಗಿತ್ತು.

ಎರಡನೆಯವಳು ವಿಶ್ರವಾ ಮುನಿಯ ಪತ್ನಿಯಾದಳು. ಈಕೆಯ ಮಗನೇ ಕುಬೇರನು.

ಭಾರದ್ವಾಜರಿಗೆ ಶ್ರೀರಾಮನಲ್ಲಿ ಅನನ್ಯ ಅನುರಾಗವಿತ್ತು. ಶ್ರೀರಾಮನ ವನವಾಸದ ಸಮಯದಲ್ಲಿ ಪ್ರಯಾಗದ ಭಾರದ್ವಾಜ ಮುನಿಯ ಆಶ್ರಮದಲ್ಲಿ ಆತನು ಒಂದು ರಾತ್ರಿ ವಿಶ್ರಾಂತಿ ಪಡೆದ. ಆಗ ಶ್ರೀರಾಮನಿಗೆ ಮಹರ್ಷಿಯು ತಮ್ಮ ಹೃದಯದ ಭಾವವನ್ನು ತೋಡಿಕೊಂಡಿದ್ದರು.

ಇದೇ ರೀತಿಯಲ್ಲಿ ಭರತನು ಶ್ರೀರಾಮನನ್ನು ಹಿಂದಕ್ಕೆ ಕರೆದುತರಲು ಚಿತ್ರಕೂಟಕ್ಕೆ ಹೋಗುತ್ತಿದ್ದಾಗ ಒಂದು ರಾತ್ರಿ ಭಾರದ್ವಾಜರ ಆಶ್ರಮದಲ್ಲಿ ತಂಗಿದ್ದ. ಆಗ ಭಾರದ್ವಾಜರು ಭರತನ ಹಿಂದೆ ಬಂದಿದ್ದ ನಾಗರೀಕರಿಗೆ ತಮ್ಮ ತಪೋಬಲ ಹಾಗೂ ಸಿದ್ಧಿಯ ಪ್ರಭಾವದಿಂದ ತುಂಬಾ ಅದ್ಭುತವಾದ ಆತಿಥ್ಯ ವನ್ನು ನೀಡಿದರು. ಆ ಆತಿಥ್ಯದ ಭವ್ಯತೆಯನ್ನು ಕಂಡೇ ಆ ನಾಗರೀಕರು ಆಶ್ಚರ್ಯಗೊಂಡಿದ್ದರು. ಪರಮಾತ್ಮನ ನಿಜವಾದ ಭಕ್ತರಿಗೆ ಪರಮಾತ್ಮನಿ ಗಿಂತಲೂ ಭಕ್ತರೇ ಹೆಚ್ಚು ಪ್ರಿಯರಾಗುತ್ತಾರೆ. ಇಂತಹ ಭಗವದ್ಭಕ್ತರನ್ನು ಸಂಧಿಸುವುದು ಪರಮಾತ್ಮನನ್ನು ದರ್ಶಿಸುವುದಕ್ಕಿಂತಲೂ ಹೆಚ್ಚು ಸುಖದಾಯಿ ಯಾದುದು. ಭಾರದ್ವಾಜರಿಗೆ ಭರತನನ್ನು ಕಂಡು ಇದೇ ಭಾವ ಉಂಟಾಯಿತು.

ಇದೇ ರೀತಿಯಲ್ಲಿ ಶ್ರೀರಾಮನು ಲಂಕೆಯ ಮೇಲೆ ಜಯವನ್ನು ಗಳಿಸಿ, ಹಿಂತಿರುಗುತ್ತಿದ್ದಾಗ, ತನ್ನ ಪುಷ್ಪಕ ವಿಮಾನದಿಂದ ಇಳಿದು ಭಾರದ್ವಾಜಾ-ಶ್ರಮಕ್ಕೆ ಭೇಟಿ ನೀಡಿದ. ಶ್ರೀರಾಮನು ಸಾಕೇತವನ್ನು ಪ್ರವೇಶಮಾಡಿದಾಗ ಭಾರದ್ವಾಜರು ಆತನ ಭುವನ ಸುಂದರ ರೂಪವನ್ನು ಧ್ಯಾನಿಸುತ್ತಾ, ಆತನ ಸದ್ಗುಣಗಳ ಚಿಂತನೆಯಲ್ಲಿ ತಲ್ಲೀನರಾಗಿದ್ದರು.

ಮಾಘ ಮಾಸದಲ್ಲಿ ಪ್ರತಿವರ್ಷ ಪ್ರಯಾಗದಲ್ಲಿ ಋಷಿ ಸಮೂಹವು ಮಕರ ಸ್ನಾನಕ್ಕಾಗಿ ಸಮ್ಮಿಳನವಾಗುತ್ತಿದ್ದಿತು. ಒಮ್ಮೆ ಈ ಮುನಿಗಣಗಳು ಮಾಘಮಾಸ ಪೂರ್ತಿ ಅಲ್ಲಿಯೇ ಇದ್ದು, ಅಲ್ಲಿಂದ ಹೊರಡಲು ಪ್ರಾರಂಭಿಸುವು ದರಲ್ಲಿದ್ದಾಗ, ಭಾರದ್ವಾಜರು ಶ್ರದ್ಧಾ ಭಕ್ತಿಗಳಿಂದ ಪ್ರಾರ್ಥಿಸಿದುದರಿಂದ ಯಾಜ್ಞ ವಲ್ಕ್ಯರು ಅವರಿಗೆ ಶ್ರೀರಾಮನ ಕಥೆಯನ್ನು ವಿವರವಾಗಿ ತಿಳಿಸಿದರು. ತುಂಬು ಸಂತೋಷದಿಂದ ಅವರು ಶ್ರೀರಾಮನ ಚರಿತ್ರೆಯನ್ನು ವರ್ಣಿಸಿದರು.

ಈ ರೀತಿಯಲ್ಲಿ ಭಾರದ್ವಾಜರ ಪ್ರಾರ್ಥನಾ ಪ್ರಭಾವದಿಂದ, ಅವರ

ಕೃಪೆಯಿಂದ ಜಗತ್ತಿನಾದ್ಯಂತ ಶ್ರೀರಾಮ ಚರಿತ್ರೆಯ ಮಂಗಳ ಪ್ರವಾಹ ಹರಿಯಿತು. ಆಗೆಲ್ಲ ತಪಸ್ಸು, ಸ್ವಾಧ್ಯಾಯ, ವೇದಾಧ್ಯಯನ, ತ್ರಿಕಾಲ ಸಂಧ್ಯಾವಂದನೆ, ಸದಾಚಾರ ಪಾಲನೆ, ಧರ್ಮಾಚರಣೆ, ಅತಿಥಿ ಸೇವೆ ಹಾಗೂ ದೇವತಾ ಪೂಜೆಗಳು-ಇತ್ಯಾದಿ ನಿತ್ಯ ಪ್ರಮುಖ ಚರ್ಯೆಗಳನ್ನು ಅವರು ಅನುಸರಿಸಿ, ಇತರರಿಗೆ ಮಾದರಿಯಾದರು.

ಅಂತೆಯೇ ಭಾರದ್ವಾಜರು ತ್ರಿಕಾಲ ಸಂಧ್ಯಾವಂದನೆಯನ್ನು ಮಾಡಲು, ಎಲ್ಲರೂ ಅದನ್ನು ಅನುಸರಿಸಲು ವಿಶೇಷ ನಿರ್ದೇಶನ ನೀಡಿದರು. ಈ ರೀತಿಯಲ್ಲಿ ಪ್ರತಿದಿನದ ತ್ರಿಕಾಲ ಸಂಧ್ಯಾವಂದನೆ, ಗಾಯಿತ್ರಿ ಉಪಾಸನೆಗಳ ಪ್ರಭಾವದಿಂದ ಸಂಪೂರ್ಣ ಪ್ರಪಂಚ, ದೇವಲೋಕ, ಪಿತೃಲೋಕಗಳೂ ಕೂಡ, ಪ್ರೀತಿ ಭಾಜನವಾದುವು.

ಇದರ ಪರಿಣಾಮವಾಗಿ ಭಾರದ್ವಾಜರು ಸಂಧ್ಯಾವಂದನೆಯ ಮಹಿಮೆಯ ಬಗ್ಗೆ ಒಂದು ವಿಸ್ತೃತ ಸಂಹಿತೆಯನ್ನು ಬರೆದರು. ಇದು 'ಭಾರದ್ವಾಜ ಸ್ಮೃತಿ', 'ಭಾರದ್ವಾಜ ಧರ್ಮಶಾಸ್ತ್ರ', ಹಾಗೂ 'ಭಾರದ್ವಾಜ ಸಂಹಿತೆ' ಎನ್ನುವ ಹೆಸರುಗಳಿಂದ ವಿಖ್ಯಾತವಾಯಿತು. ಇದರಲ್ಲಿ ಗಾಯಿತ್ರಿ ಮಹಿಮೆ, ತ್ರಿಕಾಲ ಸಂಧ್ಯಾವಂದನೆಯ ವಿಧಿವಿಧಾನಗಳು, ವೇದಮಾತೆ ಭಗವತೀ ಗಾಯಿತ್ರಿಯ ಆರಾಧನಾ ಪದ್ಧತಿ-ಇವುಗಳ ಸಾಂಗೋಪಾಂಗ ವರ್ಣನೆ ಇದೆ.

ಇವರ ಭಕ್ತಿ ಜ್ಞಾನ ಮತ್ತು ವೈರಾಗ್ಯಮಯ ಉಪದೇಶಗಳು ಅಸಂಖ್ಯಾತವಾಗಿ ಪುರಾಣಗಳಲ್ಲಿ ಕಂಡು ಬರುತ್ತವೆ. ಧರ್ಮಾಚರಣೆಯ ಬಗ್ಗೆ ಇವರು ವಿಶೇಷ ಒತ್ತು ನೀಡಿದ್ದಾರೆ. ತ್ಯಾಗ, ತಪಸ್ಸು, ಭಕ್ತಿ ಹಾಗೂ ಸಾಧನಮಯ ಜೀವನವು ಸರ್ವೋತ್ತಮವೆಂದು ಇವರು ತಿಳಿದಿದ್ದರು. ಲೋಭ, ದುರಾಸೆಗಳು ಮಾನವನಿಗೆ ಎಷ್ಟೊಂದು ಘಾತುಕವಾದವು ಎಂಬುದರ ಬಗ್ಗೆ ಇವರು ನೀಡಿರುವ ಉಪದೇಶ ಅತ್ಯಂತ ಹಿತಕರವಾದುದು, ಗ್ರಾಹ್ಯವಾದುದು ಹಾಗೂ ಅನುಸರಿಸಲು ಯೋಗ್ಯವಾದುದಾಗಿತ್ತು.

ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ |
ಜೀವಿತಾಶಾ ಧನಾಶಾ ಚ ಜೀರ್ಯತೋಽಪಿ ನ ಜೀರ್ಯತಿ ||
ಚಕ್ಷುಃಶ್ರೋತ್ರಾಣಿ ಜೀರ್ಯಂತಿ ತೃಷ್ಣೈಕಾ ತರುಣಾಯತೇ |
ಸೂಚ್ಯಾ ಸೂತ್ರಂ ಯಥಾ ವಸ್ತ್ರೇ ಸಂಸೂಚಯತಿ ಸೂಚಿಕಃ ||

ತದ್ವತ್ ಸಂಸಾರ ಸೂತ್ರಂ ಹಿ ತ್ವಷ್ಣಾಸೂಚ್ಯೋಪ ನೀಯತೇ |
ಯಥಾ ಶೃಂಗಂ ರುರೋಃ ಕಾಯೇ ವರ್ಧಮಾನೇ ಚ ವರ್ಧತೇ ||
ತಥೈವ ತೃಷ್ಣಾ ವಿತ್ತೇನ ವರ್ಧಮಾನೇನ ವರ್ಧತೇ |
ಅನಂತಪಾರಾ ದುಷ್ಪಾರಾ ತೃಷ್ಣಾ ದೋಷಶತಾವಹಾ ||
ಅಧರ್ಮಬಹುಲಾ ಚೈವ ತಸ್ಮಾತ್ ತಾಂ ಪರಿವರ್ಜಯೇತ್ ||
[ಪದ್ಮ, ಸೃಷ್ಟಿ 19/254-258]

ಮನುಷ್ಯನ ಶರೀರವು ಜೀರ್ಣವಾದಾಗ, ಅವನ ತಲೆಗೂದಲು ಹಣ್ಣಾಗುತ್ತದೆ, ಹಲ್ಲುಗಳು ಬಿದ್ದು ಹೋಗುತ್ತವೆ. ಆದರೆ ಧನ ಹಾಗೂ ಜೀವದ ಮೇಲಿನ ಆಶೆಗಳು ಮಾತ್ರ ವೃದ್ಧನಾದರೂ ಕೂಡ ನಾಶವಾಗುವುದಿಲ್ಲ. ಅವು ಸದಾ ಕಾಲದಲ್ಲೂ ಹಸಿರಾಗಿಯೇ ಇದ್ದು, ಹೊಸತಾಗಿ ಕಾಣುತ್ತವೆ. ಕಣ್ಣು ಮತ್ತು ಕಿವಿಗಳು ಜರ್ಜರವಾಗಬಹುದು. ಆದರೆ ದುರಾಸೆ ಮಾತ್ರ ನವ ಯೌವನ ತರುಣಿಯಂತೆ ಇರುತ್ತದೆ. ದರ್ಜಿಯು ಸೂಜಿಯ ಮುಖಾಂತರ ದಾರವನ್ನು ಬಟ್ಟೆಯಲ್ಲಿ ಪ್ರವೇಶ ಮಾಡಿಸುವಂತೆ ದುರಾಸೆ ರೂಪದ ಸೂಜಿಯ ಮುಖಾಂತರ ಸಂಸಾರವೆನ್ನುವ ದಾರವು ಮಾನವನ ಅಂತಃಕರಣವನ್ನು ಪ್ರವೇಶಿಸುತ್ತದೆ. ಯಾವ ರೀತಿಯಲ್ಲಿ ಸಾರಂಗದ ಕೋಡುಗಳು ಅದರ ಶರೀರದೊಂದಿಗೆ ಬೆಳೆಯುತ್ತಾ ಹೋಗುತ್ತವೆಯೊ, ಅದೇ ರೀತಿಯಲ್ಲಿ ಧನದ ವೃದ್ಧಿಯೂ ಕೂಡ ದುರಾಸೆಯೊಂದಿಗೆ ವೃದ್ಧಿಯಾಗುತ್ತಾ ಹೋಗುತ್ತದೆ. ಇದಕ್ಕೆ ಕೊನೆ ಎಂಬುದೇ ಇಲ್ಲ. ಅದರ ಹೊಟ್ಟೆ ತುಂಬಿಸುವುದು ತುಂಬಾ ಕಷ್ಟ. ಅದರ ದ್ವಾರಗಳು ತುಂಬಾ ಅಧರ್ಮದಿಂದ ಕೂಡಿದವುಗಳಾಗಿವೆ. ಆದುದರಿಂದ ದುರಾಸೆಯನ್ನು ಎಲ್ಲ ರೀತಿಯಿಂದಲೂ ಪರಿತ್ಯಜಿಸಬೇಕು.

## ಭಾರದ್ವಾಜ ಸ್ಮೃತಿ

ಮಹರ್ಷಿ ಭಾರದ್ವಾಜರ ಜ್ಞಾನ ಹಂಚಿಕೆ, ಸ್ವಾಧ್ಯಾಯ, ಸತ್ಸಂಗಗಳು ಪ್ರತಿ ನಿತ್ಯ ಮುಂದುವರೆಯುತ್ತಿದ್ದವು. ಅನೇಕ ಋಷಿ–ಮಹರ್ಷಿಗಳು, ಸಂತ ಮಹಾತ್ಮಾ ಭಕ್ತರು ಇವರ ಆಧ್ಯಾತ್ಮಿಕ ಉಪದೇಶಗಳು ಹಾಗೂ ನಿತ್ಯ ನೈಮಿತ್ತಿಕ ಸದಾಚಾರಮಯ ಧರ್ಮಚರ್ಯೆಯಿಂದ ಪ್ರೇರಣೆಯನ್ನು ಪಡೆಯುತ್ತಿದ್ದರು.

ಒಮ್ಮೆ ಹೀಗಾಯಿತು. ಹೇಮಾದ್ರಿಯ ಪುಣ್ಯ, ಪವಿತ್ರ ಹಾಗೂ

ರಮಣೀಯ ಶಿಬಿರದ ಮೇಲೆ ಭಾರದ್ವಾಜರು ಬ್ರಹ್ಮ ಚಿಂತನೆಯಲ್ಲಿ ನಿಮಗ್ನ ರಾಗಿದ್ದರು. ಅದೇ ಸಮಯಕ್ಕೆ ಭೃಗು, ಅತ್ರಿ, ವಸಿಷ್ಠ, ಶಾಂಡಿಲ್ಯ, ಗೌತಮ, ಗರ್ಗ, ಕಪಿಲ, ನಾರದ, ಶುಕದೇವ, ಜಮದಗ್ನಿ, ಯಾಜ್ಞವಲ್ಕ್ಯ, ವಿಶ್ವಾಮಿತ್ರ ಹಾಗೂ ಪರಾಶರಾದಿ ಧರ್ಮಜ್ಞ ಋಷಿಮುನಿಗಳು ಮಹರ್ಷಿ ಭಾರದ್ವಾಜರ ದರ್ಶನ ಮಾಡಲು ಅಲ್ಲಿಗೆ ಬಂದರು. ಅವರು ಮಹರ್ಷಿಗೆ ಅಭಿನಂದಿಸಿ,

ಭಗವನ್ ಸರ್ವಧರ್ಮಜ್ಞ ಸರ್ವವೇದಾರ್ಥ ಪಾರಗ |
ಸರ್ವಶಾಸ್ತ್ರಾರ್ಥತತ್ವಜ್ಞ ಸರ್ವಸತ್ಕರ್ಮಕೋವಿದ ||
ಸಂಧ್ಯಾದಿ ಪ್ರಮುಖಾಃ ಸರ್ವಾ ನಿತ್ಯನೈಮಿತ್ತಿಕಾಃ ಕ್ರಿಯಾಃ |
ಯಸ್ಮಾತ್ ದ್ವಿಜಾತಿಭಿಃ ಕಾರ್ಯಾಂ ಕಥಯನೋ ವಕ್ತುಮರ್ಹಸಿ ||

[ಭಾರದ್ವಾಜ ಸ್ಮೃತಿ 1/6–7]

'ಹೇ ಭಗವನ್ ! ನೀವು ಎಲ್ಲ ಧರ್ಮಗಳ ಬಗ್ಗೆಯೂ ತಿಳಿದಿರುವವರಾಗಿದ್ದೀರಿ. ನೀವು ಎಲ್ಲ ವೇದಗಳ ಅರ್ಥದ ಪೂರ್ಣ ಪರಿಜ್ಞಾನವನ್ನು ಹೊಂದಿರುವವರಾಗಿದ್ದೀರಿ. ನೀವು ಎಲ್ಲ ಶಾಸ್ತ್ರಗಳ ಅರ್ಥಗಳ ಸೂಕ್ಷ್ಮಾತಿ ಸೂಕ್ಷ್ಮ ತತ್ವವನ್ನು ಬಲ್ಲವರಾಗಿದ್ದೀರಿ. ನೀವು ಎಲ್ಲ ಸತ್ಕರ್ಮಗಳನ್ನು, ಧರ್ಮಾಚರಣೆಗಳನ್ನು ಬಹಳ ಚೆನ್ನಾಗಿ ತಿಳಿದವರಾಗಿದ್ದೀರಿ. ಆದುದರಿಂದ ದ್ವಿಜರ ಸಂಧ್ಯಾವಂದನೆ ಇತ್ಯಾದಿಗಳ ನಿತ್ಯನೈಮಿತ್ತಿಕ ಕರ್ಮಗಳನ್ನು ನಮಗೆ ತಿಳಿಸುವ ಕೃಪೆ ಮಾಡಬೇಕು.'

ಎಂದು ಪ್ರಾರ್ಥಿಸಿದರು.

ಇದನ್ನು ಅನುಸರಿಸಿ, ಭಾರದ್ವಾಜರು ಏನು ತಿಳಿಸಿದರೋ ಅದೇನೇ 'ಭಾರದ್ವಾಜ ಸ್ಮೃತಿ'ಯಾಯಿತು.

ಪ್ರಾರಂಭದಲ್ಲಿಯೇ ಮಹರ್ಷಿ ಭಾರದ್ವಾಜರು ಹೀಗೆಂದು ಹೇಳಿದ್ದಾರೆ– ನಿತ್ಯನೈಮಿತ್ತಿಕ ಅಥವಾ ಕಾಮ್ಯದ ಯಾವುದೇ ಕರ್ಮವನ್ನು ಮಾಡಬೇಕಾದರೂ, ಅದನ್ನು ಮಾಡುವ ಕರ್ತನು ಪ್ರಪ್ರಥಮವಾಗಿ ಪವಿತ್ರನಾಗಿರಬೇಕಾದುದು ಅತ್ಯಂತ ಅವಶ್ಯಕ. ಆದುದರಿಂದ ಶಾಸ್ತ್ರಗಳಲ್ಲಿ ವಿವರಿಸಿರುವ ಬಾಹ್ಯ ಹಾಗೂ ಆಭ್ಯಂತರ ಶೌಚ ವಿಧಿಗಳನ್ನು ಅನುಸರಿಸಬೇಕಾದುದು ಅವಶ್ಯಕ. ಏಕೆಂದರೆ ಬಾಹ್ಯಾಭ್ಯಂತರ ಶುದ್ಧಿ ಇಲ್ಲದೆ ಮಾಡುವ ಕರ್ಮಕಾರ್ಯದಲ್ಲಿ ಯಾರೂ ಸಫಲರಾಗುವುದಿಲ್ಲ.

'ಭಾರದ್ವಾಜಸ್ಮೃತಿ'ಯು 25 ಅಧ್ಯಾಯಗಳನ್ನು ಹೊಂದಿದೆ. ಪ್ರತಿಯೊಂದು ಅಧ್ಯಾಯದಲ್ಲೂ ವರ್ಣಿತ ವಿವರಗಳ ಪರಿಗಣನೆ ಮಾಡಲಾಗಿದೆ. ಆದರೆ ಪ್ರಸ್ತುತ ದೊರೆತಿರುವ ಪ್ರತಿಯಲ್ಲಿ 19 ಅಧ್ಯಾಯಗಳು ಮಾತ್ರ ಇವೆ. ಇದರಲ್ಲಿ ಸುಮಾರು 114 ಶ್ಲೋಕಗಳಿವೆ.

ಇದರಲ್ಲಿ ಮುಖ್ಯವಾಗಿ ಗಾಯಿತ್ರಿ ಉಪಾಸನೆಯನ್ನು ವಿವರಿಸಲಾಗಿದೆ. ಭಗವತಿ ಗಾಯಿತ್ರಿಯ ಆರಾಧನಾವಿಧಿ, ತ್ರಿಕಾಲ ಸಂಧ್ಯಾ ವಿಧಾನ, ವೇದ ಮಾತೆ ಗಾಯಿತ್ರಿಯು ವಿರಾಟ ಸ್ವರೂಪ ಹಾಗೂ ಮಹಾಧ್ಯಾನದ ವರ್ಣನೆಗಳಿವೆ. ಸಂಧ್ಯಾ ಹಾಗೂ ಗಾಯಿತ್ರಿಯರ ಭಕ್ತಿ, ಉಪಾಸನೆ ಹಾಗೂ ಜ್ಞಾನಮಯ ವರ್ಣನೆಗಳ ವಿಸ್ತಾರ ವಿವರ ಇದರಲ್ಲಿರುವಷ್ಟು ಬೇರೆಯದ್ದರಲ್ಲಿಲ್ಲ. ಆದುದರಿಂದ ಗಾಯಿತ್ರಿ ಉಪಾಸಕರು ಹಾಗೂ ಜಿಜ್ಞಾಸುಗಳ ಈ ಸ್ಮೃತಿಯನ್ನು ತಪ್ಪದೆ ಅಧ್ಯಯನ ಮಾಡಬೇಕು, ಅದರಿಂದ ಅವರಿಗೆ ತುಂಬಾ ಅನುಕೂಲವಾಗುತ್ತದೆ.

## 1. ಸಂಧ್ಯಾ ವಿವರ

ಸಂಧ್ಯೆಯು ಓರ್ವ ಅವ್ಯಕ್ತ, ನಿರಾಕಾರ ಪರಬ್ರಹ್ಮ ಪರಮಾತ್ಮನಿಂದ ಅಭಿನ್ನವಾಗಿರುತ್ತಾಳೆ. ಆದುದರಿಂದ ಈಕೆ ಬ್ರಹ್ಮಸ್ವರೂಪಿಣಿಯೂ ಆಗಿದ್ದಾಳೆ. ಇದೇ ಬ್ರಹ್ಮನಿಂದ 'ತ್ರಿಧಾ'ಳಾಗಿ ಮೂರು ರೂಪಗಳನ್ನು ಧಾರಣೆ ಮಾಡಿದ್ದಾಳೆ. ಸಮಸ್ತ ವ್ಯಕ್ತ-ಅವ್ಯಕ್ತ, ಪ್ರತ್ಯಕ್ಷ-ಅಪ್ರತ್ಯಕ್ಷ, ಸ್ಥೂಲ-ಸೂಕ್ಷ್ಮ, ಪ್ರಕಟ-ಅಪ್ರಕಟ (ನಿಗೂಢ)-ಇತ್ಯಾದಿ ಎಲ್ಲ ಕರ್ಮಗಳಿಗೆ ಈಕೆ ಸಾಕ್ಷಿಯಾಗಿರುತ್ತಾಳೆ, ಪ್ರತ್ಯಕ್ಷ ದ್ರಷ್ಟಾರಳಾಗಿರುತ್ತಾಳೆ. ಈಕೆಯಿಂದ ಯಾವುದೇ ರೀತಿಯ ಕರ್ಮವನ್ನೂ ಬಚ್ಚಿಡಲಾಗುವುದಿಲ್ಲ. ಈಕೆಯು ಉಜ್ವಲ ಪ್ರಕಾಶದಿಂದ ಪ್ರಜ್ವಲಿಸುವ ದೀಪ್ತಿಮತಿಯಾಗಿರುತ್ತಾಳೆ.

ಬ್ರಹ್ಮವ್ಯಾಕಾರಭೇದೇನ ಯಾಭಿನ್ನಾ ಕರ್ಮಸಾಕ್ಷಿಣೀ |
ಭಾಸ್ವತೀಶ್ವರ ಶಕ್ತಿಃ ಸಾ ಸಂಧ್ಯೇಭಿಹಿತಾ ಬುಧೈಃ || (ಭಾರ 6/2)

ಪ್ರಾಕ್-ಸಂಧ್ಯಾ, ಮಧ್ಯ-ಸಂಧ್ಯಾ ಹಾಗೂ ಸಾಯಂ-ಸಂಧ್ಯಾ ಎನ್ನುವ ರೀತಿಯ ಜನ್ಮ, ಸ್ಥಿತಿ ಹಾಗೂ ಲಯರೂಪ ಮೂರು ರೀತಿಯ ಸಂಧ್ಯೆಗಳಿರುತ್ತವೆ. ಪ್ರಾಕ್ ಸಂಧ್ಯಾಳನ್ನು ಬ್ರಾಹ್ಮೀ ಎಂಬುದಾಗಿಯೂ, ಮಧ್ಯ ಸಂಧ್ಯಾಳನ್ನು ವೈಷ್ಣವೀ ಎಂಬುದಾಗಿಯೂ ಹಾಗೂ ಸಾಯಂ (ಪಶ್ಚಿಮ)

ಸಂಧ್ಯೆಳನ್ನು ರಾದ್ರೀ ಸಂಧ್ಯಾಳೆಂಬುದಾಗಿಯೂ ಕರೆಯಲಾಗುತ್ತದೆ. ಇಷ್ಟು ಒಬ್ಬಳೇ ಸಂಧ್ಯೆಳ ಮೂರು ರೂಪಗಳಾಗಿವೆ. ಈ ರೀತಿಯಲ್ಲಿ ಋಗ್ವೇದ, ಯಜುರ್ವೇದ ಹಾಗೂ ಸಾಮವೇದ ಇವೂ ಕೂಡ ಓರ್ವ ಸಂಧ್ಯೆಳ ಮೂರು ರೂಪಗಳಾಗಿವೆ.

## ಸಪ್ತ ಮಹಾವ್ಯಾಹೃತಿಗಳು

ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ ಹಾಗೂ ಸತ್ಯಮ್-ಇವು ಏಳು ಮಹಾವ್ಯಾಹುತಿಗಳು. ಪ್ರಣವ (ಓಂಕಾರ್) ಹಾಗೂ ವ್ಯಾಹೃತಿಗಳ ಜೊತೆಯಲ್ಲಿ ಗಾಯಿತ್ರಿ ಮಂತ್ರದ ಜಪವನ್ನು ಮಾಡಲಾಗುವುದು. ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಗೌತಮ, ಅತ್ರಿ, ಭೃಗು ಹಾಗೂ ಕಶ್ಯಪ-ಈ ಏಳೂ ಋಷಿಗಳು ಈ ಏಳು ವ್ಯಾಹೃತಿಗಳ ಋಷಿಗಳು ಎಂದು ಹೇಳಲಾಗುತ್ತದೆ. ಇದೇ ರೀತಿಯಲ್ಲಿ ಅಗ್ನಿ ಇತ್ಯಾದಿ ಏಳು ದೇವತೆಗಳು ಇವರುಗಳ ಇವುಗಳ ದೇವತೆ ಗಳೆಂದು ಹೇಳಲಾಗುತ್ತದೆ.

ಭಾರದ್ವಾಜ ಸ್ಮೃತಿಯ ಆರನೆಯ ಅಧ್ಯಾಯದಲ್ಲಿ ಗಾಯಿತ್ರಿ ಮಂತ್ರದ ವಿಸ್ತೃತ ಅರ್ಥವನ್ನು ನೀಡುತ್ತಾ, ಗಾಯಿತ್ರಿ ಮಂತ್ರದ 24 ಅಕ್ಷರಗಳ ಋಷಿ, ಛಂದ, ದೇವತೆ, ತತ್ವ, ಶಕ್ತಿಗಳು, ಮುದ್ರೆಗಳು (ಸುಮುಖ, ಸಂಪುಟ ಇತ್ಯಾದಿ) ವರ್ಣ, 24 ಮಂತ್ರಾಕ್ಷರಗಳಿಂದ ವ್ಯಾಸ, 24 ಅಕ್ಷರಗಳ ಉಚ್ಚಾರದ ಫಲ-ಇತ್ಯಾದಿಗಳನ್ನು ಸವಿಸ್ತಾರವಾಗಿ ತಿಳಿಸಲಾಗಿದೆ.

## ಜಪದ ಗಣನೆ

ಈ ಜಪವನ್ನು ಮಾಡುವವನು, ಆ ಜಪದ ಗಣನೆಯನ್ನು ಅವಶ್ಯವಾಗಿ ಮಾಡಬೇಕಾಗಿದೆ ಎಂದು ಭಾರದ್ವಾಜ ಸ್ಮೃತಿ ತಿಳಿಸುತ್ತದೆ. ನಿಶ್ಚಿತ ಸಂಖ್ಯೆ ಯಲ್ಲಿ ಪ್ರತಿ ನಿತ್ಯವೂ ಶ್ರದ್ಧಾಪೂರ್ವಕವಾಗಿ ಜಪವನ್ನು ಮಾಡಬೇಕಾಗಿದೆ. ಎಷ್ಟೆಷ್ಟು ಸಾಧ್ಯವೊ ಅಷ್ಟಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಈ ಜಪವನ್ನು ಮಾಡಬೇಕಾಗಿದೆ. ಒಂದು ವೇಳೆ ನಿಶ್ಚಿತ ಸಂಖ್ಯೆಯಲ್ಲಿ ಜಪಮಾಡಲು ಸಾಧ್ಯವಾಗದೆ ಹೋದರೆ, ಕಡಿಮೆ ಏನಾದರೂ ಆದರೆ, ಈವತ್ತು ಮಾಡದೆ ಇರುವುದನ್ನು ನಾಳೆ ಮಾಡುವ ಎನ್ನುವ ಅಸಡ್ಡೆ ಮಾಡುವುದಾದರೆ, ಅಥವಾ ಏನಾದರೂ ಪ್ರಮಾದವಶಾತ್ ಹೆಚ್ಚು ಕಡಿಮೆ ಆದರೆ ತಪ್ಪಾಗುತ್ತದೆ. ಆದುದರಿಂದ ಜಪ ಮಾಡುವುದರ ನಿಶ್ಚಿತ ಲೆಕ್ಕಾಚಾರವನ್ನು ಹೆಚ್ಚು ಕಡಿಮೆ

ಆಗದಂತೆ ಮಾಡಬೇಕು. ಹಾಗೆ ಲೆಕ್ಕಾಚಾರದ ಪ್ರಕಾರ ಮಾಡದೆ ಹೋದಲ್ಲಿ ಮಾಡುವ ಜಪವೇ ನಿಷ್ಫಲವಾಗುತ್ತದೆ.

ವೃಥಾ ಭವೇತ್ ಕೃತೋ ವಿಪ್ರೈಃ ಸಂಖ್ಯಾಜ್ಞಾನಂ ವಿನಾ ಜಪಃ |
ತಸ್ಮಾತ್ ಸಂಖ್ಯಾಪರಿಜ್ಞಾನಮವಶ್ಯಂ ಜಪಕರ್ಮಣಿ ||

[ಭಾರದ್ವಾಜ ಸ್ಮೃತಿ 6/102]

ಏಳನೇ ಅಧ್ಯಾಯದಲ್ಲಿ ಜಪಮಾಲೆಯನ್ನು ಪೋಣಿಸುವ ವಿಧಿಯನ್ನು, ಅದರೊಂದಿಗೆ ಸೇರಿಸಲ್ಪಡುವ ಗ್ರಂಥಗಳ ತತ್ತ್ವ ರಹಸ್ಯಗಳ ವಿಷಯಗಳನ್ನು ತಿಳಿಸಲಾಗಿದೆ.

## ಪ್ರತಿಷ್ಠಿತ ಮಾಲೆಯಿಂದ ಜಪ

ಅನೇಕ ರೀತಿಯ ಜಪಮಾಲೆಗಳಿವೆ. ರುದ್ರಾಕ್ಷಿ, ತುಳಸಿ – ಮುಖ್ಯವಾದುವು. ಆದರೆ ಹಾಗೆ ಮಾಡುವುದಕ್ಕೆ ಮುಂಚೆ ಆ ಜಪಮಾಲೆಯಲ್ಲಿ ಪ್ರಾಣ ಪ್ರತಿಷ್ಠಾಪನೆ ಮಾಡುವುದು ಅತ್ಯಂತ ಅವಶ್ಯಕ. ದೇವಾಲಯಗಳಲ್ಲಿ ದೇವರನ್ನು ಪ್ರತಿಷ್ಠಾಪಿಸಲು ಯಾವ ರೀತಿಯಲ್ಲಿ ವಿಧಿ ಪೂರ್ವಕವಾಗಿ, ಮಂತ್ರೋಚ್ಚಾರಣೆಯ ಸಹಿತ ಪ್ರಯತ್ನಿಸಲಾಗುವುದೇ ಇದೇ ರೀತಿಯಲ್ಲಿ ಜಪಮಾಲೆಗೂ ಮಾಡಬೇಕು. ಇಲ್ಲವಿದ್ದಲ್ಲಿ ದೇವರ ವಿಗ್ರಹ ಬರೀ ಕಲ್ಲು ಆಗಿರುತ್ತದೆ. ಮಂತ್ರ ಪ್ರತಿಷ್ಠಾಪನೆಯ ಮುಖಾಂತರ ಆ ದೇವನ ಪ್ರಾಣ ಪ್ರತಿಷ್ಠಾಪನೆಯ ನಂತರವೆ ಅದರ ಪೂಜೆಯ ಫಲ ಭಕ್ತರಿಗೆ ಲಭಿಸುವುದು. ಇಲ್ಲದಿದ್ದರೆ ಇಲ್ಲ. ಇದೇ ರೀತಿಯಲ್ಲಿ ಗಾಯಿತ್ರಿ ಇತ್ಯಾದಿ ಮಂತ್ರಗಳನ್ನು ಪ್ರಾಣ ಪ್ರತಿಷ್ಠೆ ಮಾಡಿದ ಜಪಮಾಲೆಯ ಮುಖಾಂತರವೇ ಜಪಿಸಬೇಕು. ಈ ರೀತಿಯ ಜಪಮಾಲೆಯು ದೇವಸ್ವರೂಪವನ್ನು ಪಡೆದಿರುತ್ತದೆ. ಅದೇ ರೀತಿಯಲ್ಲಿ ಅದನ್ನು ಆದರಿಸಿ, ಪೂಜಿಸಬೇಕು. ಹೀಗೆ ಮಾಡಿದಾಗಲೇನೆ ಮಂತ್ರ ಸಾಧನೆಯು ಸಫಲವಾಗುವುದು.

ಅಪ್ರತಿಷ್ಠಿತಮಾಲಾ ಯಾ ಸಾ ಜಪೆ ವಿಫುಲಾ ಸ್ಮೃತಾ |
ತಸ್ಮಾತ್ ಪ್ರತಿಷ್ಠಾ ಕರ್ತವ್ಯಾ ಜಪಸ್ಯ ಫಲಮಿಚ್ಛತಾ || [ಭಾ.7/53]

## ಜಪ ಮಾಡುವ ಸಮಯ

ಅತ್ಯಂತ ಶುದ್ಧರಾಗಿ, ಪವಿತ್ರರಾಗಿ ಭಕ್ತಿಭಾವ ಪೂರ್ವಕವಾಗಿ ಮಂತ್ರದ ಅರ್ಥವನ್ನು ತಿಳಿದು ಮಂತ್ರದ ಜಪನನ್ನು ಮಾಡಬೇಕು. ಜಪ ಮಾಡುವಾಗ

ನಿಷಿದ್ಧವಾದ ಕರ್ಮಗಳನ್ನು ಮಾಡಲೇಬಾರದು. ಉದಾಹರಣೆ : ಕಾಲು ಅಗಲಿಸಿ ಕುಳಿತುಕೊಳ್ಳುವುದು, ಏಕಾಸನದಲ್ಲಿ ಕುಳಿತಿರುವುದು, ಬೇರೆಯವರೊಂದಿಗೆ ಮಾತನಾಡುವುದು ಇತ್ಯಾದಿಗಳನ್ನು ಮಾಡಬಾರದು. ಈ ಕಡೆ ಆ ಕಡೆ ನೋಡ ಬಾರದು, ದೃಷ್ಟಿಯನ್ನು ಸ್ಥಿರವಾಗಿಟ್ಟುಕೊಳ್ಳಬೇಕು, ಆಕಳಿಸುವುದು ಇತ್ಯಾದಿ ಗಳನ್ನು ಮಾಡಬಾರದು, ತೂಕಡಿಸಬಾರದು, ಆಲಸಿಯಾಗಿ ಕುಳಿತಿರಬಾರದು, ಉಗುರು ತೆಗೆಯುವುದು ಹಾಗೂ ಉಗುರು ಕಡಿಯುವುದನ್ನು ಮಾಡಬಾರದು, ಕೈ ಅಗಲಿಸಿ ಹಾಗೂ ಉಜ್ಜುತ್ತಾ ಕುಳಿತುಕೊಳ್ಳಬಾರದು, ಬೆರಳುಗಳನ್ನು ಹಗ್ಗದ ತರಹ ತಿರುಚಬಾರದು, ಬಾಯಿಯಲ್ಲಿ ಏನನ್ನಾದರೂ ಹಾಕಿಕೊಂಡು ಅಗಿಯುವುದೊ ಹಾಗೂ ಚಪ್ಪರಿಸುವುದೊ ಮಾಡಬಾರದು, ಕ್ಯಾಕರಿಸುವುದು ಕೆಮ್ಮುವುದನ್ನು ಮಾಡಬಾರದು, ಹಲ್ಲುಗಳನ್ನು ಕಟಕಟನೆ ಕಡಿಯಬಾರದು, ದೇಹವನ್ನು ಕಂಪಿಸುವಂತೆ ಮಾಡಬಾರದು, ಇದ್ದಕ್ಕಿದ್ದಂತೆ ನಗಬಾರದು, ಕೋಪಗೊಳ್ಳಬಾರದು ಹಾಗೂ ಕುತ್ಸಿತ ಭಾವದ ಮಾತುಗಳನ್ನು ಆಡಬಾರದು.

ಮೇಲೆ ತಿಳಿಸಿದ ಮಾಡಕೂಡದ ಕರ್ಮಗಳನ್ನು ಮಾಡುವುದರ ಮುಖಾಂತರ ಮಾಡಿದ ಜಪವು ನಷ್ಟವಾಗಿ ನಿಷ್ಫಲವಾಗುವುದು.

ಭವಂತಿ ಕರ್ಮಾಣ್ಯೇತಾನಿ ಜಪನಾಶ ಕರಾಣಿ ಚ || (ಭಾ. 8–8)

ಒಂದು ವೇಳೆ ಪ್ರಮಾದವಶಾತ್ ಇಂತಹವುಗಳೇನಾದರೂ ಸಂಭವಿಸಿದಲ್ಲಿ ಕೈಕಾಲುಗಳನ್ನು ತೊಳೆದು, ಆಚಮನ ಮಾಡಿ, ಮೂರು ಸಲ ಪ್ರಾಣಾಯಾಮ ಮಾಡಿ, ಪರಮಾತ್ಮನ (ಸೂರ್ಯನ) ಪ್ರಾರ್ಥನೆ ಮಾಡಿ, ಅವನಿಗೆ ನಮಸ್ಕರಿಸಿ, ಮತ್ತೆ ಉಳಿದಿರುವ ಜಪವನ್ನು ಮುಗಿಸಬೇಕು.

ಭವಂತಿ ಕರ್ಮಣ್ಯೇ ತಾನಿ ಯದಿ ಚೇತ್ತು ಪ್ರಮಾದತಃ |
ಪ್ರಕ್ಷಾಲ್ಯ ಚರಣೌ ಹಸ್ತೌ ಚಾಚಮ್ಯ ಚ ಯಥಾವಿಧಿ ||
ಪ್ರಾಣಾಯಾಮತ್ರಯಂ ಕೃತ್ವಾ ಸವಿತಾರಂ ವಿಲೋಕ್ಯ ಚ |
ನಮಸ್ಕೃತ್ಯ ತತೋ ಧೀಮಾನ್ ಜಪಶೇಷಂ ಸಮಾಚರೇತ್ ||
(ಭಾ–8–10–11)

## ಗಾಯಿತ್ರಿ ಪೂಜೆ

ಭಾರದ್ವಾಜ ಸ್ಮೃತಿಯ 9ನೇ ಅಧ್ಯಾಯದಲ್ಲಿ ಗಾಯಿತ್ರಿ ಮಂತ್ರದ ಸಾಧನ ಕ್ರಮವನ್ನು ತಿಳಿಸಲಾಗಿದೆ. 10ನೇ ಅಧ್ಯಾಯದಲ್ಲಿ ಗಾಯಿತ್ರಿ ಮಂತ್ರದ

ಅರ್ಥವನ್ನು ತಿಳಿಸಲಾಗಿದೆ. 11ನೇ ಅಧ್ಯಾಯದಲ್ಲಿ ಗಾಯಿತ್ರಿ ದೇವಿಯ ಷೋಡಶೋಪಚಾರ ಪೂಜಾ ವಿಧಿಯನ್ನು ವಿಸ್ತೃತ ರೀತಿಯಲ್ಲಿ ತಿಳಿಸಲಾಗಿದೆ.

ಸ್ನಾನಾದಿಗಳಿಂದ ಪವಿತ್ರರಾಗಿ ಶ್ವೇತ ಪವಿತ್ರ ವಸ್ತ್ರವನ್ನು ಧರಿಸಿ, ಪೂಜೆಯ ಎಲ್ಲ ಉಪಚಾರಗಳನ್ನು ಯಥಾಸ್ಥಾನದಲ್ಲಿ ಉಪಕಲ್ಪಿತಗೊಳಿಸಬೇಕು. ಅನಂತರದಲ್ಲಿ ಗಾಯಿತ್ರಿ ಪೀಠ ಅಥವಾ ಯಂತ್ರದ ಮೇಲೆ ಪೂಜೆ ಮಾಡಬೇಕು. ಭಗವತೀ ಗಾಯಿತ್ರಿದೇವಿಯ ಧ್ಯಾನವನ್ನು ಮಾಡುತ್ತಾ ಸ್ವರೂಪಾನುಸಾರ ಆಕೆಯ ಪ್ರತಿಮೆಯನ್ನು ಪೀಠದಲ್ಲಿ ಮಂತ್ರ ಸಮೇತ ಪ್ರತಿಷ್ಠೆ ಮಾಡಿ, ಸ್ಥಾಪಿಸಿ, ಆಕೆಯನ್ನು ಅದರಲ್ಲಿ ಆವಾಹಿಸಬೇಕು. ಅನಂತರ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಗಳಿಂದ ಎಲ್ಲ ಉಪಲಬ್ಧ ಉಪಚಾರಗಳಿಂದ, ಶ್ರದ್ಧಾ ಭಕ್ತಿಗಳಿಂದ ಪೂಜಿಸಿ, ಅಭಿಷೇಕ ಮಾಡಬೇಕು. ಮೂಲ ಮಂತ್ರದ ಜಪ ಮಾಡಬೇಕು. ಪೂಜೆಯ ಕೊನೆಯಲ್ಲಿ ವೇದ ಮಾತೆ, ಭಗವತೀ ಗಾಯಿತ್ರಿಯನ್ನು ಈ ರೀತಿ ಯಲ್ಲಿ ಕ್ಷಮಾ ಪ್ರಾರ್ಥನೆ ಮಾಡಬೇಕು –

ಅಜ್ಞಾನೇನ ಪ್ರಮಾದೇನ ದ್ರವ್ಯಲಾಭೇನ ವಾ ಯದಿ ||
ಯತ್ ನ್ಯೂನಮತಿರಿಕ್ತಂ ವಾ ತತ್ ಕ್ಷಮಸ್ವ ಪರಮೇಶ್ವರಿ |
ಜಗನ್ಮಯಿ ಜಗನ್ಮಾತಃ ಜಗಜ್ಜನನಕಾರಿಣೀ ||
ಯದಲೀಕಂ ಕೃತಂ ಸರ್ವಂ ತನ್ಮಯಾ ಕ್ಷಂತುಮರ್ಹಸಿ |
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಮಹೇಶ್ವರಿ ||
ಯತ್ಪೂಜಿತಂ ಮಯಾದೇವಿ ಪರಿಪೂರ್ಣಂ ತದಸ್ತು ಮೇ |

(ಭಾರದ್ವಾಜ 11/111–114)

ಅಂದರೆ 'ಹೇ ದೇವೀ ! ನಾನು ಅಜ್ಞಾನದಿಂದ, ಪ್ರಮಾದದಿಂದ ಹಾಗೂ ದ್ರವ್ಯ ಆದಿ ಉಪಚಾರದ ಅಭಾವದ ಕಾರಣ ಏನಾದರೂ ಲೋಪ ಮಾಡಿದಲ್ಲಿ, ಹೇ ಪರಮೇಶ್ವರಿ, ನೀನು ಆ ನನ್ನೆಲ್ಲ ಅಪರಾಧಗಳನ್ನು ಕ್ಷಮಿಸಿ ! ಹೇ ಜಗನ್ಮಾತೆ, ಈ ಎಲ್ಲ ಜಗತ್ತು ನಿನ್ನದೇ ರೂಪವಾಗಿದೆ, ನಿನ್ನಿಂದಲೇ ವ್ಯಾಪ್ತವಾಗಿದೆ, ನಿನ್ನಿಂದಲೇ ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳು ಉಂಟಾಗುತ್ತವೆ. ನನ್ನಿಂದ ಏನಾದರೂ ಮಿಥ್ಯಾಕರ್ಮವು ಉಂಟಾಗಿದ್ದಲ್ಲಿ, ನೀನು ನನ್ನನ್ನು ಕ್ಷಮಿಸು, ಹರಸು. ಹೇ ಮಾಹೇಶ್ವರಿ, ಮಂತ್ರಗಳನ್ನು ತಿಳಿದೊ ತಿಳಿಯದೆಯೊ, ವಿಧಿ ವಿಧಾನಗಳಲ್ಲಿ, ಶ್ರದ್ಧಾ ಭಕ್ತಿಗಳಿಲ್ಲದವನಾಗಿ ನಿನ್ನನ್ನು ಪೂಜಿಸಿದ್ದರೂ

ಅವುಗಳನ್ನು ಸ್ವೀಕರಿಸುವ ಕೃಪೆತೋರು.'

ಆ ನಂತರದಲ್ಲಿ ಪ್ರದಕ್ಷಿಣೆ ಹಾಗೂ ಪುಷ್ಪಾಂಜಲಿಯನ್ನು ಸಮರ್ಪಿಸಿ, ಪ್ರಣವೋಚ್ಚಾರಣೆ ಮಾಡಿ, ಆದ್ಯವಿದ್ಯೆಯ ಭಗವತಿ ಗಾಯಿತ್ರಿಯನ್ನು ಸೂರ್ಯ ಬಿಂಬದಲ್ಲಿ ಪ್ರವೇಶ ಮಾಡಿಸುವ ಭಾವನೆಯಿಂದ ವಿಸರ್ಜನೆ ಮಾಡಿ –

ಪ್ರಣವೇನಾಥ ದೇವೇಶೀಂ ಸೂರ್ಯ ಬಿಂಬೇ ಪ್ರವೇಶಯೇತ್ ||
(ಭಾರ 11/117)

## ಗಾಯಿತ್ರಿಯ ತ್ರಿಕಾಲಧ್ಯಾನ

ಧ್ಯಾನಂ ವಿನಾ ಜಪಂ ಸರ್ವಂ ಯತ್ನೇನಾಪಿ ಕೃತಂ ವೃಥಾ-(ಭಾ 12/3) ಎನ್ನುವಂತೆ ದೇವಿಯ ಧ್ಯಾನ ಮಾಡದೆ ಪ್ರಯತ್ನಪೂರ್ವಕವಾಗಿ ಮಾಡಿದ ಜಪವೆಲ್ಲವೂ ನಿಷ್ಫಲವಾಗುವುದು

ಆದುದರಿಂದ ಧ್ಯಾನದೊಂದಿಗೇ ಜಪ ಮಾಡಬೇಕಾಗುತ್ತದೆ. 12ನೇ ಅಧ್ಯಾಯದಲ್ಲಿ ಪ್ರಾತಃ, ಮಧ್ಯಾಹ್ನ ಹಾಗೂ ಸಾಯಂ–ಈ ಮೂರೂ ಸಮಯ ಗಳಲ್ಲಿ ಧ್ಯಾನ ಮಾಡಬೇಕಾದ ಅಗತ್ಯವಿದೆ.

ಹಂಸದ ಮೇಲೆ ಪದ್ಮಾಸನದಲ್ಲಿ ಆರೂಢಳಾಗಿರುವ, ಚತುರ್ಮುಖೀ, ಚತುರ್ಹಸ್ತಾ, ಅಷ್ಟನೇತ್ರಾವಲೀ, ಪ್ರಸನ್ನ ಮುಖೀ ಹಾಗೂ ಅನೇಕ ದಿವ್ಯ ಗಂಧಗಳಿಂದಲೂ, ಮಾಲ್ಯಾಂಬರಗಳಿಂದಲೂ ಸುಶೋಭಿತಳೂ, ಅಕ್ಷಮಾಲಾ, ಕೂರ್ಚ, ಸ್ರುವಾ ಹಾಗೂ ಕಮಂಡಲಗಳನ್ನು ಧರಿಸಿರುವವಳೂ ಆದ ಬ್ರಾಹ್ಮಿಣಿ, ಭಗವತೀ ಗಾಯಿತ್ರಿ ದೇವಿಯ ಧ್ಯಾನವನ್ನು ಮಾಡಬೇಕು. (ಭಾರದ್ವಾಜ 12/4–7). ಇದು ಪ್ರಾತಃ ಕಾಲದಲ್ಲಿ ಮಾಡಬೇಕಾದ ವಿಧಿ.

ಮಧ್ಯಾಹ್ನ ಸಮಯದಲ್ಲಿ ಶ್ವೇತ ವಸ್ತ್ರಾಲಂಕಾರವನ್ನು ಧರಿಸಿ, ಕಮಲ, ಶಂಖ, ಚಕ್ರ ಹಾಗೂ ಗದೆಯನ್ನು ಧರಿಸಿರುವ ಚತುರ್ಹಸ್ತೆಯಾದ ವೈಷ್ಣವೀ ಭಗವತೀ ಸಾವಿತ್ರಿಯ ಧ್ಯಾನ ಮಾಡಬೇಕು. (ಭಾ–12/9–12)

ಸಾಯಂಕಾಲದ ಸಮಯದಲ್ಲಿ ಕೃಷ್ಣ ವರ್ಣದವಳೂ, ವೃಷಾರೂಢಳೂ, ತ್ರಿನೇತ್ರಳೂ, ಚತುರ್ಭುಜ ರೂಪಳೂ, ವ್ಯಾಘ್ರಚರ್ಮಾಂಬರಧಾರಿಣಿಯು ಹಾಗೂ ತನ್ನ ನಾಲ್ಕೂ ಹಸ್ತಗಳಲ್ಲಿ ಅಕ್ಷಮಾಲೆ, ತ್ರಿಶೂಲ, ಡಮರು ಹಾಗೂ ಕಪಾಲಗಳನ್ನೂ ಧರಿಸಿರುವ ರುದ್ರಾಣೀ ಸ್ವರೂಪಳಾದ ಸರಸ್ವತೀ ದೇವಿಯನ್ನು ಧ್ಯಾನ ಮಾಡಬೇಕು.

## ಗಾಯಿತ್ರಿಯ ಮಹಾಧ್ಯಾನ
## (ವಿರಾಟ್ ಸ್ವರೂಪದ ವರ್ಣನೆ)

ಅಧ್ಯಾಯ 13 ಶ್ಲೋಕ 11 ರಿಂದ 24ರ ವರೆಗಿನ ಸಾಹಿತ್ಯದಲ್ಲಿ ಭಗವತೀ ಗಾಯಿತ್ರಿ ಮಾತೆಯ ವಿರಾಟ್ ಸ್ವರೂಪದ ವರ್ಣನೆಯನ್ನು ನೀಡಲಾಗಿದೆ. ಅದರಲ್ಲಿ ಆಕೆಯ ದಿವ್ಯಮಾನಸ ಪೂಜೆ ಹಾಗೂ ಆಕೆಯ ಮಹಿಮೆಯ ಪ್ರತಿಪಾದನೆಯನ್ನು ಮಾಡಲಾಗಿದೆ.

ಆ ವಿರಾಟ್ ಸ್ವರೂಪದ ವರ್ಣನೆಯನ್ನು ಮಾಡುತ್ತಾ ಸಮಸ್ತ ವೇದಾದಿ ಶಾಸ್ತ್ರಗಳು, ವಿದ್ಯೆಗಳು, ಬ್ರಹ್ಮಾವಿಷ್ಣುಮಹೇಶ್ವರಾದಿ ಎಲ್ಲ ದೇವ, ದೇವತೆಗಳು ಗಾಯತ್ರಿಯ ಶಿರಸ್ಸಿನ ಭಾಗಗಳು ಎಂದು ವಿವರಿಸಲಾಗಿದೆ. ದೇವಿಗೆ 15 ಮುಖಗಳು, 3 ಕಾಲುಗಳು ಇವೆ. ವೇದತ್ರಯಿಯು ಮೂರು ಪಾದಗಳನ್ನು ಹೊಂದಿದೆ. ಮಲಯ, ಮಹೇಂದ್ರಾದಿ ಮಹಾನ್ ಪರ್ವತಗಳು ಈಕೆಯ ತೊಡೆಗಳಾಗಿವೆ. ಎಲ್ಲ ಸಾಗರಗಳೂ ಈಕೆಯ ವಸ್ತ್ರಗಳಾಗಿವೆ. ಪೂರ್ವ ಇತ್ಯಾದಿ ಎಂಟು ದಿಕ್ಕುಗಳು ಎಂಟು ಕುಕ್ಷಿಗಳು, ಇತಿಹಾಸ – ಪುರಾಣಾದಿಗಳು ಈಕೆಯ ನಾಭಿಯಾಗಿ, ಎಲ್ಲ ಛಂದಸ್ಸುಗಳು ಸ್ತನರೂಪದ್ದಾಗಿವೆ. ಧರ್ಮಶಾಸ್ತ್ರ ಗಳು ಈಕೆಯ ಹೃದಯರೂಪವಾಗಿದೆ. ನ್ಯಾಯಶಾಸ್ತ್ರಗಳು ಬಾಹುಗಳಾಗಿವೆ. ವೇದಾಂತ ಶಾಸ್ತ್ರಗಳು ವಿಶುದ್ಧ ನಿರ್ಮಲ ಮನಸ್ಸಾಗಿದೆ. ವಾಯುವು ಈಕೆಯ ಉಸಿರಾಟವಾಗಿದೆ. ಚಂದ್ರಮಾ – ಮಂಡಲವು ಮುಖವಾಗಿದೆ. ಮೋಡಗಳ ಕಪ್ಪುಸ್ತರಗಳು ಈಕೆಯ ಕಪ್ಪಾಗಿ, ಪಟ್ಟವಾಗಿರುವ ತಲೆಗೂದಲಾಗಿದೆ. ದೇವಿಯ ಮುಖದಲ್ಲಿ ಬ್ರಹ್ಮ, ಶಿಖೆಯ (ಶೀರ್ಷಾವ)ಲ್ಲಿ ರುದ್ರ, ಹಾಗೂ ಆತ್ಮ ದಲ್ಲಿ ವಿಷ್ಣುವು ಪ್ರತಿಷ್ಠಿತರಾಗಿದ್ದಾರೆ. ಈಕೆಯದು ಸಾಂಖ್ಯಾಯನ ಗೋತ್ರ ವಾಗಿದೆ. ಸಮಸ್ತ ವಿಶ್ವವು ಈಕೆಯದೇ ಸ್ವರೂಪವಾಗಿದೆ. ದಿವ್ಯ ಆಕಾಶ ಮಂಡಲ, ಸೂರ್ಯ ಮಂಡಲ, ಹೇಮಮಯ ಸಿಂಹಾಸನದಲ್ಲಿ ವಿರಾಜಮಾನ ಳಾಗಿರುವ ದೇವೀ ಭಗವತಿಯನ್ನು ಧ್ಯಾನಮಾಡಿ, ಮನಸ್ಸಿನಲ್ಲಿ ಕಲ್ಪಿಸಿಕೊಂಡ ವಿವಿಧ ದಿವ್ಯ ಉಪಚಾರಗಳಿಂದ ಆಕೆಯ ಮಾನಸೀ ಪೂಜೆಯನ್ನು ಮಾಡಬೇಕು.

ಈ ಸ್ಮೃತಿಯ 14ನೇ ಅಧ್ಯಾಯದಲ್ಲಿ ಗಾಯಿತ್ರಿಯ ಪೂಜನದಲ್ಲಿ ವಿಹಿತ ಹಾಗೂ ನಿಷಿದ್ಧ ಗಂಧ, ಪುಷ್ಪ, ಧೂಪಾದಿ ಉಪಚಾರಗಳ, ವಸ್ತುಗಳ, ಪದಾರ್ಥಗಳ ವಿವರಗಳನ್ನು ತಿಳಿಸಲಾಗಿದೆ.

## ಅರ್ಪಿಸುವ ಪುಷ್ಪಗಳ ಲಕ್ಷಣ

ಒಳ್ಳೆಯ ಹಾಗೂ ಗಾಯಿತ್ರಿ ದೇವಿಗೆ ಅರ್ಪಿಸಲು ಯೋಗ್ಯವಾದ ಪುಷ್ಪಗಳ ಲಕ್ಷಣಗಳನ್ನು ಈ ಸ್ಮೃತಿಯಲ್ಲಿ ನೀಡಲಾಗಿದೆ. ಹೂಗಳು ದಳ (ಎಲೆ) ಯಿಂದ ಕೂಡಿದವುಗಳಾಗಿರಬೇಕು. ಅದರೊಂದಿಗೆ ಸ್ವಲ್ಪಪಟ್ಟಿನ ದಂಡೆ ಇರಬೇಕು. ಆದರೆ ಅದು ತುಂಬಾ ಉದ್ದವಾಗಿರಬಾರದು. ಹೂವು ಚನ್ನಾಗಿ ಅರಳಿರಬೇಕು. ಅವು ಹೊಸದಾಗಿದ್ದು, ಕಣ್ಣುಗಳಿಗೆ ಪ್ರಿಯವಾದುದಾಗಿರಬೇಕು ಹಾಗೂ ಸುಗಂಧ ಪೂರಿತವಾದವುಗಳಾಗಿರಬೇಕು.

ತುಂಬಾ ಅರಳಿ ಸೊರಗಿರುವ, ಮೊಗ್ಗಾಗಿರುವ, ಎಲೆಗಳಿಲ್ಲದಿರುವ, ದಂಡೆ ಇಲ್ಲದಿರುವ, ಹಳಸಿ ತಂಗಳಾದ, ಕೂದಲಿನಿಂದ ಕೂಡಿದ ಕ್ರಿಮಿಕೀಟಗಳಿಂದಾವೃತವಾದ, ನೆಲದ ಮೇಲೆ ಉದುರಿರುವ, ಏಟು ಬಿದ್ದಿರುವ, ಎಳೆದಾಡುವುದರಿಂದ ಬಿದ್ದ ಹೂಗಳನ್ನು ದೇವಿಗೆ ಅರ್ಪಿಸಲು ಯೋಗ್ಯವಾದುದಲ್ಲ. ಈ ಸ್ಮೃತಿಯ 14ನೇ ಅಧ್ಯಾಯದಲ್ಲಿ ಇದನ್ನೇ ಹೀಗೆಂದು ತಿಳಿಸಿದೆ –

ಅತಿ ಪಕ್ವಾನ್ಯಪಕ್ವಾನಿ ತಪ್ತಾನಿ ವಿದಲಾನಿ ಚ |
ನಿರ್ನಾಲಾನಿ ಪ್ರಾಕ್ತನಾನಿ ಕೇಶಕೀಟಯುತಾನಿ ಚ || 15 ||
ವಿಕೀರ್ಣಾನಿ ಸಂರಂಧ್ರಾಣಿ ಕೃಷ್ಯೋಪಹತಾನಿ ಚ |
ಏತಾನ್ಯಲಕ್ಷಣಾ ದೀನ ಪುಷ್ಪಾಣಿ ಕಥಾತಾನಿ ತು || 16 ||

## ಪುಷ್ಪಗಳಿಲ್ಲದಿದ್ದಾಗಿನ ಪೂಜಾ ವಿಧಾನ

ವಿಹಿತವಾದುದು, ಪ್ರಶಸ್ತವಾದುದ್ದು ಆದ ಹೂಗಳು ಇಲ್ಲದಿದ್ದಾಗ ಎಲೆ ಅಥವಾ ಪಲ್ಲವಿಗಳಿಂದಲೂ, ಪಲ್ಲವಿಗಳು ಇಲ್ಲದಿದ್ದಾಗ ಅಕ್ಷತೆಗಳು ಅಥವಾ ಎಳ್ಳಿನಿಂದ ಪೂಜೆ ಮಾಡಬಹುದು. ಗಾಯಿತ್ರಿಯ ಪೂಜೆಯಲ್ಲಿ ಬಿಲ್ವ, ತುಳಸೀ, ದಮನಃ (ದವನ), ಭೃಂಗರಾಜ, ಚಂದ್ರ, ಹರಿಕಾಲ ಹಾಗೂ ಕುಶಾದಿಗಳ ಕೋಮಲವಾದ ಎಲೆಗಳು ಅಥವಾ ಪಲ್ಲವಿಗಳಿಂದ ಪೂಜೆಯನ್ನು ಮಾಡಬಹುದು.

## ಉತ್ತಮ, ಮಧ್ಯಮ, ಸಾಮಾನ್ಯ ಹೂಗಳಿಂದ ಮಾಡುವ ಅರ್ಚನೆಯ ಮೂರು ವಿಧಿಗಳು

ತೋಟ–ಉದ್ಯಾನವನಗಳಲ್ಲಿ ತನಗೆ ತಾನೇ ಬೆಳೆದ ಗಿಡದಲ್ಲಿ ಸ್ವಯಂ ಅರಳಿದ ಪುಷ್ಪಗಳು ಪೂಜೆಗೆ ಶ್ರೇಷ್ಠವಾದುವೆಂದು ಪರಿಗಣಿಸಲಾಗುತ್ತದೆ.

ಅರಣ್ಯದಲ್ಲಿನ ಪುಷ್ಪಗಳು ಮಧ್ಯಮ ದರ್ಜೆಯದ್ದಾಗಿರುತ್ತವೆ.

ಕೊಂಡುಕೊಂಡ ಪುಷ್ಪಗಳು, ಇಂದು ಬಿಡಿಸಿದ ಹೂಗಳು ನಾಳೆ ಪೂಜೆಗೆ ಉಪಯೋಗಿಸುವ ಪುಷ್ಪಗಳು ಸಾಮಾನ್ಯ ಅಥವಾ ಸಾಮಾನ್ಯ ರೀತಿಯ ಪುಷ್ಪಗಳೆಂದು ಪರಿಗಣಿಸಲಾಗುವುದು.

ಸ್ವರಾಮೋದ್ಭೂತ ಕುಸುಮೈರರ್ಚಾ ಶ್ರೇಷ್ಠೇತ್ಯುದೀರಿತಾ |
ಮಧ್ಯಮಾ ವನಜೈಃ ಪುಷ್ಪೈಃ ಕ್ರೀತಪುಷ್ಪೈಃ ಕನೀಯಸಾ ||
(ಭಾರದ್ವಾಜ 14/22)

ಈ ರೀತಿಯಲ್ಲಿ ಈ ಅಧ್ಯಾಯದಲ್ಲಿ ಭಗವತಿಗೆ ಅರ್ಪಿಸುವ ಪದಾರ್ಥಗಳನ್ನು ಶುದ್ಧ-ಅಶುದ್ಧ, ಪವಿತ್ರ-ಅಪವಿತ್ರ ಹಾಗೂ ವೈಧತಾ-ನಿಷೇಧತಾ ಎಂದು ತಿಳಿಸಿ, ಹೀಗೆಂದು ಹೇಳಲಾಗಿದೆ. ಪೂಜಿಸುವವನು ಅಥವಾ ಸಾಧಕನು ಈ ವಿಷಯಗಳಲ್ಲಿ ಸಂಪೂರ್ಣ ಎಚ್ಚರಿಕೆಯಿಂದ ಇರಬೇಕಾಗಿದೆ. ಯಾವುದೆಂದರೆ ಅವನ್ನು ದೇವರಿಗೆ ಅರ್ಪಿಸಬಾರದು. ಶುದ್ಧ, ಪವಿತ್ರ ಹಾಗೂ ನಿರ್ಮಲವಾಗಿರುವವುಗಳನ್ನು ಸದ್ಭಾವನೆಯಿಂದ ನಿವೇದಿಸಿದ್ದೇ ಆದರೆ, ಭಗವಂತನು ಅಂತಹವರ ಕೋರಿಕೆಗಳನ್ನು ತಪ್ಪದೆ ಈಡೇರಿಸುವನು.

## ಯಜ್ಞೋಪವೀತದ ವಿಷಯ

15ನೇ ಅಧ್ಯಾಯದಲ್ಲಿ ಯಜ್ಞೋಪವೀತದ ಪ್ರಾಮುಖ್ಯತೆಯನ್ನು ವಿವರಿಸಲಾಗಿದೆ. ಯಜ್ಞೋಪವೀತ ಸಂಸ್ಕಾರವಾದ ನಂತರವೇ ಓರ್ವ ವ್ಯಕ್ತಿ ದ್ವಿಜತ್ವವನ್ನು ಪಡೆಯಬಹುದು. ಆ ನಂತರವೇ ಆ ವ್ಯಕ್ತಿ ಧಾರ್ಮಿಕ ಕರ್ಮ, ವೇದಾದಿ ಪಾಠಗಳ, ಶ್ರೌತ-ಸ್ಮಾರ್ತ ಕರ್ಮಗಳಿಗೆ ಅಧಿಕಾರಿಯಾಗುತ್ತಾನೆ.

ಬ್ರಾಹ್ಮಣರಿಂದ ವಿಧಿ-ವಿಧಾನದ ಮುಖಾಂತರ ಬಹಳ ಪವಿತ್ರತೆಯಿಂದ ಯಜ್ಞೋಪವೀತವನ್ನು ನಿರ್ಮಿಸಲಾಗುವುದು. ಅದರಲ್ಲಿ ಉತ್ತಮವಾದ ಗ್ರಂಥಿ ಇರಬೇಕು. ಅಂತೆಯೇ ಬ್ರಾಹ್ಮಣರ ಮುಖಾಂತರವೇ ಮಂತ್ರದ ಸಮೇತ ಯಜ್ಞೋಪವೀತ ಧಾರಣೆಯನ್ನು ಮಾಡಬೇಕು. ಇದನ್ನೇ ಯಜ್ಞೋಪವೀತ ಸಂಸ್ಕಾರ ಎಂದೆನ್ನುವರು. ವಿಧಿಪೂರ್ವಕವಾಗಿ ಯಜ್ಞೋಪವೀತ ಸಂಸ್ಕಾರ ಆಗದೆ ಇದ್ದಲ್ಲಿ, ಸರಿಯಾದ ರೀತಿಯಲ್ಲಿ ಯಜ್ಞೋಪವೀತವನ್ನು ಸಿದ್ಧಗೊಳಿಸದೆ ಇದ್ದಲ್ಲಿ, ಅದರ ಪ್ರತಿಷ್ಠಾಪನೆಯೂ ಸರಿಯಾದ ರೀತಿಯಲ್ಲಿ ಆಗದಿದ್ದಲ್ಲಿ ಅದು ವ್ಯರ್ಥವಾಗುತ್ತದೆ. ಹಸುವಿನ ಕತ್ತಿಗೆ ಹಗ್ಗ ಕಟ್ಟಿದಷ್ಟೇ ನಿಷ್ಫಲವಾಗುತ್ತದೆ.

ತಸ್ಮಾದ್ಯತ್ನೇನ ಕರ್ತವ್ಯ ಮುಪನೀತಂ ವಿಧಾನತಃ |
ವಿಧಾನೇನ ವಿನಾ ಜಾತಂ ಭವೇದ್ರೋಕಂಠರಜ್ಜುವತ್ || 15 ||

ನಂತರ ವಿಸ್ತಾರವಾಗಿ ಯಜ್ಞೋಪವೀತವನ್ನು ಹೇಗೆ ಸಿದ್ಧಮಾಡುವುದು ಎಂಬುದನ್ನು ವಿವರಿಸಲಾಗಿದೆ. ಬ್ರಹ್ಮನು ಪ್ರಪ್ರಥಮವಾಗಿ ಬ್ರಾಹ್ಮಣರು ಹಾಗೂ ವೇದಗಳ ಮಹತ್ವವನ್ನು ಸಂಸ್ಥಾಪಿಸಲು ಹತ್ತಿಯನ್ನು ಸೃಷ್ಟಿ ಮಾಡಿದನು. ಆದರಿಂದಲೇ ಹತ್ತಿಯು ಪವಿತ್ರವಾದುದು. ಇದೇ ಹತ್ತಿಯಿಂದಲೇ ಯಜ್ಞೋಪವೀತವನ್ನು ಸಿದ್ಧಗೊಳಿಸಲಾಗುತ್ತದೆ.

ಹತ್ತಿಯನ್ನು ಪಡೆಯಲು ಮೊಟ್ಟಮೊದಲನೆಯದಾಗಿ ತನ್ನ ಸ್ವಂತ ಭೂಮಿಯಲ್ಲಿ ಸ್ವತಃ ಹತ್ತಿಯ ಬೀಜವನ್ನು ನೆಡಬೇಕು. ಆ ಭೂಮಿಯು ತುಂಬಾ ಶುದ್ಧವಾದುದಾಗಿರಬೇಕು. ಪ್ರಣವದಿಂದ ಅಭಿಮಂತ್ರಿತವಾದ ನೀರಿನ ಮುಖಾಂತರ ಆ ಭೂಮಿಗೆ ನೀರನ್ನು ಒದಗಿಸಬೇಕು. ಹೀಗೆ ನೀರು ಹರಿಯಿಸುತ್ತಾ, ಸಸ್ಯವು ಮೊಳಕೆಯಾಗುವಂತೆ ಮಾಡಬೇಕು. ಇದೇ ರೀತಿಯ ಫಸಲಿನಿಂದ ಸಸ್ಯವನ್ನು ಬೆಳೆಸುತ್ತಾ ಬರಬೇಕು.

ಈ ರೀತಿ ಗಿಡದಿಂದ ವೃಕ್ಷವಾಗುವಂತೆ ಮಾಡಿ, ಆ ಮರದಿಂದ ಹತ್ತಿಯನ್ನು ಕಿತ್ತು, ಪವಿತ್ರವಾದ ಪಾತ್ರೆಯಲ್ಲಿ ಇರಿಸಿ, ಅದನ್ನು ಶುದ್ಧೀಕರಿಸಬೇಕು. ಎರಡೂ ಕೈಗಳಿಂದ ಆ ಹತ್ತಿ ತೊಳೆಗಳಿಂದ ಬೀಜಗಳನ್ನು ಬೇರ್ಪಡಿಸಬೇಕು. ನಂತರ ಅದನ್ನು ದಾರವಾಗಿ ಮಾರ್ಪಡಿಸಬೇಕು. ಇಲ್ಲಿ ಒಂದು ಎಚ್ಚರದ ಮಾತು. ನಪುಂಸಕರಾಗಲಿ, ವಿಧವೆಯರಾಗಲಿ, ಮುಟ್ಟಾದವರಾಗಲಿ ಆ ಹತ್ತಿಯನ್ನು ಸ್ಪರ್ಶಿಸಿ, ಅಪವಿತ್ರ ಮಾಡಬಾರದು. ಸುಮಂಗಲಿಯರು ಈ ಕಾರ್ಯವನ್ನು ಮಾಡಬಹುದು. ಕಾರಣ, ಹತ್ತಿಯನ್ನು ಆರಿಸುವುದು, ಬಿಡಿಸುವುದು ಅತ್ಯಂತ ಮೃದುವಾದ, ಸೂಕ್ಷ್ಮವಾದ ಕೆಲಸ, ಆದುದರಿಂದಲೇ ಈ ಕಾರ್ಯವನ್ನು ಶುದ್ಧರೂಪದಲ್ಲಿರುವ ಸ್ತ್ರೀಯರೇ ಮಾಡಬೇಕೆಂದು ತಿಳಿಸಲಾಗಿದೆ. ಅವರುಗಳು ಇಂತಹ ಕಾರ್ಯಗಳಲ್ಲಿ ಕುಶಲರಾಗಿರುತ್ತಾರೆ.

ಹೀಗೆ ದಾರ ಸಿದ್ಧವಾದ ನಂತರ ವಿಧಿಗೆ ಅನುಸಾರ ಯಜ್ಞೋಪವೀತವನ್ನು ಸಿದ್ಧಗೊಳಿಸಬೇಕು. ಈ ರೀತಿಯಲ್ಲಿ ವಿಧಿಪೂರ್ವಕವಾಗಿ ಮಾಡಿದಂತಹ, ಸಾಕಷ್ಟು ರೀತಿಗಳಲ್ಲಿ ಪ್ರತಿಷ್ಠಿಸಲ್ಪಟ್ಟಿರುವ ಯಜ್ಞೋಪವೀತವೇ ಬ್ರಹ್ಮಸೂತ್ರ, ಯಜ್ಞಸೂತ್ರ ಹಾಗೂ ದೇಹ ರಕ್ಷೆ ಎಂದು ಕರೆಯಲಾಗುವುದು. ಇಂತಹ

ಯಜ್ಞೋಪವೀತದಲ್ಲಿ ಮೂರು ಕಾಲಗಳು, ಮೂರು ಲೋಕಗಳು, ಮೂರು ಸಂಧ್ಯಗಳು, ಮೂರು ಗುಣಗಳು, ಮೂರು ಅಗ್ನಿಗಳು, ಮೂರು ವರ್ಣಗಳು, ಮೂರು ವೇದಗಳು, ಮೂರು ಸ್ವರಗಳು, ಮೂರು ವ್ಯಾಹೃತಿಗಳು (ಭೂಃ, ಭುವಃ, ಸ್ವಃ) ಹಾಗೂ ಮೂವತ್ಮೂರು ದೇವತೆಗಳು ತಮ್ಮ ತಮ್ಮ ಶಕ್ತಿಗಳೊಂದಿಗೆ ಪ್ರತಿಷ್ಠಿತರಾಗಿರುತ್ತಾರೆ. ಆದುದರಿಂದ ಅಧಿಕಾರವನ್ನು ಪಡೆಯುವ ದ್ವಿಜಾತೀಯನು ಎಲ್ಲ ಕರ್ಮಗಳ ಫಲಪ್ರಾಪ್ತಿಗಾಗಿ ಯಜ್ಞೋಪವೀತವನ್ನು ಧರಿಸಬೇಕಾಗುತ್ತದೆ.

ಯಜ್ಞೋಪವೀತ ದಾರಣೆಯಲ್ಲಿ ಉಪವೀತ, ನಿವೀತ ಹಾಗೂ ಪ್ರಾಚೀನಾ ವೀತ–ಎನ್ನುವ ಮೂರು ವಿದಾನಗಳಿವೆ. ಕಂಠದಲ್ಲಿ ಮಾಲೆಯಂತೆ ಧರಿಸುವುದು 'ನಿವೀತ' ಎಂದೂ, ಎಡಭುಜದ ಮೇಲೆ ಇದ್ದಾಗ 'ಉಪವೀತ' ವೆಂದೂ, ಬಲಭುಜದ ಮೇಲೆ ಹಾಯ್ದು ಹೋದಾಗ 'ಪ್ರಾಚೀನಾವೀತ' ಎಂದೂ ಕರೆಯುಲಾಗುತ್ತದೆ.

## ದರ್ಭೆಯ ಪ್ರಾಮುಖ್ಯತೆ

ಭಾರದ್ವಾಜ ಸ್ಮೃತಿಯ 18ನೇ ಅಧ್ಯಾಯದಲ್ಲಿ ವಿಸ್ತಾರ ರೂಪದಲ್ಲಿ ಗ್ರಾಹ್ಯ (ಸ್ವೀಕರಿಸಲ್ಪಡುವ) ಹಾಗೂ ಅಗ್ರಾಹ್ಯ (ಸ್ವೀಕರಿಸಲು ಅನರ್ಹ)ವಾದ ದರ್ಭೆ, ದರ್ಭೆಯನ್ನು ಕೀಳುವ ವಿಧಾನ ಹಾಗೂ ದರ್ಭೆಯ ಮಹಿಮೆಗಳ ವರ್ಣನೆಯನ್ನು ನೀಡಲಾಗಿದೆ.

ದ್ವಿಜರಿಗಾಗಿ ಶೃತಿ ಹಾಗೂ ಸ್ಮೃತಿಗಳಲ್ಲಿ ನಿತ್ಯನೈಮಿತ್ತಿಕ ಕರ್ಮಗಳನ್ನು ದರ್ಭೆ ಇಲ್ಲದೆ ಮಾಡಿದಲ್ಲಿ ಅವು ನಿಷ್ಫಲವಾಗುತ್ತವೆ – ಎಂದು ವಿವರವಾಗಿ ಸ್ಪಷ್ಟಪಡಿಸಿವೆ. ಆದುದರಿಂದ ಈ ಎಲ್ಲ ಕಾರ್ಯಗಳಿಗೂ ಬಲಗೈ ಬೆರಳಿಗೆ ದರ್ಭೆಯ ಪವಿತ್ರವನ್ನು ಅವಶ್ಯವಾಗಿ ಧರಿಸಿರಲೇಬೇಕು. 'ಕುಶ' (ದರ್ಭೆ) ಶಬ್ದದ ವ್ಯುತ್ಪತ್ತಿಯೆಂದರೆ 'ಕು' ಎಂಬುದು ಸಮಸ್ತ ಪಾಪಗಳ ವಾಚಕವಾಗಿದೆ, 'ಶ' ಅಂದರೆ ಎಲ್ಲ ರೀತಿಯ ಪಾಪಗಳ ದೋಷವನ್ನು ನಾಶಮಾಡುವುದು–ಎಂದರ್ಥ. ಅಂದರೆ ಶೀಘ್ರವಾಗಿ ಪಾಪವನ್ನು ನಾಶ ಮಾಡುವುದೇ 'ಕುಶ'.

ಪಾಪಾಹ್ವಯಃ 'ಕು' ಶಬ್ದಃ ಸ್ಯಾತ್ 'ಶ' ಶಬ್ದಃ ಶಮನಾಹ್ವಯಃ ।
ತೂರ್ಣೇನ ಪಾಪಶಮನಂ ಯೇನೈತತ್ ಕುಶ ಉಚ್ಯತೇ ॥ 4 ॥

ದರ್ಭೆಯ ಮೂಲದಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು ಹಾಗೂ ಅಗ್ರಭಾಗ ದಲ್ಲಿ ಶಿವ–ಸದಾ ನೆಲೆಸಿರುತ್ತಾರೆ. ಆದುದರಿಂದಲೇ ಸಮಸ್ತ ಕರ್ಮಗಳಲ್ಲಿ ದರ್ಭೆಯ ಉಪಯೋಗ ಶ್ರೇಷ್ಠವಾದುದಾಗಿರುತ್ತದೆ.

ಕುಶಸ್ಯ ಮೂಲೇ ಮಧ್ಯೇಽಗ್ರೇ ಬ್ರಹ್ಮವಿಷ್ಣು ಮಹೇಶ್ವರಾಃ |
ಸದಾ ವಸಂತ್ಯತಃ ಶ್ರೇಷ್ಠಃ ಕುಶಃ ಸಕಲಕರ್ಮಸು || 6 ||

ನದೀ ತೀರಗಳು, ಸಮುದ್ರ ಪ್ರದೇಶಗಳು, ತೀರ್ಥಗಳು ಹಾಗೂ ಕಾಡುಗಳಲ್ಲಿ ತನಗೆ ತಾನೇ ಬೆಳೆದಿರುವ ದರ್ಭೆಯು ಶ್ರೇಷ್ಠವೆಂದು ಪರಿಗಣಿಸ ಲಾಗುತ್ತದೆ.

ಹುತ್ತದ ಮೇಲೆ, ಸ್ಮಶಾನದಲ್ಲಿ, ಬೆಂಗಾಡಿನಲ್ಲಿ, ಮರಳಿನಲ್ಲಿ, ಮರಗಳ ನೆರಳಿನಲ್ಲಿ ಬೆಳೆದಿರುವ ದರ್ಭೆಯನ್ನು ಉಪಯೋಗಿಸಬಾರದು. ಅಂತಹ ದರ್ಭೆ ಶುಭಕಾರ್ಯಗಳಿಗೆ ನಿಷಿದ್ಧ — 'ವಲ್ಮೀಕಶ್ಚ ಶ್ಮಶಾನಸ್ಥಃ ಊಷರಸ್ಥಃ ತರೂದ್ಭವಃ.... ಕುಶಃ ಕರ್ಮ ಸ್ವಶೋಭನಃ (ಭಾರ 18/16). ಆದರೆ ಮುತ್ತುಗದಗಿಡ, ಅಶ್ವತ್ಥ, ಕಾಚು, ವಟ, ಬಿಲ್ವ ಇತ್ಯಾದಿ ಶುಭ ವೃಕ್ಷಗಳಡಿ ಯಲ್ಲಿ, ಅವುಗಳ ನೆರಳಿನಲ್ಲಿ ಬೆಳೆದಿರುವ ದರ್ಭೆಯ ಶುಭಕಾರ್ಯಗಳಿಗೆ ಪ್ರಶಸ್ತ ವಾದುದು. (ಭಾರ 18/20).

ಇದೇ ರೀತಿಯಲ್ಲಿ ಬ್ರಾಹ್ಮಣನ ಕೈನಲ್ಲಿನ ದರ್ಭೆಯ (ಪವಿತ್ರದ) ಮಹಿಮೆ ಯನ್ನು ವಿವರಿಸಲಾಗಿದೆ. ಪ್ರತಿನಿತ್ಯವೂ ಬ್ರಾಹ್ಮಣನಾದವನು ದರ್ಭೆಯ ಪವಿತ್ರವನ್ನು ಧರಿಸಬೇಕು. ಇಂದ್ರನ ಕೈನಲ್ಲಿ ವಜ್ರಾಯುಧ ಪರಮ ಶಿವನ ಕೈನಲ್ಲಿ ತ್ರಿಶೂಲ, ವಿಷ್ಣುವಿನ ಕೈನಲ್ಲಿ ಸುದರ್ಶನ ಚಕ್ರ, ವರುಣದೇವನ ಕೈನಲ್ಲಿ ಪಾಶ, ಯಮನ ಕೈನಲ್ಲಿ ದಂಡ–ಇವು ಯಾವ ರೀತಿಯಲ್ಲಿ ಅವರುಗಳಿಗೆ ಶೋಭಾಯಮಾನವೊ, ಅದೇ ರೀತಿಯಲ್ಲಿ ಬ್ರಾಹ್ಮಣನ ಕೈನಲ್ಲಿನ ಪವಿತ್ರವು ಅಮೋಘವೂ, ಫಲಪ್ರದವಾದುದೂ ಆಗಿರುತ್ತದೆ.

ಯಥೇಂದ್ರಸ್ಯಾಶನಿರ್ಹಸ್ತೇ ಯಥಾ ಶೂಲಂ ಕಪರ್ದಿನಃ |
ಯಥಾ ಸುದರ್ಶನಂ ವಿಷ್ಣೋರ್ವಿ ಪ್ರಹಸ್ತಕುಶಸ್ತಥಾ ||123||
ವರುಣಸ್ಯಕರೇ ಪಾಶೋ ಯಥಾ ದಂಡೋ ಯಮಸ್ಯ ತು |
ತಥಾ ಬ್ರಾಹ್ಮಣ ಹಸ್ತಸ್ಥಃ ಸಕಲಂ ಸಾಧಯೇತ್ ಕುಶಃ ||124||

# 6. ದಾಲಭ್ಯ ಸ್ಮೃತಿ

'ದಾಲಭ್ಯ ಸ್ಮೃತಿ' ಯನ್ನು ರಚಿಸಿರುವ ದಾಲಭ್ಯರು ಅತ್ಯಂತ ಪ್ರಾಚೀನ ವೈದಿಕ ಋಷಿ ಹಾಗೂ ಪರಮವೈಷ್ಣವ ಮಹರ್ಷಿಗಳು. ಧರ್ಮಾತ್ಮಾ ಸಂತ, ಮಹಾತ್ಮರು ಹಾಗೂ ಭಕ್ತರಲ್ಲಿ ಇವರು ಪ್ರಮುಖರಾದವರು.

ಪ್ರಹ್ಲಾದ ನಾರದ ಪರಾಶರ ಪುಂಡರೀಕ ವ್ಯಾಸಾಂಬರೀಷ
ಶುಕ ಶೌನಕ ಭೀಷ್ಮ ದಾಲಭ್ಯಾನ್ ।
ರುಕ್ಮಾಂಗದಾರ್ಜುನ ವಸಿಷ್ಠ ವಿಭೀಷಣಾದೀನ್
ಪುಣ್ಯಾನಿಮಾನ್ ಪರಮ ಭಾಗವತಾನ್ ನಮಾಮಿ (ಸ್ಮರಾಮಿ) ||

ಎನ್ನುವ ಸುಪ್ರಸಿದ್ಧ ಪುಣ್ಯ ಶ್ಲೋಕದಂತೆ ದ್ವಾದಶ ಮಹಾಭಾಗವತರಲ್ಲಿ ಪ್ರಥಮ ಸಾಲಿನಲ್ಲಿ ಇವರನ್ನು ಪರಿಗಣಿಸಲಾಗುತ್ತದೆ. ಪ್ರಾತಃಕಾಲ ಸ್ಮರಣೀಯರಲ್ಲಿ ಇವರು ಪ್ರಮುಖರು. ಇಂತಹ ಮಹತ್ವದ ಉದಾತ್ತ ಚಾರಿತ್ಯವುಳ್ಳ ಹಾಗೂ ಸದಾಚಾರಮಯ ಧರ್ಮಾಚರಣ ಮಹಾನ್ ಪುರುಷರಿವರು ಎಂದು ಹೆಸರು ಪಡೆದಿದ್ದಾರೆ.

ದಾಲಭ್ಯರು ಮಹಾನ್ ತಪಸ್ವಿಗಳು, ಜ್ಞಾನಿಗಳು ಹಾಗೂ ದಿವ್ಯ ಯೋಗಶಕ್ತಿಯಿಂದ ಕೂಡಿರುವವರಾಗಿದ್ದರು. ಇವರ ಪೂರ್ಣ ಹೆಸರು 'ಚಿರದಾಲಭ್ಯ' ಎಂದು. ಇವರು ದಲ್ಭ ಗೋತ್ರಕ್ಕೆ ಸೇರಿದವರು.

ಪಾಣಿನಿಯ ಕಣ್ವಾದ-ಗಣ (4-2-111)ದಲ್ಲಿ ಹಾಗೂ ಗಣಪಾಠಗಳಲ್ಲಿ ಇವರ ಉಲ್ಲೇಖವಿದೆ.

' ದಲ್ಭ ' ಪದದಿಂದ ದಾಲಭ್ಯ, ಅಂತೆಯೇ ದಾಲಭ್ಯದಿಂದ ' ದಾಲಭ್ಯಾಯನ ' ಮುಂತಾದ ಶಬ್ದಗಳ ಉತ್ಪತ್ತಿಯಾಗಿದೆ.

ಪುರಾಣಗಳು ಹಾಗೂ ಮಹಾಭಾರತಗಳಲ್ಲಿ ಅನೇಕ ಕಡೆಗಳಲ್ಲಿ ಈತನ ದಿವ್ಯಜ್ಞಾನ ಹಾಗೂ ಉಜ್ವಲ ಚರಿತ್ರೆಯ ವರ್ಣನೆಗಳಿವೆ.

ಮಹಾಭಾರತದ ಸಭಾಪರ್ವ (4) ಹಾಗೂ ವನಪರ್ವ (26-196) ಗಳಲ್ಲಿ ಈತನು ದಾಲ್ಭ್ಯಮುನಿಯ ಅಣ್ಣನೆಂದು ಹೇಳಿದ್ದರೂ, ಮುಂದೆ ದಾಲ್ಭ್ಯ ಹಾಗೂ ಬಕದಾಲ್ಭ್ಯರುಗಳು ಒಂದೇ ಎನ್ನುವ ವಿವರವಿದೆ. ಒಮ್ಮೆ ಈತನು ಪ್ರಾಣಿಗಳಿಗೆ ಸುಖದುಃಖಗಳು ಸ್ಥಿರವಲ್ಲವೆಂದು ಇಂದ್ರನೊಂದಿಗೆ ವಾದ ಮಾಡಿದ

ಉದಾಹರಣೆ ಇದೆ. ನುತ್ತೊಮ್ಮೆ ಪಾಂಡವರ ಅಶ್ವಮೇಧದ ಕುದುರೆ ಇವರ ಆಶ್ರಮದ ಬಳಿ ನಿಂತಿತು. ಕೃಷ್ಣಾರ್ಜುನರು ಇವರನ್ನು ಸಂದರ್ಶಿಸಿ, ಮಾತು ಕತೆಯಾಡಿದರು. ಆಗ ಒಮ್ಮೆ "ನಿಮಗೆ ಎಷ್ಟು ವಯಸ್ಸು" ಎಂದು ಅರ್ಜುನನು ಕೇಳಿದಾಗ ತಾನು ಚತುರ್ಮುಖನ ಇಪ್ಪತ್ತು ಹಗಲು ರಾತ್ರಿಗಳನ್ನು ಕಂಡಿದ್ದೇನೆ ಎಂದು ತಿಳಿಸಿದನು. ಇದನ್ನು ಆಲಿಸಿ, ಆಶ್ಚರ್ಯಭರಿತನಾದ ಕೃಷ್ಣನು ಈತನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಯುಧಿಷ್ಠಿರನ ಯಜ್ಞಶಾಲೆಗೆ ಕರೆದುತಂದು, ಗೌರವ ಸನ್ಮಾನಗಳನ್ನು ಮಾಡಿಸಿದ. ಇದು ಜೈಮಿನಿ ಭಾರತದಲ್ಲಿದೆ.

ವಾಮನ ಪುರಾಣದಲ್ಲಿ ಈತನ ಒಂದು ಅದ್ಭುತ ವೃತ್ತಾಂತವಿದೆ. ಈತ ತನ್ನ ದಿವ್ಯ ಯೋಗಶಕ್ತಿ, ತಪಃ ಶಕ್ತಿ ಹಾಗೂ ಧರ್ಮ ಮರ್ಯಾದೆಯ ಬಲದಿಂದ ಮರಣಿಸಿದ ವ್ಯಕ್ತಿಗಳಿಗೆ ಜೀವ ನೀಡಿದುದೇ ಅಲ್ಲದೆ ಸಂಪೂರ್ಣ ದೇಶವನ್ನೇ ಪುನರ್ಜೀವನಗೊಳಿಸಿದರು. (ಅಧ್ಯಾಯ 39) ಇದೇ ಸನ್ನಿವೇಶ ದಲ್ಲಿ ರಾಜನು ಬ್ರಾಹ್ಮಣರ ಹಾಗೂ ಇತರೇ ಪ್ರಜೆಗಳನ್ನು ಅವಮಾನ ಪಡಿಸಬಾರದೆಂದೂ, ಹೀಗೆ ಮಾಡಿದಲ್ಲಿ ಕೇವಲ ರಾಜನಿಗೇ ಅಲ್ಲದೆ ಸಂಪೂರ್ಣ ರಾಷ್ಟ್ರಕ್ಕೇ ವಿನಾಶ ಉಂಟಾಗುವುದೆಂದೂ ಎಚ್ಚರಿಸಿದ್ದಾರೆ. ಹೀಗೆ ಅಪಮಾನ ಗೊಳಿಸಿದಂತಹ ವ್ಯಕ್ತಿಯು ಮೂರು ತಲೆಮಾರುಗಳವರು ಬಹಳ ಕಷ್ಟನಷ್ಟ ಗಳನ್ನು ಅನುಭವಿಸುವರು ಎಂದು ಆ ಪುರಾಣದ 39/34ರಲ್ಲಿ ಹೇಳಿದೆ.

ಬ್ರಾಹ್ಮಣಾ ನಾವ ಮಂತವ್ಯಾಃ ಪುರುಷೇಣ ವಿಜಾನತಾ |
ಅವಜ್ಞಾತೋ ಬ್ರಾಹ್ಮಣಸ್ತು ಹನ್ಯಾತ್ ತ್ರಿಪುರುಷಂ ಕುಲಮ್ ||

ಮಹರ್ಷಿ ದಾಲಭ್ಯರ ಒಂದು ಆಶ್ರಮ ನೈಮಿಶಾರಣ್ಯದಲ್ಲಿ ಇತ್ತು, ಇದೆ. -ಎಂದು ಆ ಪುರಾಣ (39/28) ತಿಳಿಸುತ್ತದೆ. ಇದೇ ರೀತಿಯಲ್ಲಿ ಉತ್ತರಾ-ಖಂಡದಲ್ಲಿಯೂ ಕೂಡ ಒಂದು ದಾಲಭ್ಯ ತೀರ್ಥ ಹಾಗೂ ದಾಲಭ್ಯ ಆಶ್ರಮವಿದೆ ಯೆಂದು ಮಹಾಭಾರತದ ವನಪರ್ವ (90/12) ತಿಳಿಸುತ್ತದೆ.

ಮಹಾಭಾರತ ಹಾಗೂ ಇತರೇ ಗ್ರಂಥಗಳು ಮಹರ್ಷಿ ದಾಲಭ್ಯರು ಭೂತ–ಭವಿಷ್ಯ ಹಾಗೂ ಮುಂದೆ ನಡೆಯುವ ಘಟನೆಗಳ ಪ್ರತ್ಯಕ್ಷ-ಅಪ್ರತ್ಯಕ್ಷ ಘಟನೆಗಳ ದ್ರಷ್ಟಾರರು ಎಂದು ವರ್ಣಿಸಿದೆ.

ಪತಿವ್ರತೆಯರಲ್ಲಿ ಅಗ್ರಗಣ್ಯಳಾದ ಸಾವಿತ್ರಿಯು ತನ್ನ ಪತಿವ್ರತಾ ಧರ್ಮದ ಆಧಾರದ ಮೇಲೆ ತನ್ನ ಪತಿ ಸತ್ಯವಾನನನ್ನು ಯಮಪಾಶದಿಂದ

ಮುಕ್ತಗೊಳಿಸಿದುದು ಒಂದು ಪ್ರಮುಖ ಘಟನೆ. ಅಂತಹ ಸಮಯದಲ್ಲಿ ಸತ್ಯವಾನನ ತಂದೆ ದ್ಯುಮತ್ಸೇನನು, ತಾಯಿ ಶೈವ್ಯಾಳು ಸತ್ಯವಾನನಿಗಾಗಿ ಆಶ್ರಮ, ಅರಣ್ಯಗಳನ್ನೆಲ್ಲ ಸುತ್ತಾಡಿದರು. ತಮ್ಮ ಮಗ ದೀರ್ಘಾಯುವಾದ ನೆಂಬುದರ ಅರಿವು ಅವರಿಗಿರಲಿಲ್ಲ; ಅದು ತಿಳಿದೂ ಇರಲಿಲ್ಲ. ಆಗ ಅವರು ಮಹರ್ಷಿಗಳನ್ನು ಇದರ ಬಗ್ಗೆ ಕೇಳಲು, ಅವರುಗಳು ದಾಲಭ್ಯರ ಕಡೆ ನೋಡಿದರು. ದಾಲಭ್ಯರು ತಮ್ಮ ದಿವ್ಯ ತಪಃ ಶಕ್ತಿಯಿಂದ ಸತ್ಯವಾನನು ಜೀವಂತವಾಗಿದ್ದು, ದೀರ್ಘಾಯುವಾದ ನೆಂಬುದನ್ನು ತಿಳಿಸಿ, ಅವರಲ್ಲಿ ನಂಬಿಕೆ ಯನ್ನು ಹುಟ್ಟಿಸಿದರು. ಇದು ಮಹಾಭಾರತದ ವನಪರ್ವ (298/17)ದಲ್ಲಿದೆ.

ಮಹರ್ಷಿ-ದಾಲಭ್ಯ ಪ್ರಣೀತವಾದ ಎರಡು ಗ್ರಂಥಗಳು ತುಂಬಾ ಪ್ರಸಿದ್ಧ ವಾದವುಗಳು-ದಾಲಭ್ಯಸ್ಮೃತಿ (ದಾಲಭ್ಯ ಸಂಹಿತಾ) ಹಾಗೂ ದಾಲಭ್ಯಸೂತ್ರ. ಇವೆರಡರಲ್ಲಿ ಮೊದಲನೆಯದು ಧರ್ಮಶಾಸ್ತ್ರ ಗ್ರಂಥವಾಗಿದ್ದು, ಎರಡನೆಯದು ಆಯುರ್ವೇದ ಹಾಗೂ ಚಿಕಿತ್ಸಾ ಶಾಸ್ತ್ರಕ್ಕೆ ಸಂಬಂಧಪಟ್ಟದ್ದಾಗಿದೆ.

ಈಗ ದೊರೆತಿರುವ ದಾಲಭ್ಯಸ್ಮೃತಿಯಲ್ಲಿ 167 ಶ್ಲೋಕಗಳಿವೆ. ತಮ್ಮ ಸ್ಮೃತಿಯ ಪ್ರಾರಂಭದಲ್ಲೇ ಋಷಿಗಳು ಧರ್ಮವಿಚಾರದ ಬಗ್ಗೆ ಕೇಳಿದ ಪ್ರಶ್ನೆ ಗಳಿಗೆ ದಾಲಭ್ಯರು ತಾವು ಮಹರ್ಷಿ ಶಂಖರು ಹೇಳಿರುವ ಧರ್ಮಶಾಸ್ತ್ರವನ್ನು ಸಂಕ್ಷೇಪಗೊಳಿಸಿ ಹೇಳುತ್ತಿದ್ದೇವೆಂದು ತಿಳಿಸಿದ್ದಾರೆ.

ಸ್ಮೃತಿಸಾರಂ ಪ್ರವಕ್ಷ್ಯಾಮಿ ಯಥಾ ಶಂಖೇನ ಭಾಷಿತಮ್ || 4 ||

ಈ ರೀತಿಯಲ್ಲಿ ಈ ಸ್ಮೃತಿಯಲ್ಲಿ ಶಂಖನು ತಿಳಿಸಿರುವ ವಿಷಯಗಳೇ ಅಲ್ಲದೆ ಮನುವಿನ ಅಭಿಪ್ರಾಯಗಳನ್ನು ಉಲ್ಲೇಖಿಸಿದ್ದಾರೆ. ಆದರಿಂದಲೇ 'ಶಂಖಸ್ಯ ವಚನಂ ಯಥಾ' (ಶ್ಲೋ. 86), 'ಮನುರಾಹ ಪ್ರಜಾಪತಿಃ' (ಶ್ಲೋ. 89), 'ಮನುರಬ್ರವೀತ್' (ಶ್ಲೋ. 66, 131, 132, 162) ಎಂದು ದಾಲಭ್ಯರು ತಿಳಿಸುತ್ತಾರೆ.

### ಇಷ್ಟಾಪೂರ್ತ ಧರ್ಮದ ಮಹಿಮೆ

ಅಗ್ನಿಹೋತ್ರ, ತಪಸ್ಸು, ಸತ್ಯಪಾಲನೆ, ದೇವಪೂಜೆ, ಆತಿಥ್ಯ, ವೈಶ್ವದೇವ ಇತ್ಯಾದಿ ಯಜ್ಞ-ಯಾಗಾದಿ ಕರ್ಮಗಳನ್ನು 'ಇಷ್ಟ' ಎಂದು ಕರೆಯಲಾಗು ತ್ತದೆ. ತೋಟಗಳನ್ನು ನಿರ್ಮಿಸುವುದು, ನೆರಳು ಹಾಗೂ ಫಲ ನೀಡುವ ವೃಕ್ಷಗಳನ್ನು ನೆಟ್ಟು, ಬೆಳೆಸುವುದು, ಕೊಳ-ಬಾವಿಗಳನ್ನು ನಿರ್ಮಿಸುವುದು,

ಜಲಾಶಯಗಳು, ದೇವಸ್ಥಾನ, ಧರ್ಮಶಾಲೆ, ಶಿಕ್ಷಣ ನೀಡುವ ಶಾಲೆಗಳು, ಔಷಧಾಲಯ, ಅನಾಥಾಲಯಗಳನ್ನು ಕಟ್ಟಿಸುವುದು, ಹಾಗೂ ಶಿಥಿಲಾವಸ್ಥೆಯಲ್ಲಿರುವ ಇಂತಹವುಗಳನ್ನು ಜೀರ್ಣೋದ್ಧಾರ ಮಾಡುವುದು, ಆರವಟಿಕೆಗಳನ್ನು ಏರ್ಪಡಿಸುವುದು, ಗೋಚಾರ ಭೂಮಿಯ ವ್ಯವಸ್ಥೆ ಮಾಡುವುದು ಇತ್ಯಾದಿ ಪರೋಪಕಾರ ಕಾರ್ಯಗಳನ್ನು ಮಾಡುವುದನ್ನು 'ಪೂರ್ಣಧರ್ಮದ ಕಾರ್ಯ ' ಗಳೆಂದು ಈತ ಕರೆದಿದ್ದಾರೆ.

ಇದರಂತೆಯೇ 'ಇಷ್ಟಾಪೂರ್ತ ಧರ್ಮ' ವನ್ನು ಪಾಲಿಸುವುದೂ ಕೂಡ ಫಲಪ್ರದವಾದುದೆಂದು ಇವರು ತಿಳಿಸಿದ್ದಾರೆ. ಇಷ್ಟಧರ್ಮವನ್ನು ಪಾಲಿಸುವುದರಿಂದ ಮೋಕ್ಷವು ಪ್ರಾಪ್ತವಾಗುತ್ತದೆಯೆಂದೂ, ಪೂರ್ಣಧರ್ಮದ ಕರ್ಮಗಳನ್ನು ನೆರವೇರಿಸುವುದರಿಂದ ಸ್ವರ್ಗಾದಿ ಪುಣ್ಯಲೋಕಗಳು ಪ್ರಾಪ್ತವಾಗುತ್ತವೆಯೆಂದೂ ಹೇಳಲಾಗಿದೆ –

ಇಷ್ಟೇನ ಲಭತೇ ಮೋಕ್ಷಂ ಪೂರ್ತೇ ಸ್ವರ್ಗೋಽಭಿಧೀಯತೆ ॥ 5 ॥

## ಶ್ರಾದ್ಧದಲ್ಲಿ ದೇಯ–ದ್ರವ್ಯಗಳಿಗೆ ಉಚಿತ ಸ್ಥಾನ ನೀಡುವುದು

ದಾಲಭ್ಯಸ್ಮೃತಿಯಲ್ಲಿ ಶ್ರಾದ್ಧ ಪ್ರಕರಣವಿದೆ. ಇದು ಧರ್ಮಮರ್ಯಾದೆಯನ್ನು ನಿರ್ಧರಿಸುವ ವಿಭಾಗವಾಗಿದೆ. ಶ್ರಾದ್ಧವನ್ನು ಅತ್ಯಂತ ಶ್ರದ್ಧೆ ಹಾಗೂ ಭಕ್ತಿಗಳಿಂದ ದ್ರವ್ಯಶುದ್ಧಿಯ ಮುಖಾಂತರ ಮಾಡಬೇಕು. ಹೀಗೆ ಮಾಡುವಾಗ ಶ್ರಾದ್ಧದ ವಿಧಿ, ನಿಯಮಗಳನ್ನು ಚಾಚೂತಪ್ಪದೆ ಸರಿಯಾದ ರೀತಿಯಲ್ಲಿ ಮಾಡಬೇಕು. ಇಲ್ಲದಿದ್ದಲ್ಲಿ ಅದು ಪಿತೃಗಳಿಗೆ ತಲುಪುವುದಿಲ್ಲ. ಭಾವ ಶುದ್ಧಿ, ದ್ರವ್ಯ ಶುದ್ಧಿಗಳೊಂದಿಗೆ ವಿಧಿ–ವಿಧಾನಗಳ ಶುದ್ಧಿಯೂ ಇರಬೇಕು. ಶ್ರಾದ್ಧದಲ್ಲಿ ಪಿತೃಗಳಿಗಾಗಿ ಇಡುವ ಪಿಂಡ ಇತ್ಯಾದಿ ವಸ್ತುಗಳು ಹಾಗೂ ಬ್ರಾಹ್ಮಣರಿಗೆ ನೀಡುವ ವ್ಯಂಜನ ಪದಾರ್ಥಗಳು ಉಚಿತ ಸ್ಥಳ, ಉಚಿತ ಸಮಯ ಹಾಗೂ ಉಚಿತ ಸ್ಥಾನದಲ್ಲಿಯೇ ನೀಡಬೇಕೆಂದಿದೆ. ಈ ವಿಧಿಯನ್ನು ಪಾಲಿಸದೆ ಹೋದಲ್ಲಿ, ದಾತನಿಗೆ (ಶ್ರಾದ್ಧ ಮಾಡುವ ಕರ್ತನಿಗೆ) ಯಾವುದೇ ಫಲವೂ ಪ್ರಾಪ್ತವಾಗುವುದಿಲ್ಲ. ಶ್ರಾದ್ಧದಲ್ಲಿನ ಇಂತಹ ಪದಾರ್ಥಗಳು ಪಾಪರೂಪದ್ದವುಗಳಾಗಿರುತ್ತವೆ –

ಹಸ್ತದತ್ತಂ ತು ಯತ್ ಸ್ನೇಹಲವಣ ವ್ಯಂಜನಾದಿಕಮ್ ॥ 40 ॥
ದಾತಾಶ್ಚ ನೋಪತಿಷ್ಠೇತ ಭೋಕ್ತಾ ಭುಂಜೀತ ಕಿಲ್ಬಿಷಮ್ ॥ 41 ॥

ಆದುದರಿಂದ ಶ್ರಾದ್ಧಕರ್ತನು ಪಿತೃಗಳ ನಿಮಿತ್ತವಾಗಿ ಇಡುವ ಪಿಂಡ ಇತ್ಯಾದಿ ಪದಾರ್ಥಗಳು ನಿರ್ದಿಷ್ಟವಾದ ದರ್ಭರೂಪೀ ಪಾತ್ರೆಯ ಮೇಲೆಯೇ ಇಡಬೇಕು. ಇದಲ್ಲದೆ ಬೇರೆ ರೀತಿಯಲ್ಲಿ ಮಾಡಿದಲ್ಲಿ ಅದು ಪಿತೃಗಳಿಗೆ ತಲುಪುವುದಿಲ್ಲ.

‘ಗಯಾ – ಮಹಾತ್ಮ್ಯೆ’ ಇತ್ಯಾದಿ ಗ್ರಂಥಗಳಲ್ಲಿ ಈ ವಿಷಯಗಳ ಕೆಲವೊಂದು ವಿವರಗಳೂ ಇವೆ. ಇದರಲ್ಲೆ ಭೀಷ್ಮನ ಕಥಾನಕವೂ ಬಂದಿದೆ.

ಒಮ್ಮೆ ಭೀಷ್ಮನು ಗಯೆಯಲ್ಲಿ ತನ್ನ ತಂದೆಯಾದ ಶಂತನುವಿನ ಶ್ರಾದ್ಧವನ್ನು ಮಾಡುತ್ತಿದ್ದ. ಪಿಂಡದಾನ ಮಾಡುವ ಸಮಯ ಪ್ರಾಪ್ತವಾಯಿತು. ಭೀಷ್ಮನು ಪಿಂಡದಾನ ಮಾಡಬೇಕೆಂದಿರುವಾಗ ಸ್ವತಃ ಶಂತನುವೆ ಕಾಣಿಸಿಕೊಂಡು, ಪಿಂಡಕ್ಕಾಗಿ ಕೈಚಾಚಿದ. ಭೀಷ್ಮನಿಗೆ ಇದನ್ನು ಕಂಡು ಆಶ್ಚರ್ಯವಾಯಿತು. ಕಾರಣ, ಯಾರಿಗಾಗಿ, ಯಾರ ನಿಮಿತ್ತ ತಾನು ಶ್ರಾದ್ಧವನ್ನು ಮಾಡುತ್ತಿರುವನೊ, ಅಂತಹ ಪಿತೃವು ಸ್ವತಃ ತನ್ನೆದುರು ನಿಂತು, ಕೈಚಾಚಿರುವಾಗ ಏನು ಮಾಡುವುದು ? ಎಂದು.

ತನ್ನ ತಂದೆಗೇ ನೇರವಾಗಿ ಪಿಂಡದಾನ ಮಾಡಲು, ಆತನ ಕೈನಲ್ಲಿ ಪಿಂಡವನ್ನು ಇಡಲು ಭೀಷ್ಮನು ಮುಂದಾದ ಕೂಡಲೇ ಶ್ರಾದ್ಧ ಮಾಡಿಸುವ ಬ್ರಾಹ್ಮಣರು (ಪುರೋಹಿತರು) ಅದು ಕೂಡದೆಂದು ಅಡ್ಡಿ ಪಡಿಸಿದರು. ಅಂತೆಯೇ ಅವರು ಹೇಳಿದರು, “ಮಹಾರಾಜಾ ! ಧರ್ಮದ ರಹಸ್ಯ ಬಹಳ ಸೂಕ್ಷ್ಮವಾದುದು. ಆದುದರಿಂದ ಶಾಸ್ತ್ರವು ಏನು ಹೇಳುತ್ತದೆಯೋ, ಅದನ್ನೆ ಈಗ ಮಾಡಬೇಕಾಗಿದೆ.”

“ಶಾಸ್ತ್ರ ಏನೆಂದು ಹೇಳುತ್ತದೆ ?” ಭೀಷ್ಮ ಪ್ರಶ್ನಿಸಿದ.

“ಶಾಸ್ತ್ರವು ಹೀಗೆಂದು ತಿಳಿಸುತ್ತದೆ. ಪಿಂಡವನ್ನು ಸ್ವೀಕರಿಸುವುದಕ್ಕಾಗಿ ಸ್ವತಃ ಪಿತೃವೇ ಬಂದರು, ಅದನ್ನು ಆತನ ಕೈಗೆ ನೀಡಬಾರದು. ಆತನಿಗೆ ಪಿಂಡದಾನ ಮಾಡಬಾರದು. ಅದಕ್ಕಾಗಿ ಇರುವ ಪಿಂಡವಿಡುವ ಸ್ಥಳವಾದ ‘ಪಿಂಡವೇದಿ’ಯ ಮೇಲೆ ದರ್ಭಾಸನದ ಮೇಲೆಯೇ ಅರ್ಪಿಸಬೇಕು. ಬೇರೆ ರೀತಿಯಲ್ಲಿ ಹಾಗೆ ಮಾಡಿದಲ್ಲಿ ಅದು ಶಾಸ್ತ್ರ ವಿರುದ್ಧವಾಗುತ್ತದೆ.”

ಬ್ರಾಹ್ಮಣರು ಹೇಳಿದ ಈ ಮಾತುಗಳನ್ನು ಆಲಿಸಿದ ಭೀಷ್ಮನು ಅದರ ಸೂಕ್ಷ್ಮತೆಯನ್ನು ಅರಿತು, ಅವರ ಮಾತುಗಳನ್ನು ಪರಿಪಾಲಿಸಿದ. ಶಂತನುವಿನ

ಕೈನಲ್ಲಿ ಪಿಂಡದಾನ ಮಾಡಲಿಲ್ಲ.

ಶಂತನುವು ಅಂತರ್ಧಾನನಾದನು. ಆತನ ಕೈ ಕೂಡ ಮಾಯವಾಯಿತು. ಕೂಡಲೇ, ಮಹಾರಾಜ ಭೀಷ್ಮ ! ಧನ್ಯ ನೀನು ! ನೀನು ನಿನ್ನ ಧರ್ಮವಾದ ಶಾಸ್ತ್ರದ ಪರಿಪಾಲನೆ ಮಾಡಿದೆ. ಶಾಸ್ತ್ರದ ಆಜ್ಞೆಗೆ ತಲೆಬಾಗಿದೆ. ಇದರಿಂದ ನಿನಗೆ ಶುಭವಾಗುವುದು. ನಿನ್ನ ಪಿತಾ-ಪಿತಾಮಹಾದಿ ಎಲ್ಲ ಪಿತೃಗಣಗಳೂ ಅಕ್ಷಯ ತೃಪ್ತಿಯನ್ನು ಪಡೆದರು.' ಎಂಬ ಅಶರೀರವಾಣಿಯಾಯಿತು.

## ಶ್ರಾದ್ಧ ಸಮಯದಲ್ಲಿ ಮೌನ

ಶ್ರಾದ್ಧ ಮಾಡುವ ಸ್ಥಳದಲ್ಲಿ ಶ್ರಾದ್ಧ ಮಾಡುವ ಸಂಪೂರ್ಣ ನಿಶ್ಶಬ್ದತೆ ಇರಬೇಕು. ಅನಾವಶ್ಯಕ ಮಾತುಕತೆಯಾಡುವುದು, ನಗುವುದು, ಮಾಡ ಬಾರದು. ಸಮಾಧಾನ ಚಿತ್ತದಿಂದ ಪಿತೃಗಳನ್ನು ಧ್ಯಾನಿಸುತ್ತಾ, ಶ್ರಾದ್ಧದ ವಿಧಿಯನ್ನು ಪೂರ್ಣಗೊಳಿಸಬೇಕು. ಇದಕ್ಕೆ ವಿರುದ್ಧವಾಗಿ ನಡೆದುಕೊಂಡಲ್ಲಿ, ನಿರಾಶಗೊಳ್ಳುವ ಪಿತೃಗಳು ಹಿಂತಿರುಗಿ ಹೋಗಿಬಿಡುವರು –

ಹಸತೇ ವದತೇ ಚೈವ ನಿರಾಶಾಃ ಪಿತರೋ ಗತಾಃ || 50 ||

## ಗೋವಧೆಯ ಸಮಾನ ಪಾಪ

ನೇಗಿಲು ಉಳುವಾಗ, ಎತ್ತಿನ ಗಾಡಿಯಲ್ಲಿ, ಎತ್ತುಗಳ ಮುಖಾಂತರ ನಡೆಸುವ ಕಬ್ಬು ಅರೆಯುವ ಅಥವಾ ನೀರೆತ್ತುವ, ಎಣ್ಣೆ ತೆಗೆಯುವ ಗಾಣ ಇತ್ಯಾದಿಗಳಿಗೆ ಉಪಯೋಗಿಸುವಾಗ ದುರ್ಬಲವಾದ, ನಿಶ್ಶಕ್ತವಾದ, ಕಾಯಿಲೆ ಯಿಂದ ಕೂಡಿದ ಎತ್ತುಗಳನ್ನು ಉಪಯೋಗಿಸಬಾರದು. ನಿರ್ದಿಷ್ಟ ಸಂಖ್ಯೆಗಿಂತ ಕಡಿಮೆಯ ಸಂಖ್ಯೆಯಲ್ಲಿ ಎತ್ತುಗಳನ್ನು ಹೂಡಬಾರದು. ಇಂತಹ ಕಾರ್ಯವು ಗೋಹತ್ಯೆಗೆ ಸಮಾನವಾದುದು.

ಹಲೇ ವಾ ಶಕಟೇ ಚೈವ ದುರ್ಬಲಂ ಯೋ ನಿಯೋಜಯೇತ್ |
ಪ್ರತ್ಯಾವಾಹೇ ಸಮುತ್ಪನ್ನೆ ತತಃ ಪ್ರಾಪ್ನೋತಿ ಗೋವಧಮ್ ||101||

## ಹಸುವಿನ ಹಾಲು ಹಿಂಡುವ ಕ್ರಮ

ದಾಲಭ್ಯರು ಬಹಳ ದಯಾಳುಗಳಾಗಿದ್ದರು. ಪ್ರತಿಯೊಂದು ಜೀವಿಯ ಮೇಲೂ ಅಪಾರ ಕರುಣೆಯನ್ನು ತೋರುತ್ತಿದ್ದರು. ಅದರಲ್ಲೂ ಗೋಮಾತೆಯ ಬಗ್ಗೆ ಅಪಾರ ಒಲುವು, ಸ್ನೇಹ. ಆದುದರಿಂದ ಅವರು ತಮ್ಮ ಸ್ಮೃತಿಗಳಲ್ಲಿ ಬಹಳಷ್ಟು ಕಡೆ ಗೋರಕ್ಷಣೆ ಹಾಗೂ ಗೋ-ಸಂವರ್ಧನೆಯ ಬಗ್ಗೆ ಸ್ಪಷ್ಟ

ನಿಲುವನ್ನು ತಳೆದಿದ್ದಾರೆ. ಇವರು ಮಹಾನ್ ಗೋಭಕ್ತರಾಗಿದ್ದರು.

ಇವರು ಗೋಹತ್ಯೆಯನ್ನು ಮಹಾನ್ ಪಾಪ ಎಂದು ತಿಳಿಸಿರುತ್ತಾರೆ. ಗೋ ಸಂಪತ್ತು ಹೇಗೆ ವೃದ್ಧಿಯಾಗಬೇಕು, ಗೋ ಪ್ರೀತಿ ಹೇಗೆ ಪುಷ್ಟವಾಗಬೇಕು ಹಾಗೂ ವೀರ್ಯವತ್ತಾಗಿರಬೇಕು, ಗೋವು ತನ್ನ ಕರುವಿಗೆ ಯಾವ ರೀತಿ ಪ್ರೀತಿಯಿಂದ ಹಾಲು ಕುಡಿಯಿಸಬೇಕು, ಗೋಪಾಲಕರು ಅಂತಹ ಗೋವಿನಿಂದ ಎಷ್ಟು ಮಾತ್ರದ ಹಾಲನ್ನು ಪಡೆಯಬೇಕು, ಹೇಗೆ ಹಿಂಡಬೇಕು ಎಂಬುದರ ವಿವರಗಳನ್ನು ತಿಳಿಸುತ್ತಾ,

ದ್ವೌ ಮಾಸೌ ಪಾಲಯೇದ್ವತ್ಸಂ ದ್ವೌ ಮಾಸೌ ದ್ವೌ ಸ್ತನೌ ದುಹೇತ್ ।
ದ್ವೌ ಮಾಸೌ ಚೈಕವೇಲಾಯಾಂ ಶೇಷಂ ಕಾಲಂ ಯಥೇಚ್ಛಯಾ ॥ 111 ॥

ಇದರ ಭಾವವೆಂದರೆ – 'ಗೋವು ಕರುವನ್ನು ಹಾಕಿದ ಮೇಲೆ, ಅದರ ಹಾಲಷ್ಟನ್ನೂ ಕರುವಿಗೇ ಕುಡಿಸಬೇಕು. ಕರುವು ಎರಡು ತಿಂಗಳಾದ ನಂತರ ಮುಂದಿನ ಎರಡು ತಿಂಗಳವರೆಗೆ ನಾಲ್ಕು ಸ್ತನಗಳಲ್ಲಿ ಎರಡು ಸ್ತನಗಳದ್ದನ್ನು ಮಾತ್ರ ಹಿಂಡಿಕೊಂಡು, ಉಳಿದ ಎರಡು ಸ್ತನಗಳದ್ದನ್ನು ಕರುವಿಗೇ ಬಿಡಬೇಕು. ಆದರ ಮುಂದಿನ ಎರಡು ತಿಂಗಳು ಬೆಳಗ್ಗೆ ಅಥವಾ ಸಾಯಂಕಾಲ ಮಾತ್ರ ಹಾಲು ಕರೆಯಬೇಕು. ಒಂದು ಸಮಯದ ಹಾಲನ್ನು ಪೂರ್ತಾ ಕರುವಿಗೆ ಬಿಡಬೇಕು. ಕರುವಿಗೆ ಆರು ತಿಂಗಳು ಆದ ಮೇಲೆ ಹಾಲನ್ನು ಇಷ್ಟಬಂದ ಹಾಗೆ ಕರೆಯಬಹುದು. ಅಷ್ಟು ಹೊತ್ತಿಗೆ ಕರುವೂ ತನ್ನ ಕಾಲ ಮೇಲೆ ತಾನು ನಿಲ್ಲುವ, ಹುಲ್ಲು ತಿಂದು ಜೀರ್ಣಿಸಿಕೊಳ್ಳುವ ಮಟ್ಟವನ್ನು ಮುಟ್ಟಿರುತ್ತದೆ, ಪುಷ್ಟವಾಗಿರುತ್ತದೆ.

## ಮೃತ್ಯುಃ ಶೌಚದ ವ್ಯವಸ್ಥೆ

ದಾಲಭ್ಯ ಸ್ಮೃತಿಯಲ್ಲಿ ಜನನಾಶೌಚ ಹಾಗೂ ಮರಣಾಶೌಚಗಳ ಬಗ್ಗೆಯೂ ವಿವರಗಳಿವೆ. ಯಜ್ಞವಲ್ಕ್ಯರಂತೆ ಮಹರ್ಷಿ ದಾಲಭ್ಯರೂ ಕೂಡ ಈ ವಿಚಾರದಲ್ಲಿ ಸಮಾನ ರೀತಿಯ ಚಿಂತನೆಯನ್ನು ನಡೆಸಿದ್ದಾರೆ.

ಮರಣಾಶೌಚದ ಬಗ್ಗೆ ಅವರ ಅಭಿಪ್ರಾಯ ಹೀಗಿದೆ. ಹಲ್ಲು ಹುಟ್ಟುವವರೆವಿಗಿನ ಚಿಕ್ಕ ಮಕ್ಕಳು ಮೃತರಾದಾಗ ಸದ್ಯಃ ಶುದ್ಧಿ ಮಾತ್ರ ಸಾಕು. ಇದಕ್ಕೆ ಯಾವುದೇ ಆಶೌಚವಿಲ್ಲ. ಚೂಡಾಕರಣ ಇತ್ಯಾದಿಗಳ ವರೆಗಿನ ಮಕ್ಕಳ

ಮೃತದ ಬಗ್ಗೆ ಒಂದು ಅಹೋ ರಾತ್ರಿ ಮಾತ್ರ ಅಶೌಚವಿರುತ್ತದೆ. ಉಪನಯನ ವಾಗದ ಬಾಲಕರು ಮೃತರಾದರೆ ಮೂರು ರಾತ್ರಿಗಳು, ಆ ನಂತರದವರು ಮೃತ ರಾದಾಗ ಹತ್ತು ಅಹೋ–ರಾತ್ರಿಗಳು ಸೂತಕವಿರುತ್ತದೆ.

ಇದೇ ರೀತಿಯಲ್ಲಿ ಬಾಲಿಕೆಯು ಚೂಡಾಕರಣವಾಗುವವರೆಗಿನ ಮೃತ್ಯು ವಾದರೆ ಸದ್ಯಃ ಶುದ್ಧಿ ಸಾಕು. ಮದುವೆಗೆ ಮುಂಚಿನ ಮೃತ್ಯುವಾದರೆ ಮೂರು ದಿನ ಹಾಗೂ ಮದುವೆಯು ನಂತರದ ಕನ್ಯೆಯಾದರೆ ಹತ್ತು ದಿನ ಆಶೌಚವನ್ನು ಆಚರಿಸಬೇಕಾಗುತ್ತದೆ.

ಆದನ್ತ ಜನ್ಮನಃ ಸದ್ಯ ಆ ಚೂಡಾನ್ನೈಶಿಕೀ ಸ್ಮೃತಾ |
ಆವ್ರತಾತ್ತು ತ್ರಿರಾತ್ರಂ ಸ್ಯಾದ್‌ದಶರಾತ್ರಮತಃ ಪರಮ್ ||116||
ಆಚೂಡಾಕರಣಾತ್ ಸದ್ಯಃ ಪ್ರದಾನಾನ್ನೈಶ್ರಿಕೀ ಸ್ಮೃತಾ |
ಆವಿವಾಹಾತ್ ತ್ರಿರಾತ್ರಂ ಸ್ಯಾದ್‌ದಶ ರಾತ್ರಮತಃ ಪರಮ್ ||117||

## ಎರಡು ಅಶೌಚಗಳು (ಅಶೌಚಗಳು ಸಂಪಾತ)

ಅಶೌಚಗಳಲ್ಲಿ ಜನನ ಹಾಗೂ ಮರಣಗಳು – ಈ ರೀತಿ ಎರಡು ತರಹ ಇವೆ. ಇವುಗಳಲ್ಲಿ ಮರಣ ಶೌಚವೇ ಪ್ರಬಲವಾದದು. ಒಂದು ಅಶೌಚದ ನಡುವೆ ಇನ್ನೊಂದು ಆಶೌಚ ಉಂಟಾದಾಗ ಅದಕ್ಕೆ ಸೂಕ್ತ ವ್ಯವಸ್ಥೆಯನ್ನು ದಾಲಭ್ಯರು ತಿಳಿಸಿದ್ದಾರೆ. ಮರಣಾಶೌಚದ ನಡುವೆ ಜನನಾಶೌಚ ಬಂದಲ್ಲಿ ನಂತರದಲ್ಲಿ ಜನನಾಶೌಚದ ವೈಲಿಗೆ ಇರುವುದಿಲ್ಲ. ಆ ಅಶೌಚವು ಮರಣಾ ಶೌಚದೊಂದಿಗೆ ಪೂರ್ಣಗೊಳ್ಳುತ್ತದೆ. ಮರಣಾಶೌಚದಿಂದ ಜನನಾಶೌಚ ಪೂರ್ಣಗೊಳ್ಳುತ್ತದೆ, ಶುದ್ಧಿಯಾಗುತ್ತದೆ. ಆದರೆ ಜನನಾಶೌಚದಿಂದ ಮರಣ ಶೌಚದ ಶುದ್ಧಿಯಾಗುವುದಿಲ್ಲ.

ಇದೇ ರೀತಿಯಲ್ಲಿ ಎರಡು ಸಮಾನಾಂತರಗಳೂ ಉಂಟಾಗಬಹುದು. ಜನ್ಮದ ಆಶೌಚವಲ್ಲಿ ಎರಡನೇ ಜನ್ಮದ ಆಶೌಚ ಉಂಟಾಗಬಹುದು. ಮೃತ್ಯುವಿನ ಆಶೌಚದ ನಡುವೆ ಮತ್ತೊಂದು ಮೃತ್ಯುವಿನ ಆಶೌಚ ಉಂಟಾಗಬಹುದು. ಹೀಗಾದಲ್ಲಿ ಮೊದಲನೆ ಆಶೌಚದ ಉಳಿದ ದಿನಗಳಲ್ಲಿ ಎರಡನೇ ಅಶೌಚ ದೂರವಾಗಿಬಿಡುತ್ತದೆ –

ಶವಸೂತಕ ಮುತ್ಪನ್ನಂ ಪಶ್ಚಾಜ್ಜಾತಂ ನ ಸೂತಕಮ್ |
ಶಾವೇನ ಶುಧ್ಯತೇ ಸೂತಿಃ ಸೂತ್ಯಾ ಶಾವಂ ನ ಶುಧ್ಯತಿ ||124||

ಜಾತಂ ಜಾತೇನ ಶುದ್ಧಿಂ ಸ್ಯಾನ್ಮೃತಕಂ ಮೃತಕೇನ ತು ||125||

## ಪಾಪಗಳ ಪ್ರಾಯಶ್ಚಿತ್ತ (ಗಾಯಿತ್ರಿ ಜಪ)

ಮಹರ್ಷಿ ದಾಲಭ್ಯರು ಯಾವಾಗಲೂ ಸತ್ಕರ್ಮ ಹಾಗೂ ಧರ್ಮಾಚರಣದ ಬಗ್ಗೆಯೇ ಪರಾಮರ್ಶೆ ಮಾಡುವವರು. ಏಕೆಂದರೆ ಸತ್ಕರ್ಮವೇ ಮಾನವನ ಅಭ್ಯುದಯದ ಪರಮ ಕಲ್ಯಾಣದ ಕಾರಕವಾಗಿದೆ.

ಅಸತ್ಕರ್ಮ ಹಾಗೂ ಅಧರ್ಮಾಚರಣೆಯಿಂದ ಪ್ರತಿಕೂಲ ಪರಿಣಾಮವಾಗುತ್ತದೆ, ನರಕ ಪ್ರಾಪ್ತಿಯಾಗುತ್ತದೆ. ಆದಾಗ್ಯೂ ದುಷ್ಕರ್ಮವೇನಾದರೂ ಉಂಟಾದಲ್ಲಿ, ತನ್ನ ಮನಸ್ಸಿನಲ್ಲಿಯೇ ಗ್ಲಾನಿ ಉಂಟಾಗಿ, ಪಶ್ಚಾತ್ತಾಪ ಪಡುವಂತಾಗುವುದು ಒಳ್ಳೆಯದು. ಈ ಪಾಪದ ನಿವಾರಣೆಗಾಗಿ ವ್ಯಕ್ತಿಯು ಎಳ್ಳಿನ ಹವನ ಕಾರ್ಯವನ್ನು ಮಾಡಬೇಕು. ಇದರೊಂದಿಗೆ ಗಾಯಿತ್ರಿ ಜಪವನ್ನು ಮಾಡಬೇಕು. ತಾನು ಶುದ್ಧನಾದನೆಂದು ಆತ್ಮ ಹೇಳುವವರೆಗೂ ಜಪಮಾಡುತ್ತಲೇ ಇರಬೇಕು. ಗಾಯಿತ್ರಿ ಮಂತ್ರದಲ್ಲಿ ಅಪಾರ ಶಕ್ತಿ ಇದೆ. ಶ್ರದ್ಧೆಯಿಂದ ಅದರ ಜಪ ಮಾಡಿದಲ್ಲಿ ಎಲ್ಲ ಪಾಪಗಳೂ ಕಳೆದು, ಶುದ್ಧರಾಗಿ, ಗಾಯಿತ್ರಿ ಮಾತೆಯ ಕೃಪಾಪಾತ್ರರಾಗುತ್ತಾರೆ.

ಯತ್ರ ಯತ್ರ ಚ ಸಂಕೀರ್ಣ ಪಶ್ಯೇದಾತ್ಮಾ ನಮಾತ್ಮನಾ |
ತತ್ರ ತತ್ರ ತಿಲೈರ್ಹೋಮೋ ಗಾಯತ್ರ್ಯಾವರ್ತನಂ ತಥಾ ||166||



# 7. ಹಾರೀತ ಸ್ಮೃತಿ

ಮಹರ್ಷಿ ಹಾರೀತರು ಪರಮ ವೈಷ್ಣವರು. ಇವರ ಹೆಸರಿನಲ್ಲಿ ಮೂರು ಸ್ಮೃತಿಗಳು ಇವೆ. ಅವು ಯಾವುವೆಂದರೆ –

1. ಲಘು ಹಾರೀತ ಸ್ಮೃತಿ
2. ಹಾರೀತ ಸ್ಮೃತಿ
3. ವೃದ್ಧ ಹಾರೀತ ಸ್ಮೃತಿ

ಇವುಗಳೊಂದಿಗೆ 'ಹಾರೀತ ಧರ್ಮ ಸೂತ್ರ' ಎನ್ನುವ ಗ್ರಂಥವೊಂದರ ಉಲ್ಲೇಖವಿರುವುದೂ ಕಂಡು ಬಂದಿದೆ.

ಮನುಸ್ಮೃತಿಯ ಪ್ರಸಿದ್ಧ ಟೀಕಾಕಾರನಾದ ಕುಲ್ಲೂಕ ಭಟ್ಟನು ತನ್ನ 'ಮನ್ವರ್ಥ ಮುಕ್ತಾವಲೀ' ಎನ್ನುವ ಗ್ರಂಥದಲ್ಲಿ ಶೀಲದ ಲಕ್ಷಣ ನಿರೂಪಣೆ ಮಾಡುತ್ತಾ ಮಹರ್ಷಿ ಹಾರಿತರ ಒಂದು ಶ್ಲೋಕವನ್ನು ಉದಾಹರಿಸಿದ್ದಾನೆ. ಈ ಶ್ಲೋಕವು ಈಗ ದೊರೆತಿರುವ ಸ್ಮೃತಿಗಳಲ್ಲಿ ದೊರೆಯುವುದಿಲ್ಲ. ಇದರಿಂದ ಮೂಲ ಹಾರೀತ ಸ್ಮೃತಿಯು ಈಗಿರುವುದಕ್ಕಿಂತ ಬೇರೆಯೇ ಆದ ರೂಪವನ್ನು ಹೊಂದಿತ್ತು ಎಂದು ಹೇಳಬಹುದು.

ಮಾನವನ ಶೀಲವನ್ನು ಕುರಿತು ಹೇಳುವ ಆ ವಿವರಣೆಯು ಅತ್ಯಂತ ಮಹತ್ವ ಪೂರ್ಣವಾದುದು. ಆ ವಿವರಣೆಯು ಈ ರೀತಿ ಇದೆ –

'ಬ್ರಹ್ಮಣ್ಯತಾ ದೇವ ಪಿತೃ ಭಕ್ತತಾ ಸೌಮ್ಯತಾ ಅಪರೋಪತಾಪಿತಾ ಅನಸೂಯತಾ ಮೃದುತಾ ಅಪಾರುಷ್ಯಂ ಮೈತ್ರತಾ ಪ್ರಿಯವಾದಿತ್ವಂ ಕೃತಜ್ಞತಾ ಶರಣ್ಯತಾ ಕಾರುಣ್ಯಂ ಪ್ರಶಾಂತಿ ಶ್ಚೇತಿ ತ್ರಯೋದಶವಿಧಂ ಶೀಲಮ್.'

ಮನುಸ್ಮೃತಿಯ 2/6ರ ಶ್ಲೋಕದ ಬಗ್ಗೆ ಮನ್ವರ್ಥ ಮುಕ್ತಾವಲಿ ಯಲ್ಲಿನ ಮೇಲೆ ತಿಳಿಸಿದ ವಿವರಣೆಯ ತಾತ್ಪರ್ಯವೇನೆಂದರೆ – ಮಾನವನ ಶೀಲವನ್ನು 13 ರೀತಿಗಳಲ್ಲಿ ವಿಭಾಗಿಸಬಹುದು – ಎಂದು.

ಶೀಲವಂತನಾದವನ 13 ಲಕ್ಷಣಗಳು ಯಾವುವೆಂದರೆ– 1. ಬ್ರಾಹ್ಮಣತ್ವ ವನ್ನು ತಿಳಿದಿರುವುದು, 2. ದೇವತೆಗಳು ಹಾಗೂ ಪಿತೃಗಳಲ್ಲಿ ಭಕ್ತಿಯನ್ನು ಹೊಂದಿರುವುದು, 3. ಸೌಮ್ಯತೆಯಿಂದ ಕೂಡಿರುವುದು, 4. ಇತರರಿಗೆ

ನೋವನ್ನು ಕೊಡದೆ ಇರುವುದು, 5. ಬೆನ್ನ ಹಿಂದೆ, ವ್ಯಕ್ತಿಯ ಪರೆಯಲ್ಲಿ ಯಾರನ್ನೂ ನಿಂದಿಸದೆ ಇರುವುದು, 6. ಮೃದುತನವನ್ನು ಹೊಂದಿರುವುದು, 7. ಕಟುವಾಗಿ ಮಾತನಾಡದೆ ಇರುವುದು, 8. ಎಲ್ಲರೊಂದಿಗೂ ಸ್ನೇಹವನ್ನು ಹೊಂದಿರುವುದು, 9. ಮಧುರವಾಗಿ ಇತರರೊಂದಿಗೆ ಸಂಭಾಷಿಸುವುದು, 10. ಮಾಡಿದ ಉಪಕಾರವನ್ನು ಸ್ಮರಿಸುವುದು, 11. ಶರಣಾಗತಿತತ್ವವನ್ನು ರಕ್ಷಿಸುವುದು, 12. ಎಲ್ಲ ಜೀವಿಗಳಿಗೂ ದಯೆ ತೋರುವುದು, 13. ಸದಾ ಕಾಲದಲ್ಲೂ ಶಾಂತ ಸ್ವಭಾವದಿಂದ ಕೂಡಿರುವುದು.

ಮಹರ್ಷಿ ಹಾರೀತರ ಈ ಮಾತುಗಳನ್ನು ಪ್ರಮಾಣ ಭೂತವೆಂದು ನಂಬಲಾಗಿದೆ. ಬೌಧಾಯನ, ಆಪಸ್ತಂಭ ಹಾಗೂ ವಸಿಷ್ಠ ಇತ್ಯಾದಿಯವರುಗಳು ಇವನ್ನು ಪ್ರಮಾಣ ಸ್ವರೂಪವೆಂದು ಉದಾಹರಿಸಿದ್ದಾರೆ. ಇದರೊಂದಿಗೆ ಕೃತ್ಯಕಲ್ಪತರು, ಸ್ಮೃತಿ ಚಂದ್ರಿಕಾ ಇತ್ಯಾದಿ ಹೊಸ ಭಾವನೆಗಳನ್ನು ಪ್ರೋತ್ಸಾಹಿಸುವ ನಿಬಂಧ ಗ್ರಂಥಗಳು ಹಾಗೂ ಅನೇಕ ನಿಬಂಧಕಾರರು ಹಾರೀತನ ಅನೇಕ ಅಭಿಪ್ರಾಯಗಳನ್ನು ಅತ್ಯಂತ ಗೌರವದಿಂದ, ಸಮ್ಮಾನದಿಂದ ಕಂಡಿದ್ದಾರೆ.

ಮಹಾ ಭಾರತದಲ್ಲಿ ಮಹರ್ಷಿ ಹಾರೀತನ ಹೆಸರಿನಲ್ಲಿ ಒಂದು ಭಗವದ್ಗೀತೆಯೂ ಇದೆ. ಇದನ್ನು 'ಹಾರೀತ ಗೀತಾ' ಎಂದು ಕರೆಯುತ್ತಾರೆ. ಅದರಲ್ಲಿನ ಅನೇಕ ಉಪದೇಶಗಳು ಉಪಯುಕ್ತವೂ. ಮಾನವ ಜೀವನಕ್ಕೆ ಅತ್ಯಗತ್ಯವಾದವುಗಳೂ ಆಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಲಾಗಿದೆ –

ಬೇರೆಯುವರು ನಮ್ಮನ್ನು ವಿಮರ್ಶಿಸದಂತಹ ರೀತಿಯಲ್ಲಿ ನಾವು ನಡೆದುಕೊಳ್ಳಬೇಕು ಎಂದು ಹೇಳುವ ಹಾರೀತರು ಪ್ರತಿಯೊಬ್ಬ ಮಾನವನೂ ಕಣ್ಣುಗಳಿಂದ, ಮನಸ್ಸಿನಿಂದ, ಮಾತಿನಿಂದ ಬೇರೆಯವರ ದೋಷಗಳನ್ನು ನೋಡುವುದು ಬೇಡ, ಯೋಚಿಸುವುದು ಬೇಡ, ಹೇಳುವುದು ಬೇಡ ಎಂದು ಹೇಳುತ್ತಾರೆ. ಯಾರ ಎದುರುನಲ್ಲಿಯೂ, ಬೆನ್ನಿನಲ್ಲಿಯೂ ಇತರರ ದೋಷಗಳ ಬಗ್ಗೆ ಚರ್ಚೆ ಮಾಡುವುದು ಬೇಡ ಎಂದು ಅವರು ತಿಳಿಸುತ್ತಾರೆ –

ನ ಚಕ್ಷುಷಾ ನ ಮನಸಾ ನ ವಾಚ ದೂಷಯೇದಪಿ |
ನ ಪ್ರತ್ಯಕ್ಷಂ ಪರೋಕ್ಷಂ ವಾ ದೂಷಣಂ ವ್ಯಾಹರೇತ್ ಕ್ವಚಿತ್ ||
[ಮಹಾ. ಶಾಂತಿ. 278/4]

ಎಲ್ಲ ಧರ್ಮಗಳಿಗಿಂತಲೂ ಮಿಗಿಲಾದುದು 'ಅಹಿಂಸಾ' ಧರ್ಮ. ಆದುದರಿಂದ ಅಹಿಂಸಾ ಧರ್ಮವನ್ನು ಪರಿಪಾಲಿಸುತ್ತಾ ಎಲ್ಲ ಜೀವಿಗಳೊಂದಿಗೂ ಮಿತ್ರತ್ವದಿಂದ ಇರಬೇಕು. ಯಾರೊಂದಿಗೂ ಶತ್ರುತ್ವವನ್ನು ಮಾಡಬಾರದು. ಇದೇ ಮಾತನ್ನು ಹಾರೀತ ತಿಳಿಸುತ್ತಾ –

ನ ಹಿಂಸ್ಯಾತ್ ಸರ್ವಭೂತಾನಿ ಮೈತ್ರಾಯಣ ಗತಶ್ಚರೇತ್ |
ನೇದಂ ಜೀವಿತಮಾಸಾದ್ಯ ವೈರಂ ಕುರ್ವೀತ ಕೇನಚಿತ್ ||
[ಮಹಾ. ಶಾಂತಿ. 278/5]

ಎಂದು ತಿಳಿಸುತ್ತಾರೆ.

ಅಂದರೆ ಎಲ್ಲ ಜೀವಿಗಳೊಂದಿಗೆ ಅಹಿಂಸೆಯುತವಾಗಿ ನಡೆದುಕೊಳ್ಳಬೇಕು, ಯಾರಿಗೂ ನೋವನ್ನು ಕೊಡಬಾರದು. ಎಲ್ಲರೊಂದಿಗೆ ಸ್ನೇಹದಿಂದ ಇರಬೇಕು. ಈ ನಶ್ವರ ಜೀವನವನ್ನು ನಂಬಿ ಯಾರೊಂದಿಗೂ ದ್ವೇಷವನ್ನು ಬೆಳೆಸಿಕೊಳ್ಳಬಾರದು.

ಈ ರೀತಿಯಲ್ಲಿ ಪ್ರತಿಯೊಬ್ಬರೂ 'ಸಹಿಷ್ಣುತೆ' ಎನ್ನುವ ಗುಣವನ್ನು ಹೊಂದಿರಬೇಕೆಂದು ಅವರು ತಿಳಿಸುತ್ತಾರೆ –

ಅತಿವಾದಾಂಸ್ತಿತಿಕ್ಷೇತ ನಾಭಿಮನ್ಯೇತ ಕಂಚನ |
ಕ್ರೋಧ್ಯಮಾನಃ ಪ್ರಿಯ ಬ್ರೂಯಾದಾಕೃಷ್ಟಃ ಕುಶಲಂ ವದೇತ್ ||
[ಮಹಾ. ಶಾಂತಿ. 278/6]

ಇದರ ಭಾವವಿಷ್ಟೆ. ಯಾರಾದರೂ ತನ್ನ ಬಗ್ಗೆ ಅಪಮಾನಕರ ರೀತಿಯಲ್ಲಿ ಮಾತನಾಡಿದ್ದೇ ಆದರೆ, ನಿಂದಿಸಿ ಕಟುವಚನಗಳನ್ನು ಹೇಳಿದ್ದೇ ಆದರೆ ಅವನ್ನು ಎದುರು ಮಾತನಾಡದೆ ಸಹಿಸಬೇಕು. ಯಾರಿಗೂ ಅಹಂಕಾರ ಅಥವಾ ಸೊಕ್ಕಿನಿಂದ ಮಾರುತ್ತರ ಕೊಡಬಾರದು. ಯಾರಾದರೂ ಕೋಪಗೊಂಡು ಮಾತನಾಡಿದರೂ, ಅವರೊಂದಿಗೆ ಪ್ರಿಯ ವಚನಗಳನ್ನೆ ಆಡಬೇಕು. ಯಾರಾದರೂ ಬೈದರೂ ಕೂಡ, ಅವರಿಗೆ ಹಿತವಾದ ಮಾತುಗಳನ್ನೆ ಆಡಬೇಕು.

ಈ ಕೆಲವೇ ಮಾತುಗಳಿಂದ ವ್ಯಾವಹಾರಿಕ ಜೀವನದಲ್ಲಿ ಎಷ್ಟೊಂದು ಸುಂದರವಾದ ಶಿಕ್ಷಣವನ್ನು ಮಹರ್ಷಿ ಹಾರೀತರು ನೀಡಿದ್ದಾರೆ ಎಂಬುದನ್ನು ನಾವು ಕಾಣಬಹುದು. ಇದೇ ರೀತಿಯಲ್ಲಿ ಜ್ಞಾನ, ಭಕ್ತಿ, ಸದಾಚಾರ, ಶೌಚಾಚಾರ, ಕರ್ತವ್ಯಾಕರ್ತವ್ಯ, ಸತ್ಯ, ನ್ಯಾಯ, ಪರೋಪಕಾರ, ತಪಸ್ಸು,

ಸ್ವಾಧ್ಯಾಯ ಹಾಗೂ ಯೋಗಚರ್ಯೆಗಳ ಬಗ್ಗೆ ಉಪದೇಶಗಳು ಅವರ ಸ್ಮೃತಿಯಲ್ಲಿ ತುಂಬಿವೆ.

ಇಲ್ಲಿ ಅವರ ಕೃತಿಗಳ ಸಾರಾಂಶವನ್ನು ನೀಡಲಾಗಿದೆ.

### 1. ಲಘುಹಾರೀತ ಸ್ಮೃತಿ

ಈಗ ಉಪಲಬ್ಧವಿರುವ ಈ ಸ್ಮೃತಿಯಲ್ಲಿ 117 ಶ್ಲೋಕಗಳಿವೆ. ಇವುಗಳಲ್ಲಿ ಆದ್ಯೋಪಾಂತ ವಿವಿಧ ಪ್ರಾಯಶ್ಚಿತ್ತ ವಿಧಾನಗಳು ಹಾಗೂ ಶುದ್ಧಿಗಳ ವರ್ಣನೆಗಳು ಇವೆ.

### 2. ಹಾರೀತ ಸ್ಮೃತಿ

ಈ ಕೃತಿಯು ಚಿಕ್ಕ ಚಿಕ್ಕ 7 ಅಧ್ಯಾಯಗಳಲ್ಲಿ ಉಪನಿಬದ್ಧವಾಗಿದೆ. ಇದರಲ್ಲಿ ಹತ್ತಿರ ಹತ್ತಿರ 200 ಶ್ಲೋಕಗಳಿವೆ. ಅಲ್ಲಲ್ಲಿ ಇದನ್ನು ಲಘುಹಾರೀತ ಸ್ಮೃತಿ ಎಂಬುದಾಗಿಯೂ ಕರೆಯಲಾಗುತ್ತದೆ.

ಇದರ ಆರು ಅಧ್ಯಾಯಗಳಲ್ಲಿ ಸಂಕ್ಷೇಪವಾಗಿ 4 ಆಶ್ರಮಗಳು ಹಾಗೂ ನಾಲ್ಕು ವರ್ಣಗಳ ಧರ್ಮವನ್ನು ತಿಳಿಸಲಾಗಿದೆ. ಕೊನೆಯದಾದ ಏಳನೇ ಅಧ್ಯಾಯದಲ್ಲಿ ಯೋಗಚರ್ಯೆಯ ವರ್ಣನೆ ಇದೆ.

ಈ ವರ್ಣಾಶ್ರಮ ಧರ್ಮಗಳನ್ನು ಅನುಷ್ಠಾನ ಮಾಡುವುದರಿಂದ ಸ್ವರ್ಗ-ಉಪವರ್ಗಗಳು ಪ್ರಾಪ್ತವಾಗುತ್ತದೆ. ಇವುಗಳನ್ನು ಅನುಸರಿಸುವುದರಿಂದ ಹೇಗೆ ಕಲ್ಯಾಣವಾಗುತ್ತದೆ ಎಂಬುದನ್ನು ವಿವರಿಸಲಾಗಿದೆ.

'ಯೋಗಶಾಸ್ತ್ರಂ ಪ್ರವಕ್ಷ್ಯಾಮಿ ಸಂಕ್ಷೇಪಾತ್ ಸಾರಮುತ್ತಮಮ್' ಎನ್ನುವ ಅಧ್ಯಾಯ 7 ಶ್ಲೋಕ 2ರಲ್ಲಿ ಈ ವಿವರವು ನಮಗೆ ಪರಿಚಿತವಾಗುತ್ತದೆ.

ಯೋಗಾಭ್ಯಾಸದಿಂದ ಹಿಂದಿನ ಜನ್ಮದಲ್ಲಿ ಮಾಡಿದ ಎಲ್ಲ ಪಾತಕಗಳೂ ನಾಶವಾಗುತ್ತವೆ - 'ಯೋಗಾಭ್ಯಾಸಬಲೇನೈವ ನಶಯೇಯುಃ ಪಾತಕಾನಿ ತು' ಎಂದು 7/3ದಲ್ಲಿ ತಿಳಿಸಲಾಗಿದೆ.

ಯೋಗದ ಪ್ರಕ್ರಿಯೆಯನ್ನು ವಿವರಿಸುತ್ತಾ ಅವರು ಮುಂದುವರೆದು ಹೀಗೆಂದು ತಿಳಿಸುತ್ತಾರೆ – 'ಸಾಧಕನು ಎಲ್ಲಕ್ಕಿಂತ ಮೊದಲು ಪ್ರಾಣಾಯಾಮದ ಸಹಾಯದಿಂದ ವಾಣಿಯಿಂದ ಸಂಯಮ ಹಾಗೂ ಪ್ರತ್ಯಾಹಾರದಿಂದ ಇಂದ್ರಿಯಗಳನ್ನು ವಶಪಡಿಸಿಕೊಳ್ಳುವುದು – ಇತ್ಯಾದಿ ಸಾಧ್ಯವಾಗುತ್ತದೆ.

ಇವುಗಳನ್ನು ಧಾರಣೆ ಮಾಡುವ ಅಭ್ಯಾಸವನ್ನು ಹೊಂದುವುದರಿಂದ

ದುರ್ಧರ್ಷ ಹಾಗೂ ಅಜೇಯ ಮನಸ್ಸು ಕೂಡ ಬಹಳ ಸರಳತೆಯಿಂದ ವಶವಾಗುತ್ತದೆ. ಒಂದೇ ಸನ್ನಿವೇಶದಲ್ಲಿ ಇದು ಕೇಂದ್ರೀಕೃತವಾಗುತ್ತದೆ. ಧಾರಣೆಯ ಮುಖಾಂತರ ಏಕಾಗ್ರ – ವೃತ್ತಿ ಹಾಗೂ ಏಕಾಗ್ರ – ಮನಸ್ಸು ಉಂಟಾಗುತ್ತದೆ. ಇದರ ಮುಖಾಂತರ ಸಂಪೂರ್ಣ ಜಗತ್ತಿನ ಆಧಾರ ಭೂತವಾದ ನಿರ್ಮಲವೂ, ಅತಿ ಸೂಕ್ಷ್ಮವೂ ಆದ ಪರಮಾತ್ಮ ತತ್ವದ ಧ್ಯಾನದಲ್ಲಿ ಲೀನವಾಗುತ್ತದೆ.

ಪರಮಾತ್ಮನ ಸ್ವರೂಪವು ಶುದ್ಧವೂ, ತಪ್ತವೂ ಆದ ಚಿನ್ನದ ಸಮಾನವಾಗಿದ್ದು, ನಿರ್ಮಲವೂ, ಅತಿ ದೀಪ್ತಿಮಾನವಾದುದು ಆಗಿರುತ್ತದೆ. ಇದೇ ಶುದ್ಧವಾದ ಆತ್ಮ. ಇದು ಪ್ರತಿಯೋರ್ವನ ಶರೀರದಲ್ಲಿ ಹಾಗೂ ಬಾಹ್ಯ ವಿಶ್ವದಲ್ಲಿ ಹರಡಿರುತ್ತದೆ. ಈ ರೀತಿಯಲ್ಲಿ ಎಲ್ಲ ಜೀವಿಗಳಲ್ಲೂ, ಯೋಗಿಗಳ ಹೃದಯದಲ್ಲೂ ನೆಲೆಸಿರುವುದೇ ಪರಮಾತ್ಮ ಎನ್ನಿಸಿಕೊಳ್ಳುತ್ತದೆ. ಈ ಪರಮಾತ್ಮನ ಧ್ಯಾನದಿಂದ ಸಾಧಕನ ಹಾಗೂ ಸಂಪೂರ್ಣ ವಿಶ್ವದ ಕಲ್ಯಾಣವಾಗುತ್ತದೆ. ಎದುವರೆವಿಗೂ ಈ ತತ್ವವು ಪ್ರಾಪ್ತವಾಗುವುದಿಲ್ಲವೊ ಅದುವರೆವಿಗೂ ನಿರಂತರವಾಗಿ ಆ ಪರಮಾತ್ಮನ ಧ್ಯಾನದಲ್ಲಿ ನಿರತನಾಗಿರಬೇಕು.

ಆತ್ಮಲಾಭ ಸುಖಂ ಯಾವತ್ ತಪೋಧ್ಯಾನ ಮುದೀರಿತಮ್ ||7–8||

ಪಕ್ಷಿಯು ಒಂದು ರೆಕ್ಕೆಯ ಸಹಾಯದಿಂದ ಆಕಾಶದಲ್ಲಿ ಹಾರಲಾಗುವುದಿಲ್ಲ. ಅದಕ್ಕೆ ಹಾರಲು ಎರಡೂ ರೆಕ್ಕೆಗಳ ಅವಶ್ಯಕತೆ ಇದೆ. ಇದೇ ರೀತಿಯಲ್ಲಿ ಯೋಗಾಭ್ಯಾಸದಲ್ಲಿ ಕರ್ಮಯೋಗದ ಮುಖಾಂತರ ವಿಶೇಷ ಜ್ಞಾನವನ್ನು ಪಡೆಯಬೇಕು ಹಾಗೂ ಅದೇ ಜ್ಞಾನದ ಆಶ್ರಯದ ಮುಖಾಂತರ ಯೋಗದಲ್ಲಿ ಉತ್ತರೋತ್ತರ ಪ್ರವೃತ್ತಿಯಾಗುತ್ತಲಿರುವುದು ಸಾಧ್ಯ. ಇಂತಹ ಸಾಧಕನು ಉತ್ತರೋತ್ತರ ಅಭ್ಯಾಸ ಮುಂದುವರೆಸುತ್ತಾ ಹೋದರೆ ಶಾಶ್ವತ ಬ್ರಹ್ಮವನ್ನು ಪಡೆಯುವನು.

ಉಭಾಭ್ಯಾಮಪಿ ಪಕ್ಷಾಭ್ಯಾಂ ಯಥಾ ಖೇ ಪಕ್ಷಿಣಾಂ ಗತಿ ಃ |
ತಥೈವ ಜ್ಞಾನಕರ್ಮಾಭ್ಯಾಂ ಪ್ರಾಪ್ಯತೇ ಬ್ರಹ್ಮ ಶಾಶ್ವತಮ್
||7/10–11||

ಈ ರೀತಿಯಲ್ಲಿ ಯೋಗಿಯು ಸರ್ವಥಾ ವಿಜಿತೇಂದ್ರಿಯನೂ, ವೈರಾಗ್ಯವಂತನೂ ಹಾಗೂ ಶಾಂತನೂ ಆಗುವನು. ಅಂತೆಯೇ ಇವುಗಳ ಆಶ್ರಯದಿಂದ

ಅವನು ವಿಷ್ಣುವಿನ ಪರಮಪದವನ್ನು ಪಡೆಯುವನು. ಇದೇ ಯೋಗದ ಚಮತ್ಕಾರವಾಗಿರುತ್ತದೆ.

### 3. ವೃದ್ಧಹಾರೀತ ಸ್ಮೃತಿ

ಮಹರ್ಷಿ ಹಾರೀತನ ಮುಖಾಂತರ ರಚಿತವಾದ ವೃದ್ಧಹಾರೀತ ಸ್ಮೃತಿ ಅಥವಾ ವೃದ್ಧಹಾರೀತ ಸಂಹಿತೆಯು ತುಂಬಾ ದೊಡ್ಡ ಗ್ರಂಥವಾಗಿದೆ. ಇದರಲ್ಲಿ ಎಂಟು ದೊಡ್ಡ ಅಧ್ಯಾಯಗಳಿವೆ; ಸುಮಾರು 3500 ಶ್ಲೋಕಗಳಿವೆ. ಈ ದೃಷ್ಟಿಯಿಂದ ಇದು ಎಲ್ಲ ಸ್ಮೃತಿಗಳಿಗಿಂತ ದೊಡ್ಡದು. ಶ್ರೀ ವೈಷ್ಣವರ ಆಚಾರ-ವಿಚಾರಗಳು ಹಾಗೂ ಸಿದ್ಧಾಂತಗಳು ಇದರಲ್ಲಿ ಸವಿಸ್ತಾರವಾಗಿ ಪ್ರತಿಪಾದಿತವಾಗಿವೆ. ವಿಷ್ಣು ಭಕ್ತಿಯನ್ನು ಕುರಿತಾದ ಏಕಮಾತ್ರ ಗ್ರಂಥವಾಗಿದೆ.

ಅ) ಮಹಾವಿಷ್ಣುವಿಗೆ ದಾಸ್ಯ ಭಕ್ತಿ :

ಇದರ ಪ್ರಾರಂಭದಲ್ಲಿ ಮಹಾವೈಷ್ಣವನಾದ ರಾಜಾ ಅಂಬರೀಷನು ಮಹರ್ಷಿ ಹಾರೀತನನ್ನು ಕುರಿತು "ಮಾನವನ ಪರಮ ಧರ್ಮವು ಯಾವುದು?" ಎಂದು ಕೇಳುತ್ತಾನೆ. ಈ ವಿಷಯದ ಬಗ್ಗೆ ಮಹರ್ಷಿಯೊಂದಿಗೆ ಜಿಜ್ಞಾಸೆಯನ್ನು ಮಾಡುವನು.

ಆಗ ಮಹರ್ಷಿ ಹಾರೀತನು ಹೀಗೆನ್ನುವನು, "ಭಗವಾನ್ ವಿಷ್ಣುವಿನಲ್ಲಿ ದಾಸ್ಯ-ಭಕ್ತಿಯನ್ನು ತೋರುವುದೇ ಪರಮಧರ್ಮವಾಗಿದೆ."

ಭಗವಾನ್ ವಿಷ್ಣುವಿನ ಮಹಿಮೆ, ಆತನ ಭಕ್ತವತ್ಸಲತೆ, ಭಕ್ತರ ಮೇಲೆ ಕರುಣೆಯನ್ನು ತೋರುವುದು ಹಾಗೂ ಸರ್ವರಿಗೂ ಹಿತವನ್ನು ಬಯಸುವುದು, ಇತ್ಯಾದಿಗಳನ್ನು ಆತನು ಪ್ರತಿಪಾದಿಸುವನು. ಕಡೆಯಲ್ಲಿ ನಿಷ್ಕರ್ಮವನ್ನು ಬೋಧಿಸುವನು. ಯಾವ ರೀತಿ ಎಂದು ಕೇಳಿದುದಕ್ಕೆ, ಹಾರೀತರು ಹೀಗೆಂದು ಉತ್ತರಿಸುವರು. 'ವಿಷ್ಣುವಿನಲ್ಲಿ ದಾಸ್ಯತ್ವವನ್ನು ಸ್ವೀಕರಿಸುವುದು, ಆತನೊಂದಿಗೆ ಸ್ವಾಮಿ-ಸೇವಕ ಭಾವದ ಸಂಬಂಧವನ್ನು ಹೊಂದಿರುವುದು, ಆತನಿಗೆ ಶರಣಾಗತನಾಗುವುದು, ನಿಃಸ್ವಾರ್ಥ ಭಾವದಿಂದ ಆತನ ಸೇವೆ ಮಾಡುವುದೇ ಪರಮ ಧರ್ಮವಾಗಿದೆ. ಇದೇ ದಾಸ್ಯಾಭಾವದಿಂದ ಭಗವತ್ ಪ್ರಾಪ್ತಿಯಾಗಿ ಮುಕ್ತಿಯು ಲಭಿಸುತ್ತದೆ. ಇಲ್ಲದಿದ್ದಲ್ಲಿ ನರಕದಲ್ಲಿ ಬೀಳುವರು –

ದಾಸ್ಯೇನೈವ ಭವೇನ್ ಮುಕ್ತಿರನ್ಯಥಾ ನಿರಯಂ ಭವೇತ್ || 1/18.'

ಮಹರ್ಷಿ ಹಾರೀತರು ಮುಂದುವರೆದು ಹೀಗೆನ್ನುತ್ತಾರೆ –

'ಭಗವಾನ್ ವಿಷ್ಣುವನ್ನು ತನ್ನ ಪರಮ ಸ್ವಾಮಿ ಹಾಗೂ ನಿಜವಾದ ಹಿತೈಷಿ ಎಂದು ತಿಳಿದು, ತನ್ನನ್ನು ಆತನ ಸೇವಕನೆಂದು ತಿಳಿಯಬೇಕು. ಈ ರೀತಿಯಲ್ಲಿ ದಾಸ್ಯ ಭಕ್ತಿಯ ಅವಲಂಬನೆಯನ್ನು ಗ್ರಹಣ ಮಾಡಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುವವರಿಗೆ ಭಗವಾನ್ ಶ್ರೀ ಹರಿಯು ತನ್ನ ಪರಮ ಪ್ರೀತಿಯನ್ನು ತೋರಿಸುವನು.'–

ತಸ್ಮಾದ್ದಾಸ್ಯಂ ಪರಾಂ ಭಕ್ತಿಮಾಲಂಬ್ಯ ನೃಪ ಸತ್ತಮ |
ನಿತ್ಯಂ ನೈಮಿತ್ತಿಕಂ ಸರ್ವಂ ಕುರ್ಯಾತ್ ಪ್ರೀತ್ಯೈ ಹರೇಃ ಸದಾ ||
(ವೃದ್ಧ ಹಾರೀತ–1/21)

ಎಲ್ಲ ಕರ್ಮಗಳಲ್ಲಿ ಶ್ರೇಷ್ಠವಾದುದು ಯಾವುದು ಎಂಬ ಪ್ರಶ್ನೆಗೆ ಪರಮಾತ್ಮನಿಗೆ ಎಲ್ಲ ರೀತಿಯಲ್ಲಿ ಸೇವೆ ಮಾಡುವುದೇ ಶ್ರೇಷ್ಠವಾದ ಕರ್ಮ. ಇದೇ ಪರಮಧರ್ಮವೂ ಆಗಿದೆ.

ಅಯಮೇವ ಪರಂ ಧರ್ಮಃ ಪ್ರಧಾನಂ ಸರ್ವಕರ್ಮಣಾಮ್ ||
(ವೃದ್ಧಹಾರಿತ 1/27)

ನಂತರದಲ್ಲಿ ಮಹರ್ಷಿ ಹಾರೀತರು ಬಹಳ ವಿಸ್ತಾರ ರೂಪದಲ್ಲಿ ಶ್ರೀ ವೈಷ್ಣವರು ಧರಿಸುವ ಊರ್ಧ್ವಪುಂಡ್ರ, ಶಂಖ, ಚಕ್ರ, ಗದಾ, ಶಾರ್ಙ್ಗಧನುಸ್ಸು ಇತ್ಯಾದಿ ಪವಿತ್ರ ಚಿಹ್ನೆಗಳನ್ನು ಧಾರಣೆ ಮಾಡುವ ವಿಧಿ, ಶ್ರೀ ವೈಷ್ಣವರ ಸಂಸ್ಕಾರಗಳ ವಿಧಿಗಳು, ಶ್ರೀ ವೈಷ್ಣವರ ನಾಮಕರಣ ಸಂಸ್ಕಾರಗಳ ವಿಧಿಗಳು, ಮಂತ್ರ ಸಂಸ್ಕಾರ ಹಾಗೂ ಮಂತ್ರ ದೀಕ್ಷೆಯ ವಿಧಿಗಳನ್ನು ವಿವರಿಸಿದ್ದಾರೆ.

ಶ್ರೀ ವೈಷ್ಣವ ದೀಕ್ಷೆಯನ್ನು ಪಡೆಯುವುದಕ್ಕೆ ಮುಂಚೆ ಶಿಷ್ಯನು ಮಾಡಬೇಕಾದ ಕರ್ತವ್ಯಗಳೆಂದರೆ ಆಚಾರ್ಯನನ್ನು ಭಕ್ತಿಪೂರ್ವಕವಾಗಿ ಆರಾಧನೆ ಮಾಡಿ, ಅವರಿಂದ ಶ್ರೀ ವೈಷ್ಣವ ಮಂತ್ರವನ್ನು ಪಡೆಯುವುದಕ್ಕಾಗಿ –

ಭೋ ಗುರೋ ಬ್ರೂಹಿ ಮಂತ್ರಂ ಮೇ ಬ್ರೂಯಾದಿತಿ ದಯಾನಿಧೇ ||
(ವೃದ್ಧಹಾರೀತ 2/127)

ಎಂದು ಪ್ರಾರ್ಥಿಸಬೇಕು.

ಇದರನುಸಾರ ಗುರುವು ಶರಣಾಗತನಾದ ಶಿಷ್ಯನಿಗೆ ರಾಮ, ಕೃಷ್ಣ ಅಥವಾ ಭಗವಾನ್ ನರಸಿಂಹ – ಮುಂತಾದವರ ಅಷ್ಟಾಕ್ಷರ, ದ್ವಾದಶಾಕ್ಷರ ಇತ್ಯಾದಿ ಮಂತ್ರಗಳನ್ನು ವಿಧಿಪೂರ್ವಕವಾಗಿ ಉಪದೇಶಿಸಬೇಕು.

ರಾಮಕೃಷ್ಣ ನೃಸಿಂಹಾಖ್ಯಾನ್ ಮಂತ್ರಾನ್ ತಸ್ಮೈ ನಿವೇದಯೇತ್ ||
(ವೃದ್ಧಹಾರೀತ 2/129)

ಇದೇ ಕ್ರಮದಲ್ಲಿ ಮುಂದುವರಿಯುತ್ತಾ ಇವುಗಳಲ್ಲಿ ವಿಷ್ಣುವಿನ ಬಹಳ ಸುಂದರವಾದ ಧ್ಯಾನಗಳನ್ನು ವರ್ಣಿಸಲಾಗಿದೆ ಹಾಗೂ ಶ್ರೀ ಸಹಿತ ಭಗವಾನ್ ವಿಷ್ಣುವಿನ ಉಪಾಸನಾ ವಿಧಿಯನ್ನು ಕೂಡ ಪ್ರತಿಪಾದಿತವಾಗಿರುವುದನ್ನು ಕಾಣಬಹುದು. ಮುಂದೆ ಮಂತ್ರಯೋಗದ ವಿಶೇಷ ಧ್ಯಾನದೊಂದಿಗೆ ಪ್ರತಿಪಾದಿತವಾಗಿರುವ ಹಾಗೂ ಭಗವನ್ನಾಮ ಮಹಿಮೆಯನ್ನು ವರ್ಣಿಸಿರುವುದನ್ನು ಕಾಣಬಹುದು.

ಆ) ಮಂತ್ರಯೋಗದ ವರ್ಣನೆ :

ಮಂತ್ರಯೋಗದ ವಿವರಗಳು ಪಾಂಚರಾತ್ರ ಸಂಹಿತೆಗಳು, ನೃಸಿಂಹ ಪೂರ್ವತಾಪಿನೀ, ರಾಮ ಪೂರ್ವ ತಾಪಿನೀ ಹಾಗೂ ಗೋಪಾಲ ಪೂರ್ವ ತಾಪಿನೀ ಉಪನಿಷತ್ತುಗಳಲ್ಲಿ ಸವಿಸ್ತಾರವಾಗಿ ಕಂಡು ಬರುತ್ತದೆಯಾದರೂ ಆಚಾರ್ಯ ಹಾರೀತರು ಈ ಮಂತ್ರಯೋಗವನ್ನು ಪ್ರಭಾವಶಾಲೀ ರೀತಿಯಲ್ಲಿ ಸಾಂಗೋಪಾಂಗವಾಗಿ ವಿವೇಚಿಸಿದ್ದಾರೆ. ಇದರಲ್ಲಿ ವರಾಹ, ವಾಮನ, ರಾಮ, ಕೃಷ್ಣ ಇತ್ಯಾದಿ ಪರಮಾತ್ಮನ ಎಲ್ಲ ಅವತಾರಗಳ ಮಂತ್ರಗಳು ಹಾಗೂ ಆ ಮಂತ್ರಗಳ ಸಾಧನೆಗಳನ್ನು ಸವಿಸ್ತಾರ ಪ್ರಕ್ರಿಯೆಗಳನ್ನು ತಿಳಿಸಲಾಗಿದೆ. ವಿಶೇಷವಾಗಿ ನರಸಿಂಹ ಉಪಾಸನೆಯ ಬಗ್ಗೆ ಒತ್ತನ್ನು ನೀಡಲಾಗಿದೆ.

ಆಚಾರ್ಯ ಹಾರೀತರ ಈ ನರಸಿಂಹ ಉಪಾಸನಾ ಪ್ರಕರಣವು ನರಸಿಂಹ ಪೂರ್ವತಾಪಿನೀ ಉಪನಿಷತ್, ನೃಸಿಂಹ ಪುರಾಣ, ಬ್ರಹ್ಮಪುರಾಣ, ಪ್ರಪಂಚ ಸಾರ ಹಾಗೂ ಶಾರದಾತಿಲಕ ಇತ್ಯಾದಿ ಗ್ರಂಥಗಳೊಂದಿಗೆ ಬಹಳಷ್ಟು ಸಾಮ್ಯವನ್ನು ಹೊಂದಿದೆ. ನರಸಿಂಹ ಮೂಲ ಮಂತ್ರದಲ್ಲಿಯೂ ಕೂಡ ಯಾವುದೇ ಅಂತರವೂ ಕಂಡುಬರುವುದಿಲ್ಲ.

ಇ) ಭಗವಾನ್ ನೃಸಿಂಹರ ಮೂಲ ಮಂತ್ರ :

ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಮ್ |
ನೃಸಿಂಹಂ ಭೀಷಣಂ ಭದ್ರಂ ಮೃತ್ಯೋರ್ಮೃತ್ಯುಂ ನಮಾಮ್ಯಹಮ್ ||
(ವೃದ್ಧ–ಹಾರೀತ 3/341–42)

ಎಂಬುದು ಭಗವಾನ್ ನೃಸಿಂಹರ ಮೂಲ ಮಂತ್ರವಾಗಿದೆ. ಇದೇ ರೀತಿ

ಯಲ್ಲಿ ಲಕ್ಷ್ಮೀ ನೃಸಿಂಹರ ಮೂಲ ಮಂತ್ರವೂ ಈ ರೀತಿ ಇದೆ –

ಕ್ಷ್ರಾಂ ಹ್ರೀಂ ಶ್ರೀಂ ಶ್ರೀಂ ನೃಸಿಂಹಾಯ ನಮಃ ।

ಈ ಸ್ಮೃತಿಯಲ್ಲಿ ಭಗವಾನ್ ನೃಸಿಂಹರ ಅನೇಕ ರಮಣೀಯ ಧ್ಯಾನಗಳೂ ಇವೆ. ಇವುಗಳಲ್ಲಿ ಅವರ ಸೌಮ್ಯ ಹಾಗೂ ರೌದ್ರ–ಇವೆರಡರ ಸ್ವರೂಪಗಳ ವರ್ಣನೆಯೂ ಇದೆ. ಅಲ್ಲದೆ ಬಹಳಷ್ಟು ಭಯವಾದಾಗ, ರಕ್ಷಣೆಗಾಗಿ ನೃಸಿಂಹರ ರೌದ್ರ ರೂಪವನ್ನು ಧ್ಯಾನ ಮಾಡಬೇಕಾಗಿದೆಯೆಂದೂ, ಅಭ್ಯುದಯ ಇತ್ಯಾದಿಗಳಿಗಾಗಿ ಆ ಪರಮಾತ್ಮನ ಸೌಮ್ಯ ಸ್ವರೂಪವನ್ನೂ ಧ್ಯಾನ ಮಾಡಬೇಕೆಂದು ತಿಳಿಸಲಾಗಿದೆ.

ಮಹಾಭಯೇಷ್ವಿದಂ ಧ್ಯಾನಂ ಸೌಮ್ಯಮಭ್ಯುದಯೇಷು ಚ ।
(ವೃದ್ಧ ಹಾರೀತ 3/342)

ಈ) ಭಗವಾನ್ ವಾಮನರ ಮಂತ್ರ :

ಭಗವಾನ್ ವಾಮನರ ಮಂತ್ರ ಈ ರೀತಿ ಇದೆ –

1. ಓಂ ನಮೋ ವಿಷ್ಣವೆ ಪತಯೆ ಮಹಾಬಲಾಯ ಸ್ವಾಹಾ ।
2. 'ಹ್ರೀಂ ಶ್ರೀಂ ಶ್ರೀ ವಾಮನಾಯ ನಮಃ ।' ಇದು ಮೂಲ ಮಂತ್ರವಾಗಿದೆ.
(ವೃದ್ಧಹಾರೀತ 3/376, 378)

ಉ) ಭಗವಾನ್ ಹಯಗ್ರೀವರ ಮಂತ್ರ :

'ಹುಂ ಐಂ ಹಯಗ್ರೀವಾಯ ನಮಃ ।' ಎಂಬುದು ಹಯಗ್ರೀವರ ಮೂಲಮಂತ್ರವಾಗಿದೆ.

ಇದೇ ರೀತಿಯಲ್ಲಿ ಭಗವಾನ್ ಶ್ರೀರಾಮ ಹಾಗೂ ಭಗವಾನ್ ಶ್ರೀ ಕೃಷ್ಣ ಮಂತ್ರ ಹಾಗೂ ಅವರ ಉಪಾಸನಾ ವಿಧಿಗಳ ವಿವರಗಳನ್ನು ನೀಡಲಾಗಿದೆ.

ಮಂತ್ರಯೋಗದ ಸಿದ್ಧಿಯಾಗಬೇಕಾದರೆ ಮುಖ್ಯವಾಗಿ ಇಷ್ಟದೇವತೆಯ ಮಂತ್ರಜಪ, ಮಂತ್ರಗಳನ್ನು ನ್ಯಾಸದ ಮುಖಾಂತರ ತನ್ನ ಶರೀರದಲ್ಲಿ ಆವಾಹಿಸಿಕೊಳ್ಳುವುದು, ಮಂತ್ರದಿಂದ ಆವಾಹಿತವಾದ ಪರಮಾತ್ಮನ ವಿಗ್ರಹದ ಪೂಜೆ ಮಾಡುವುದು, ವಿವಿಧ ಕಾಮನೆಗಳಿಂದ ಹಾಗೂ ನಿಷ್ಕಾಮ ಭಾವದಿಂದ ತತ್‌ತತ್ವಸ್ವರೂಪದ ಧ್ಯಾನ, ಜಪ, ಚರಿತ್ರೆಗಳ ಪಠಣ, ಹವನ, ಪೂಜನ, ದಶಾಂಗ ಉಪಾಸನೆಗಳು ಹಾಗೂ ಇಷ್ಟದೇವತೆಯ ಲೀಲೆಗಳನ್ನು ಶ್ರವಣ–ಮನನ ಮಾಡಿಕೊಳ್ಳುವುದು ಅತ್ಯಂತ ಅಗತ್ಯ. ಇವುಗಳೊಂದಿಗೆ

ಆಯಾ ದೇವತೆಯ ಕವಚದ ಪಠಣ, ತಿಲಕ ಧಾರಣೆ, ಪದ್ಧತಿಗಳ ಅನುಸರಣೆ ಯನ್ನು ಮಾಡುವುದು ಅಗತ್ಯ.

ಈ ರೀತಿಯಲ್ಲಿ ಭಗವಂತನ ಪ್ರಾಪ್ತಿಗಾಗಿ ಸಂಪೂರ್ಣ ರೀತಿಯಲ್ಲಿ ಇವು ಸಹಾಯ ಮಾಡುತ್ತವೆ. ಆತನ ಸಾಕ್ಷಾತ್ಕಾರ ಮಾಡುವುದರಲ್ಲಿ ಇವು ಕಾರಣೀ ಭೂತವಾಗುತ್ತವೆ.

ವೃದ್ಧ ಹಾರೀತ ಸ್ಮೃತಿಯಲ್ಲಿ ಇದೇ ಮಂತ್ರಯೋಗದ ಮೇಲೆ ವಿಶೇಷ ಒತ್ತು ನೀಡಲಾಗಿದೆ. ಮುಖ್ಯವಾಗಿ ಶ್ರೀವೈಷ್ಣವ ಸಂಪ್ರದಾಯದ ಆಚಾರ ವಿಚಾರಗಳು, ಉಪಾಸನಾ ಪದ್ಧತಿಗಳ ನಿರೂಪಣೆಯನ್ನು ಮಾಡಲಾಗಿದೆ. ಒಂದು ವೇಳೆ ಶ್ರೀ ವೈಷ್ಣವರು ಇಂತಹ ಆಚಾರಗಳಿಂದ ಚ್ಯುತರಾದಲ್ಲಿ ಅವರು ತೆಗೆದುಕೊಳ್ಳಬೇಕಾದ ಪ್ರಾಯಶ್ಚಿತ್ತ ವಿಧಾನಗಳನ್ನು ಇದರಲ್ಲಿ ವಿವರಿಸಲಾಗಿದೆ.

ಶ್ರೀ ವೈಷ್ಣವರ ನಿತ್ಯನೈಮಿತ್ತಿಕ ಕರ್ಮಗಳು, ಕೈಗೊಳ್ಳಬೇಕಾದ ತೀರ್ಥ ಯಾತ್ರೆಗಳು, ಬೇರೆ ಬೇರೆ ಪರ್ವಗಳಲ್ಲಿ ನಡೆಸಬೇಕಾದ ಮಹೋತ್ಸವಗಳು ಹಾಗೂ ಮಾಡಬೇಕಾದ ಅನೇಕ ರೀತಿಯ ವೈಷ್ಣವ ಯಾಗಗಳ ವರ್ಣನೆಗಳೂ ಇದರಲ್ಲಿದೆ.

ಎಲ್ಲಕ್ಕಿಂತ ಮುಖ್ಯವಾದುದೆಂದರೆ ಮಹಾವಿಷ್ಣುವಿನ ಸೇವೆಯೇ ಬಹಳ ಮುಖ್ಯವಾದ ಸಾಧನವೆಂದು ತಿಳಿಸಲಾಗಿದೆ ಹಾಗೂ ಆತನ ಸೇವಕನೆಂದು ತಿಳಿದು ತನ್ನ ಕರ್ತವ್ಯ ಕರ್ಮಗಳನ್ನು ಅನುಷ್ಠಾನ ಮಾಡಬೇಕಾದ ನಿರ್ದೇಶನ ಗಳನ್ನು ಇದರಲ್ಲಿ ನೀಡಲಾಗಿದೆ. ಇದರಲ್ಲಿ ತಿಳಿಸಿರುವಂತಹ ಶ್ರೀ ವೈಷ್ಣವನ ಸ್ವಧರ್ಮವೆಂದರೆ –

ಸೋऽಹಂ ದಾಸೋ ಭಗವತೋ ಮಮ ಸ್ವಾಮೀ ಜನಾರ್ದನಃ |
ಏವಂ ವೃತ್ತಿರ್ಭವೇದಸ್ಮಿನ್ ಸ್ವಧರ್ಮಃ ಪರಮೋ ಮತಃ ||
(ವೃದ್ಧಹಾರೀತ 5/16)

ಪರಮಾತ್ಮನನ್ನು ಗುರಿಯಾಗಿಟ್ಟುಕೊಂಡು ಎಲ್ಲ ಕರ್ಮಗಳನ್ನು ಮಾಡ ಬೇಕು. ಅಂದರೆ 'ಎಲ್ಲ ಕಾರ್ಯಗಳೂ ಭಗವಂತನಲ್ಲಿ ಪ್ರೀತಿ ಉತ್ಪನ್ನವಾದವು ಗಳಂತಹವಾಗಿರಬೇಕು.' ಈ ದೃಷ್ಟಿಯಿಂದಲೇ ಎಲ್ಲ ಕರ್ಮಗಳನ್ನು ಮಾಡ ಬೇಕು. ಇದಕ್ಕೆ ವಿರುದ್ಧವಾದುದನ್ನು ಮಾಡಬಾರದು. ಸ್ವಾರ್ಥದ ದೃಷ್ಟಿ ಯಿಂದ ಯಾರು ಕರ್ಮವನ್ನು ಮಾಡುವನೊ ಅಥವಾ ಭಗವಂತನಿಗೆ ವಿಮುಖ

ರಾಗಿ ಯಾರು ಕರ್ಮವನ್ನು ಮಾಡುವರೊ, ಅಂತಹವರನ್ನು ಪಾಖಂಡಿಗಳೆಂದೇ ಕರೆಯಬೇಕು. ಅಂತಹವರನ್ನು ಎಲ್ಲ ಲೋಕಗಳೂ ನಿಂದಿಸುತ್ತವೆ.

ಭಗವಂತಮನುದ್ದಿಶ್ಯ ಯಃ ಕರ್ಮ ಕುರುತೇ ನರಃ |
ಸ ಪಾಷಂಡೀತಿ ವಿಜ್ಞೇಯಃ ಸರ್ವಲೋಕೇಷು ಗರ್ಹಿತಃ ||
(ವೃದ್ಧಹಾರೀತ 5/18)

ಎಲ್ಲ ಜೀವಿಗಳನ್ನು ಹೃದಯದಲ್ಲಿರಿಸಿಕೊಳ್ಳುವ ಭಗವಾನ್ ವಾಸುದೇವನ ಪ್ರೀತ್ಯರ್ಥವಾಗಿ ಎಲ್ಲ ಕರ್ಮಗಳನ್ನು ಮಾಡಬೇಕೆಂಬುದೇ ಪರಮಾತ್ಮನ ಇಚ್ಛೆ. ಆ ಪರಮಾತ್ಮನನ್ನೆ ನಿತ್ಯವೂ ಅರ್ಚಿಸಬೇಕು. ಆತನನ್ನೆ ನಿತ್ಯವೂ ನಮಸ್ಕರಿಸಬೇಕು, ಧ್ಯಾನ ಮಾಡಿ, ಜಪಿಸಬೇಕು. ಆತನ ನಾಮಾವಳಿಯನ್ನೆ ನಿತ್ಯವೂ ಹಾಡಬೇಕು. ಆತನ ಲೀಲಾ ಚರಿತ್ರೆಯನ್ನು, ಕಲ್ಯಾಣ ಗುಣಗಳನ್ನು ವರ್ಣಿಸಬೇಕು. ಯಾರು ವ್ರತ – ಉಪವಾಸ – ನಿಯಮ ಇತ್ಯಾದಿಗಳನ್ನು ಮಾಡುವರೊ, ಆತನ ನಿಮಿತ್ತವಾಗಿ ಪೂಜಾದಿಗಳನ್ನು ಮಾಡುವರೊ, ಅವರೇ ನಿಜವಾದ ಶ್ರೀವೈಷ್ಣವರು. ಅದೇ ಅವರ ಮುಖ್ಯ ಆಚಾರ ಹಾಗೂ ಮುಖ್ಯ ಧರ್ಮವಾಗಿರುತ್ತದೆ.

ಇಂತಹ ನಿಷ್ಕಪಟ ಮಾರ್ಗವನ್ನು ಯಾರು ಅನುಸರಿಸುವರೊ ಅಂತಹವರು ಭಗವಾನ್ ವಿಷ್ಣುವಿನ ಪರಮಪದವನ್ನು ಪಡೆಯುವರು. ಇದರ ವಿನಹಬೇರೆಲ್ಲ ಪರಮಾತ್ಮ ರಹಿತ, ಕುಪಥವನ್ನು ಅನುಸರಿಸುವಂತಹವು, ನರಕದ ಮಾರ್ಗವನ್ನು ಸೂಚಿಸುವಂತಹವುಗಳಾಗಿರುತ್ತವೆ.

ಪ್ರೀತಿಯೆ ವಾಸುದೇವಸ್ಯ ಸರ್ವಭೂತ ನಿವಾಸಿನಃ |
ತಮೇವ ಚಾರ್ಚಯೇನ್ನಿತ್ಯಂ ನಮಸ್ಕುರ್ಯಾತ್ ತಮೇವ ಹಿ ||
ಧ್ಯಾತ್ವಾ ಜಪೇತ್ ತಮೇವೇಶಂ ತಮೇವ ಧ್ಯಾಪಯೇ ದ್ಧ್ರುತಿ |
ತನ್ನಾಮ್ನೈವ ಪ್ರಗಾತವ್ಯಂ ವಾಚಾ ವಕ್ತವ್ಯಮೇವ ಚ ||
ವ್ರತೋಪವಾಸನಿಯಮಾನ್ ತಮುದ್ದಿಶ್ಯೈವ ಕಾರಯೇತ್ |
ಏಷ ನಿಷ್ಕಂಟಕಃ ಪಂಥಾಸ್ತಸ್ಯ ವಿಷ್ಣೋಃ ಪರಂ ಪದಮ್ |
ಅನ್ಯಂ ತು ಕುಪಥಂ ಞೇಯಂ ನಿರಯಪ್ರಾಪ್ತಿಹೇತುಕಮ್ ||
(ವೃದ್ಧಹಾರೀತ 5/12-17)

# 8. ಔಶಾನಸ ಸ್ಮೃತಿ

ಭೃಗುವಂಶದಲ್ಲಿ ಜನಿಸಿದ ಉಶನಾ ಅಥವಾ ಉಶನಸ್ ಎನ್ನುವ ಮಹರ್ಷಿಯಿಂದ ರಚಿತವಾದುದೇ ' ಔಶಾನಸ ಸ್ಮೃತಿ '.

ಉಶನಸ್ ಎನ್ನುವುದು ಶುಕ್ರಾಚಾರ್ಯನ ನಾಮಾಂತರ. ಮನ್ವಂತರದ ಭೃಗು ಮಹರ್ಷಿಯ ಮೂಲಕ ಪುಲೋಮೆಯಲ್ಲಿ ಜನಿಸಿದ ಎಂಟು ಮಂದಿ ಮಕ್ಕಳಲ್ಲಿ ಈತ ನಾಲ್ಕನೆಯವನು. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಮೂರನೆಯ ಪರ್ಯಾಯದಲ್ಲಿ ಈತ ವ್ಯಾಸನಾಗಿದ್ದ. ಈತ ಹಿರಣ್ಯಕಶಿಪುವಿನ ಪುರೋಹಿತನೂ ಆಗಿದ್ದ, ಅಂತೆಯೇ ರಾಕ್ಷಸ ಪರಂಪರೆಗೇ ಕುಲಪುರೋಹಿತನಾಗಿದ್ದ. ಈತನು ಚ್ಯವನ ಮಹರ್ಷಿಯ ಅಣ್ಣನೂ ಹೌದು.

ಈತನು ಶಿವನನ್ನು ಕುರಿತು ತಪಸ್ಸು ಮಾಡಿ, ಆತನನ್ನು ಮೆಚ್ಚಿಸಿ, ಆತನಿಂದ ಮೃತ್ಯು ಸಂಜೀವಿನ ವಿದ್ಯೆಯನ್ನು ಪಡೆದನು.

ಈತನಲ್ಲಿ ಯೋಗ ಸಾಧನೆ ಹಾಗೂ ತಪಸ್ಸಿನ ಅತ್ಯಂತ ಹೆಚ್ಚಿನ ಬಲ ವಿದ್ದಿತು. ಈತನ ಮಗಳೇ ದೇವಯಾನಿ. ಕಚ – ದೇವಯಾನಿಯರ ಕಥೆ ಸರ್ವವಿದಿತವಾದದ್ದು. ನಂತರದಲ್ಲಿ ಇವಳನ್ನು ಯಯಾತಿ ಮಹಾರಾಜನಿಗೆ ಮದುವೆ ಮಾಡಿಕೊಡಲಾಗಿತ್ತು.

ಪುರಾಣೇತಿಹಾಸಗಳಲ್ಲಿ ಶುಕ್ರಾಚಾರ್ಯನ ಜ್ಞಾನದ ಬಗ್ಗೆ, ವಿದ್ವತ್ತಿನ ಬಗ್ಗೆ ಅನೇಕ ವಿವರಗಳಿವೆ. ಈತನಿಗೆ ರತ್ನಗಳ ಬಗ್ಗೆ ಅಪಾರ ಜ್ಞಾನವಿತ್ತು. ಆದುದರಿಂದಲೇ ರತ್ನ ಹಾಗೂ ಧನದ ಏಕಮಾತ್ರ ಸ್ವಾಮಿಯಾಗಿದ್ದನು. ಧನಾಧ್ಯಕ್ಷನಾದ ಕುಬೇರನೂ ಕೂಡ ಈತನಿಂದಲೇ ಧನವನ್ನು ಪಡೆಯುತ್ತಿದ್ದ.

ಈತನು ನೀತಿ ಶಾಸ್ತ್ರದ ಆಚಾರ್ಯನೂ ಹೌದು. ಇದೇ ' ಶುಕ್ರ ನೀತಿ ಸಾರ ' ಎಂಬುದು.

ಈತನ ಅನೇಕ ದಿವ್ಯ ಉಪದೇಶಗಳು ಪುರಾಣ ಹಾಗೂ ಇತಿಹಾಸ ಗ್ರಂಥಗಳಲ್ಲಿ ಅಪಾರವಾಗಿದೆ.

ತನ್ನ ಮಗಳಾದ ದೇವಯಾನಿಗೆ ಈತನು ಸಹನ ಶೀಲತೆಯ ಮಹಿಮೆ ಹಾಗೂ ಕೋಪವನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವುದರ ಬಗ್ಗೆ ಉಪದೇಶ ನೀಡುತ್ತಾ,

"ಹೇ ದೇವಯಾನಿ ! ಮನಸ್ಸಿನಲ್ಲಿ ಹುಟ್ಟುವ ಕೋಪವನ್ನು ಪ್ರಶಾಂತತೆಯ ಹಾಗೂ ಕ್ಷಮಾಭಾವದಿಂದ ಯಾರು ಹೊರದೂಡುವರೊ ಅಂತಹವರು ಸಂಪೂರ್ಣ ಪ್ರಪಂಚವನ್ನೆ ಗೆಲ್ಲುವರೆಂದು ತಿಳಿ. ಕೋಪವನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವವನು, ತನ್ನ ಮೇಲಿನ ನಿಂದೆಯನ್ನೂ ಸಹಿಸಬಲ್ಲನು, ಬೇರೆಯವರಿಂದ ಅಪಮಾನಗೊಸಲ್ಪಟ್ಟರೂ ದುಃಖಗೊಳ್ಳುವುದಿಲ್ಲ. ಇದೇ ಎಲ್ಲ ಪುರುಷಾರ್ಥಗಳ ದೃಢವಾದ ಉತ್ತಮ ಪಾತ್ರವಾಗಿರುತ್ತದೆ.

ಯಃ ಸಮುತ್ಪತಿತಂ ಕ್ರೋಧಮಕ್ರೋಧೇನ ನಿರಸ್ಯತಿ |
ದೇವಯಾನಿ ವಿಜಾನೀಹಿ ತೇನ ಸರ್ವಮಿದಂ ಜಿತಮ್ ||
ಯಃ ಸಂಧಾರಯತೆ ಮನ್ಯುಂ ಯೋऽತಿವಾಹಾಂಸ್ತಿತಿಕ್ಷತೆ |
ಯಶ್ಚ ತಪ್ತೋ ್ತೇನ ತಪತಿ ದೃಢಂ ಸೋऽರ್ಥಸ್ಯ ಭಾಜಿನಂ ||

(ಮಹಾ. ಆದಿ. 79/3,5)

ಮತ್ತೊಂದು ಉಪದೇಶದಲ್ಲಿ ಇದೇ ಶುಕ್ರಾಚಾರ್ಯನು ಜನರನ್ನು ಎಚ್ಚರಿಸುತ್ತಾ, ಹೀಗೆಂದು ಹೇಳುತ್ತಾನೆ,

"ತಾವು ಮಾಡುವ ಪಾಪಕ್ಕೆ, ತಮಗೆ ಯಾವುದೇ ಶಿಕ್ಷೆ (ಫಲ) ಸಿಗುವುದಿಲ್ಲ ಎಂದು ಯಾರೂ ಭಾವಿಸಬಾರದು. ತಾವು ಮಾಡುವ ಪಾಪ ಯಾರಿಗೂ ಗೊತ್ತಾಗುವುದಿಲ್ಲ, ಅದಕ್ಕೆ ಸಂಬಂಧಪಟ್ಟ ಶಿಕ್ಷೆ ಎಲ್ಲಿ, ಹೇಗೆ, ಯಾವಾಗ ಸಿಗುತ್ತದೆ ? ಅದೆಲ್ಲ ಬರೀ ಬೂಟಾಟಿಕೆ–ಎಂದು ಯಾರೂ ಭಾವಿಸಬಾರದು. ಹೀಗೆಂದು ಭಾವಿಸುವುದೂ ಕೂಡ ತಪ್ಪಾದುದೇ. ಅಧರ್ಮಾಚರಣೆಗೆ (ಪಾಪಕ್ಕೆ) ತಕ್ಕ ಫಲವನ್ನು ಅನುಭವಿಸಲೇಬೇಕು. ಹೀಗೆ ಫಲ ಪಡೆಯುವುದರಲ್ಲಿ ಸಮಯ ಹಿಡಿಯಬಹುದು. ಆದರೆ ಅದು ತಪ್ಪಿದ್ದಂತೂ ಅಲ್ಲ."

ಇದೇ ಮಾತನ್ನು ರಾಜಾ ವೃಷಪರ್ವನಿಗೆ ತಿಳಿಯ ಹೇಳುತ್ತಾ ಶುಕ್ರಾಚಾರ್ಯನು ಹೀಗೆನ್ನುತ್ತಾನೆ –

"ನಾಧರ್ಮಶ್ಚರಿತೋ ರಾಜನ್ ಸದ್ಯಃ ಫಲತಿ ಗೌರಿವ |
ಶನೈರಾವರ್ತ್ಯ ಮಾನೋ ಹಿ ಕರ್ತುರ್ಮೂಲಾನಿ ಕೃಂತತಿ ||
ಪುತ್ರೇಷು ವಾ ನಪ್ತೃಷು ವಾ ನ ಚೆದಾತ್ಮನಿ ಪಶ್ಯತಿ |
ಫಲತ್ಯೇವ ಧ್ರುವಂ ಪಾಪಂ ಗುರು ಭಕ್ತಮಿವೋದರೇ ||"

(ಮಹಾ. ಆದಿ. 80/2–3)

ಅಂದರೆ, "ರಾಜನ್ ! ಅಧರ್ಮರೂಪದ ಪಾಪಾಚರಣೆಯನ್ನು ಮಾಡು ವವರು, ಅದರ ಫಲವನ್ನು ಆ ಕೂಡಲೇ ಅನುಭವಿಸುವರು. ಗೋ ಸೇವೆ ಮಾಡಿದ ಸ್ವಲ್ಪ ಕಾಲಾನಂತರ ಅದು ಹಾಲು ಕೊಡುತ್ತದೆ. ಬೀಜವನ್ನು ಬಿತ್ತಿದ ಸ್ವಲ್ಪ ಕಾಲಾನಂತರ ಸಸಿಯಾಗಿ, ವೃಕ್ಷವಾಗಿ, ಅದು ಫಲವನ್ನು ಕೊಡುತ್ತದೆ. ಇದೇ ರೀತಿಯಲ್ಲಿ ಮಾಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿದವನು ಅನುಭವಿಸಲೇಬೇಕು. ಪಾಪದಿಂದ ಸಂಪಾದಿಸಿದ ಹಣದ ಪ್ರಭಾವವು ನೇರ ಮಾಡಿದವನ ಮೇಲೆ ಬೀರದಿದ್ದರೂ ಆ ಹಣವನ್ನು ಉಪ ಯೋಗಿಸಿಕೊಂಡ ಅವನ ಮಕ್ಕಳು, ಮೊಮ್ಮಕ್ಕಳು ಅದರ ಫಲವನ್ನು ತಪ್ಪದೆ ಅನುಭವಿಸುವರು. ಮಿತಿ ಮೀರಿ ಊಟ ಮಾಡಿದ ಫಲಿತವು ಆ ತಕ್ಷಣ ಪ್ರಭಾವ ಬೀರದಿದ್ದರೂ, ಸ್ವಲ್ಪ ಸಮಯದ ನಂತರವಾದರೂ, ಹೊಟ್ಟೆಯಲ್ಲಿ ತಳಮಳವನ್ನು ಉಂಟುಮಾಡಿಯೇ ಮಾಡುತ್ತದೆ. ಇದೇ ರೀತಿಯಲ್ಲಿ ಮಾಡಿದ ಫಲವನ್ನು ಪ್ರತಿಯೊಬ್ಬರೂ ಅನುಭವಿಸಲೇ ಬೇಕಾಗುತ್ತದೆ."

ಈ ರೀತಿಯ ಅನೇಕ ಸುಂದರ ಉಪದೇಶಗಳನ್ನು ಶುಕ್ರಾಚಾರ್ಯನು ಬಹಳಷ್ಟು ನೀಡಿದ್ದಾನೆ.

ಮಹರ್ಷಿ ಉಶನಾನ ಹೆಸರಿನಲ್ಲಿ ದೊರೆತಿರುವ 'ಔಶಾನಸ ಸ್ಮೃತಿ' ಯಲ್ಲಿಯೂ ಕೂಡ ಸದಾಚಾರದ ಬಗ್ಗೆ ಅನೇಕ ವಿಷಯಗಳನ್ನು ತಿಳಿಯ ಪಡಿಸಿದ್ದಾನೆ. ಶೌನಕಾದಿ ಮಹರ್ಷಿಗಳು ಈತನಿಗೆ ಪ್ರಣಾಮ ಮಾಡಿ, ಧರ್ಮ ಶಾಸ್ತ್ರಗಳಿಗೆ ಸಂಬಂಧಪಟ್ಟಂತೆ ಚರ್ಚೆ, ಜಿಜ್ಞಾಸೆಗಳನ್ನು ಮಾಡಿದ್ದರೂ, ಅವುಗಳ ಬಗ್ಗೆ ಶುಕ್ರಾಚಾರ್ಯನು ಏನೇನು ಉಪದೇಶಗಳನ್ನು ನೀಡಿದ್ದನೊ, ಅವುಗಳ ವಿವರಗಳೇ 'ಔಶಾನಸ ಸ್ಮೃತಿ'ಯಲ್ಲಿ ಸಂಗ್ರಹಿತವಾಗಿರುವುದು.

ಈ ಸ್ಮೃತಿಯಲ್ಲಿ 9 ಅಧ್ಯಾಯಗಳು, 600 ಶ್ಲೋಕಗಳು ಇವೆ. ಅವುಗಳು ಮುಖ್ಯವಾಗಿ ಬ್ರಹ್ಮಚರ್ಯಾಶ್ರಮ, ಗೃಹಸ್ಥಾಶ್ರಮ, ಶ್ರಾದ್ಧ, ಅಶೌಚ ಹಾಗೂ ವಿವಿಧ ಪ್ರಾಯಶ್ಚಿತ್ತಗಳ ವರ್ಣನೆಗಳನ್ನು ತಿಳಿಸುತ್ತವೆ. ಆದರೆ ನಡನಡುವೆ ಅನೇಕ ಶುಭಪ್ರದ ಉಪದೇಶಗಳು ಹಾಗೂ ಜ್ಞಾನಪ್ರದ ವಿಷಯಗಳು ಬರುತ್ತವೆ.

ಪ್ರಾರಂಭದಲ್ಲಿ ಉಪನಯನದ ಆವಶ್ಯಕತೆ, ಬ್ರಹ್ಮಚಾರಿಯ ಕರ್ತವ್ಯಗಳು, ಅವುಗಳನ್ನು ಪಾಲಿಸುವ ರೀತಿಗಳು ಇತ್ಯಾದಿಗಳ ಮಾರ್ಗ ಸೂಚಿಗಳಿವೆ.

ಇವುಗಳ ಸಾಧನೆಗಾಗಿ, ಪಡೆಯುವುದಕ್ಕಾಗಿ ಆ ಶಿಷ್ಯನ ಮಹತ್ವಪೂರ್ಣ ಕರ್ತವ್ಯಗಳ ಬಗ್ಗೆಯೂ ತಿಳಿಸಲಾಗಿದೆ.

ಈ ಶಿಷ್ಯರ ಕರ್ತವ್ಯಗಳಲ್ಲಿ ಮುಖ್ಯವಾದುವುವೆಂದರೆ – ಗುರುಗಳನ್ನು ನೋಡಿದ ಕೂಡಲೇ ಆಸನದಿಂದ ಎದ್ದು ನಿಂತು, ಕೈಗಳನ್ನು ಜೋಡಿಸಿ, ಅವರಿಗೆ ನಮಸ್ಕಾರ ಮಾಡುವುದು. ಅವರೊಂದಿಗೆ ಒಂದೇ ಆಸನದಲ್ಲಿ ಕುಳಿತು ಕೊಳ್ಳಬಾರದು. ಯಾವಾಗಲೂ ಗುರುವಿಗಿಂತ ತಗ್ಗಿನ ಸ್ಥಳದಲ್ಲಿ ಕುಳಿತು ಕೊಳ್ಳಬೇಕು. ಯಾವುದೇ ಕಾರಣದಿಂದಲೂ ಗುರುವಿನೊಂದಿಗೆ ವಾದ-ವಿವಾದ ಪ್ರತಿವಾದಗಳನ್ನು ಮಾಡಬಾರದು. ಅವರೊಂದಿಗೆ ಎಂದೆಂದಿಗೂ ದ್ವೇಷವನ್ನು ಕಟ್ಟಿಕೊಳ್ಳಬಾರದು. ಏಕೆಂದರೆ ' ಗುರುದ್ವೇಷೀ ಪತತ್ಯಧಃ ' ಎನ್ನುವಂತೆ ಗುರುದ್ವೇಷ ಮಾಡುವವನು ಅಧೋಗತಿಗೆ ಇಳಿಯುತ್ತಾನೆ.

### ಹಿರಿಯ ಅಣ್ಣನು ತಂದೆಗೆ ಸಮಾನ

ಯೋ ಭ್ರಾತರಂ ಪಿತೃಸಮಂ ಜ್ಯೇಷ್ಠಂ ಮೂಢೋಽವ ಮನ್ಯತೇ |
ತೇನ ದೋಷೇಣ ಸಂಪ್ರೇತ್ಯ ನಿರಯಂ ಸಮ್ಪ್ರಗಚ್ಛತಿ || 1-40 ||

ಎಂದು ಔಶಾನಸ ಸ್ಮೃತಿಯಲ್ಲಿ ತಿಳಿಸಿರುವಂತೆ ಹಿರಿಯ ಅಣ್ಣನು ತಂದೆಗೆ ಸಮಾನನಾಗಿ ಪೂಜ್ಯನೂ, ವಂದ್ಯನೂ, ಮಾನ್ಯನೂ ಆಗಿರುತ್ತಾನೆ. ಹಿರಿಯಣ್ಣನ ಮಾತುಗಳನ್ನು ಯಾವನು ಅವಮಾನಗೊಳಿಸುವನೊ, ಅವನು ಮೂಢನಾಗಿ, ಅಪಮಾನ ಸಹಿತವಾದ ಜೀವನ ನಡೆಸಿ, ಕಡೆಯಲ್ಲಿ ನರಕವನ್ನು ಪಡೆಯುವನು.

### ಅಭ್ಯಾಗತನೇ (ಅತಿಥಿಯೇ) ಗುರು

ದ್ವಿಜ ಇತ್ಯಾದಿ ವರ್ಗಗಳಿಗೆ ಅಗ್ನಿಯೇ ಗುರು. ನಾಲ್ಕೂ ವರ್ಣಗಳಿಗೆ ಬ್ರಾಹ್ಮಣನು ಗುರು. ಸ್ತ್ರೀಗೆ ಏಕ ಮಾತ್ರ ಗುರುವೆಂದರೆ ಅವಳ ಪತಿಯೇ. ಇದೇ ರೀತಿಯಲ್ಲಿ ಎಲ್ಲರಿಗೂ 'ಅತಿಥಿ'ಯೇ ಗುರು. ಅತನೇ ಶ್ರೇಷ್ಠನಾದವನು.

ಗುರುರಗ್ನಿರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ |
ಪತಿರೇಕೋ ಗುರುಃ ಸ್ತ್ರೀಣಾಂ ಸರ್ವಸ್ಯಾಭ್ಯಾಗತೋ ಗುರುಃ ||1-48||

### ಪ್ರತಿಷ್ಠೆಯ ಐದು ಸಾಧನಗಳು

ವ್ಯಕ್ತಿಯು ಲೋಕ ಪೂಜಿತನಾಗಲು, ಸಮ್ಮಾನವನ್ನು ಪಡೆಯಲು, ಪ್ರತಿಷ್ಠೆಯನ್ನು ಪಡೆಯಲು 1. ಧನ, 2. ಬಂಧು – ಬಾಂಧವರು,

3. ಇರುವ ಸ್ಥಾನ ಅಥವಾ ಪರಿಸ್ಥಿತಿ, 4. ಕರ್ಮ ಹಾಗೂ 5. ವಿದ್ಯೆ –ಈ ಐದೂ ಆವಶ್ಯಕ.

ಇವುಗಳ ಮುಖಾಂತರ ಸಾಧನೆ ಮಾಡಿ, ಮುಂದೆ ಸದ್ವಿದ್ಯೆಯ ಮುಖಾಂತರ ಎಲ್ಲರಿಗಿಂತಲೂ ಶ್ರೇಷ್ಠನಾದವನಾಗಬಹುದು. ಎಲ್ಲರಿಂದಲೂ ಮಾನ್ಯತೆ ಪಡೆದು, ಎಲ್ಲರಿಂದಲೂ ಪೂಜನೀಯನಾಗಬಹುದು.

ವಿದ್ಯಾ ಕರ್ಮ ವಯೋ ಬಂಧುರ್ವಿತ್ತಂ ಭವತಿ ಯಸ್ಯವೈ ।
ಮಾನ್ಯಸ್ಥಾನಾನಿ ಪಂಚಾಹುಃ ಪೂರ್ವಂ ಪೂರ್ವಂ ಗುರೂಣಿ ಚ ॥

## ಭೋಜನವನ್ನು ನಿಂದಿಸಲೇಬಾರದು

ವ್ಯವಹಾರಕ್ಕೆ ಯೋಗ್ಯವೂ, ಸುಭಗವೂ ಆದ ಉಪದೇಶಗಳನ್ನು ನೀಡುವ ಶುಕ್ರಾಚಾರ್ಯನು ಮುಂದುವರೆದು ಸತ್ಪ್ರಯತ್ನದಿಂದ ಪಡೆಯುವ ಭೋಜನವು ಪವಿತ್ರವಾದುದು, ಹಾಗೆ ಪ್ರಾಪ್ತವಾದ ಊಟವನ್ನು ನಾವು ನಿಂದಿಸಲೇಬಾರದು ಎಂದು ತಿಳಿಸುತ್ತಾನೆ.

ಅನ್ನದಲ್ಲಿ ಪರಮಾತ್ಮನು ವಾಸಮಾಡುತ್ತಿರುತ್ತಾನೆ. ಅನ್ನದಿಂದಲೇ ಎಲ್ಲ ಜೀವಿಗಳೂ ಬದುಕಿವೆ. ಆದುದರಿಂದ ಅಂತಹ ಊಟವನ್ನು ನಾವು ಪೂಜಿಸ ಬೇಕಾದುದು ಅಗತ್ಯ. ಅದಕ್ಕೆ ನಮಸ್ಕರಿಸಬೇಕು. ಅದನ್ನು ಪರಮಾತ್ಮನಿಗೆ ಅರ್ಪಣೆ ಮಾಡಬೇಕು. ಅಂತಹ ಭಗವಂತನ ಪ್ರಸಾದ ರೂಪವಾದ ಅನ್ನವನ್ನೇ ನಾವು ಸ್ವೀಕರಿಸಬೇಕು ಊಟವನ್ನು ನಿಂದಿಸುವುದರಿಂದ ಅದರಲ್ಲಿ ನೆಲೆಸಿರುವ ಭಗವಂತನನ್ನು ನಿಂದಿಸಿದಂತಾಗುತ್ತದೆ. ಆದುದರಿಂದ ಹಾಗೆ ಮಾಡಬಾರದು. ಊಟವನ್ನು ದರ್ಶಿಸಿ, ಸಂತೋಷಗೊಳ್ಳಬೇಕು, ಪ್ರಸನ್ನಗೊಳ್ಳಬೇಕು ಹಾಗೂ ಅದನ್ನು ಪ್ರಶಂಸಿಸಬೇಕು. ಹೀಗೆ ಮಾಡುವುದರಿಂದ ಆ ಅನ್ನ (ಊಟ)ವು ಶುದ್ಧ, ಸಾತ್ವಿಕವಾಗಿ, ಬುದ್ಧಿಯನ್ನು ಶುದ್ಧಿಮಾಡುತ್ತದೆ. ಬುದ್ಧಿಯು ಶುದ್ಧ ವಾದರೆ, ವ್ಯಕ್ತಿಯು ಸತ್ವ ಸಂಪನ್ನನಾಗಿ ಧರ್ಮಾಚರಣೆಯಲ್ಲಿ ಪ್ರವೃತ್ತ ನಾಗುತ್ತಾನೆ –

ಪೂಜಯೇದಶನಂ ನಿತ್ಯಮದ್ಯಾದನ್ನ ಮಕುತ್ಸಯನ್ ।
ದೃಷ್ಟ್ವಾ ಹೃಷ್ಯೇತ್ ಪ್ರಸಾದೇಚ್ಚ ಪ್ರತಿನಂದೇಚ್ಚ ಸರ್ವತಃ ॥

ಬ್ರಹ್ಮಚಾರಿಗೆ ಭಿಕ್ಷೆಯಲ್ಲಿ ದೊರೆಯುವ ಅನ್ನವೇ ಪವಿತ್ರವಾದುದು. ಈ ರೀತಿಯಲ್ಲಿ ಭಿಕ್ಷಾವೃತ್ತಿಯ ಬ್ರಹ್ಮಚಾರಿಯು ಮಾಡುವ ಊಟವು ಉಪವಾಸಕ್ಕೆ

ಸಮಾನವಾದುದು—

ಭೈಕ್ಷೇಣ ವೃತ್ತಿನೊ ವೃತ್ತಿರೂಪವಾಸಸಮಂ ಸ್ಮೃತಾ ||1/49||

## ಕುತ್ಸಿತ ಭೋಜನವನ್ನು ಮಾಡಬಾರದು

ಅನ್ಯಾಯದ ರೀತಿಯಲ್ಲಿ ಪಡೆದ ಊಟವು ಅಪವಿತ್ರವಾದುದು. ಅಂತಹುದನ್ನು ಸರ್ವಥಾ ತ್ಯಜಿಸುವುದು ಉತ್ತಮ. ಇಂತಹ ಕುತ್ಸಿತ (ಮಾಂಸ ಇತ್ಯಾದಿಗಳ) ಭೋಜನವು ಶಾರೀರಿಕ ಹಾಗೂ ಮಾನಸಿಕ ರೋಗಗಳನ್ನು ಹುಟ್ಟಿಸುತ್ತವೆ. ಇದರಿಂದ ಆಯುಸ್ಸು ಕಡಿಮೆಯಾಗುತ್ತದೆ. ಅಂತಹ ವ್ಯಕ್ತಿಯು ಅಧೋಗತಿಯನ್ನು ಹೊಂದುತ್ತಾನೆ. ಇದರಿಂದ ಯಾವುದೇ ರೀತಿಯ ಪುಣ್ಯ ಪ್ರಾಪ್ತಿಯಾಗದೆ ಪಾಪವು ಹೆಚ್ಚಾಗುತ್ತದೆ. ಇಂತಹುದನ್ನು ಜನರೂ ನಿಂದಿಸುವರು. ಇಂತಹ ಪರಿಣಾಮ ಬೀರುವ ಕುತ್ಸಿತ ಭೋಜನವನ್ನು ಸ್ವೀಕರಿಸಲೇಬಾರದು. ಇಂತಹ ಊಟದಿಂದ ಸದಾ ದೂರವಿರುವುದೇ ಒಳ್ಳೆಯದು —

ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಕುತ್ಸಭೋಜನಮ್ ।
ಅಪುಣ್ಯಂ ಲೋಕ ವಿದ್ವಿಷ್ಟಂ ತಸ್ಮಾತ್ ತತ್ ಪರಿವರ್ಜಯೇತ್
||1-61||

## ಹಿತಕರ ಹಾಗೂ ಮಧುರ ನುಡಿ

ಆತ್ಮಕಲ್ಯಾಣವಾಗಬೇಕೆಂದು ಇಚ್ಛಿಸುವ ವ್ಯಕ್ತಿಯು ಸದಾ ಕಾಲವೂ ಇಂದ್ರಿಯಗಳನ್ನು, ವಿಷಯಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡಿರಬೇಕು. ಇವನೇ ನಿಜಅರ್ಥ ಜಿತೇಂದ್ರಿಯನು. ತಾನು ಮನಸ್ಸಿನ ವಶವಾಗದೆ, ಅದನ್ನು ತನ್ನ ವಶದಲ್ಲಿ ಇಟ್ಟುಕೊಂಡಿರಬೇಕು. ಕೋಪಗೊಳ್ಳಬಾರದು, ಸದಾ ಕಾಲದಲ್ಲೂ ಒಳಗೆ, ಹೊರಗೆ ಎರಡೂ ರೀತಿಗಳಲ್ಲಿ ಪವಿತ್ರನಾಗಿರಬೇಕು, ಮಧುರವಾಗಿರುವ ಹಾಗೂ ಹಿತಕರವಾಗಿರುವ ವಾಣಿಯಲ್ಲಿ ಸದಾ ಮಾತನಾಡಬೇಕು, ಕಠೋರವಾಗಿ ಹಾಗೂ ಕಲ್ಯಾಣಕರವಲ್ಲದ ರೀತಿಯಲ್ಲಿ ಮಾತನಾಡಬಾರದು —

ಜಿತೇಂದ್ರಿಯಃಸ್ಯಾತ್ ಸತತಂ ವಶ್ಯಾತ್ಮಾಽಕ್ರೋಧನಃ ಶುಚಿಃ ।
ಪ್ರಯುಂಜೀತ ಸದಾವಾಚಂ ಮಧುರಾಂ ಹಿತಭಾಷಿಣೀಮ್ ||3/15||

## ಗಯಾ ಶ್ರಾದ್ಧದ ಮಹಿಮೆ

ಗಯೆಗೆ ಹೋಗಿ, ಅಲ್ಲಿ ಶ್ರದ್ಧಾಪೂರ್ವಕವಾಗಿ 'ಗಯಾಶ್ರಾದ್ಧ'ವನ್ನು

ಮಾಡಿದ್ದೇ ಆದರೆ ಅಂತಹವನ ಪಿತೃಗಳು ಉದ್ಧಾರಗೊಳ್ಳುತ್ತಾರೆ, ಇದರೊಂದಿಗೆ ಸ್ವತಃ ಕರ್ತೃವೂ ಕೂಡ ಸದ್ಗತಿಯನ್ನು ಪಡೆಯುವನು —

ಗಯಾಂ ಪುಣ್ಯಾನುಷಂಗೇಣ ಯುರಿ ಶ್ರಾದ್ಧಂ ಸಮಾಚರೇತ್ ।
ತಾರಿತಾಃ ಪಿತರಸ್ತೇನ ಸ ಯಾತಿ ಪರಮಾಂ ಗತಿಂ ||3/135||

### ಸ್ವಧರ್ಮಾಚರಣೆಯ ಮಹಿಮೆ

ಪ್ರತಿಯೊಬ್ಬರೂ ತಮ್ಮ ವರ್ಣ ಹಾಗೂ ಆಶ್ರಮಕ್ಕೆ ಅನುಗುಣವಾಗಿ ಯಾವ ಕರ್ಮಗಳನ್ನು ಮಾಡಬೇಕಾಗಿದೆಯೊ ಅದೇ ಅವರವರ ಸ್ವಧರ್ಮವಾಗಿ ರುತ್ತದೆ. ತಮ್ಮ ತಮ್ಮ ಮರ್ಯಾದೆ (ಪರಿಮಿತಿ)ಯಲ್ಲಿದ್ದು ಸ್ವಧರ್ಮವನ್ನು ಪಾಲಿಸಬೇಕೆಂದು ಧರ್ಮ ಶಾಸ್ತ್ರಗಳು ಆಜ್ಞಾಪಿಸಿವೆ.

ಸದಾ ಕಾಲದಲ್ಲೂ ಯಾರು ತಮ್ಮ ಧರ್ಮದಲ್ಲಿ ನೆಲೆಸಿರುವರೊ, ಅಂತಹವರ ಮನಸ್ಸು ಈಶ್ವರನಲ್ಲಿ ಸದಾ ಲೀನವಾಗಿರುತ್ತದೆ. ಇಂತಹವರು ಫಲಾಸಕ್ತ ರಹಿತರಾಗಿದ್ದು, ಈಶ್ವರಾರ್ಪಣ ಬುದ್ಧಿಯಿಂದ ಕರ್ಮಗಳನ್ನು ಮಾಡುವರು. ಇಂತಹವರಿಗೆ ವೇದ, ಶಾಸ್ತ್ರಗಳಲ್ಲಿ ತಿಳಿಸಿರುವಂತೆ ಪರಮ ಸ್ಥಾನವು ಲಭಿಸುವುದು. ಅಂದರೆ ಇಂತಹವರಿಗೆ ಭಗವದ್ ಪ್ರಾಪ್ತಿಯು ಸುಲಭವಾಗುತ್ತದೆ —

ಯಃ ಸ್ವಧರ್ಮಪರೋ ನಿತ್ಯಮೀಶ್ವರಾರ್ಪಿತ ಮಾನಸಃ ।
ಪ್ರಾಪ್ನೋತಿ ಪರಮಂ ಸ್ಥಾನಂ ಯದುಕ್ತಂ ವೇದಸಮ್ಮಿತಂ ||7/231||

### ಔಶನಸ ಸಂಹಿತಾ

ಆಚಾರ್ಯ ಉಶನಾನ ಹೆಸರಿನಲ್ಲಿ ಒಂದು ಸಂಹಿತೆಯೂ ಇದೆ. ಇದು ಸಂಕ್ಷಿಪ್ತವಾಗಿದ್ದು, ಶ್ಲೋಕ ಬದ್ಧವಾಗಿದೆ. ಇದರಲ್ಲಿ 51 ಶ್ಲೋಕಗಳಿವೆ. ಇದರಲ್ಲಿ ನಾಲ್ಕೂ ವರ್ಣಗಳ ಅನುಲೋಮ ಹಾಗೂ ಪ್ರತಿಲೋಮ ಸಂಸರ್ಗ ದಿಂದ ಜನಿಸಿದ, ವಿಭಿನ್ನ ಸಂಕರ-ಜಾತಿಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆ. ಅಲ್ಲದೆ ಅವರವರ ವೃತ್ತಿಗಳ ಪರಿಚಯವನ್ನು ನೀಡಲಾಗಿದೆ. ಇದರಲ್ಲಿ ಸೂತ, ವೇಣಂ, ಶ್ವಪಚ, ಮಾಗಧ, ಪುಲಿಂದ (ಭಾಂಗಿ), ಸೂನಿಕ, ಪುಕ್ಕಶ, ಅಗಸ, ಕ್ಷೌರಿಕ, ಕಾಯಸ್ಥ, ನಿಷಾದ (ಬೇಡ), ಮಣಿಕಾರ, ಶುಂಡಿಕ ಹಾಗೂ ಪಾರಶ್ವ-ಇತ್ಯಾದಿಯವರುಗಳ ಆವಿರ್ಭಾವದ ಚರಿತ್ರೆಯನ್ನು ಸಂಗ್ರಹ ರೂಪದಲ್ಲಿ ನೀಡಲಾಗಿದೆ.

# 9. ಕಶ್ಯಪ ಸ್ಮೃತಿ

ಸೃಷ್ಟಿಯ ಇಚ್ಛೆಯಂತೆ ಜಗತ್ ಪಿತನಾದ ಬ್ರಹ್ಮನು ಆರು ಮಾನಸ ಪುತ್ರರನ್ನು ಸೃಷ್ಟಿಸಿದನು. ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ, ಪುಲಹ ಮತ್ತು ಕ್ರತು–ಎಂಬುವರೇ ಆ ಆರು ಪುತ್ರರು. ಇವರಲ್ಲಿ ಮಹರ್ಷಿ ಮರೀಚಿಗೆ ಕಶ್ಯಪನು ಜನಿಸಿದನು.

ದಕ್ಷ ಪ್ರಜಾಪತಿಗೆ ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಕ್ರೋಧಾ, ಪ್ರಾಧಾ, ವಿಶ್ವಾ, ವಿನಿತಾ, ಕಪಿಲಾ, ಮನು ಹಾಗೂ ಕದ್ರು–ಎನ್ನುವ 13 ಹೆಣ್ಣು ಮಕ್ಕಳಾದರು. ಇವರೆಲ್ಲರನ್ನೂ ದಕ್ಷನು ಕಶ್ಯಪರಿಗೆ ಮದುವೆ ಮಾಡಿಕೊಟ್ಟನು.

ಇವರೆಲ್ಲರಿಗೂ ಬಹಳಷ್ಟು ಸಂತಾನಗಳಾದುವು. ಪರಿಣಾಮವಾಗಿ ಸೃಷ್ಟಿಯೆಲ್ಲವೂ ಇವರುಗಳಿಂದಲೇ ತುಂಬಿಹೋಯಿತು.

ಅದಿತಿಯಿಂದ ಎಲ್ಲ ದೇವತೆಗಳು ಹಾಗೂ 12 ಆದಿತ್ಯರು ಜನಿಸಿದರು. ಇದೇ ರೀತಿಯಲ್ಲಿ ವಿನತಳಿಗೆ ಗರುಡ, ಅರುಣ ಇತ್ಯಾದಿಯವರೂ ಕದ್ರುವಿಗೆ ಸರ್ಪ, ನಾಗ ಇತ್ಯಾದಿ ಪುತ್ರರೂ ಜನಿಸಿದರು. ಇದೇ ರೀತಿಯಲ್ಲಿ ಸಮಸ್ತ ಸ್ಥಾವರ–ಜಂಗಮ, ಪಶು – ಪಕ್ಷಿ, ದೇವತೆಗಳು, ದೈತ್ಯರು, ಮಾನವರು – ಇವರೆಲ್ಲ ಕಶ್ಯಪನ ಸಂತಾನವಾಗಿ ಸಮಸ್ತ ಸೃಷ್ಟಿಯನ್ನು ತುಂಬಿಬಿಟ್ಟರು. 'ಕಶ್ಯಪಾತ್ತು ಇಮಾಃ ಪ್ರಜಾಃ' (ಮಹಾ. ಆದಿ. 65/11) ಎಂಬ ಹೇಳಿಕೆ ಇದನ್ನು ಪುಷ್ಟೀಕರಿಸುತ್ತದೆ.

ಇಂದ್ರಾದಿ ದೇವತೆಗಳು ಮಹರ್ಷಿ ಕಶ್ಯಪ ಹಾಗೂ ಅದಿತಿಯರ ಸಂತಾನವಾಗಿದೆ. ಭಗವಾನ್ ವಾಮನನು ಇವರುಗಳಿಂದ ಅವತರಿಸಿದವನೆ ಆಗಿದ್ದಾನೆ. ಮುಂದೆ ಕಶ್ಯಪ – ಅದಿತಿಯರೇನೆ ದಶರಥ – ಕೌಸಲ್ಯೆಯರಾಗಿಯೂ ಹಾಗೂ ವಸುದೇವ–ದೇವಕಿಯರಾಗಿಯೂ ಅವತರಿಸಿ ಶ್ರೀರಾಮ ಹಾಗೂ ಶ್ರೀಕೃಷ್ಣನ ತಂದೆ – ತಾಯಿಯರಾದರು.

ಆದುದರಿಂದ ಮಹರ್ಷಿ ಕಶ್ಯಪನ ಮಹಿಮೆ ಅಪಾರವಾದುದು.

ಮಹರ್ಷಿ ಕಶ್ಯಪನ ಸೃಷ್ಟಿಯ ವರ್ಣನೆ ಹಾಗೂ ಆತನ ದಿವ್ಯ ಚರಿತ್ರೆಯು ಪುರಾಣಗಳು ಹಾಗೂ ಮಹಾಭಾರತಾದಿ ಇತಿಹಾಸ ಗ್ರಂಥಗಳಲ್ಲಿ ವಿಸ್ತಾರ

ರೂಪದಲ್ಲಿ ದೊರೆಯುತ್ತದೆ. ಈತನ ಸೃಷ್ಟಿಯು 'ಕಶ್ಯಪೀಯ ಪ್ರಜಾಸರ್ಗ' ಎನ್ನುವ ಹೆಸರಿನಿಂದ ಪುರಾಣಗಳಲ್ಲಿ ವಿಖ್ಯಾತವಾಗಿದೆ.

ಇಂತಹ ಮಹಾತ್ಮಾ ಕಶ್ಯಪನು ತನ್ನ ಪ್ರಜೆಗಳ ಕಲ್ಯಾಣಕ್ಕಾಗಿ ಹಾಗೂ ಅವರನ್ನು ಸನ್ಮಾರ್ಗದತ್ತ ಕರೆದೊಯ್ಯುವುದಕ್ಕಾಗಿ ಅನೇಕ ಉಪಕಾರಾತ್ಮಕ ಉಪದೇಶಗಳನ್ನು ನೀಡಿದ್ದಾನೆ. ಇವು ಮಹಾಭಾರತ, ಪುರಾಣಗಳಲ್ಲಿ ಕಂಡು ಬರುತ್ತವೆ. ಇವುಗಳಲ್ಲಿ ಮುಖ್ಯವಾದ ಒಂದೆರಡನ್ನು ಇಲ್ಲಿ ನೀಡಲಾಗಿದೆ.

### ಧನಮೋಹ ಅನರ್ಥಕರವಾದುದು

ಧನ-ಸಂಪತ್ತು ವ್ಯಕ್ತಿಯನ್ನು ಮೋಹದಲ್ಲಿ ಕೆಡವುತ್ತದೆ. ಮೋಹವು ಅಂತಹವರನ್ನು ನರಕದಲ್ಲಿ ಬೀಳಿಸುತ್ತದೆ. ಆದುದರಿಂದ ಅನರ್ಥಗಳಿಗೆ ದಾರಿ ತೋರುವ 'ಅರ್ಥ' (ಧನ)ವನ್ನು ದೂರದಿಂದಲೇ ತ್ಯಾಗ ಮಾಡುವುದು ಒಳ್ಳೆಯದು-ಎಂದು ಕಶ್ಯಪನು ತಿಳಿಸುತ್ತಾನೆ.

ಧರ್ಮಕ್ಕಾಗಿ ಧನ ಸಂಗ್ರಹ ಮಾಡುವ ಇಚ್ಛೆಯುಳ್ಳವರೂ ಕೂಡ ಆ ಭಾವನೆಯನ್ನು ದೂರ ಮಾಡುವುದು ಒಳ್ಳೆಯದು. ಏಕೆಂದರೆ ಕೆಸರನ್ನು ತುಳಿದು, ನಂತರ ಅದನ್ನು ಶುಭ್ರ ಮಾಡಿಕೊಳ್ಳುವುದಕ್ಕೆ ಬದಲಾಗಿ, ಅದರಿಂದ ದೂರವೇ ಇರುವುದು ಉತ್ತಮ. ಧರ್ಮಸಾಧನೆಗಾಗಿ ಧನ ಸಂಗ್ರಹ ಮಾಡುವುದು, ಸಂಬಂಧಪಟ್ಟ ವ್ಯಕ್ತಿಗೆ ಅನರ್ಥದಾಯಕವಾದುದು. ಬೇರೆಯವರಿಗಾಗಿ ಧನವನ್ನು ತ್ಯಜಿಸುವುದೇ ಅಕ್ಷಯ ಧರ್ಮವಾಗಿರುತ್ತದೆ. ಇದು ಮೋಕ್ಷ ಪ್ರಾಪ್ತಿಯ ದಾರಿಯೂ ಹೌದು.

ಅರ್ಥ ಸಂಪತ್ ವಿಮೋಹಾಯ ವಿಮೋಹೋ ನರಕಾಯ ಚ ।
ತಸ್ಮಾದರ್ಥಮನರ್ಥಾಯ ಶ್ರೇಯೋऽರ್ಥೀ ದೂರತಸ್ತ್ಯಜೇತ್ ॥
ಯಸ್ಯ ಧರ್ಮಾರ್ಥಮರ್ಥೇಹಾ ತಸ್ಯಾನೀಹಾ ಗರೀಯಸೀ ।
ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ ॥
ಯೋऽರ್ಥೇನ ಸಾಧ್ಯತೇ ಧರ್ಮಃ ಕ್ಷಯಿಷ್ಣುಃ ಸ ಪ್ರಕೀರ್ತಿತಃ ।
ಯಃ ಪರಾರ್ಥೇ ಪರಿತ್ಯಾಗಃ ಸೋऽಕ್ಷಯೋ ಮುಕ್ತಿಲಕ್ಷಣಂ ॥

(ಪದ್ಮ-ಸೃಷ್ಟಿ-19/251-253)

### ಪಾಪಿಗಳ ಸ್ನೇಹವನ್ನು ಮಾಡಬಾರದು

ಒಣಗಿದ ಸೌದೆಯೊಂದಿಗೆ ಸೇರಿದ ಹಸೀ ಸೌದೆಯೂ ಕೂಡ ಯಾವ ರೀತಿ

ಉರಿದು ಹೋಗುವುದೋ, ಅದೇ ರೀತಿಯಲ್ಲಿ ಪಾಪಿಗಳ ಸಂಪರ್ಕದಿಂದ ಧರ್ಮಾತ್ಮರೂ ಕೂಡ ಅವರೊಂದಿಗೆ, ಅವರಷ್ಟೇ ಶಿಕ್ಷೆಯನ್ನು ಅನುಭವಿಸ ಬೇಕಾಗುತ್ತದೆ. ಆದುದರಿಂದ ಪಾಪಿಗಳ ಸ್ನೇಹವನ್ನು ಮಾಡಲೇಬಾರದು.

ಅಸಂತ್ಯಾಗಾತ್ ಪಾಪಕೃತಾಮಪಾಪಾಂಸ್ತುಲ್ಯೋ ದಂಡಃ
ಸ್ಪೃಶತೆ ಮಿಶ್ರಭಾವಾತ್ ।
ಶುಷ್ಕೇಣಾರ್ದ್ರಂ ದಹ್ಯತೇ ಮಿಶ್ರಭಾವಾನ್ನ ಮಿಶ್ರೈಃ
ಸ್ಯಾತ್ ಪಾಪ ಕೃದ್ಭಿಃ ಕಥಂಚಿತ್ ॥

ಮಹರ್ಷಿ ಕಶ್ಯಪನಿಂದ ರಚಿತವಾದ ಒಂದು ಧರ್ಮಶಾಸ್ತ್ರವಿದೆ. ಇದನ್ನು 'ಕಶ್ಯಪ ಧರ್ಮಶಾಸ್ತ್ರ' ಅಥವಾ 'ಕಶ್ಯಪ ಸ್ಮೃತಿ' ಎಂಬ ಹೆಸರಿನಿಂದ ಕರೆಯಲಾಗುತ್ತದೆ.

ಪ್ರಸ್ತುತ ದೊರೆತಿರುವ ಕಶ್ಯಪ ಸ್ಮೃತಿಯ ಪ್ರತಿಯಲ್ಲಿ ತುಂಬಾ ಸಂಕ್ಷಿಪ್ತವಾದ ಸಾಹಿತ್ಯ ಭಾಗವಿದೆ. ಪ್ರಾರಂಭದಲ್ಲಿ ಸ್ವಲ್ಪ ಗದ್ಯಭಾಗವಿದ್ದು, ನಂತರದಲ್ಲಿ 20 ಅನುಷ್ಟುಪ್ ಶ್ಲೋಕಗಳಿವೆ. ಬಹುಶಃ ಇದು ಮೂಲವೊಂದರ ಸಂಕ್ಷಿಪ್ತ ಭಾಗವಾಗಿರಬಹುದೆಂದು ತೋರುತ್ತದೆ. ಹೇಮಾದ್ರಿ - ವಿಜ್ಞಾನೇಶ್ವರ, ವೀರ ಮಿಶ್ರ, ಮಾಧವಾಚಾರ್ಯ ಇತ್ಯಾದಿ ಪ್ರಾಚೀನ ನಿಬಂಧಕಾರರು ಮಹರ್ಷಿ ಕಶ್ಯಪನದ್ದೆಂದು ಹೇಳಲಾಗುವ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಇವುಗಳಲ್ಲಿ ಬಹಳಷ್ಟು ಈಗ ದೊರಕಿರುವ ಸ್ಮೃತಿಯಲ್ಲಿ ಕಂಡುಬರುವುದಿಲ್ಲ. ಇವನ್ನೆಲ್ಲ ನೋಡಿದಾಗ, ಮೂಲ ಕಶ್ಯಪಸ್ಮೃತಿಯಲ್ಲಿ ಆಚಾರ, ಶ್ರಾದ್ಧ, ಸಂಸ್ಕಾರ ಹಾಗೂ ಪ್ರಾಯಶ್ಚಿತ್ತಗಳನ್ನು ಕುರಿತಾದ ತುಂಬಾ ವಿಸ್ತಾರವಾದ ಪ್ರಕರಣಗಳೇ ಇದ್ದಿರಬಹುದೆಂದು ಊಹಿಸಲಾಗಿದೆ. ಆದರೆ ಕಾಲನ ಪ್ರವಾಹದಲ್ಲಿ ಆ ಪ್ರಮುಖವಾದ ಸಾಹಿತ್ಯ ಭಾಗಗಳು ಹರಿದುಹೋಗಿ, ಪ್ರಸ್ತುತ ರೂಪವಷ್ಟು ಮಾತ್ರ ನಮಗೆ ದೊರತಿರಬಹುದು ಎಂದು ಊಹಿಸಬಹುದಾಗಿದೆ.

ಉಪಲಬ್ಧವಿರುವ ಕಶ್ಯಪಸ್ಮೃತಿಯ ಪ್ರಾರಂಭದಲ್ಲಿ ಗೃಹಸ್ಥ ಧರ್ಮದ ವರ್ಣನೆ ಇದೆ. ಈ ಧರ್ಮವನ್ನು ಪಾಲಿಸುವಾಗ ಪ್ರಮಾದವಶಾತ್ ಪಾಪವನ್ನೇನಾದರೂ ಮಾಡಿದಲ್ಲಿ ಅದಕ್ಕೆ ಸೂಕ್ತ ಪ್ರಾಯಶ್ಚಿತ್ತವನ್ನು ತಿಳಿಸಲಾಗಿದೆ. ಇದರ ಪರಿಹಾರಕ್ಕಾಗಿ ಆ ಗೃಹಸ್ಥನು ದೇವ, ಪಿತೃ, ಮಾನವ, ಭೂತ ಹಾಗೂ ಬ್ರಹ್ಮ–ಈ ಐದೂ ಮಹಾಯಜ್ಞಗಳನ್ನು ನಿತ್ಯವೂ ಅನುಷ್ಠಾನ ಮಾಡಿದಲ್ಲಿ ಆ

ಪಾಪವು ನೂರನಾಗುವುದೆಂಬ ' ಗೇ- ಪಿತೃಮನುಷ್ಯ ಭೂತ ಪ್ರತ್ಯ ಯಜ್ಞಾನುಪ ಸೇವ ಮಾನಃ ' ಎಂಬ ಹೇಳಿಕೆಯ ಮುಖಾಂತರ ತಿಳಿಸಲಾಗಿದೆ. ವ್ರತ, ನಿಯಮ, ಹೋಮ, ಜಪ-ತಪಗಳಲ್ಲಿ ತತ್ಪರರಾಗಿರಬೇಕು- 'ವ್ರತ ನಿಯಮ ಹೋಮಜಾಪ್ಯಪರಃ.'

ತಂದೆ-ತಾಯಿಯರಿಗೆ ಭಕ್ತಿಯನ್ನು ತೋರಿಸಬೇಕು, ಅವರಿಗೆ ಸೇವೆ ಯನ್ನು ಮಾಡಬೇಕು (ಮಾತೃ ಪಿತೃ ಭಕ್ತಃ). ತನ್ನ ಪತ್ನಿ, ಪುತ್ರರನ್ನು ಪೋಷಿಸಬೇಕು (ದಾರಾ ಪತ್ಯ ಪೋಷಕಃ). ಬೇರೆಯವರಿಗೆಲ್ಲ ಊಟಕ್ಕಿಟ್ಟ ನಂತರ ಉಳಿದಿದ್ದನ್ನು ಮಾತ್ರವೇ ಸೇವಿಸತಕ್ಕದ್ದು ಉಳಿದಿರುವ ಯಜ್ಞಶೇಷ (ಪವಿತ್ರ ಪ್ರಸಾದದ ರೂಪದಲ್ಲಿ)ವನ್ನು ಸ್ವೀಕರಿಸತಕ್ಕದ್ದು (ಶೇಷಾನುಭೋಜೀ). ಯಾವುದೇ ರೀತಿಯಲ್ಲಿರುವ ಬಾವಿ, ಸೇತುವೆ, ತಟಾಕ, ದೇವಮಂದಿರ ಇತ್ಯಾದಿ ಗಳನ್ನು ನಾಶಮಾಡಬಾರದು, ಬ್ರಾಹ್ಮಣರಿಗೆ ಅಪಮಾನ ಮಾಡಬಾರದು-ಹೀಗೆ ಮಾಡುವುದರಿಂದ ಪಾಪ ತಗಲುತ್ತದೆ. ಆಕಸ್ಮಾತ್ತಾಗಿ ಹಾಗೇನಾದರೂ ಆದರೆ ಅದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು— ಕೂಪಸೇತು ತಡಾಗ ವಿಪ್ರ ದೇವತಾಯತನಭೇದನೇ ಪ್ರಾಯಶ್ಚಿತ್ತಂ ?

ಇದೇ ರೀತಿಯಲ್ಲಿ ಮುಂದುವರೆಯುತ್ತಾ ಕಶ್ಯಪನು ಹೀಗೆಂದು ನಿರ್ದೇಶ ನೀಡುತ್ತಾ ಹೀಗೆಂದು ಹೇಳುತ್ತಾನೆ— ಗೋವು, ಎತ್ತು, ಮಹಿಷ, ಮೃಗ, ಹಂದಿ, ವ್ಯಾಘ್ರ, ಮತ್ಸ್ಯ, ಕಾಗೆ, ಹಂಸ, ಸಾರಸ, ಗೃಧ್ರ - ಇತ್ಯಾದಿ ಪಶು ಪಕ್ಷಿಗಳನ್ನು ಹಿಂಸಿಸುವುದರಿಂದ ಮಹತ್ತರವಾದ ಪಾಪ ಉಂಟಾಗುತ್ತದೆ. ಯಾವುದೇ ಜೀವಿಯನ್ನು ಹಿಂಸಿಸುವುದು ಮಹಾಪಾಪವಾಗುತ್ತದೆ. ಯಾವುದೇ ಪ್ರಾಣಿಗೂ, ಯಾವುದೇ ರೀತಿಯ ಹಿಂಸೆಯನ್ನು ಕೊಡಬಾರದು. ಅಂತೆಯೇ ಎಲ್ಲ ಪ್ರಾಣಿಗಳಿಗೂ ಜೀವನ್ಮಾತ್ರ ಸೇವೆ ಮಾಡಬೇಕು. ಎಲ್ಲ ಜೀವಿಗಳಿಗೂ ದಯೆ, ಕರುಣೆಗಳನ್ನು ತೋರಿಸಬೇಕು. ಒಂದು ವೇಳೆ ಆಕಸ್ಮಾತ್ತಾಗಿ ಅವುಗಳಿಗೆ ಹಿಂಸೆ ಉಂಟಾದಲ್ಲಿ, ಅದಕ್ಕಾಗಿ ಶಾಸ್ತ್ರದಲ್ಲಿ ಹೇಳಿರುವಂತೆ ನಿರ್ದಿಷ್ಟ ವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು, ಅವುಗಳಿಗೆ ಅನುಕಂಪವನ್ನು ತೋರಿಸಬೇಕು, ಪಶ್ಚಾತ್ತಾಪವನ್ನು ಹೊಂದಬೇಕು, ಅವುಗಳಿಗಾಗಿ ದುಃಖ ವನ್ನು ಹೊಂದಬೇಕು, ಮತ್ತೆ, ಮುಂದೆಂದೂ ಅಂತಹಕಾರ್ಯವನ್ನು ಮಾಡುವು ದಿಲ್ಲವೆಂದು ತೀರ್ಮಾನ ಮಾಡಿಕೊಳ್ಳಬೇಕು.

ಬೇರೆ ಬೇರೆ ಪಾಪಗಳಿಗೆ ಬೇರೆ ಬೇರೆಯೇ ಆದ ಪ್ರಾಯಶ್ಚಿತ್ತ ವಿಧಾನ ಗಳಿವೆ. ಇಂತಹ ಪ್ರಾಯಶ್ಚಿತ್ತಗಳನ್ನು ನೆರವೇರಿಸಿದ ನಂತರ ಗೋದಾನ, ಹಿರಣ್ಯದಾನ, ಎಳ್ಳಿನ ದಾನಗಳನ್ನು ಶಾಸ್ತ್ರ ನಿರ್ದೇಶನಕ್ಕೆ ಅನುಸಾರ ನೀಡ ಬೇಕು. (ಚೀರ್ಣಂತೇ ಗಾಂ ದದ್ಯಾತ್, ಚೀರ್ಣಂತೇ ಹಿರಣ್ಯಂ ದದ್ಯಾತ್, ಚೀರ್ಣಂತೇ ತಿಲಾನ್ ದದ್ಯಾತ್ ಆದಿ).

ಮುಂದೆ ಈ ಸ್ಮೃತಿಯಲ್ಲಿ ಮರಣ ಶೌಚದ ಶುದ್ಧಿಗಾಗಿ ಆಚರಿಸುವ ನಿಯಮಾವಳಿಗಳನ್ನು ಸಂಕ್ಷೇಪವಾಗಿ ವಿವರಿಸಲಾಗಿದೆ. ತಿನ್ನಬಾರದ್ದನ್ನು ತಿಂದಿರು ವುದು, ಕುಡಿಯಬಾರದುದನ್ನು ಕುಡಿದಿರುವುದು, ನೈತಿಕ ಪತನ ಇತ್ಯಾದಿಗಳಿಗೆ ಕೂಡ ಪ್ರಾಯಶ್ಚಿತ್ತವನ್ನು ತಿಳಿಸಲಾಗಿದೆ.

ನಂತರಲ್ಲಿ ದೈವ, ಭೌಮ ಹಾಗೂ ಅಂತರಿಕ್ಷ ಉತ್ಪಾತಗಳಿಗೆ ಕೂಡ ಪ್ರಾಯಶ್ಚಿತ್ತಗಳನ್ನು ತಿಳಿಸಲಾಗಿದೆ. ಪಾತಕಗಳು, ಉಪಪಾತಕಗಳು ಹಾಗೂ ಮಹಾಪಾತಕಗಳಿಂದ ದೂರವಿರಬೇಕೆಂದು ಕಶ್ಯಪನು ತಿಳಿಸಿದ್ದಾನೆ. ಇವುಗಳ ಬಗ್ಗೆ ಪರಾಮರ್ಶೆಯನ್ನೂ ನೀಡಿದ್ದಾರೆ. ಅತ್ಯಂತ ಶುದ್ಧ ರೀತಿಯಲ್ಲಿ ಆಚಾರ-ವಿಚಾರಗಳಿಂದ ಕೂಡಿರುವ ಜೀವನವನ್ನು ಹೇಗೆ ನಡೆಸಬೇಕೆಂಬುದನ್ನು ಆತ ತಿಳಿಸಿದ್ದಾನೆ. ಇದಕ್ಕೆ ಆತ ಹೆಚ್ಚು ಒತ್ತು ನೀಡಿದ್ದಾನೆ.

ವಿವಾಹ ಸಂಸ್ಕಾರದಲ್ಲಿ ಹೆಣ್ಣಿಗೆ ಸಂಬಂಧಪಟ್ಟಂತೆ ಅನೇಕ ವಿವರಗಳಿವೆ. ಹಣದಿಂದ ಕೊಂಡಂಥಾ ಕನ್ಯೆಯನ್ನು 'ದಾಸೀ' ಎಂದು ಕರೆಯಲಾಗಿದೆ. ಅವಳನ್ನು ಪತ್ನಿ ಎಂದು ಕರೆಯಬಾರದೆಂದು ತಿಳಿಸಿ, ಅಂತಹ ಪ್ರಯೋಗವನ್ನು ನಿಷೇಧಿಸಲಾಗಿದೆ, ಇದೇ ರೀತಿಯಲ್ಲಿ ದೈವ, ಪಿತೃ ಇತ್ಯಾದಿ ಅನೇಕ ಕಾರ್ಯ ಗಳಲ್ಲಿ ಅವಳು ಭಾಗವಹಿಸಬಾರದೆಂದು ತಿಳಿಸಲಾಗಿದೆ.

ಕ್ರಯಕ್ರೀತಾ ತು ಸಾ ದಾಸೀ ನ ಸಾ ಪತ್ನೀ ವಿಧೀಯತೆ || 14 ||

ಈ ಮಾತನ್ನು ಎಲ್ಲ ನಿಬಂಧಕಾರರೂ, ಧರ್ಮ ಶಾಸ್ತ್ರಕಾರರೂ ಮಹತ್ವ ಪೂರ್ಣವಾದುದೆಂದು ತಿಳಿಸಿದ್ದಾರೆ. ಬಹಳಷ್ಟು ಕಡೆ ಇವನ್ನು ಉದಾಹರಿಸಿಯೂ ಇದ್ದಾರೆ. ಧರ್ಮ ಶಾಸ್ತ್ರಕಾರನಾದ ಬೌಧಾಯನನು ತನ್ನ ಧರ್ಮಸೂತ್ರದಲ್ಲಿ ಇದನ್ನು ಹೀಗೆಂದು ಸ್ಪಷ್ಟಪಡಿಸಿದ್ದಾನೆ.

ಕ್ರೀತಾ ದ್ರವ್ಯೇಣ ಯಾ ನಾರೀ ಸಾ ನ ಪತ್ನೀ ವಿಧೀಯತೆ |
ಸಾ ನ ದೈವೇ ನ ಸಾ ಪಿತ್ರ್ಯೇ ದಾಸೀಂ ತಾಂ ಕಶ್ಯಪೋऽಬ್ರವೀತ್
|| 11/20 ||

# 10. ಶಾಂಡಿಲ್ಯ ಸ್ಮೃತಿ

ಸ್ಮೃತಿ ಗ್ರಂಥಗಳಲ್ಲಿ 'ಶಾಂಡಿಲ್ಯ ಸ್ಮೃತಿ'ಯು ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಇದರ ಕರ್ತೃವಾದ ಶಾಂಡಿಲ್ಯ ಮುನಿಯು ತುಂಬಾ ಜನಪ್ರಿಯನಾದ ಮುನಿಶ್ರುಂಗವನಾಗಿದ್ದಾನೆ. ಈತನ 'ಭಕ್ತಿಸೂತ್ರ'ಗಳು ತುಂಬಾ ಪ್ರಸಿದ್ಧವಾದ ಕೃತಿಯಾಗಿದೆ. ಭಕ್ತಿಮಾರ್ಗವನ್ನು ದರ್ಶಿಸುವ ಒಂದು ಉಚ್ಚಕೋಟಿ ಗ್ರಂಥವಾಗಿದೆ ಇದು. ಇದೇ ರೀತಿಯಲ್ಲಿ ಈತನು ರಚಿಸಿರುವ 'ಶಾಂಡಿಲ್ಯ ಸ್ಮೃತಿ'ಯೂ ಕೂಡ ಒಂದು ಉತ್ತಮ ಕೃತಿಯಾಗಿದೆ. ಈ ಕೃತಿಯು ವೈಷ್ಣವರಿಗೆ ಒಂದು ಆದರ್ಶವಾದುದಾಗಿದೆ.

ಮಹರ್ಷಿ ಶಾಂಡಿಲ್ಯನು ದಿನಚರ್ಯೆಯನ್ನು 1. ಅಭಿಗಮನ, 2. ಉಪಾದಾನ, 3. ಈಜ್ಯಾ, 4. ಆಚಾರ ಹಾಗೂ 5. ಯೋಗ – ಎನ್ನುವ ಐದು ಭಾಗಗಳಲ್ಲಿ ಹಂಚಿದ್ದಾನೆ. ಈ ಐದನ್ನು 'ಪಂಚ ಕಾಲ' ಎಂಬುದಾಗಿಯೂ ಹಾಗೂ ಭಗವದ್ಭಕ್ತಿಮಯೀ ಆಚಾರ ಸಾಧನವನ್ನು 'ಪಂಚ ಕಾಲ ಸಾಧನ' ಎನ್ನುವ ಹೆಸರಿನಿಂದಲೂ ಕರೆದಿದ್ದಾನೆ —

ಮಹಾ ವಿಸ್ತಾರರೂಪೋಽಯಮಾಚಾರಃ ಪಂಚಕಾಲಿನಾಂ ||1/7||

ಈ ಪಂಚಕಾಲಿಕ ವೈಷ್ಣವನನ್ನು 'ಸಾತ್ವಿತ' ಎನ್ನುವ ಹೆಸರಿನಿಂದಲೂ ಕರೆಯಲಾಗುತ್ತದೆ.

ಈ ಸ್ಮೃತಿಯಲ್ಲಿ ಒಟ್ಟು 5 ಅಧ್ಯಾಯಗಳಿದ್ದು, ಸುಮಾರು 700 ಶ್ಲೋಕಗಳಿವೆ.

ಇದನ್ನು ಸ್ಥೂಲರೂಪದಲ್ಲಿ ವೀಕ್ಷಿಸಿದಲ್ಲಿ – ಮೊದಲ ಅಧ್ಯಾಯದಲ್ಲಿ ಭಗವತ್ ಪೂಜಾವಿಧಿ ವರ್ಣನೆಯೂ, ಎರಡನೇ ಅಧ್ಯಾಯದಲ್ಲಿ ಪ್ರಾತಃ ಕೃತ್ಯ ವರ್ಣನೆಯೂ, ಮೂರನೆಯ ಅಧ್ಯಾಯದಲ್ಲಿ ಉಪಾದಾನ ವಿಧಿ ವರ್ಣನೆಯೂ, ನಾಲ್ಕನೆಯ ಅಧ್ಯಾಯದಲ್ಲಿ ವ್ರತ ವಿಧಾನ ನಿರೂಪಣೆಯೂ, ಐದನೆಯ ಅಧ್ಯಾಯದಲ್ಲಿ ಯೋಗ ಕೃತ್ಯ ಹಾಗೂ ಶಾಸ್ತ್ರ ಪ್ರಶಂಸಾ ವರ್ಣನೆಯೂ ಸಮಾವಿಷ್ಟಗೊಂಡಿವೆ. ಇವು ಪ್ರತಿಯೊಂದು ಅಧ್ಯಾಯದ ಪ್ರಮುಖ ವಿಷಯಗಳಾಗಿವೆ. ಆದರೂ ಪ್ರತಿಯೊಂದು ಅಧ್ಯಾಯದಲ್ಲೂ ಇತರೇ ಬೇರೆಯೇ ಆದ ವಿಷಯಗಳೂ ನಿರೂಪಿತಗೊಂಡಿವೆ.

ಸುಖಾನಿಷ್ಣವಿನ ಪರಮಾಯತನದಿಂದ ಶೋಭಾಯಮಾನವಾದ ತೋದ ಗಿರಿಯ ಶಿಖರದಲ್ಲಿ ವಾಸಮಾಡುತ್ತಿದ್ದ ಶಾಂಡಿಲ್ಯನ ಬಳಿಗೆ ಬಂದ ಋಷಿ ಸಮೂಹವು ನಮಸ್ಕರಿಸಿ, ಹೀಗೆಂದು ನಿವೇದಿಸಿಕೊಂಡಿತು– "ಹೇ ಮಹರ್ಷಿ ! ವೇದಗಳು ಹಾಗೂ ಸನಾತನ ರಹಸ್ಯ ಶಾಸ್ತ್ರಗಳನ್ನು ತಮ್ಮಿಂದ ಆಲಿಸಿದ್ದೇವೆ. ಈಗ ಕುಟುಂಬ ನಿಷ್ಠ ಹಾಗೂ ಆಶ್ರಮ ನಿಷ್ಠ ಪಂಚಕಾಲಿಕವನ್ನು ಅನುಷ್ಠಾನ ಮಾಡುವ ಮಾಡಬೇಕಾದ ಮಾನವಾಚರಣೆಗಳನ್ನು ನಿಮ್ಮಿಂದ ಉಪದೇಶ ರೂಪದಲ್ಲಿ ಪಡೆಯಲು ಇಷ್ಟಪಟ್ಟವರಾಗಿ, ನಿಮ್ಮ ಬಳಿಗೆ ಬಂದಿದ್ದೇವೆ. ದಯವಿಟ್ಟು ಅವನ್ನೆಲ್ಲ ತಿಳಿಸುವುದು."

ಇದನ್ನು ಆಲಿಸಿದ ಶಾಂಡಿಲ್ಯನು ಪರಮ ಮಂಗಳಮಯ ಶ್ರೀ ಹರಿಯನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸಿ, ಮುಂದುವರೆಸಿದನು, "ಮುನಿವರ್ಯರೆ ! ಬಹಳ ಹಿಂದೆಯೇ ಶಾಸ್ತ್ರಗಳಲ್ಲಿ ಏಳು ರೀತಿಯ ಶುದ್ಧಿಗಳನ್ನು ವಿವರಿಸಿದ್ದೇನೆ. ಅವುಗಳನ್ನು ಗುರಿಯಾಗಿರಿಸಿಕೊಂಡು ಆಚಾರಗಳ ವಿಷಯದಲ್ಲಿ ವಿವರಗಳನ್ನು ನೀಡುತ್ತಿದ್ದೇನೆ. ಇವು ವಿಸ್ತಾರವಾಗಿದ್ದರೂ ನನ್ನ ಬುದ್ಧಿಶಕ್ತಿಗೆ ಅನುಗುಣವಾಗಿ ಸಂಕ್ಷಿಪ್ತವಾಗಿ ಹೇಳುತ್ತಿದ್ದೇನೆ ಆಲಿಸುವುದು.

## ಆಚಾರಶುದ್ಧಿ ಎಂದರೇನು ?

ಮಹರ್ಷಿ ಶಾಂಡಿಲ್ಯನು ಆಚಾರ ಶುದ್ಧಿಯ ಬಗ್ಗೆ ವಿಶೇಷ ಮಹತ್ವವನ್ನು ನೀಡಿದ್ದಾನೆ. ಈ ಆಚಾರ ಶುದ್ಧಿಯಿಂದ ಪರಾಭಕ್ತಿಯು ಸಹಜವಾಗಿಯೇ ಪ್ರಾಪ್ತವಾಗುವುದು. ಆಚಾರದ ವ್ಯಾಖ್ಯೆಯನ್ನು ತಿಳಿಸುತ್ತಾ ಇಂದ್ರಿಯ ಸಹಿತ ದೇಹ ಹಾಗೂ ಬುದ್ಧಿ, ಮನಸ್ಸು, ದ್ರವ್ಯ, ದೇಶ ಹಾಗೂ ಕ್ರಿಯೆ – ಈ ಏಳೂ ಪ್ರಕಾರಗಳ ಶುದ್ಧಿಯನ್ನು 'ಆಚಾರ–ಶುದ್ಧಿ' ಎಂದು ಕರೆಯಲಾಗುತ್ತದೆ.

ಪಂಚೇಂದ್ರಿಯಸ್ಯ ದೇಹಸ್ಯ ಬುದ್ಧೇಶ್ಚ ಮನಸ್ತಸ್ತಥ |
ದ್ರವ್ಯದೇಶ ಕ್ರಿಯಾಣಾಂ ಚ ಶುದ್ಧಿರಾಚಾರ ಇಷ್ಯತೇ ||1/16||

## ಪಂಚ ಜ್ಞಾನೇಂದ್ರಿಯಗಳ ಶುದ್ಧಿ

ಆಚಾರದ ವ್ಯಾಖ್ಯೆಯನ್ನು ಮಾಡಿದ ಮೇಲೆ ಐದು ಜ್ಞಾನೇಂದ್ರಿಯಗಳನ್ನು ಶುದ್ಧಿ ಮಾಡುವ ರೀತಿಯನ್ನು, ಅವುಗಳ ವಿಶೇಷತೆಯನ್ನು ಶಾಂಡಿಲ್ಯನು ತಿಳಿಸುತ್ತಾನೆ.

ನಿಷಿದ್ಧವಾಗಿರುವ ಮಾತುಗಳಲ್ಲಿ ಆಸಕ್ತಿಯನ್ನು ತೋರಿಸದಿರುವಿಕೆ,

ಪವಿತ್ರವಾದ ಭಗವದ್ವಿಷಯಗಳಲ್ಲಿ ಆಸಕ್ತಿಯನ್ನು ತೋರುವುದು ಇಂತಹುದನ್ನು 'ಕರ್ಣ ಶುದ್ಧ' ಎಂದು ಕರೆಯಲಾಗಿದೆ.

ಅಸ್ಪೃಶ್ಯ ಪದಾರ್ಥಗಳನ್ನು ಮುಟ್ಟದಿರುವುದು, ಯೋಗ್ಯವಾದ ಸ್ಪರ್ಶಿಸಬಹುದಾದ ಪದಾರ್ಥಗಳನ್ನು ಮುಟ್ಟುವುದರಲ್ಲಿ ಆಸಕ್ತಿ ತೋರುವುದನ್ನು 'ತ್ವಚಾಶುದ್ಧ' ಎಂದು ಕರೆಯಲ್ಪಡುವುದು

ಪಾಖಂಡಿ ಹಾಗೂ ಪತಿತರ ಕಡೆ ದೃಷ್ಟಿಸದೆ ಇರುವುದು, ಭಗವಂತ ಹಾಗೂ ಭಕ್ತರ ಕಡೆ ಸದಾ ಸ್ನೇಹಯುಕ್ತನಾಗಿ ವೀಕ್ಷಿಸುವುದನ್ನು 'ದೃಷ್ಟಿ ಶುದ್ಧಿ' ಎಂದು ಕರೆಯಲಾಗುತ್ತದೆ.

ಹೀಗೆಯೇ ಸೂಕ್ತ ಸಮಯದಲ್ಲಿ ಸೂಕ್ತವಾದ ಊಟ ಮಾಡುವುದರ ಮುಖಾಂತರ ಭೋಜ್ಯರಸವನ್ನು ಸವಿಯುವುದು, ಮಿತಾಹಾರದ ಆನಂದವನ್ನು ಪಡೆಯುವುದು, ಅಭೋಜ್ಯ (ಊಟ ಮಾಡಲು ಯೋಗ್ಯವಲ್ಲದ) ಪದಾರ್ಥಗಳಿಂದ ದೂರವಿರುವುದನ್ನು 'ಜಿಹ್ವಾ ಪವಿತ್ರ' ಎಂದು ಕರೆಯಲಾಗುತ್ತದೆ.

ಇದೇ ರೀತಿಯಲ್ಲಿ ದುರ್ಗಂಧದಿಂದ ದೂರವಿರುವುದು, ಯೋಗ್ಯ ಸುಗಂಧವನ್ನು ಆಸ್ವಾದಿಸುವಿಕೆಯನ್ನು 'ನಾಸಿಕಾ ಶುದ್ಧಿ' ಎಂದು ಶಾಂಡಿಲ್ಯನು ಕರೆದಿದ್ದಾನೆ.

ಶಿರಸ್ಸು, ಕಂಠ, ಕಣ್ಣು, ಮೂಗು ಇತ್ಯಾದಿ ಅಂಗಗಳೊಂದಿಗೆ ದೇಹದ ಶುದ್ಧಿಯನ್ನು ಕಾಪಾಡಿಕೊಳ್ಳುವ ಸತ್ಪುರುಷನನ್ನು 'ಸರ್ವಾಂಗೀಣ ಶುದ್ಧಿ' ಯನ್ನು ಹೊಂದಿರುವವನು ಎಂದು ಕರೆಯಲಾಗುತ್ತದೆ.

ಶಿರಃ ಕಂಠಾಕ್ಷಿನಾಸಾದಿ ಮಲನಿರ್ಹರಣೇನಯಾ |
ಶುದ್ಧಿ ರ್ದೇಹಸ್ಯ ಸಾ ಸಿದ್ಧಿಃ ಸರ್ವಾಂಗೀಣೇತಿ ಕೀರ್ತ್ಯತೆ ||

### ಪಂಚ ಕರ್ಮೇಂದ್ರಿಯಗಳ ಶುದ್ಧಿ ಹೇಗೆ ಮಾಡುವುದು?

ಪರಮಾತ್ಮನ ಪಾದಗಳನ್ನು ಪೂಜಿಸುವುದು, ಆತನ ದಿವ್ಯಮಂಗಳ ವಿಗ್ರಹದ ಅಲಂಕಾರಾದಿಗಳನ್ನು ಮಾಡುವುದು, ದೇವಸ್ಥಾನ ಇತ್ಯಾದಿ ಪವಿತ್ರ ಸ್ಥಳಗಳನ್ನು ಶುದ್ಧಿ ಮಾಡುವುದು, ಪೂಜೆಗಾಗಿ ಪುಷ್ಪಗಳನ್ನು ಸಂಗ್ರಹಿಸಿ, ಮಾಲೆ ಮಾಡಿ ಪರಮಾತ್ಮನಿಗೆ ಅರ್ಪಿಸುವುದು, ಭಿಕ್ಷುಕರಿಗೆ ಅಥವಾ ಯಾಚಿಸಿದವರಿಗೆ ದಾನ ನೀಡುವುದು, ಶುಭ ಆಚರಣೆಗಳನ್ನು ಪರಿಪಾಲಿಸುವುದು, ಜಪ ಇತ್ಯಾದಿಗಳಲ್ಲಿ ಕೈಗೂಡಿಸುವುದು – ಇತ್ಯಾದಿಗಳನ್ನು 'ಪಾಣಿಶುದ್ಧಿ' ಎಂದು

ಕರೆಯುವರು.

ಭಗವಂತನನ್ನು ಪ್ರದಕ್ಷಿಣೆ ಮಾಡುವುದು, ತೀರ್ಥಯಾತ್ರೆ ಮಾಡುವುದು, ಮಹಾತ್ಮರು, ಸಂತರು ಹಾಗೂ ಭಗವದ್ಭಕ್ತರನ್ನು ದರ್ಶಿಸುವುದಕ್ಕಾಗಿ ಹೋಗುವುದು – ಇತ್ಯಾದಿ ಭಗವನ್ನಿಮಿತ್ತವಾದ ಕರ್ಮಗಳನ್ನು ಮಾಡುವುದನ್ನು 'ಪಾದಶುದ್ಧಿ' ಎನ್ನುವರು.

ಇದೇ ರೀತಿಯಲ್ಲಿ ಶೌಚ ಶುದ್ಧಿ ಮಾಡುವುದನ್ನು 'ಪಾಯುಶುದ್ಧಿ' ಎಂದೂ, ಧರ್ಮಕ್ಕೆ ವಿರುದ್ಧವಲ್ಲದ ಕರ್ಮಗಳನ್ನು ಮಾಡುವಿಕೆಯನ್ನು 'ಉಪಾಸ್ಥ ಶುದ್ಧಿ' ಎಂದು ಕರೆಯಲಾಗುತ್ತದೆ.

## ವಾಣಿಯ ಶುದ್ಧಿ

ಬೇರೆಯವರನ್ನು ನಿಂದಿಸುವುದು; ಪರುಷ ಮಾತುಗಳನ್ನು ಆಡುವುದು, ವ್ಯರ್ಥದ ವಿವಾದಗಳಲ್ಲಿ ತಲ್ಲೀನನಾಗುವುದು; ಸುಳ್ಳಿನ ವಿಷಯಗಳನ್ನು ಹೇಳುವುದು; ಸಂಬಂಧವಿಲ್ಲದ ಮಾತುಗಳನ್ನು ಆಡುವುದು; ತನ್ನ (ಸ್ವ) ಪ್ರತಿಷ್ಠೆಯ ವರ್ಣನೆ ಮಾಡುವುದು; ಅಸಹ್ಯ, ಉದ್ವೇಗಕಾರಿ, ಮರ್ಮಾಂತಕ ಮಾತುಗಳನ್ನು ಹೇಳುವುದು; ಅನವಶ್ಯಕ ಆಕ್ಷೇಪಣೆಗಳನ್ನು ಮಾಡುವುದು; ಅಪಶಬ್ದ (ಕೆಟ್ಟಮಾತು)ಗಳನ್ನು ಹೇಳುವುದು; ಅಸತ್–ಶಾಸ್ತ್ರಗಳನ್ನು ಓದುವುದು; ದುರ್ಜನರು ಹೀನ ಮನುಷ್ಯರೊಂದಿಗೆ ಸಂಭಾಷಿಸುವುದು-ಇತ್ಯಾದಿಗಳು ವಾಣಿಯ (ಮಾತನಾಡುವುದರ) ದೋಷಗಳಾಗಿವೆ. ಇದರಿಂದ ವಾಣಿಯ ಅಶುದ್ಧಿಯಾಗುವುದು. ಆದುದರಿಂದ ಇಂತಹ ರೀತಿಗಳನ್ನು ತ್ಯಜಿಸಬೇಕು. ಇದಕ್ಕೆ ಬದಲಾಗಿ ಸ್ವ – ಅಧ್ಯಯನ ಮಾಡುವುದು; ಜಪದಲ್ಲಿ ನಿರತನಾಗುವುದು; ಧರ್ಮಗ್ರಂಥಗಳನ್ನು ಓದುವುದು – ಬೇರೆಯವರಿಗೆ ಓದಿ ಹೇಳುವುದು; ಪ್ರಿಯವೂ, ಸತ್ಯವಾದುದೂ, ಹಿತಕರವೂ ಆದ ಮಾತುಗಳನ್ನು ಹೇಳುವುದು; ಅರ್ಥಪೂರ್ಣ, ಸತ್‌ಲಕ್ಷಣಗಳಿಂದ ಕೂಡಿದ ಮಾತುಗಳನ್ನು ಹೇಳುವುದು, ಉಪಯುಕ್ತ ಶಬ್ದಗಳನ್ನು ಪ್ರಯೋಗಿಸುವುದು; ಬಹಳ ಹೆಚ್ಚಾಗಿ (ಅತಿಯಾಗಿ) ಮಾತನಾಡದಿರುವುದು; ಅವಶ್ಯಕತೆ ಇದ್ದಾಗ ಮಾತ್ರ ಮಾತನಾಡುವುದು, ಇಲ್ಲದಿದ್ದಲ್ಲಿ ಸಾಧ್ಯವಿದ್ದಷ್ಟು ಮೌನವಾಗಿರುವುದು, ಭಗವಂತನ ಗುಣಗಳ ಬಗ್ಗೆ ಸದಾ ಯೋಚಿಸುವುದು–ಇವುಗಳಿಂದ ವಾಣಿಯು ಶುದ್ಧಿಯಾಗುವುದು.

ಬುದ್ಧಿಯ ಶುದ್ಧಿಯು ಹೇಗೆ ಸಾಧ್ಯ ?

'ಧರ್ಮದ ಹಾನಿಯನ್ನು ಮಾಡದೆ, ಸದಾ ಅದನ್ನೇ ಸಂಗ್ರಹಿಸುವೆನು. ಏಕೆಂದರೆ ಧರ್ಮ ಮತ್ತು ಅಧರ್ಮಗಳು ಕ್ರಮವಾಗಿ ಎಲ್ಲ ಜೀವಿಗಳಿಗೂ ಸುಖ ಹಾಗೂ ದುಃಖಗಳನ್ನು ಉಂಟುಮಾಡುವುದಾಗಿರುತ್ತವೆ.' ಎನ್ನುವುದು ಯಾರ ಬುದ್ಧಿಯಲ್ಲಿ ನೆಲೆಸುವುದೊ, ಅಂತಹವರ ಬುದ್ಧಿಯು ಶುದ್ಧವಾಗಿದೆಯೆಂದು ತಿಳಿದುಕೊಳ್ಳಬಹುದು.

ಧರ್ಮಹಾನಿರ್ನ ಕರ್ತವ್ಯಾ ಕರ್ತವ್ಯೋ ಧರ್ಮ ಸಂಗ್ರಹಃ |
ಧರ್ಮಾಧರ್ಮೌಹಿ ಸರ್ವೇಷಾಂ ಸುಖದುಃಖೋಪಪಾದಕೌ ||1-40||

ಇದೇ ರೀತಿಯಲ್ಲಿ 'ಇದು ಹೇಯವಾದುದು' ಮತ್ತು 'ಇದು ಪರಮ ಉಪಾದೇಯ (ಗ್ರಹಿಸಲು ಯೋಗ್ಯ) ವಾದುದು' ಎಂಬುವನ್ನು ಯಾವಾಗ ಬುದ್ಧಿಯು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳುವುದೊ ಆಗ ಬುದ್ಧಿಯ ಶುದ್ಧತೆಯಾಗಿದೆ ಎಂದು ತಿಳಿದುಕೊಳ್ಳಬಹುದು. ಇದನ್ನು ಪ್ರತಿಯೊಬ್ಬ ಮಾನವನೂ ಸ್ವತಃ ತನ್ನಲ್ಲಿ ಚಿಂತನೆ ಮಾಡಿಕೊಂಡು, ಅನುಸರಿಸಿ ಕೊಳ್ಳಬೇಕೆ ಹೊರತು, ಬೇರೆಯವರು ಹೇಳುವಿಕೆಯಿಂದ ಹಾಗೂ ಉಪದೇಶ ಗಳಿಂದ ಸರಿಹೋಗುವಂತಹುವುದಲ್ಲ.

ದೇವರೇ ಪುತ್ರ ವಾಸುದೇವ ಶ್ರೀ ಕೃಷ್ಣನೇ ಸಾಕ್ಷಾತ್ ಬ್ರಹ್ಮನು, ಪರಮಧಾಮನು, ಸಕಲ ಕಾರಣಗಳಿಗೂ ಮೂಲ ಕಾರಣನು, ಅವ್ಯಯನು ಹಾಗೂ ಸನಾತನನಾಗಿರುವನು. ದೇವತೆಗಳು, ಮಾನವರು, ಪಶು-ಪಕ್ಷಿಗಳು, ಜೀವಜಂತುಗಳಿಂದ ಕೂಡಿದ ಸಕಲ ಚರಾಚರ ಸೃಷ್ಟಿಯು ಭಗವಾನ್ ವಾಸು ದೇವನಿಂದ ನಿರ್ಮಾಣವಾದುವುಗಳು, ಅವನಿಲ್ಲದೆ ಅವು ಯಾವುವೂ ಇಲ್ಲ, ಆದುದರಿಂದ ಆತನೊಬ್ಬನೇ ಎಲ್ಲರಿಂದಲೂ ಆರಾಧಿಸಲ್ಪಡುವವನಾಗಿದ್ದಾನೆ, ಅವನಲ್ಲದೆ ಈ ಸಂಸಾರ ಸಾಗರವನ್ನು ದಾಟಿಸುವವನು ಬೇರೆ ಯಾರೂ ಇಲ್ಲ, ಜ್ಞಾನ ಕರ್ಮಗಳಿಂದಲೂ ಅವನೇ ನಮಗೆಲ್ಲರಿಗೂ ಆರಾಧ್ಯನಾಗಿರುವನು —

ಸಾಕ್ಷಾದ್‌ಬ್ರಹ್ಮ ಪರಂಧಾಮ ಸರ್ವಕಾರಣಮವ್ಯಯಂ ||
ದೇವಕೀಪುತ್ರ ಏವಾನ್ಯೇ ಸರ್ವೇ ತತ್ಕಾರ್ಯಕಾರಣಃ |
ದೇವಾ ಮನುಷ್ಯಾಃ ಪಶವೋ ಮೃಗಪಕ್ಷಿಸರೀಸೃಪಾಃ ||
ಸರ್ವಮೇವ ತಜ್ಜಗದ್ಧಾತುರ್ವಾಸುದೇವಸ್ಯ ವಿಸ್ತೃತಿಃ |

ಸ ಏವ ಸರ್ವಥೋಪಾಸ್ಯೋ ನಾನ್ಯೋ ಸಂಸಾರತಾರಣಃ ||
(1/44-47)

***    ***    ***

ಈ ರೀತಿಯಲ್ಲಿ ಸಾತ್ವಿಕ ಜ್ಞಾನದಿಂದ ಬುದ್ಧಿಯು ನಿಶ್ಚಿತವಾಗುತ್ತದೆಯೊ ಆಗ ಅಭೇದ್ಯ ಬುದ್ಧಿಯು ಶುದ್ಧ ಬುದ್ಧಿಯಾಗುತ್ತದೆ.

## ಮನಃ ಶುದ್ಧಿ

ಇತರರ ಧನ, ಪರಸ್ತ್ರೀ, ಹಿಂಸೆ ಇತ್ಯಾದಿಗಳ ಬಗ್ಗೆ ಮನಸ್ಸಿನಲ್ಲಿ ಯೋಚಿಸುವುದು, ಇತರರೊಂದಿಗೆ ವೈರಭಾವವನ್ನು ಬೆಳೆಸಿಕೊಳ್ಳುವುದು, ಈರ್ಷ್ಯೆಯನ್ನು ಹೊಂದುವುದು, ದೊರೆಯದ ಹಣದ ಬಗ್ಗೆ ಯೋಚಿಸುವುದು, ಊಟದ ಚಿಂತೆ, ಅಸತ್ ಕಥೆಗಳನ್ನು ಆಲಿಸುವುದು, ಅಸತ್ ಕೆಲಸಗಳನ್ನು ನಿರ್ವಹಿಸುವುದು – ಇತ್ಯಾದಿಗಳು ಮನಸ್ಸಿಗೆ ದೋಷವನ್ನು ಉಂಟುಮಾಡುವಂತಹವು. ಇವುಗಳಿಂದ ಮನಸ್ಸು ಮಲಿನವಾಗುತ್ತದೆ, ಅಶುದ್ಧವಾಗುತ್ತದೆ. ಆದುದರಿಂದ ಇಂತಹ ದೋಷ ಪೂರ್ಣ ಕರ್ಮಗಳನ್ನು ಮನಸ್ಸಿನಿಂದ ದೂರ ಮಾಡಬೇಕು. ಭಗವನ್ನಿಮಿತ್ತ ಕರ್ಮಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸಬೇಕು. ಇಂದ್ರಿಯ ವಿಷಯಗಳ ಬಗ್ಗೆ ಮನಸ್ಸಿನಲ್ಲಿ ಚಿಂತಿಸಲೇಬಾರದು, ಭಗವಂತನ ವಿಷಯಗಳ ಬಗ್ಗೆಯೇ ಯೋಚಿಸುತ್ತಿರಬೇಕು. ಇಂತಹ ಒಳ್ಳೆಯ ಗುಣಗಳಿಂದ ಮನಸ್ಸನ್ನು ನಿರ್ಮಲವಾಗಿಸಿಕೊಳ್ಳಬೇಕು. ಇದೇ ಮನಸ್ಸಿನ ಶುದ್ಧಿಗೆ ದಾರಿ.

ಭಗವತ್‌ಕರ್ಮಸಿದ್ಧ್ಯರ್ಥಂ ವ್ಯಾಪೃತಂ ಭಗವತ್‌ಪರಂ |
ಸರ್ವದಾ ಭಗವದ್ ಧ್ಯಾನಂ ಸಂಸರ್ಗವಿಗತಜ್ವರಂ |
ಏವಮಾದಿಗುಣೋಪೇತಂ ನಿರ್ಮಲಂ ಮನ ಇಷ್ಯತೇ ||1/55-59||

## ದ್ರವ್ಯ ಶುದ್ಧಿ

ಸಾತ್ವಿಕ, ರಾಜಸ ಹಾಗೂ ತಾಮಸ-ಈ ಮೂರೂ ರೀತಿಯ ದ್ರವ್ಯಗಳಲ್ಲಿ ಶಾಸ್ತ್ರಗಳು ಸಾತ್ವಿಕ ದ್ರವ್ಯಗಳ ಉಪಯೋಗವನ್ನು 'ದ್ರವ್ಯಶುದ್ಧಿ' ಎಂದು ಕರೆದಿವೆ. ಯಾವ ರೀತಿಯ ದ್ರವ್ಯವನ್ನು ಉಪಯೋಗಿಸುತ್ತೇವೆಯೊ, ಸ್ವಭಾವವೂ ಅದೇ ರೀತಿ ಆಗಿರುತ್ತದೆ. ಸಾತ್ವಿಕ ದ್ರವ್ಯಗಳ ಉಪಯೋಗದಿಂದ ಜ್ಞಾನ ಪ್ರಾಪ್ತಿಯಾಗುತ್ತದೆ – 'ಸಾತ್ವಿಕಸ್ಯ ವಿಶುದ್ಧ್ಯೈವ ಜ್ಞಾನಂ ಭವತಿ ನಿರ್ಮಲಂ |' (1/70)

ದೇಶ ಶುದ್ಧಿ

ಧಾರ್ಮಿಕರಿಂದ ಸೇವಿಸಲ್ಪಡುವ; ಹಿಂಸಕ ಮೃಗಗಳು ಹಾಗೂ ದಸ್ಯುಗಳಿಂದ ಕೂಡಿಲ್ಲದ; ಸಾರಂಗ, ಜಿಂಕೆ, ಮಯೂರಗಳಿಂದ ಕೂಡಿದ ಪವಿತ್ರ ತೀರ್ಥಸ್ಥಾನಗಳಿಂದ ಕೂಡಿದ ದೇಶವನ್ನು 'ಮೋಕ್ಷಭೂಮಿ' ಎಂದು ಕರೆಯಲಾಗುವುದು. ಪಕ್ಷಿಗಳ ಕಲರವದಿಂದ ಕೂಡಿದ ಸುಂದರ ಉದ್ಯಾನವನಗಳು, ನದಿ–ಸರೋವರಗಳು – ವೃಕ್ಷಸಮೂಹದಿಂದ ಸುಶೋಭಿತವಾದ ಸ್ಥಳಗಳು, ಸಮಿತ್ತು, ಕುಶ ಇತ್ಯಾದಿಗಳು ಸುಲಭವಾಗಿ ದೊರೆಯುವಂತ ಸ್ಥಳಗಳು, ತುಳಸೀ ತೋಟ ಹಾಗೂ ಗೋವುಗಳಿಂದ ಸುಶೋಭಿತವಾದ ಯಾವುದೇ ಪವಿತ್ರ ಸ್ಥಾನದಲ್ಲಿ ಮನೆಗಳು ಹಾಗೂ ಪರ್ಣಶಾಲೆಗಳನ್ನು ನಿರ್ಮಿಸಿ ಭಗವಂತನ ಸಂಕೀರ್ತನೆಯನ್ನು ಮಾಡಬೇಕು. ಇದನ್ನೇ ದೇಶದ ಅಥವಾ ಸ್ಥಳದ ಶುದ್ಧಿ ಎಂದು ಕರೆಯುವರು.

ಈ ರೀತಿಯ ಏಳು ರೀತಿಗಳಲ್ಲಿನ ಶುದ್ಧಿಯಿಂದ ಯಾರು ಕ್ರಿಯಾತ್ಮಕರಾಗಿರುವರೊ, ಅಂತಹವರು ಭಗವತ್ ಪ್ರಾಪ್ತಿಯನ್ನು ಪಡೆಯುವರು.

ಭಗವತ್ ಪ್ರೀತಿ ಪಡೆಯುವ ಬೇರೆ ಮಾರ್ಗಗಳು

ಭಗವಂತನ ಪ್ರೀತಿಯನ್ನು ಪಡೆಯುವ ಮೇಲೆ ತಿಳಿಸಿರುವ ಮಾರ್ಗಗಳಲ್ಲದೆ ಇತರೇ ಉಪಾಯಗಳಲ್ಲಿ ಮುಖ್ಯವಾದುದೆಂದರೆ ಶರೀರವನ್ನು ತಪಸ್ಸಿನಿಂದ ಶುದ್ಧಿಗೊಳಿಸಿಕೊಳ್ಳುವುದು. ತಪಸ್ಸು ಮಾಡಲು ಅಸಮರ್ಥನು, ಅಶಕ್ತನೂ ಆದರೆ ದಾನ ಮಾಡಬೇಕು. ತಪ–ದಾನ–ಇವೆರಡರಲ್ಲೂ ಅಸಮರ್ಥನಾದರೆ ಭಗವನ್ನಾಮ ಸಂಕೀರ್ತನೆಯನ್ನು ಮಾಡಬೇಕು. ಉಪವಾಸ, ದಾನ, ಸಜ್ಜನರು ಹಾಗೂ ಭಗವದ್‌ಭಕ್ತರನ್ನು ಸೇವಿಸುವುದು, ಭಗವನ್ನಾಮ ಸಂಕೀರ್ತನೆ, ಅನುತಾಪ (ಪಶ್ಚಾತ್ತಾಪ), ಶ್ರದ್ಧೆಗಳಿಂದ ಎಲ್ಲ ರೀತಿಯ ಶುದ್ಧಿಗಳೂ ಸಂಭವಿಸುತ್ತವೆ. ಇದರ ಮುಖಾಂತರ ಭಗವತ್ ಪ್ರಾಪ್ತಿಯನ್ನು ಪಡೆದು ಸಾಧಕನಾಗಿ, ಪರಾಭಕ್ತಿಯನ್ನು ಪಡೆಯಬಹುದು —

ಉಪವಾಸಾತ್ ತಥಾ ದಾನಾತ್ ಸದ್ಭಕ್ತಾನಾಂ ಚ ಸೇವನಾತ್ ।
ಸಂಕೀರ್ತನಾಜ್ಜಪಾತ್ ತಾಪಚ್ಛ್ರದ್ಧಯಾ ಶುದ್ಧಿನ್ನೃಚ್ಛತಿ ||1–17||

ಈ ರೀತಿಯಲ್ಲಿ ಶಾಂಡಿಲ್ಯ ಸ್ಮೃತಿಯ ಮೊದಲ ಅಧ್ಯಾಯದಲ್ಲಿ ಏಳು ರೀತಿಯ ಶುದ್ಧಿಗಳ ವರ್ಣನೆ ಮಾಡಿ, ಎರಡನೆ ಅಧ್ಯಾಯದಲ್ಲಿ ಪ್ರಾತಃ ಕೃತ್ಯ

ಗಳ ವರ್ಣನೆಯನ್ನು ಮಾಡಲಾಗಿದೆ. ಮುಖ್ಯವಾಗಿ ಬೆಳಗಿನಜಾವ ಬೇಗ ಏಳುವುದು (ಪ್ರಾತಃ ಜಾಗರಣ); ಪ್ರಾತಃ ಸ್ಮರಣೀಯ ಶ್ಲೋಕಗಳ ಪಠನ; ವಾಸುದೇವಾದಿ ಭಗವನ್ನಾಮಗಳ ಸ್ವೀಕಾರ; ಶೌಚ, ಸ್ನಾನ, ಸಂಧ್ಯಾ, ದೇವ ಸ್ಥಾನಗಳಿಗೆ ಹೋಗಿ ಬರುವುದು, ಪ್ರಾತಃಕಾಲದ ದೇವಪೂಜೆ ಹಾಗೂ ವಂದನೆ ಇತ್ಯಾದಿ ವಿಧಿಗಳನ್ನು ಇದರಲ್ಲಿ ತಿಳಿಸಲಾಗಿದೆ. ಇವೆಲ್ಲವೂ ಪ್ರಾತಃ ಕಾಲದಲ್ಲಿ ಮಾಡಬೇಕಾದ ಕೃತ್ಯಗಳಾಗಿವೆ. ಇವು ಪಾಂಚರಾತ್ರ ಶ್ರೀ ವೈಷ್ಣವರು ಆಚರಿಸಬೇಕಾದ ಉಪಾಸನೆಗಳಾಗಿವೆ. ಇವನ್ನು 'ಅಭಿಗಮನ' ಎನ್ನುವ ಹೆಸರಿನಿಂದ ಕರೆಯಲಾಗುತ್ತದೆ. ಸ್ನಾನ ಸಂಧ್ಯಾವಂದನೆ ಹಾಗೂ ಜಪಃ ಸ್ತೋತ್ರ ಪಠಣ, ದೇವಾರ್ಚನೆ, ದೇವಸ್ತುತಿ–ಇತ್ಯಾದಿ ಕ್ರಿಯೆಗಳಿಂದ ಪ್ರಾತಃ ಕಾಲದ ಸಮಯವನ್ನು ಕಳೆಯಬೇಕೆಂದು ಮಹರ್ಷಿ ಶಾಂಡಿಲ್ಯನು ನಿರ್ದೇಶಿಸು ತ್ತಾನೆ. 'ಸ್ನಾನಾರ್ಚನ ಜಪಸ್ತೋತ್ರಪಾಠೈಃ ಕಾಲಂ ವಿನೋದಯಾತ್' (2–91) ಇವುಗಳಲ್ಲಿ ಕೆಲವು ಮುಖ್ಯ ವಿಷಯಗಳು ಹೀಗಿವೆ –

### ನಾಮ ಸಂಕೀರ್ತನೆಯನ್ನು ತಪ್ಪದೆ ಮಾಡುವುದು

ಪ್ರಾತಃ ಜಾಗರಣೆಯ ನಂತರ ಭಗವಾನ್ ವಾಸುದೇವನ ದಿವ್ಯನಾಮಗಳ ಸಂಕೀರ್ತನೆಯನ್ನು ಭಕ್ತಿಪೂರ್ವಕವಾಗಿ ತಪ್ಪದೆ ಮಾಡಬೇಕು. ಸಮಸ್ತ ಜೀವಿಗಳ ಕಲ್ಯಾಣಕ್ಕಾಗಿ ಭಗವಂತನ ಅನುಗ್ರಹದ ಸ್ಮರಣೆ ಮಾಡಬೇಕು. ಇದರಿಂದ ಎಲ್ಲ ಸಿದ್ಧಾಂತಗಳು ಪ್ರಾಪ್ತವಾಗುವುವು. ಆತನ ಚರಣಕಮಲಗಳ ಪ್ರಾಪ್ತಿಯೂ ಉಂಟಾಗುತ್ತದೆ. ದಿನಗಳು ಸುಗಮವಾಗಿ ಕಳೆಯುತ್ತದೆ –

ವಾಸುದೇವಾದಿ ದಿವ್ಯಾನಾಂ ನಾಮ್ನಾಂ ಸಂಕೀರ್ತನಂ ಚರೇತ್ |
ಪ್ರಾದುರ್ಭಾವ ಗುಣಂ ಚಾಪಿ ಸಂಸ್ಮರೇತ್ ಸರ್ವಸಿದ್ಧಯೆ ||2–3,4||

### ತೀರ್ಥಜಲವನ್ನು ಎಂದಿಗೂ ದೂಷಣೆ ಮಾಡಬಾರದು

ಮಹರ್ಷಿ ಶಾಂಡಿಲ್ಯನು ಪ್ರಾತಃ ಕೃತ್ಯಗಳನ್ನು ಪರಿಗಣನೆಗೆ ತೆಗೆದು ಕೊಳ್ಳುತ್ತಾ 'ಸ್ನಾನ ಪ್ರಕರಣ'ದಲ್ಲಿ ಹೀಗೆಂದು ಹೇಳಿದ್ದಾನೆ.

ತೀರ್ಥಗಳ ನೀರನ್ನು ಶರೀರದ ಅಂಗಗಳ ಮುಖಾಂತರ ಕ್ಷೋಭೆ ಗೊಳಿಸ ಬಾರದು. ಕಾಲಿನಿಂದ ನೀರನ್ನು ಒದೆಯಬಾರದು. ಈಜುವುದು ಇತ್ಯಾದಿ ಗಳನ್ನು ಮಾಡುವಾಗ ನೀರನ್ನು ಒದೆಯಬಾರದು (ಅಂತಹ ತೀರ್ಥಗಳಲ್ಲಿ ಈಜಲೇ ಬಾರದು), ಅವರಲ್ಲಿ ಜಲಕ್ರೀಡೆ ಆಡಬಾರದು, ಅದರಲ್ಲಿ ಮೂತ್ರ

ವಿಸರ್ಜನೆ ಇತ್ಯಾದಿಗಳನ್ನು ಮಾಡಬಾರದು, ಪರಸ್ಪರ ನೀರನ್ನು ಚಿಮ್ಮಿಸಿಕೊಳ್ಳುವುದು, ಇತ್ಯಾದಿಗಳನ್ನು ಮಾಡಬಾರದು. ಬಾಹ್ಯ ಶರೀರದ ಕೊಳೆಯನ್ನು ನೀರಿನಲ್ಲಿ ಬಿಡಬಾರದು. ನೀರು ಕೊಳಕಾಗುವ, ಕಶ್ಮಲಗೊಳ್ಳುವ ಯಾವುದೇ ಕ್ರಿಯೆಯನ್ನು ಅಂತಹ ತೀರ್ಥಗಳಲ್ಲಿ ಮಾಡಬಾರದು.

ಅಂಬು ನ ಕ್ಷೋಭಯೇದಂಗೈಃ ಪಾದೇನೋತ್ಸಾದಯೇತ್ರ ಚ ||
ನಾಚರೇತ್ ಪ್ಲವನಕ್ರೀಡಾಂ ನಗಣ್ಡೂಷಂ ಜಲೇಕ್ಷಿಪೇತ್ ।
ಅನ್ಯೋಽನ್ಯಂ ನ ಕ್ಷಿಪೇತ್ ತೋಯಂ ನ ದೇಹ ಮಲಮುತ್ಸೃಜೇತ್ ||
ನ ಕುತ್ಸಯೇದಮ್ಬು ತೀರ್ಥಮನ್ಯತ್ ತತ್ರ ನ ಕೀರ್ತಯೇತ್ |
(2/22-24)

## ಅಷ್ಟಾಂಗ ಪ್ರಣಾಮ

ಈ ರೀತಿಯಲ್ಲಿ ಸ್ನಾನಾದಿ ಕ್ರಿಯೆಗಳಿಂದ ಪವಿತ್ರನಾಗಿ, ಹಣೆಯಲ್ಲಿ ತಿಲಕವನ್ನು ಧರಿಸಬೇಕು. ನಂತರ ಸಂಧ್ಯಾವಂದನಾದಿಗಳನ್ನು ನೆರವೇರಿಸಿ, ಶ್ರದ್ಧಾಭಕ್ತಿಪೂರ್ವಕವಾಗಿ ಪೂಜೆ ಮಾಡಲು ದೇವ ಮಂದಿರವನ್ನು ಪ್ರವೇಶಿಸಬೇಕು. ಮೊದಲು ದಂಡವತ್ ಪ್ರಣಾಮವನ್ನು ಮಾಡಬೇಕು. ದೇವರಿಗೆ ಎಂದಿಗೂ, ಯಾವ ಸಮಯದಲ್ಲೂ ಬೆನ್ನನ್ನು ತೋರಿಸಬಾರದು. ದೇವರ ವಿಗ್ರಹಗಳ ಎದುರು ಎತ್ತರದ ದನಿಯಲ್ಲಿ ಮಾತನಾಡಬಾರದು. ನೇರ ನಿಂತು, ಶರೀರವನ್ನು ಹರಡಿ ಅರ್ಧ ಅರಳಿದ ಕಮಲದ ತರಹ ಅಂಜಲಿಯನ್ನು ಮಾಡಿಕೊಂಡು ಅಷ್ಟಾಂಗ–ಪ್ರಣಾಮವನ್ನು ಮಾಡಬೇಕು. ಎರಡೂ ಕಾಲುಗಳು, ಎರಡೂ ಕೈಗಳು, ತಲೆ, ಮನಸ್ಸು, ಬುದ್ಧಿ ಹಾಗೂ ಅಹಂತತ್ತ್ವದ ಮುಖಾಂತರ ಸರ್ವತೋಭಾವದಿಂದ ಅತ್ಯಂತ ಪ್ರಣತಿ ಪೂರ್ವಕವಾಗಿ, ಶ್ರದ್ಧಾಭಕ್ತಿ ಸಹಿತ ಮಾಡುವ ಪ್ರಣಾಮವನ್ನು ಅಷ್ಟಾಂಗ ಪ್ರಣಾಮವೆಂದು ಕರೆಯಲಾಗುತ್ತದೆ –

ಪಾದೌ ಶಿರಸ್ತಥಾ ಹಸ್ತೌ ನಿಕುಂಚ್ಯ ಮುಕುಲಾ ಕೃತಿಃ |
ಮನೋಬುದ್ಧ್ಯಭಿಮಾನೈಶ್ಚ ಪ್ರಣಾಮೋಽಷ್ಟಾಂಗ ಸಂಜ್ಞಿತಃ ||2-74||

ಎಲ್ಲೆಡೆ ಭಗವದ್‌ಬುದ್ಧಿಯನ್ನು ಇರಿಸಿಕೊಂಡು 'ಜಿತಂತೇ' * ಎನ್ನುವ

* 'ಜಿತಂ ತೇ ಪುಂಡರೀಕಾಕ್ಷ ನಮಸ್ತೆ ವಿಶ್ವಭಾವನ' ಈ ರೀತಿಯಲ್ಲಿ 'ಜಿತಂ ತೇ' ಸ್ತೋತ್ರ ಪ್ರಾರಂಭವಾಗುತ್ತದೆ. ಇದು ಪಾಂಚರಾತ್ರ ಆಗಮದಲ್ಲಿದೆ. ಇದನ್ನು ವಿಶೇಷವಾಗಿ ರಾಮಾನುಜ ಸಂಪ್ರದಾಯದ ಶ್ರೀ ವೈಷ್ಣವರು ಪಠಿಸುವರು. ಈ ಸ್ತೋತ್ರವನ್ನು 'ಮಹಾಪುರುಷ ವಿದ್ಯೆ' ಎಂದು ಕರೆಯುವರು.

ಸ್ತೋತ್ರ ಅಥವಾ ಇತರೇ ಸ್ತೋತ್ರಗಳನ್ನು ಪಠಿಸಬೇಕು. ದ್ವಾದಶಾಕ್ಷರ ಮಂತ್ರ ವಾದ 'ಓಂ ನಮೋ ಭಗವತೇ ವಾಸುದೇವಾಯ' ಅಥವಾ ಅಷ್ಟಾಕ್ಷರಿ ಮಂತ್ರ ವಾದ 'ಓಂ ನಮೋ ನಾರಾಯಣಾಯ' ಎನ್ನುವುದನ್ನು ಜಪಿಸಬೇಕು. ಈ ರೀತಿಯಲ್ಲಿ ಎಲ್ಲ ಕಾಲಗಳಲ್ಲೂ ಭಗವನ್ನಿಮಿತ್ತ ಕರ್ಮಗಳನ್ನು ಮಾಡಬೇಕು. ಇದೇ ಜೀವನದ 'ಮಹದುಪಲಬ್ಧಿ' ಯಾಗಿರುತ್ತದೆ.

ದಿನದ ಎರಡನೇ ಭಾಗದ ಕ್ರಿಯೆಗಳನ್ನು ಪಾಂಚರಾತ್ರ ವೈಷ್ಣವರಲ್ಲಿ 'ಉಪಾದಾನ' ಎನ್ನುವ ಹೆಸರಿನಿಂದ ಕರೆಯಲಾಗುತ್ತದೆ. ಇದರಲ್ಲಿ ಜೀವನ ನಿರ್ವಹಣೆಯ ಕರ್ತವ್ಯಗಳು ಹಾಗೂ ಧನ ಸಂಗ್ರಹ; ಭಗವತ್ಪ್ರೀತಿ–ನಿಮಿತ್ತಕ ಬಾಹ್ಯ ಕರ್ಮಗಳು ಸಮಾವೇಶಗೊಂಡಿವೆ. ಇವನ್ನು ದ್ವಿತೀಯ ಕಾಲದ ಕ್ರಿಯೆಗಳೆಂದು ಕರೆಯಲಾಗುತ್ತದೆ.

ಶಾಸ್ತ್ರ ಸಮ್ಮತವಾದ ಜೀವನ ನಿರ್ವಹಣೆಗಾಗಿನ ಯಥೋಚಿತ ಧನ ಸಂಗ್ರಹವನ್ನು ಮಾಡಿ, ಭಗವಂತನ ಸದುದ್ದೇಶಕ್ಕಾಗಿ ಖರ್ಚು ಮಾಡಬೇಕು. ಭಗವದ್ ವಿರಹಿತ ಕ್ರಿಯೆಗಳನ್ನು ತ್ಯಜಿಸಬೇಕಾದುದು ಅವಶ್ಯ.

### ಅಸತ್ ಮಾರ್ಗದಿಂದ ಧನಸಂಗ್ರಹ ಕೂಡದು

ಅಸತ್ ಮಾರ್ಗ (ಕೆಟ್ಟ ದಾರಿಯಿಂದ) ಲೋಭವಶರಾಗಿ ಧನವನ್ನು ಸಂಪಾದಿಸಿ ಸುಖಭೋಗ ಮಾಡುವುದು ಪತನದ ಮಾರ್ಗವಾಗುತ್ತದೆ. ಸಿದ್ಧಿಯು ಪ್ರಾಪ್ತವಾಗುವುದಿಲ್ಲ. ಆದುದರಿಂದ ಶುದ್ಧರೂಪದ ದ್ರವ್ಯವನ್ನು ಸಂಪಾದಿಸಬೇಕು. ಇದರಿಂದಲೇ ಪರಮಾತ್ಮನ ನೈವೇದ್ಯಕ್ಕೆ ಅರ್ಪಿಸಿದುದನ್ನು, ಪ್ರಸಾದವನ್ನಾಗಿ ಸ್ವೀಕರಿಸಬೇಕು –

ಅಮಾರ್ಗೇಣ ಧನಂ ಲೋಭಾತ್ ಸಂಪಾದ್ಯ ಸುಖಮಾವಸನ್ ||
ನ ಸಂಸಿದ್ಧೋ ಭವೇತ್ ತಸ್ಮಾತ್ ಶುದ್ಧ ದ್ರವ್ಯಪರೋ ಭವೇತ್ |
(3/49–50)

### ಭಗವಂತನ ಪೂಜೆಯಲ್ಲಿ ಭಾವಭಕ್ತಿಯ ಪ್ರಾಧಾನ್ಯತೆ

ಮಹರ್ಷಿ ಶಾಂಡಿಲ್ಯನು ಸ್ಪಷ್ಟ ನಿರ್ದೇಶನವನ್ನು ನೀಡಿ ವ್ಯಕ್ತಿಯ ಬಳಿ ನ್ಯಾಯೋಪಾರ್ಜಿತ ದ್ರವ್ಯವಷ್ಟೇ ಇರಬೇಕು. ಅದರ ಉಪಯೋಗದಿಂದಷ್ಟೇ ದೇವರ ಪೂಜೆ ಮಾಡಬೇಕು. ದೇವರ ನೈವೇದ್ಯಕ್ಕೆ ಏನೂ ಇಲ್ಲದೇ ಇದ್ದರೆ, ಶ್ರದ್ಧಾಭಕ್ತಿಪೂರ್ವಕವಾಗಿ ಒಂದು ಲೋಟಾ ನೀರನ್ನು ಇಟ್ಟು ಅರ್ಚನೆಯನ್ನು

ಮಾಡಬೇಕು. ಇದೇ ಫಲಪ್ರದವಾದುದು. ಪರಮಾತ್ಮನಿಗೆ ಬೇಕಾದುದು ಭಕ್ತನ ಭಾವ ಭಕ್ತಿಯೇ ಹೊರತು ಬೇರೆ ಭೌತಿಕ ಉಪಚಾರಗಳಲ್ಲ. ಭೌತಿಕ ಉಪಚಾರ ವಿಲ್ಲದಿದ್ದಲ್ಲಿ ಕ್ರಿಯಾಲೋಪವನ್ನು ಮಾಡಬಾರದು. ಭಕ್ತನು ತನ್ನ ಬಳಿ ಏನಿದೆಯೊ ಅಷ್ಟನ್ನೆ ಭಗವಂತನಿಗೆ ನಿವೇದಿಸಬೇಕು. ಇದೂ ಇಲ್ಲದಿದ್ದಲ್ಲಿ ಶುದ್ಧ ಭಾವದಿಂದ ಮಾನಸ ಪೂಜೆಯನ್ನು ಮಾಡಬಹುದು. ಪರಮಾತ್ಮನು ಭಾವವನ್ನು ಮಾತ್ರ ಗಮನಿಸುವನು. ಭಗವಂತನಿಗೆ ಸಹಸ್ರ ಉಪಚಾರ ಮಾಡಿದರೂ ಭಾವ ಶುದ್ಧಿ ಇಲ್ಲದಿದ್ದಲ್ಲಿ ದೈವೋಪಾಸನೆಯಷ್ಟೂ ವ್ಯರ್ಥ ವಾಗುತ್ತದೆ –

ಅಲಾಭೆ ಸರ್ವ ಭೋಗಾನಾ ಮುದಕೇನಾಪಿ ಪೂಜಿತಂ ||
ಪ್ರಯಚ್ಛತ್ಯಮಲಂ ಲೋಕೇ ಭಕ್ತಿ ಪೂತಾಂತರಾತ್ಮನಾಂ |
(3/51-52)

### ಉತ್ತಮ ಮಹಾಭಾಗವತರ ಲಕ್ಷಣ

ಭಗವನ್ನಿಮಿತ್ತ ಕರ್ಮಗಳಲ್ಲದೆ ಬೇರೆ ಕರ್ಮಗಳಲ್ಲಿ ಅನಾಸಕ್ತಿ, ಕರ್ಮ ಫಲದ ಆಕಾಂಕ್ಷೆಯನ್ನು ತ್ಯಜಿಸುವುದು, ಭಕ್ತಿಯ ಮುಖಾಂತರ ಚಿತ್ತ ಶುದ್ಧಿ, ರಸಮಯತೆ, ಸಾಂಸಾರಿಕ ವಿಷಯಗಳ ಸುಖಭೋಗದಲ್ಲಿ ವಿರಕ್ತಿ, ಸತ್ಕರ್ಮಗಳ ಸತತ ಅನುಷ್ಠಾನದ ಸದಾ ಕಾಲದಲ್ಲಿ ಅಭ್ಯಾಸ ಮಾಡುವುದು, ಸೋಮಾರಿತನ ವನ್ನು ಪೂರ್ತಿಯಾಗಿ ತ್ಯಜಿಸುವುದು, ಶ್ರದ್ಧೆ ಹಾಗೂ ಡಂಭರಹಿತ ವರ್ತನೆ, ಅಕಾರ್ಪಣ್ಯ, ಲೋಭ, ಕ್ರೋಧ, ಮೋಹ – ಇವುಗಳ ಮೇಲೆ ವಿಜಯ ಪಡೆಯುವುದು, ಜ್ಞಾನೇಂದ್ರಿಯಗಳ ಸಹಿತನಾದ ದೇಹ, ದೇಶವನ್ನು ಶುದ್ಧ ವಾಗಿಡುವುದು, ಸಮಯವಲ್ಲದ ಸಮಯದಲ್ಲಿ ನಿದ್ದೆ ಮಾಡುವುದನ್ನು ಬಿಡುವುದು, ಸುಖೋಪಭೋಗ ಹಾಗೂ ಭೋಗ ಜೀವನ ನಡೆಸುವುದನ್ನು ತ್ಯಜಿಸುವುದು, ಸದಾ ಕಾಲದಲ್ಲಿಯೂ ಶಾಸ್ತ್ರಾಧ್ಯಯನ ಮಾಡುವುದು, ಶಾಸ್ತ್ರ ಸಮ್ಮತ ಕರ್ಮಗಳ ಅನುಷ್ಠಾನ. ಶಾಸ್ತ್ರಗಳನ್ನು ಪ್ರಮಾಣವೆಂದು ಸ್ವೀಕರಿಸು ವುದು, ಶಾಸ್ತ್ರಗಳಲ್ಲಿ ದೃಢ ವಿಶ್ವಾಸವಿಡುವುದು, ನಿಷಿದ್ಧ ಕರ್ಮಗಳನ್ನು ತ್ಯಜಿಸುವುದು, ಪವಿತ್ರ ಹಾಗೂ ಶುದ್ಧವಾದ ಅನ್ನವನ್ನು ಸ್ವೀಕರಿಸುವುದು, ಮೃದುತ್ವ, ಲಜ್ಜೆ, ದಯೆ, ಕ್ಷಾಂತೀ, ಎಲ್ಲ ಜೀವಿಗಳಲ್ಲಿ ಅದ್ರೋಹ–ಈ ಎಲ್ಲ ಸಾತ್ವಿಕ ಗುಣಗಳನ್ನು ಪ್ರತಿಯೊಬ್ಬ ಶ್ರೀ ವೈಷ್ಣವನು ಹೊಂದಿರಬೇಕು. ಇವು

ಶ್ರೀ ವೈಷ್ಣವರಾಗಿರುವ ಮಹಾಭಾಗವತರ ಲಕ್ಷಣಗಳಾಗಿವೆ.

ಕರ್ಮಾಂತರೇಷ್ವಸಂಸಕ್ತಿಃ ಫಲಾಕಾಂಕ್ಷಾವಿವರ್ಜನಂ |
ಭಕ್ತಿದ್ರವೀಕೃತಂ ಚಿತ್ತಂ ವಿರಕ್ತಿಃ ಸರ್ವವಸ್ತುಷು ||
ಅಭ್ಯಾಸಃ ಸತತಂ ಸರ್ವಪ್ರಕಾರೈಃ ಸತ್ಕ್ರಿಯಾ ವಿಧೌ |
ಆಲಸ್ಯವರ್ಜನಂ ಶ್ರದ್ಧಾ ಪರಮಂ ದಂಭವರ್ಜನಂ ||
ಅಕಾರ್ಪಣ್ಯಮ ಲೋಭಶ್ಚ ಕ್ರೋಧಮೋಹ ಜಯೋ ಭಯಂ |
ದೇಹಸ್ಯ ಸೇಂದ್ರಿಯ ಸ್ಯಾಪಿ ವಿಶುದ್ಧಿರ್ದ್ರವ್ಯದೇಶಯೋಃ ||
ಅಕಾಲೇ ವರ್ಜನಂ ನಿದ್ರಾಮೈಥುನಾಶನ ಕರ್ಮಣಿ |
ಸರ್ವದಾ ಶಾಸ್ತ್ರಶಿಕ್ಷಾ ಚ ಶಾಸ್ತ್ರ ದೃಷ್ಟೇಷು ಕರ್ಮಸು ||
ಪಾರವಶ್ಯ ಪ್ರಮಾಣಂ ಚ ನಿತ್ಯಶಾಸ್ತ್ರೇ ದೃಢೇ ಪರೇ |
ನಿಷಿದ್ಧ ವರ್ಜನೇ ಯತ್ನಃ ಸಂ ಸಿದ್ಧಾನ್ನ ನಿಷೇವಣಂ ||
ಮಾರ್ದವಂ ಹ್ರೀರ್ದಯಾ ಕ್ಷಾಂತಿರದ್ರೋಹಃ ಸರ್ವಜಂತುಷು |

*** *** ***

ಏವಂ ಸದ್ಗುಣ ಸಂಪನ್ನ ಮಹಾಭಾಗವತ ಪ್ರಿಯಾಃ || (3/62-70)

ಭಗವತ್ ಪ್ರೀತ್ಯರ್ಥವಾಗಿ ಈ ರೀತಿಯ ಉಪಾದಾನಗಳ ಪ್ರಯೋಗ ಮಾಡಿ, ಅವುಗಳನ್ನು ಅನುಷ್ಠಾನಕ್ಕೆ ತಂದು ಗೃಹಸ್ಥನು ಸುಖ ಜೀವನ ನಡೆಸ ಬಲ್ಲನು. ಮಹರ್ಷಿ ಶಾಂಡಿಲ್ಯನು ದಿನದ ಮೊದಲ ಭಾಗದಲ್ಲಿ ಅಭಿಗಮನ, ಎರಡನೇ ಭಾಗದಲ್ಲಿ ಉಪಾದಾನ ಸಂಬಂಧದ ಕರ್ಮಗಳ ವರ್ಣನೆಯನ್ನು ಮಾಡಿ, ದಿನದ ಮೂರು ಮತ್ತು ನಾಲ್ಕನೇ ಭಾಗಗಳಲ್ಲಿ ಈಜ್ಯಾ ಹಾಗೂ ಆಚಾರದ ವರ್ಣನೆಯನ್ನು ಮಾಡಿದ್ದಾನೆ.

ಸಾಧಕನು ಮಾಡಬೇಕಾದ ಕೆಲಸಗಳೆಂದರೆ ಭಕ್ತಿಯ ದೃಢತೆಗಾಗಿ ವೇದಿ ಇತ್ಯಾದಿಗಳ ರಚನೆ ಮಾಡಿ ಯಜ್ಞಾದಿ ಕಾರ್ಯಗಳನ್ನು ಮಾಡಬೇಕು; ವಿವೇಕ ಸಿದ್ಧಿಯನ್ನು ಪಡೆದಿರುವವರು, ಸಂತರು, ಯೋಗಸಿದ್ಧಿಯನ್ನು ಪಡೆದಿರುವವರು, ಕೇವಲ ಭಗವದ್ವಿಷಯ ಜ್ಞಾನದಲ್ಲೆ ತೃಪ್ತಿಯನ್ನು ಹೊಂದುವವರು –ಇಂತಹವರು ತಮ್ಮ ಹೃದಯದಲ್ಲಿ ಭಗವಂತನ ಸ್ಮರಣೆಯ ದೃಢಭಾವನೆಯನ್ನು ಸದಾ ಹೊಂದಿರುತ್ತಾರೆ.

ಭಗವತ್ಪೂಜನದಲ್ಲಿ ಎಂತಹ ಭಾವ ಇರಬೇಕು ?

ಶಾಂಡಿಲ್ಯ ಮಹರ್ಷಿಯು ಭಕ್ತಿಯ ಮಹಾನ್ ಆಚಾರ್ಯನು. ಆದುದರಿಂದ

ಭಕ್ತಿಯ ಸೂಕ್ಷ್ಮತರ ತತ್ವಗಳನ್ನು ಬಹಳ ಚೆನ್ನಾಗಿ ಬಲ್ಲವನಾಗಿದ್ದನು. ಭಕ್ತ(ಸಾಧಕ)ನು ಯಾವ ರೀತಿಯ ಭಾವವನ್ನು ಹೊಂದಿದ್ದು ಇಷ್ಟ ದೇವತೆಯ ಪೂಜೆ ಮಾಡಬೇಕು– ಎಂಬುದನ್ನು ಶಾಂಡಿಲ್ಯನು ಬಹಳ ಚೆನ್ನಾಗಿ ವಿವರಿಸಿದ್ದಾನೆ. 'ಭಗವಂತನು ಸಾಕ್ಷಾತ್ತಾಗಿ ನನ್ನ ಮುಂದೆ ನಿಂತಿದ್ದಾನೆ' ಎನ್ನುವ ಭಾವನೆಯಿಂದ, ಜಿತೇಂದ್ರಿಯನಾಗಿ 'ನನ್ನ ಪರಮಪ್ರೇಮಿ ಭಗವಂತನ ಮುಖಕಮಲದಿಂದ ಅಮೃತಧಾರೆಯು ನನ್ನ ಮೇಲೆ ಹರಿದು, ನನ್ನನ್ನು ಆತನ ಪ್ರೇಮ ಸಾಗರದಲ್ಲಿ ಮುಳುಗಿಸಲಿ, ಆತನ ಕರುಣಾದೃಷ್ಟಿಯು ನನ್ನ ಮೇಲೆ ಸದಾ ಬೀಳುತ್ತಿರಲಿ, ಇದರ ಮುಖಾಂತರ ನಾನು ಸದಾ ಪವಿತ್ರನಾಗಿಯೇ ಇರಲಿ' ಎಂಬ ಭಾವನೆಯನ್ನು ಹೊಂದಿರಬೇಕೆಂದು ಶಾಂಡಿಲ್ಯಮುನಿ ತಿಳಿಸುತ್ತಾನೆ.

ಸಾಕ್ಷಾತ್ ಅಭಿಮುಖಂ ದೇವಂ ಭಾವಯಿತ್ವಾರ್ಚಯೇದ್ವಶೀ ।
ಭಗವದ್ವದನಾಂ ಭೋಜಸ್ಯಂದ ಮಾನಾಮೃತೋದಧಿಃ ॥
ಪಿಬನ್ನಿವ ಮಹಾಹ್ಲಾದ ಮಧ್ಯಸ್ಥಃ ಪೂಜಯೇತ್ ಪ್ರಭುಂ ।
(4/24–25)

ಈ ರೀತಿಯಲ್ಲಿ ಶುದ್ಧ ಭಾವವನ್ನು ಹೊಂದಿ ಭಗವಂತನಿಗೆ ಸ್ನಾನ ಮಾಡಿಸಿ, ದಿವ್ಯಾಲಂಕಾರಗಳನ್ನು ಮಾಡಿ, ದಿವ್ಯಮಾಲೆಗಳನ್ನು ಅರ್ಪಿಸಿ, ಚಂದನ ಇತ್ಯಾದಿ ಸುಗಂಧಿತ ಅಂಗರಾಗಗಳನ್ನು ಲೇಪಿಸಿ, ಶುದ್ಧವೂ, ಪವಿತ್ರವೂ ಆದ ವ್ಯಂಜನಗಳು ಹಾಗೂ ಫಲಗಳನ್ನು ನೈವೇದ್ಯ ಮಾಡಿ, ಭಕ್ತಿಪೂರ್ವಕವಾಗಿ ಆತನ ಸ್ತೋತ್ರ ಮಾಡಬೇಕು.

ಪತಿವ್ರತಾ ಸ್ತ್ರೀಯು ತನ್ನ ಪ್ರಿಯತಮ ಪತಿಯನ್ನು ಸರ್ವತೋಭಾವದಿಂದ ಸೇವೆ ಮಾಡುವಂತೆ, ಮಾತೆಯು ತನ್ನ ಹಾಲುಗಲ್ಲದ ಕಂದನನ್ನು ಲಾಲಿಸುವಂತೆ, ಉತ್ತಮ ಶಿಷ್ಯರು ತಮ್ಮ ಆಚಾರ್ಯರ ಬಗ್ಗೆ ಶ್ರದ್ಧೆ ಹಾಗೂ ಆದರಗಳನ್ನು ಹೊಂದಿರುವಂತೆ ಭಕ್ತನು ಪರಮಾತ್ಮನ ಬಗೆಗೆ ಶುದ್ಧವೂ, ನಿಸ್ವಾರ್ಥತೆಯಿಂದ ಕೂಡಿದುದೂ, ನಿಶ್ಚಲವೂ ಆದ ಭಕ್ತಿಯನ್ನು ತೋರಿಸಬೇಕು. ಆ ಪರಮಾತ್ಮನನ್ನೇ ತನ್ನ ಸ್ವಾಮಿ, ಮಿತ್ರ, ಗುರು ಹಾಗೂ ತಂದೆ ತಾಯಿಯೆಂದು ಭಾವಿಸಿ ಆತನ ಸೇವೆಯನ್ನು ಮಾಡಬೇಕು –

ಸತೀವ ಪ್ರಿಯಭರ್ತಾರಂ ಜನನೀವ ಸ್ತನಂಧಯಂ ।
ಆಚಾರ್ಯ ಶಿಷ್ಯವನ್‌ಮಿತ್ರಂ ಮಿತ್ರವತ್ ಲಾಲಯೇದ್ಧರಿಂ ॥

ಸ್ವಾಮಿತ್ವೇನ ಸುಹೃತ್ತ್ವೇನ ಗುರುತ್ವೇನ ಚ ಸರ್ವದಾ |
ಪಿತೃತ್ವೇನ ಸಮಾಭಾವ್ಯೋ ಮಾತೃಭಾವೇನ ಮಾಧವಃ ||84/35-36||

ಎರಡು ರೀತಿಯ ಪೋಷಕರು

ತನ್ನಾಶ್ರಯದಲ್ಲಿರುವ ಎಲ್ಲರನ್ನು ಗೃಹಸ್ಥನು ಯಥಾಶಕ್ತಿ, ಯಥೋಚಿತವಾಗಿ ಪೋಷಿಸಬೇಕು. ಈ ರೀತಿಯಲ್ಲಿ ಎರಡು ರೀತಿಯ ಆಶ್ರಯವರ್ಗವಿರುವರು. 1. ತಂದೆ-ತಾಯಿಯರ ಗುಂಪು, 1. ಜೀವಿತ ಪೋಷಕ ಗುಂಪು.

ಮನೆಯಲ್ಲಿರುವ ತಂದೆ-ತಾಯಿ, ಮಗ, ಸೊಸೆ, ಸೇವಕ-ಸೇವಕಿಯರು, ಇವರನ್ನು ಜೀವಿತ ಭೃತ್ಯರು ಎಂದು ಕರೆಯಲಾಗುವುದು. ಇವರನ್ನು ಎಲ್ಲ ರೀತಿಯಲ್ಲೂ ರಕ್ಷಿಸುವುದೇ ಅಲ್ಲದೆ, ಅಂತಹವರ ಪಾಲನೆ ಪೋಷಣೆಯನ್ನು ಮಾಡಬೇಕು.

ಇದೇ ರೀತಿಯಲ್ಲಿ ಪರಲೋಕವಾಸಿಗಳಾದ ಪಿತೃಗಣಗಳೂ ಇವೆ. ಈ ಗುಂಪಿನವರೂ ಕೂಡ ನಮ್ಮ ಆಶ್ರಿತರಿದ್ದ ಹಾಗೆಯೇನೆ. ಅವರಿಗೆ ಸಂಬಂಧಪಟ್ಟಂತಹ ತರ್ಪಣ, ಶ್ರಾದ್ಧ ಇತ್ಯಾದಿ ಕರ್ಮಗಳನ್ನು ಮಾಡಿ, ಅವರ ಆತ್ಮಗಳನ್ನು ತೃಪ್ತಿಗೊಳಿಸಬೇಕಾದುದು ಅವಶ್ಯಕ.

ಭೃತ್ಯಾಶ್ಚ ದ್ವಿವಿಧಾ ಜ್ಞೇಯಾ ಪ್ರೇತಾ ಜೀವಾಸ್ತಥೈವ ಚ |
ಪ್ರೇತಾ ಮೃತಾಃ ಸ್ವವಂಶೇಷು ಜೀವಾ ಜೀವಂತಿ ವೈ ಗೃಹೇ ||
ಪಿತೃಪುತ್ರ ಕಳತ್ರಾದ್ಯಾ ದಾಸೀದಾಸ ಸಮಾಶ್ರಿತಾಃ |
ರಕ್ಷಣೀಯಾ ಗೃಹೇ ಯೇ ಸ್ಯುರ್ಭೃತ್ಯಾ ಜೀವಾ ಇಮೇ ಸ್ಮೃತಾಃ
||84/96-97||

ಅನ್ನದ ಶುದ್ಧಿಯೇ ಉತ್ತಮ ಶುದ್ಧಿ

ಶುದ್ಧವಾದ ಅನ್ನವನ್ನು ಸೇವಿಸುವುದರಿಂದ ವ್ಯಕ್ತಿಯು ಕಲ್ಮಷರಹಿತನಾಗುತ್ತಾನೆ. ಇದರಿಂದ ಅವನು ಪರಮ ಪವಿತ್ರನಾಗುತ್ತಾನೆ. ಇಂದ್ರಿಯಗಳೂ ಕೂಡ ಪ್ರಸನ್ನಗೊಳ್ಳುತ್ತವೆ. ಪರಿಣಾಮವಾಗಿ ಬೇಗನೆ ಶರೀರದಲ್ಲಿ ಸಾತ್ವಿಕತೆ ಹೆಚ್ಚಾಗುತ್ತದೆ. ಅನ್ನದ ಶುದ್ಧಿಯಿಂದ ಎಲ್ಲ ಜೀವಿಗಳ ಶರೀರದಲ್ಲೂ ಸತ್ತ್ವ ಗುಣವು ವೃದ್ಧಿಯಾಗುವುದು. ಸಾತ್ತ್ವಿಕ ಗುಣಗಳ ಪ್ರಾಧಾನ್ಯತೆಯಿಂದ ಸತ್ಕರ್ಮದಲ್ಲಿ ಮನಸ್ಸು ಕೇಂದ್ರೀಕೃತವಾಗುತ್ತದೆ. ಶುದ್ಧ ಅನ್ನದ ಸೇವನೆಯಿಂದ ಉತ್ತಮ ಆರೋಗ್ಯವು ಪ್ರಾಪ್ತವಾಗುತ್ತದೆ. ಅಂತಹ ವ್ಯಕ್ತಿಯ

ರೂಪವು ಸುಂದರನಾಗಿರುತ್ತದೆ, ಶಾರೀರದಲ್ಲಿ ಸೊಗಸು ಮೂಡುತ್ತದೆ. ಇದರೊಂದಿಗೆ ಕೀರ್ತಿ, ಐಶ್ವರ್ಯ, ಜ್ಞಾನ, ಮನಶ್ಶಾಂತಿ-ಇವೆಲ್ಲವೂ ಪ್ರಾಪ್ತವಾಗುತ್ತದೆ. ಫಲಿತಃ, ಮನಸ್ಸು ಒಳ್ಳೆಯ ಕಾರ್ಯಗಳನ್ನು ಮಾಡುವುದರಲ್ಲಿ ತಲ್ಲೀನವಾಗಿರುತ್ತದೆ.

ಅಮೇಧ್ಯ (ಅಪವಿತ್ರ) ಅನ್ನವನ್ನು ಸೇವಿಸುವುದರಿಂದ ಕಾಮ, ಕ್ರೋಧ, ಲೋಭಗಳ ವೃದ್ಧಿಯಾಗುತ್ತದೆ. ಪರರನ್ನು ಹಿಂಸಿಸುವ ಭಾವನೆಯು ಹೆಚ್ಚಾಗುತ್ತದೆ. ಅಂತಹವರನ್ನು ನಿದ್ದೆ ಮತ್ತು ಸೋಮಾರಿತನ ಇತ್ಯಾದಿ ದೋಷಗಳು ಆವರಿಸುತ್ತವೆ. ಅಂತಹವರನ್ನು ಬಾಹ್ಯ ಹಾಗೂ ಆಂತರಿಕ ರೋಗಗಳೂ ಕಾಡತೊಡಗುತ್ತವೆ. ಅಂತಹವರ ಶತ್ರುಗಳೂ ವೃದ್ಧಿಯಾಗುತ್ತಾರೆ. ದ್ರೋಹ ಉತ್ಪನ್ನವಾಗಿ, ತಾಮಸ ಪ್ರವೃತ್ತಿ ಹೆಚ್ಚಾಗುತ್ತದೆ. ವಿಷಯ ಲೋಲುಪಗಳಲ್ಲಿ ಆಸಕ್ತಿ ಹೊಂದಿದ ಇಂತಹವರ ಆಯುಸ್ಸು ಕ್ಷೀಣಿಸುವುದು ಖಚಿತ.

ನಿಷ್ಕಲ್ಮಷೋ ಭವೇನ್ಮರ್ತ್ಯ ಏವಂ ಶುದ್ಧಾನ್ನ ಭೋಜನಾತ್ ।
ಪ್ರಸೀದಂತೀಂದ್ರಿಯಾಣ್ಯಾಶು ಸತ್ತ್ವಂ ಚ ಪರಿವರ್ಧತೇ ॥
ಅನ್ನಾಶುದ್ಧ್ಯೈವ ಸತ್ತ್ವಸ್ಯ ವಿವೃದ್ಧಿಃ ಸರ್ವದೇಹಿನಾಂ ।

**  **  **

ಆರೋಗ್ಯಂ ರೂಪವತ್ತಾ ಚ ಕೀರ್ತಿಃ ಶ್ರೀರ್ಜ್ಞಾನಮೇವ ಚ ।
ಶಾಂತಿಃ ಸತ್ಕರ್ಮಣಿ ಶ್ರದ್ಧಾ ಶುದ್ಧಾನ್ನೇನ ಭವಂತಿ ಹಿ ॥
ಕಾಮಃ ಕ್ರೋಧಸ್ತಥಾ ಲೋಭಃ ಪರಹಿಂಸಾರುಚಿಸ್ತಥಾ ।
ನಿದ್ರಾಲಸ್ಯಾದಯೋ ದೋಷಾ ಅಮೇಧ್ಯಾನ್ನ ನಿಷೇವಣಾತ್ ॥

**  **  **

ವಿಷಯೇಷ್ವಭಿಷಕ್ತಾನಾಮಾಯುಃ ಪ್ರಕ್ಷೀಯತೇಽಂತರಾ
(4/135-142)

### ಭೋಜನಾನಂತರ ದೈವಾರ್ಪಿತ ತುಳಸೀ ಸೇವನೆ

ಊಟ ಇತ್ಯಾದಿ ಕ್ರಿಯೆಗಳನ್ನು ಮುಗಿಸಿದ ನಂತರ ಆಚಮನಾದಿಗಳನ್ನು ಮಾಡಿ ಪವಿತ್ರನಾಗಬೇಕು. ನಂತರ ದೇವರ ಮನೆಯನ್ನು ಪ್ರವೇಶಿಸಿ, ಪರಮಾತ್ಮನಿಗೆ ವಂದಿಸಿ, ಆತನ ಚರಣ ಕಮಲದಲ್ಲಿ ಅರ್ಪಿಸಿದ ತುಳಸೀದಳವನ್ನು

ಸ್ವೀಕರಿಸಬೇಕು. ಭಗವಂತನ ಶ್ರೀಪಾದ ತೀರ್ಥವನ್ನು ತೆಗೆದುಕೊಂಡು, ದೇಹಕ್ಕೆಲ್ಲ ಪ್ರೋಕ್ಷಿಸಿಕೊಳ್ಳಬೇಕು. ಇದರಿಂದ ಆರೋಗ್ಯವು ಲಭಿಸುತ್ತದೆ, ಭಗವದ್ಭಕ್ತಿಯು ವೃದ್ಧಿಯಾಗುತ್ತದೆ, ಎಲ್ಲ ರೀತಿಯ ಪಾಪಗಳಿಂದಲೂ ಬಿಡುಗಡೆಯಾಗುತ್ತದೆ –

ಆದಾಯ ತುಳಸೀಂ ತ್ಯಕ್ತಾಂ ಭಗವತ್ಪಾದ ಮಂಡಿತಾಂ ।
ಭಕ್ಷಯೇಚ್ಛೋಧಯೇ ದೇಹಂ ಭಗವತ್ಪಾದವಾರಿಣೇ ॥
ಭಕ್ಷಿತಂ ಭಗವತ್ಪಾದ ಸಂಸ್ಪೃಷ್ಟಂ ತುಳಸಿದಳಂ ।
ಆರೋಗ್ಯಂ ಭಕ್ತಿವೃದ್ಧಿಂ ಚ ಪಾಪಹಾನಿಂ ಕರೋತ್ಯಪಿ
||4/164-165||

## ಯೋಗಚರ್ಯೆಯ ಉಪದೇಶ

ಮಹರ್ಷಿ ಶಾಂಡಿಲ್ಯನು ಪಂಚಕಾಲೀಯ ವೈಷ್ಣವರ ಅಂತಿಮ ಧರ್ಮ ಚರ್ಯೆಯನ್ನು 'ಯೋಗ' ಎಂದು ಕರೆದಿದ್ದಾನೆ. ಯೋಗಚರ್ಯೆಗಾಗಿ ರಾತ್ರಿಯ ಸಮಯ ತುಂಬಾ ಸೂಕ್ತ ಎಂಬುದು ಆತನ ಅಭಿಪ್ರಾಯ. ಏಕೆಂದರೆ ಹಗಲಿನಲ್ಲಿ ಅಭಿಗಮನ, ಉಪಾದಾನ, ಇಜ್ಯಾ ಹಾಗೂ ಆಚಾರ ಇತ್ಯಾದಿ ಭಗವದುಪಾಸನಾ ವಿಧಿಗಳನ್ನು ನೆರವೇರಿಸಬೇಕಾಗಿರುತ್ತದೆ. ಇದು ಮುಖ್ಯ ಧರ್ಮವೂ ಹೌದು.

ಯೋಗ ವಿಧಿಯ ಪ್ರಾರಂಭವನ್ನು ಈ ರೀತಿಯಲ್ಲಿ ಮಾಡಬೇಕು–ಹಗಲು ಮುಗಿಯಲು ಇನ್ನೂ ಒಂದು ಗಂಟೆ ಉಳಿದಿರುವಾಗಲೇ ಶೌಚ ಸ್ನಾನಾದಿಗಳನ್ನು ಮುಗಿಸಿಕೊಂಡು, ಪವಿತ್ರವನ್ನು ಧರಿಸಿ, ಭಗವಾನ್ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು. ನಂತರ ಗಾಯತ್ರೀ ಜಪವನ್ನು ಮಾಡಬೇಕು. ನಂತರ ಏಕಾಗ್ರಚಿತ್ತದಿಂದ ಮನಸ್ಸಿನಲ್ಲಿ 'ಬ್ರಹ್ಮತತ್ತ್ವ'ವನ್ನು ಧ್ಯಾನಿಸಬೇಕು. ಪದ್ಮಾಸನದಲ್ಲಿ ಕುಳಿತು, ಗಂಧ ಪುಷ್ಪಾದಿ ಉಪಚಾರಗಳ ಮುಖಾಂತರ ಪರಮಾತ್ಮನನ್ನು ಅರ್ಚಿಸಿ, ಧ್ಯಾನಿಸಬೇಕು. ಇದೇ ಭಕ್ತಿಯೋಗಚರ್ಯೆ. ಇದನ್ನು ಏಕಾಗ್ರತೆ ಹಾಗೂ ಶ್ರದ್ಧೆಗಳಿಂದ ಪ್ರತಿನಿತ್ಯವೂ ಪಾಲಿಸಬೇಕು.

ಈ ರೀತಿಯಲ್ಲಿ ಎಂಟು ಯಾಮಗಳವರೆಗೆ ಯೋಗಚರ್ಯೆಯ ಮುಖಾಂತರ ಭಗವಂತನ ಧ್ಯಾನವನ್ನು ಮಾಡಬೇಕು. ಜಾಗ್ರತ್, ಸ್ವಪ್ನ, ಸುಷುಪ್ತಿಗಳಲ್ಲಿಯೂ ಪರಮಾತ್ಮನ ಧ್ಯಾನವನ್ನು ಮರೆಯಬಾರದು.

ಈ ರೀತಿಯಲ್ಲಿ ಆತ್ಮ ಸಮರ್ಪಣೆ ಮಾಡಿಕೊಂಡು, ಪರಮಾತ್ಮನಿಗೆ ಶರಣಾಗತನಾಗಿ ಪ್ರಪತ್ತಿಯನ್ನು ಪಡೆದು, ಶ್ರದ್ಧಾಪೂರ್ವಕವಾಗಿ ಧ್ಯಾನ ಮಾಡುತ್ತಾ ಭಗವತ್‌ಸೇವಾ ಪರಾಯಣತೆ ಹಾಗೂ ಭಗವನ್ನಿಮಿತ್ತದ ಕರ್ಮಗಳನ್ನು ಮಾಡುವುದೇ ಈ 'ಯೋಗ'ದ ಮುಖ್ಯ ಉದ್ದೇಶ್ಯ.

ಪರಮಾತ್ಮನನ್ನು ಉದ್ದೇಶಿಸದೆ ಮಾಡುವ ಕರ್ಮಗಳು ಶರೀರಕ್ಕೆ ಕ್ಲೇಶಗಳನ್ನು ಉಂಟುಮಾಡುತ್ತವೆ, ವ್ಯಾಧಿಗಳನ್ನು, ದುಃಖಗಳನ್ನು ನೀಡುತ್ತವೆ.

ಯೋಗೋಽಯಮೇವ ಯಾಗಶ್ಚ ಬಾಹ್ಯಾಯೇ ವ್ಯಾಧಯೋಽಭವನ್॥
ಸರ್ವ ಶರೀರಕ್ಲೇಶಾಯ ಯೇಷು ಕೃಷ್ಣೋ ನ ಚಿಂತ್ಯತೆ ॥5/32-33॥

ಒಟ್ಟಿನಲ್ಲಿ ಸಾಧಕನು ಮಾಡಬೇಕಾದುದೇನೆಂದರೆ-ಆವನು ಎಲ್ಲರೊಂದಿಗೂ ಸ್ನೇಹದಿಂದ ಇರಬೇಕು; ಯಾರೊಂದಿಗೂ ಶತ್ರುತ್ವವನ್ನು ಮಾಡಬಾರದು; ಸ್ವಲ್ಪವೂ ವಾದ-ವಿವಾದಗಳನ್ನು ಮಾಡಬಾರದು; ಇಂದ್ರಿಯಗಳ ವಿಚಾರದಲ್ಲಿ ದೂರ ಇರಬೇಕು; ಸುಳ್ಳಿನ ಭಾಷಣಗಳನ್ನು ಮಾಡಬಾರದು; ಗುರುಗಳು ಹಾಗೂ ದೇವರ ಮೇಲೆ ಆಣೆಯನ್ನು ಇಡಬಾರದು; ಮನಸ್ಸು, ಧ್ವನಿ ಹಾಗೂ ಕೆಲಸಕಾರ್ಯಗಳಲ್ಲಿ ಸದಾ ಶುದ್ಧವಾಗಿರಬೇಕು. ಈ ರೀತಿಯಲ್ಲಿ ಸಾಧಕನು ಯೋಗ ಸಿದ್ಧಿಯನ್ನು ಪಡೆಯಬೇಕು.

ಒಂದು ವೇಳೆ ಅರ್ಧರಾತ್ರಿಯಲ್ಲಿ ನಿದ್ದೆ ಹೊರಟುಹೋದರೆ, ನಿದ್ದೆ ಬರದೆ ಇದ್ದರೆ ಅಂತಹ ಸಮಯದಲ್ಲಿ ಭಗವನ್ನಾಮ ಸಂಕೀರ್ತನೆಯನ್ನು ಮಾಡಬೇಕು. ಒಂದು ವೇಳೆ ಕೆಟ್ಟಕನಸು ಬಿದ್ದರೆ, ಎಚ್ಚೆತ್ತಾಗ ಆಚಮನಾದಿಗಳಿಂದ ಪವಿತ್ರನಾಗಿ, ಭಗವಂತನ ಸ್ತುತಿಯನ್ನು ಮಾಡಬೇಕು, ದ್ವಾದಶಾಕ್ಷರ ಮಂತ್ರವನ್ನು ಜಪಿಸಬೇಕು.

ಈ ರೀತಿಯಲ್ಲಿ ಸದಾ ಕಾಲದಲ್ಲೂ ಭಗವಂತನ ಚಿಂತನೆಯಲ್ಲೆ ಕಾಲವನ್ನು ಕಳೆಯಬೇಕು. ಇದೇ ಮಹರ್ಷಿ ಶಾಂಡಿಲ್ಯನು ಹಾಗೂ ಆತನ 'ಶಾಂಡಿಲ್ಯಸ್ಮೃತಿ' ತಿಳಿಸಿರುವ ಅಭಿಗಮನ, ಉಪಾದಾನ, ಇಜ್ಯಾ, ಆಚಾರ ಹಾಗೂ ಯೋಗ ಚರ್ಯಾ ರೂಪದ ಪಂಚಕರ್ಮಾತ್ಮಕ ದಿನಚರ್ಯೆಯ ಸಂಕ್ಷಿಪ್ತ ರೂಪವಾಗಿದೆ.

ಮುಖ್ಯವಾಗಿ ಈ ಸ್ಮೃತಿಯಲ್ಲಿ, ಭಕ್ತಿಯೋಗದ ವಿಷಯಗಳನ್ನು ನಿರೂಪಿಸಲಾಗಿದೆ.

ಶ್ರೀರಾಮ – ಶ್ರೀಕೃಷ್ಣರಲ್ಲಿ ನಾವು ಎಷ್ಟೊಂದು ಗಾಢವಾದ, ದೃಢವಾದ ನಿಷ್ಠೆಯನ್ನು ಹೊಂದಿರುತ್ತೇವೆಯೋ, ಅಷ್ಟೇ ದೃಢವಾದ ನಿಷ್ಠೆಯನ್ನು ಶೃತಿ-ಸ್ಮೃತಿ ಇತ್ಯಾದಿ ಶಾಸ್ತ್ರಗಳಲ್ಲೂ ಇಡಬೇಕು –

ತಸ್ಮಾಚ್ಛಾಸ್ತ್ರೆ ದೃಢಾಕಾರ್ಯಾ ಭಕ್ತಿರ್ಮೋಕ್ಷ ಪರಾಯಣೈಃ ।
(ಶಾಂಡಿಲ್ಯ ಸ್ಮೃತಿ 4/194)

ಕಾರಣ – ಯಾವ ರೀತಿಯಲ್ಲಿ ಶ್ರೀರಾಮ, ಶ್ರೀಕೃಷ್ಣರು ಪರಮಾತ್ಮನ ಅವತಾರರಾಗಿರುವರೊ ಶಾಸ್ತ್ರಗಳೂ ಕೂಡ ಪರಮಾತ್ಮನ ಅವತಾರವಾಗಿದೆ –

ಅವತೀರ್ಣೋ ಜಗನ್ನಾಥಃ ಶಾಸ್ತ್ರರೂಪೇಣ ಮೈ ಪ್ರಭುಃ ॥
(ಶಾಂಡಿಲ್ಯಸ್ಮೃತಿ 4/193)

ಹೀಗೆಂದು 'ಶಾಂಡಿಲ್ಯಸ್ಮೃತಿ' ಆದೇಶಿಸುತ್ತದೆ.

ಪ್ರತ್ಯಕ್ಷ ಪ್ರಮಾಣ ಮತ್ತು ಪರೋಕ್ಷ ಪ್ರಮಾಣ ಎನ್ನುವ ಎರಡು ರೀತಿಯ ಪ್ರಮಾಣಗಳಿವೆ. ತಥ್ಯಗಳಿಂದ ನಮಗೆ ಜ್ಞಾನ ಪ್ರಾಪ್ತಿ ಸಂಪೂರ್ಣವಾಗಿ ಆಗಲಾರದು. ಅಂತಹ ಜ್ಞಾನವನ್ನು ಕೇವಲ ಶಾಸ್ತ್ರಗಳು ಮಾತ್ರ ಮಾಡಿಕೊಡುತ್ತವೆ. ಪರಮಾತ್ಮನು ಜ್ಞಾನರೂಪಿಯಾಗಿದ್ದಾನೆ. ಆದರೆ ಶಾಸ್ತ್ರಗಳು ಆತನ ಶಬ್ದಾಕಾರ ಮೂರ್ತಿಯಾಗಿದೆ. ಆದುದರಿಂದ ನಮ್ಮ ಪೂರ್ವಜರು ಶಾಸ್ತ್ರಗಳ ಮೇಲೆ ಹೆಚ್ಚು ಆಧಾರ ಪಟ್ಟಿರುತ್ತಿದ್ದರು; ಅಂತೆಯೇ ಅವುಗಳಲ್ಲಿ ಆಳವಾದ ನಿಷ್ಠೆಯನ್ನು ಹೊಂದಿರುತ್ತಿದ್ದರು. ಪ್ರತ್ಯಕ್ಷ ಹಾಗೂ ಶಾಸ್ತ್ರಗಳು ಎದುರುಬದರಾದಾಗ. ಪ್ರತ್ಯಕ್ಷವನ್ನು ದೂರಮಾಡಿ, ಶಾಸ್ತ್ರಗಳ ಅನುಸಾರ ಕೆಲಸ ಮಾಡಬೇಕಾಗುತ್ತದೆ – ಎಂಬುದನ್ನು ಆ ಹಿರಿಯರು ತಿಳಿದಿದ್ದರು. ಈ ರೀತಿಯಲ್ಲಿ ಅವರು ಯಾವಾಗಲೂ ಜೀವನದಲ್ಲಿ ಸಫಲರಾಗುತ್ತಿದ್ದರು.

ಶಾಸ್ತ್ರ ನಿಷ್ಠೆಯ ಸಂಬಂಧದಲ್ಲಿ ಭೀಷ್ಮನ ಜೀವನದ ಒಂದು ಘಟನೆ ಉಲ್ಲೇಖನೀಯವಾದುದು.

ಭೀಷ್ಮನು ಒಮ್ಮೆ ತನ್ನ ತಂದೆಯಾದ ಶಂತನುವಿನ ತಿಥಿಯನ್ನು ಆಚರಿಸುತ್ತಿದ್ದ. ಎಲ್ಲ ಕಾರ್ಯಗಳೂ ಮುಗಿದ ಮೇಲೆ ದರ್ಭೆಯ ಮೇಲೆ ಪಿಂಡವನ್ನು ಇಟ್ಟು, ಪಿತೃಗಳಿಗೆ ಅರ್ಪಿಸುವ ಕಾರ್ಯವನ್ನು ಮಾಡಬೇಕಾಗಿತ್ತು. ಆಗ ಇದ್ದಕ್ಕಿದ್ದಂತೆ ಭೂಮಿಯನ್ನು ಸೀಳಿಕೊಂಡು, ಶಂತನುವಿನ ಕೈ ಮೇಲಕ್ಕೆ

ಬಂದು ಪಿಂಡವನ್ನು ತನ್ನ ಕೈನಲ್ಲಿ ಇಡುವಂತೆ ಸಂಜ್ಞೆ ಮಾಡಿತು. ಅದು ತನ್ನ ತಂದೆಯ ಕೈ ಎಂಬುದನ್ನು ಭೀಷ್ಮ ಖಚಿತಪಡಿಸಿಕೊಂಡ. ಆದರೆ ಶಾಸ್ತ್ರವು ಪಿಂಡವನ್ನು ದರ್ಭೆಯ ಮೇಲೆ ಇರಿಸಿ, ಪಿತೃದೇವತೆಗಳಿಗೆ ಅರ್ಪಿಸಬೇಕೆಂದು ತಿಳಿಸುತ್ತದೆ. ಇದು ಭೀಷ್ಮನಿಗೆ ಪರೀಕ್ಷಾ ಕಾಲವಾಯಿತು. ಆದರೆ ಶಾಸ್ತ್ರಗಳೇ ಮುಖ್ಯವೆಂದು ನಂಬಿದ್ದ ಭೀಷ್ಮನು ಪ್ರತ್ಯಕ್ಷಕ್ಕಿಂತ ಶಾಸ್ತ್ರಕ್ಕೇ ಪ್ರಾಧಾನ್ಯತೆ ನೀಡಬೇಕೆಂದು ನಿರ್ಧರಿಸಿ, ಪಿಂಡವನ್ನು ದರ್ಭೆಯ ಮೇಲೆ ಇರಿಸಿ, ಪಿತೃ ತರ್ಪಣವನ್ನು ನೀಡಿದ.

ಭೀಷ್ಮನ ಈ ಶಾಸ್ತ್ರನಿಷ್ಠೆಯನ್ನು ಕಂಡ ಶಂತನುವಿನ ಆತ್ಮವು ಸಂತಸಗೊಂಡು, ಪ್ರತ್ಯಕ್ಷನಾಗಿ, "ಮಗು! ನಿನಗೆ ಶಾಸ್ತ್ರಗಳ ಮೇಲಿರುವ ಅಚಲ ವಿಶ್ವಾಸವನ್ನು ಪರೀಕ್ಷೆ ಮಾಡುವುದಕ್ಕಾಗಿಯೇ ನಾನು ಈ ರೀತಿ ಮಾಡಿದೆ. ನಿನ್ನಂತಹ ಶಾಸ್ತ್ರ ನಿಷ್ಠೆಯ ಮಗನನ್ನು ಪಡೆದು ನಾನು ಧನ್ಯನಾದೆ. ನಿನ್ನಿಂದ ನಾನು ಲೋಕ, ಪರಲೋಕಗಳೆರಡರಲ್ಲೂ ಕೃತಾರ್ಥನಾದೆನು" ಎಂದನು.

ತ್ವಯಾ ದಾಯಾದವಾನಸ್ಮಿ ಕೃತಾರ್ಥೋಽಮುಂಯತ್ರ ಚೇಹ ಚ |
ಸತ್ಪುತ್ರೇಣ ತ್ವಯಾ ಪುತ್ರ ಧರ್ಮಜ್ಞೇನ ವಿಪಶ್ಚಿತಾ ||
(ಹರಿವಂಶ 1/16/23)

ಪ್ರಜೆಗಳಲ್ಲಿ ಶಾಸ್ತ್ರನಿಷ್ಠೆಯು ಅಧಿಕವಾಗುವುದಕ್ಕಾಗಿಯೇ ನಾನು ಈ ಪರೀಕ್ಷೆಯನ್ನು ನಿನ್ನ ಮೇಲೆ ಪ್ರಯೋಗಿಸಿದೆ. ಪ್ರತ್ಯಕ ಹಾಗೂ ಅನುಮಾನಗಳನ್ನು ಮೀರಿಸಿದ ಪ್ರಮಾಣ ಶಾಸ್ತ್ರವೇ ಹೊರತು ಬೇರೆ ಯಾವುದೂ ಅಲ್ಲ. ಇದರಿಂದ ನಾನು ಸಂತೃಪ್ತನಾಗಿದ್ದೇನೆ. ಅಂತೆಯೇ ನಿನಗೆ ಇಚ್ಛಾ ಮರಣತ್ವದ ವರವನ್ನು ನೀಡುತ್ತಿದ್ದೇನೆ. ಅದೂ ಕೂಡ ನಿನ್ನಿಷ್ಟಕ್ಕೆ ವಿರುದ್ಧವಾಗಿ ನಿನ್ನ ಬಳಿ ಬರಲಾರದು.

ನ ತೇ ಪ್ರಭವಿತಾ ಮೃತ್ಯುರ್ಯಾಜ್ಜೀವಿತು ಮಿಚ್ಛಸಿ |
ತ್ವತ್ತೋಽಭ್ಯನುಜ್ಞಾಂ ಸಂಪ್ರಾಪ್ಯ ಮೃತ್ಯುಃ ಪ್ರಭವಿತಾ ತವ ||
(ಹರಿವಂಶ 1/16/29)

## 11. ಲೋಹಿತ ಸ್ಮೃತಿ

ಸ್ಮೃತಿಗಳಲ್ಲಿ 'ಲೋಹಿತ ಸ್ಮೃತಿ'ಯೂ ಕೂಡ ಒಂದು ಮುಖ್ಯವಾದ ಸ್ಮೃತಿಯಾಗಿದೆ. ಲೋಹಿತ ಮಹರ್ಷಿಯು ಬರೆದಿರುವ ಸ್ಮೃತಿ ಇದು. ಈತನ

ಬಗ್ಗೆ ಬಹಳಷ್ಟು ವಿವರಗಳು ದೊರೆಯುವುದಿಲ್ಲ. ಆದರೆ ಈತನ ಕೃತಿಯು ಅಧ್ಯಯನದಿಂದ ತಿಳಿದುಬರುವ ಅಂಶವೇನೆಂದರೆ ಈತನು ವ್ಯವಹಾರ ಜ್ಞಾನದ ಅದ್ಭುತ ಸಂಪತ್ತನ್ನು ಹೊಂದಿದ್ದವನು, ಮಹಾನ್ ಧರ್ಮಶಾಸ್ತ್ರಜ್ಞನು ಎಂಬುದು.

ಇತರೇ ಸ್ಮೃತಿಗಳಲ್ಲಿ ಆಚಾರ-ವಿಚಾರ, ಸದಾಚಾರ, ದೈನಂದಿನ ಚರ್ಯೆಗಳು, ಶ್ರಾದ್ಧ, ಪಾತಕ - ಉಪಪಾತಕಗಳು, ಕರ್ಮವಿಪಾಕ, ಪ್ರಾಯಶ್ಚಿತ್ತ, ಶುದ್ಧಿ, ಸಂಸ್ಕಾರ, ತೀರ್ಥ ಹಾಗೂ ಇಷ್ಟಾಪೂರ್ತಿ - ಇತ್ಯಾದಿಗಳ ಬಗ್ಗೆ ವಿಶೇಷ ವಿವರಣೆಗಳು ಇದ್ದರೆ, ಈ ಸ್ಮೃತಿಯಲ್ಲಿ ಈ ವಿಷಯಗಳ ಬಗ್ಗೆ ಅಷ್ಟೊಂದು ವಿಸ್ತೃತ ಚರ್ಚೆಇಲ್ಲ. ಇದರಲ್ಲಿನ ಮುಖ್ಯ ವಿಷಯವೆಂದರೆ ದತ್ತಕ-ಪುತ್ರನ ಮೀಮಾಂಸದ ಬಗ್ಗೆ ವಿಶಿಷ್ಟ ವಿವರಗಳು.

ಈ ಸ್ಮೃತಿಯಲ್ಲಿ 721 ಶ್ಲೋಕಗಳಿವೆ. ಇವುಗಳಲ್ಲಿ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷ ರೂಪದಲ್ಲಿ ದತ್ತಕ-ಪುತ್ರನಿಗೆ ಸಂಬಂಧಪಟ್ಟಂತಹ ಎಲ್ಲ ವಿಷಯಗಳನ್ನು ತಿಳಿಸಲಾಗಿದೆ. ಈ ರೀತಿಯಲ್ಲಿ, ಈ ಸ್ಮೃತಿಯಲ್ಲಿ ದತ್ತಕ ಪುತ್ರನಿಗೆ ಸಂಬಂಧಪಟ್ಟ ವಿವರಗಳ ವಿಚಾರ ವಿಮರ್ಶೆಯನ್ನು ನೀಡಲಾಗಿದೆ. ಇದೇ ಈ ಸ್ಮೃತಿಯ ಪ್ರಮುಖ ಪ್ರತಿಪಾದ್ಯ ವಿಷಯವಾಗಿದೆ.

ಮನು ಇತ್ಯಾದಿ ಇತರರ ಸ್ಮೃತಿಗಳಲ್ಲಿ ದತ್ತಕ-ಪುತ್ರನ ಸಂಬಂಧದಲ್ಲಿ ಬಹಳ ಕಡಿಮೆ ವಿವರಗಳಿವೆ. ಆದರೆ ಇದರಲ್ಲಿರುವಷ್ಟು ವಿಸ್ತಾರವಾದ, ಸೂಕ್ಷ್ಮ ವಿವೇಚನೆ ಆ ಸ್ಮೃತಿಗಳಲ್ಲಿ ಇಲ್ಲ. ಈ ದೃಷ್ಟಿಯಿಂದ ಲೋಹಿತ ಸ್ಮೃತಿಯು ವಿಶೇಷ ಮಹತ್ವವನ್ನು ಪಡೆದ ಕೃತಿಯಾಗಿದೆ.

ಅಂದ ಹಾಗೆ, ದತ್ತಕ ವಿಷಯದ ಬಗ್ಗೆ ಬೇರೆಯೇ ಆದ ಕೃತಿಗಳೂ ಇವೆ. ಮುಖ್ಯವಾಗಿ ನಂದ ಪಂಡಿತ ವಿರಚಿತ 'ದತ್ತಕ ಮೀಮಾಂಸಾ', ರಾಮಚಂದ್ರ ಕೃತ 'ದತ್ತಕ ಚಂದ್ರಿಕಾ', ಶೂಲಪಾಣಿ ವಿರಚಿತ 'ದತ್ತಕ ಪುತ್ರ ವಿಧಿ', ಅನಂತದೇವ ವಿರಚಿತ 'ದತ್ತಕೌಸ್ತುಭ' ಇತ್ಯಾದಿ. ಈ ವಿಷಯದ ಬಗ್ಗೆ ಇನ್ನೂ ಕೆಲವು ಸ್ವತಂತ್ರ ನಿಬಂಧ ಗ್ರಂಥಗಳೂ ಇವೆ. ಕಾಲಿಕಾಪುರಾಣದಲ್ಲಿಯೂ ಕೂಡ ಈ ವಿಷಯದ ಬಗ್ಗೆ ವಿವೇಚಿಸಲಾಗಿದೆ. ಆದಾಗ್ಯೂ ಇವೆಲ್ಲವುಗಳಿಗಿಂತ ಲೋಹಿತ ಸ್ಮೃತಿಯು ವಿಶೇಷ ಗೌರವಕ್ಕೆ ಪಾತ್ರವಾಗಿದೆ.

ಈ ದೃಷ್ಟಿಯಿಂದ ವಿವೇಚಿಸಿದಲ್ಲಿ ಈ ಸ್ಮೃತಿಯ ಅವಲೋಕನವು ಮುಖ್ಯ

ಮಾದುದಾಗಿದೆ. ಇದರಲ್ಲಿ ಮನು, ಪುಲಹ ಇತ್ಯಾದಿಯುವರುಗಳ ಸ್ಮೃತಿ ವಚನ ಗಳನ್ನು ಅಲ್ಲಲ್ಲಿ ಉದಾಹರಿಸಲಾಗಿದೆ.

ಪುತ್ರರೂಪದಲ್ಲಿ ದತ್ತಾದವನು, ಇನ್ನೊಬ್ಬರಿಗೆ ಅಪರ ಮಗನ ರೂಪದಲ್ಲಿ ನೀಡಲ್ಪಟ್ಟವನು 'ದತ್ತಕ–ಪುತ್ರ' ನಾಗುತ್ತಾನೆ. ಯಾರು ದತ್ತು ನೀಡಲು ಅಧಿಕಾರಸ್ಥರಾಗಿರುತ್ತಾರೆ, ಯಾರು ದತ್ತು ಸ್ವೀಕರಿಸಲು ಲಾಯಕ್ಕಾಗಿರುತ್ತಾರೆ, ಯಾರನ್ನು ದತ್ತು ನೀಡಬಾರದು ಮತ್ತು ದತ್ತು ತೆಗೆದುಕೊಳ್ಳಬಾರದು, ದತ್ತಾದ ಮೇಲೆ ಅವನಿಗೆ ಎಷ್ಟರ ಮಟ್ಟಿನ ಅಧಿಕಾರವಿರುತ್ತದೆ. ಯಾರಿಗೆ ದತ್ತಾಗಿರುವನೊ ಆತನ ಸಂಪತ್ತಿಗೆ ಎಷ್ಟರ ಮಟ್ಟಿಗೆ ಹಕ್ಕುದಾರನಾಗಿರುತ್ತಾನೆ, ದತ್ತು ತೆಗೆದುಕೊಂಡ ನಂತರ ಹುಟ್ಟಿದ ಔರಸ ಪುತ್ರನಿಗೆ ಎಷ್ಟರ ಮಟ್ಟಿನ ಅಧಿಕಾರವಿದೆ, ಇವರಿಬ್ಬರ ನಡುವಿನ ಸಂಬಂಧವೇನು, ಯಾರಿಗೆ ಎಷ್ಟೆಷ್ಟು ಅಧಿಕಾರ ಮತ್ತು ಹಕ್ಕುಗಳು ಇರುತ್ತವೆ, ಶ್ರಾದ್ಧ ಕರ್ಮಗಳಿಗೆ ಯಾರು ಎಷ್ಟು ಅಧಿಕಾರಸ್ಥರು–ಇತ್ಯಾದಿ ಎಲ್ಲ ವಿಷಯಗಳಿಗೆ ಈ ಸ್ಮೃತಿಯಲ್ಲಿ ಸೂಕ್ತ ಉತ್ತರ ಗಳು ದೊರೆಯುತ್ತವೆ.

ದತ್ತಕ ವ್ಯವಸ್ಥೆಯೊಂದಿಗೆ ಇದರಲ್ಲಿ ಸಂಕ್ಷಿಪ್ತ ರೂಪದಲ್ಲಿ ಹನ್ನೊಂದು ರೀತಿಯ ಪುತ್ರರ ವಿವರಗಳೂ ಇವೆ. ಓರ್ವಳಿಗಿಂತ ಹೆಚ್ಚು ಪತ್ನಿಯರು ಓರ್ವ ವ್ಯಕ್ತಿಗೆ ಇದ್ದಲ್ಲಿ ಪ್ರಥಮ ಧರ್ಮಪತ್ನಿಯ ಪ್ರಥಮ ಪುತ್ರನ ಮುಖ್ಯತೆಯ ಬಗ್ಗೆಯೂ ವಿವರಗಳನ್ನು ಇದರಲ್ಲಿ ನೀಡಲಾಗಿದೆ. ವಿಧವೆ ಹಾಗೂ ಪತಿವ್ರತಾ ಸ್ತ್ರೀಯ ಕರ್ತವ್ಯ, ಶ್ರಾದ್ಧಕ್ಕೆ ಅಧಿಕಾರಿಯಾಗಿರುವ ಪುತ್ರನ ಹಕ್ಕುಗಳು ಹಾಗೂ ಶ್ರಾದ್ಧದ ಅವಶ್ಯಕರ್ತವ್ಯ ಮತ್ತು ವ್ಯವಹಾರ ಮರ್ಯಾದೆಯನ್ನು ಉಲ್ಲಂಘಿಸುವುದರಿಂದ ಕಾನೂನಿನನ್ವಯ ನೀಡಬೇಕಾದ ಶಿಕ್ಷೆಯ ಬಗ್ಗೆಯೂ ಇದರಲ್ಲಿ ವಿವರಗಳಿವೆ.

ಸಂಕ್ಷೇಪದಲ್ಲಿ ಹೇಳಬೇಕೆಂದರೆ ಲೋಹಿತ ಸ್ಮೃತಿಯಲ್ಲಿ ಸ್ತ್ರೀ–ವಿಚಾರ, ದತ್ತಕ ಪುತ್ರನ ಮೀಮಾಂಸೆಯ ವಿವರ, ಸಂಪತ್ತಿನ ವಿಭಾಗ ಹಾಗೂ ಅಧಿಕಾರದ ವರ್ಣನೆಗಳೂ ಇವೆ. ದತ್ತುಪುತ್ರ ಹಾಗೂ ಔರಸ ಪುತ್ರನಿಗೆ ಸಮಾನ ಹಕ್ಕುಗಳಿರುತ್ತವೆಯೆಂದು ಈ ಸ್ಮೃತಿ ತಿಳಿಸುತ್ತದೆ. ಮಕ್ಕಳಿಲ್ಲದ ತಂದೆ–ತಾಯಿಯರಿಗೆ ಈ ದತ್ತುಪುತ್ರನೇ ದೈವ, ಪಿತೃ–ಇತ್ಯಾದಿ ಎಲ್ಲ ಶುಭ ಅಶುಭ ಕಾರ್ಯಗಳನ್ನು ನಿರ್ವಹಿಸಬೇಕು. ಗಂಡು ಮಕ್ಕಳಿಲ್ಲದವರಿಗೆ, ಅವರ-

ಹೆಣ್ಣು ಮಕ್ಕಳಿಗೆ ಗಂಡು ಮಕ್ಕಳೇನಾದರೂ ಆದರೆ ಈ ದೌಹಿತ್ರನು ತನ್ನ ತಾತನ ಎಲ್ಲ ಕಾರ್ಯಗಳು, ಆಸ್ತಿಪಾಸ್ತಿಗೂ ಹಕ್ಕುದಾರನಾಗುತ್ತಾನೆ. ಆದುದರಿಂದ ಅಂತಹವರು ಗಂಡು ಮಕ್ಕಳಿಲ್ಲವೆಂದು ಕೊರಗದೆ, ದತ್ತು ತೆಗೆದುಕೊಳ್ಳಬೇಕಾದ ಆವಶ್ಯಕತೆ ಇಲ್ಲ. ಏಕೆಂದರೆ ದೌಹಿತ್ರನು ಮಗನ ಸಮಾನನಾಗುತ್ತಾನೆ. ಈ ದೌಹಿತ್ರನು ಸ್ವಂತ ಮಗನಿಗಿಂತಲೂ ಹೆಚ್ಚು ಮಹತ್ತ್ವ ಉಳ್ಳವನಾಗುತ್ತಾನೆ.

ದೌಹಿತ್ರೆ ಸತಿ ಪುತ್ರಸ್ಯ ಗ್ರಹಣಂ ನ ಸಮಾಚರೇತ್ ||224||

ದೌಹಿತ್ರೆ ಸತಿ ಸೋऽಯಂ ಸ್ಯಾತ್ ಪುತ್ರತುಲ್ಯಸ್ತತೋऽಧಿಕಃ ||214||

ಶ್ರಾದ್ಧದಲ್ಲಿ ಭಾವ ಶುದ್ಧಿ, ವಿಧಿಶುದ್ಧಿ ಹಾಗೂ ದ್ರವ್ಯಶುದ್ಧಿ ಇರಬೇಕೆಂದು ಲೋಹಿತ ಮಹರ್ಷಿಯು ತಿಳಿಸುತ್ತಾನೆ. ಇವಕ್ಕೆ ಆತನು ವಿಶೇಷ ಮಹತ್ತ್ವವನ್ನು ನೀಡುತ್ತಾನೆ. ದ್ರವ್ಯ ಶುದ್ಧಿಯ ಬಗ್ಗೆ ಹೇಳುತ್ತಾ ದುಷ್ಟಮಾರ್ಗದಲ್ಲಿ ಸಂಪಾದಿಸಿದ ಹಣವನ್ನು ಇಂತಹ ಕಾರ್ಯಗಳಿಗೆ ಉಪಯೋಗಿಸಬಾರದು. ಹಾಗೆ ಉಪಯೋಗಿಸಿದಲ್ಲಿ ಶ್ರಾದ್ಧ ಪಿತೃಗಳಿಗೆ ನರಕ ಪ್ರಾಪ್ತಿಯಾಗುತ್ತದೆ ಎನ್ನುತ್ತಾನೆ.

ಅಸದ್‌ದ್ರವ್ಯಕೃತಂ ಶ್ರಾದ್ಧಂ ಪಿತೃಣಾಂ ನಿರಯಪ್ರದಂ ||404||

ಅನ್ಯಾಯದ ರೀತಿಯಲ್ಲಿ, ಕಳ್ಳತನದಿಂದ, ಮೋಸದಿಂದ, ಅನ್ಯಾಯದಿಂದ ಸಂಪಾದಿಸಿದ ಹಣವನ್ನು ಅಸಮೀಚೀನ (ಅಸದ್) ದ್ರವ್ಯ ಎಂದು ಕರೆಯಲಾಗುತ್ತದೆ.

ತದೇತದಖಿಲಂ ದ್ರವ್ಯಮಸಮೀಚೀನ ಮುಚ್ಯತೇ ||398||

ಆದುದರಿಂದ ಉತ್ತಮ ಮಾರ್ಗದಲ್ಲಿ ಸಂಪಾದಿಸಿದ ಹಣ, ಅಲ್ಪವಾದರೂನೂ, ಸಮೀಚೀನ ದ್ರವ್ಯಕ್ಕಿಂತಲೂ ಉತ್ತಮ (ಶ್ರೇಷ್ಟ) ವಾದುದ್ದು. ಹೀಗೆ ಸಂಪಾದಿಸಿದ ಹಣದಿಂದ ಪದಾರ್ಥಗಳನ್ನು ಕೊಂಡು, ಧರ್ಮಪತ್ನಿಯಿಂದ ಪವಿತ್ರ ರೀತಿಯಲ್ಲಿ ತಯಾರಾದ ಶುದ್ಧ ಅಡುಗೆಯನ್ನು ಶುದ್ಧ ಮನಸ್ಸಿನಿಂದ, ಶ್ರದ್ಧಾಪೂರ್ವಕವಾಗಿ ಪಿತೃಗಳಿಗೆ ಬಡಿಸಿದ್ದೇ ಆದರೆ, ಆ ಪಿತೃಗಳು ಅಕ್ಷಯ ತೃಪ್ತಿಯನ್ನು ಪಡೆಯುವರು. ಅಂತಹ ಪಿತೃಗಳು ಕರ್ತನಿಗೆ ಅಭ್ಯುದಯವನ್ನು ಕೋರಿ, ಶ್ರೇಯಸ್ಸಾದ ಪ್ರಶಸ್ತ ಮಾರ್ಗವನ್ನು ತೋರುವರು.

ರಾಜಧರ್ಮ (ಈಗಿನ ಶಾಸಕಾಂಗದ ಆಡಳಿತ)ದ ಕರ್ತವ್ಯಗಳನ್ನು

ನಿರ್ದೇಶಿಸುತ್ತಾ, ಆಡಳಿತದ ಮುಖ್ಯನು ಸಾಮ, ದಾನ, ಭೇದ, ದಂಡ ಇತ್ಯಾದಿ ನೀತಿಗಳ ಆಶ್ರಯ ಪಡೆದು, ಉಚಿತವಾದ ರೀತಿಯಲ್ಲಿ ತನ್ನ ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸಬೇಕು. ದುಷ್ಟರು, ಅವನೀತಿಪರರು, ಕಳ್ಳರು – ಲೂಟಿ ಮಾಡುವವರು, ಹಿಂಸಾಚಾರ ಮಾಡುವವರನ್ನು ದಂಡನೆಯಿಂದ ಶಿಕ್ಷಿಸಿ, ಅವರನ್ನು ಉಚಿತ ಮಾರ್ಗದಲ್ಲಿ ತರಬೇಕು. ಉತ್ತಮ ಪ್ರಜೆಗಳನ್ನು ಎಲ್ಲ ರೀತಿಗಳಿಂದಲೂ ರಕ್ಷಿಸಬೇಕು. ದುಷ್ಟರು ಇಲ್ಲದಿದ್ದಲ್ಲಿ ಪ್ರಜೆಗಳಿಗೆ ಸುಖ ಶಾಂತಿಗಳು ಲಭ್ಯವಾಗುತ್ತವೆ. ಆದುದರಿಂದ ರಾಜನು ತನ್ನ ಸ್ವಾರ್ಥದ ಕಡೆ ದೃಷ್ಟಿ ನೀಡದೆ, ತನ್ನ ಸುಖದ ಕಡೆ ಗಮನ ನೀಡದೆ ಪ್ರಜೆಗಳ ಸುಖದುಃಖಗಳ ಕಡೆಯೇ ಸದಾಗಮನ ನೀಡುತ್ತಿರಬೇಕು. ಎಲ್ಲ ಪ್ರಜೆಗಳೂ ಸುಖದಿಂದ ಇದ್ದಾಗಲೇ ರಾಜನ ಮನೋರಥವು ಸಂಪೂರ್ಣವಾಗಿ ಸಿದ್ಧಿಸುವುದು —

ಅನಯಾನಾಮಭಾವೇ ತು ಲೋಕೋಽಯಂ ಸುಖಮಶ್ನುತೇ ||
ಲೋಕೋ ಯದಾ ಸುಖೀ ರಾಜಾ ತದಾ ಸರ್ವಾನ್ ಮನೋರಥಾನ್ |
ಅವಶಾದೇವ ಲಭತೇ ನಾತ್ರ ಕಾರ್ಯಾ ವಿಚಾರಣಾ ||719-720||

'ಲೋಹಿತ ಸ್ಮೃತಿ'ಯು ಸ್ತ್ರೀಯರ ಆಚಾರ ವಿಚಾರದ ಬಗ್ಗೆಯೂ ತಿಳಿಸುತ್ತದೆ. ಹೆಣ್ಣು ಪತಿವ್ರತಾ ಧರ್ಮವನ್ನು ಪರಿಪಾಲಿಸಬೇಕು. ಅವಳು ಧರ್ಮ ಪರಾಯಣೆಯಾಗಿರಬೇಕು. ಅವಳು ಗಂಡನೊಂದಿಗೆ ಎತ್ತರದ ದನಿಯಲ್ಲಿ ಮಾತನಾಡಬಾರದು. ಅವಳು ಸದಾ ಕಾಲದಲ್ಲೂ ಪತಿಗೆ ಪ್ರಿಯಳಾಗಿರಬೇಕು. ಪತಿಯು ಕೋಪಗೊಂಡಲ್ಲಿ ಪತ್ನಿಯು ಕೋಪಗೊಳ್ಳಬಾರದು. ಪತಿಯು ಕಠೋರನಾಗಿದ್ದು, ದಯಾರಹಿತನೂ, ಕ್ರೂರಿಯೂ ಆಗಿದ್ದು, ಅಸಹನಶೀಲನಾಗಿ ಬೈಗುಳ ಸುರಿಮಳೆಯನ್ನು ಸುರಿಸಿದರೂ ಕೂಡ, ಪತ್ನಿಯು ಅವೆಲ್ಲವನ್ನು ಸಹಿಸಿಕೊಳ್ಳಬೇಕು. ಗಂಡನ ಮೇಲೆ ಕೋಪಗೊಂಡು ಅವನಿಗೆ ಶಾಪ ಹಾಕಬಾರದು. ಬದಲಾಗಿ ನೆರಳಿನಂತೆ ಅವನನ್ನು ಅನುಸರಿಸಬೇಕು. ಪತಿಯ ಸುಖ-ದುಃಖಗಳನ್ನು ತನ್ನ ಸುಖದುಃಖವೆಂದು ತಿಳಿಯಬೇಕು. ಪತಿಯು ನಿಂತಿರುವಾಗ, ಅವಳೂ ನಿಂತಿರಬೇಕು. ಪತಿಯು ಮಲಗಿದ ಮೇಲೆ ಪತ್ನಿಯು ಮಲಗಬೇಕು. ಪತಿಯು ಕರೆದಾಗ, ಮಾಡುವ ಕೆಲಸವನ್ನು ಬಿಟ್ಟು ಪತ್ನಿಯು ಅವನ ಬಳಿ ಹೋಗಬೇಕು-ಎಂದು ಈ ಸ್ಮೃತಿಯು ತಿಳಿಸುತ್ತದೆ.

ಧರ್ಮಂ ಚರೇತ್ ಪ್ರಯತ್ನೇನ ಸಾಧ್ವೀ ನಾರೀ ಪತಿವ್ರತಾ |
ನೈನಮುಚ್ಚೈಃ ಪ್ರಭಾಷೇತ ಪ್ರಿಯಮೇವಾಸ್ಯ ಯಚ್ಚರೇತ್ ||656||
ಅಪ್ಯೇನಂ ಕುಪಿತಂ ರೋಷಾತ್ ಪ್ರತಿಕುಪ್ಯೇತ್ ಕಥಂಚನ |
ಕಠೋರಂ ನಿರ್ದಯಂ ಕ್ರೂರಂ ಸಿರನುಕ್ರೋಶಮಕ್ಷಮಂ ||657||
ತಾಡಯಂತರು ಹೋರಾತ್ರಂ ಶಪಂತಮಪಿ ದುರ್ಹದಂ |
ನ ದೋಷಯೇನ್ನ ಚಾಕ್ರೋಶೇನ್ನ ಕ್ರುಧ್ಯೇತ್ ಪ್ರಶಪೇದಪಿ ||658||
ಛಾಯಾನುವರ್ತಿನೋ ನಿತ್ಯಂ ದುಃಖಿತೇ ದುಃಖಿತಾ ಭವೇತ್ |
ಸುಖಿತೆ ಸುಖಿತಾತಸ್ಮಿನ್ ಹೃಷ್ಟೇ ಹೃಷ್ಟಾ ಸ್ಥಿತೇ ಸ್ಥಿತಾ ||659||
ಶಯಿತೇ ಶಯಿತಾ ಸುಪ್ತೆ ಪಶ್ಚಾತ್ ಸುಪ್ತಾ ಸ್ವಯಂ ಭವೇತ್ |
ಆಹೂತಾತಿತ್ವರಾ ಗಚ್ಛೇದಪಿ ಕಾರ್ಯಂ ವಿಹಾಯ ಚ ||660||

ಪತಿಯ ಸೇವೆ ಮಾಡುವುದು ಹೆಣ್ಣಿನ ಪರಮಧರ್ಮವಾಗಿದೆ ಎಂದು ಈ ಸ್ಮೃತಿಯು ತಿಳಿಸುತ್ತದೆ –

ಭರ್ತೃ ಶುಶ್ರೂಷಣಂ ನಾರ್ಯಾಃ ಪರಮೋ ಧರ್ಮ ಉಚ್ಯತೇ ||653||

ಪತಿಯ ಸೇವೆಗಿಂತ ಮಿಗಿಲಾದ ಧರ್ಮ ಹೆಣ್ಣಿಗೆ ಬೇರೆ ಯಾವುದೂ ಇಲ್ಲ. ಜಪ, ದಾನ, ತಪ, ತೀರ್ಥ, ವ್ರತ ಬೇರೆ ಯಾವುದೂ ಇಲ್ಲ.

ನೈತಸ್ಮಾದಧಿಕೋ ಧರ್ಮೋ ನೈತ ಸ್ಮಾದಧಿಕೋ ಜಪಃ ||653||
ನೈತಸ್ಮಾದಧಿಕಂ ದಾನಂ ನೈತಸ್ಮಾದಧಿಕಂ ತಪಃ |
ನೈತಸ್ಮಾದಧಿಕಂ ತೀರ್ಥಂ ನೈತಸ್ಮಾದಧಿಕೋ ದಮಃ ||654||

ಹೆಚ್ಚಿನ ಸಂಖ್ಯೆಯ ಭಾರತದ ನಾರಿಯರು ಧರ್ಮಶಾಸ್ತ್ರದ ಆದೇಶಾನುಸಾರ ವರ್ತಿಸುವರು. ಪ್ರತಿಯೋರ್ವ ವ್ಯಕ್ತಿಯ ಪೂರ್ವಾರ್ಜಿತ ಕರ್ಮಾನುಸಾರ ಸುಖದುಃಖಗಳು ಪ್ರಾಪ್ತವಾಗುತ್ತವೆ ಎನ್ನುವ ದೃಢ ವಿಶ್ವಾಸ ಅವರದ್ದು. ತಮ್ಮ ಮೇಲೆ ಗಂಡನ ಕಠೋರತೆ ವ್ಯಕ್ತವಾದಾಗ, ಅದು ತಾವು ಹಿಂದೆ ಮಾಡಿದ ಕರ್ಮದ ಫಲ ಎಂದು ಅವರು ನಂಬುತ್ತಾರೆ. ಇದರಲ್ಲಿ ಪತಿಯ ಅಪರಾಧ, ತಪ್ಪು ಏನೂ ಇಲ್ಲ ಎಂದು ಅವರು ತಿಳಿದಿರುತ್ತಾರೆ. ಈ ರೀತಿಯ ನಂಬಿಕೆ ಹಾಗೂ ತಪಸ್ಸಿನಿಂದ ಎಂತಹ ಕಠಿಣಾತ್ಮನನ್ನು ಪರಿವರ್ತಿಸಬಹುದೆಂಬುದು ಅವರ ನಂಬಿಕೆ. ಇದಕ್ಕೆ ಪ್ರತಿಷ್ಠಾನ ಪುರದಲ್ಲಿದ್ದ ಶೈವ್ಯಾಳ (ಮಾಂಡವೀ) ಜೀವನ ಚರಿತ್ರೆ ಉತ್ತಮ ಉದಾಹರಣೆಯಾಗಿದೆ.

# 12. ಅರುಣ ಸ್ಮೃತಿ

ಅರುಣನು ಸೂರ್ಯ ಭಗವಾನನ ಸಾರಥಿ. ಸೂರ್ಯನಂತೆಯೆ ಈತನು ಕೂಡ ಸಮಸ್ತ ಜೀವಿಗಳ ಧರ್ಮ-ಕರ್ಮಗಳ ಸಾಕ್ಷಿಯಾಗಿದ್ದಾನೆ. ಏಳೂ ಕುದುರೆಗಳ ಲಗಾಮುಗಳನ್ನು ಹಿಡಿದು, ಸೂರ್ಯನ ದಿವ್ಯರಥದಲ್ಲಿ ಆರೂಢ ನಾಗಿ ಈತನು ಸೂರ್ಯನ ಪಥದಲ್ಲಿ ಪ್ರಯಾಣ ಮಾಡುತ್ತಿರುತ್ತಾನೆ. ಈತನು ಧರ್ಮದ ಮರ್ಯಾದೆಯನ್ನು ಕಾಪಾಡುವುದರಲ್ಲಿ ನಿರತನಾಗಿರುತ್ತಾನೆ. ಸೂರ್ಯೋದಯಕ್ಕೆ ಮುಂಚೆಯೇ ಪೂರ್ವಕ್ಷಿತಿಜದಲ್ಲಿ ಈತನ ಕೆಂಪುವರ್ಣ ಕಂಡುಬರುತ್ತದೆ.

ಪುರಾಣಗಳ ಕಥೆಗಳಲ್ಲಿ ತಿಳಿಸಿರುವಂತೆ ಈತನು ಕಾಶ್ಯಪ (ಕಾಶ್ಯಪೇಯ)ನ ಪುತ್ರನು. ಶ್ಯೇನಿಯನ್ನು ವಿವಾಹವಾದ ಈತನಿಗೆ ಅವಳಲ್ಲಿ ಸಂಪಾತೀ ಹಾಗೂ ಜಟಾಯು ಎನ್ನುವ ಇಬ್ಬರು ಪುತ್ರರು ಜನಿಸಿದರು. ಸಮಸ್ತ ಜಗತ್ತಿನ ಪ್ರತ್ಯಕ್ಷ ದ್ರಷ್ಟಾರನಾದುದರಿಂದ ಈತನಿಂದ ಯಾವುದೂ ಮುಚ್ಚಿಡಲಾಗುವುದಿಲ್ಲ. ಜಗತ್ತಿನ ಎಲ್ಲ ವಿಷಯಗಳೂ ಈತನಿಗೆ ಗೊತ್ತು. ಈತನ ಹೆಸರಿನಲ್ಲಿ ಒಂದು ಸಂಕ್ಷಿಪ್ತ ಸ್ಮೃತಿಯು ರಚಿತವಾಗಿದೆ. ಅದು 'ಅರುಣಸ್ಮೃತಿ' ಎಂದು ವಿಖ್ಯಾತ ವಾಗಿದೆ. ಇದು 148 ಶ್ಲೋಕಗಳನ್ನು ಹೊಂದಿರುವ ಚಿಕ್ಕ ಕೃತಿಯಾದರೂ, ವಿಶೇಷ ಮಹತ್ವವನ್ನು ಹೊಂದಿರುವ ಸ್ಮೃತಿಯಾಗಿದೆ.

ಬ್ರಾಹ್ಮಣನ ನಡವಳಿಕೆ, ವರ್ತನೆಗಳು ಎಷ್ಟೊಂದು ಶುದ್ಧವಾಗಿರಬೇಕು, ಪವಿತ್ರವಾಗಿರಬೇಕು ಹಾಗೂ ತಪಃ ಪೂರ್ಣವಾಗಿರಬೇಕು ಎಂಬುದೇ 'ಅರುಣ ಸ್ಮೃತಿ'ಯಲ್ಲಿ ಪ್ರತಿಪಾದಿತವಾಗಿರುವ ವಿಷಯವಾಗಿದೆ. ಬ್ರಾಹ್ಮಣನು ಹೊರ ರೂಪದಲ್ಲಿ ಸಾಮಾನ್ಯ ಮಾನವನಂತೆ ಕಂಡುಬಂದರೂ, ಸ್ವಧರ್ಮಪಾಲನೆ, ಚಾರಿತ್ರ್ಯಶುದ್ಧಿ ಹಾಗೂ ತಪಸ್ಸಿನ ದೃಷ್ಟಿಯಲ್ಲಿ ದೇವತೆಗಳಿಗಿಂತಲೂ ಬಹಳ ಮೇಲ್ ಮಟ್ಟದಲ್ಲಿ ಇರುವವನಾಗಿರುತ್ತಾನೆ.

ಸೂರ್ಯ ಭಗವಾನ್ ಮತ್ತು ಅರುಣರ ಸಂವಾದದಲ್ಲಿ ಬ್ರಾಹ್ಮಣನ ಅಪ್ರತಿಗ್ರಹ ಧರ್ಮದ (ದಾನ ತೆಗೆದುಕೊಳ್ಳದ, ಧನ ಸಂಗ್ರಹ ಮಾಡಿಕೊಳ್ಳದ) ವಿವರಗಳು ಕಂಡುಬರುತ್ತವೆ. ಈ ವಿಷಯ ಮನು ಇತ್ಯಾದಿ ಬೇರೆಯವರ ಸ್ಮೃತಿಗಳಲ್ಲಿಯೂ ಬರುತ್ತದೆ. ಆದರೆ ಈ ಸ್ಮೃತಿಯಲ್ಲಿ ಈ ವಿಷಯವನ್ನೆ

ಪ್ರಮುಖವಾಗಿಸಿ, ಆದರೆ ಅದ್ಯೋಪಾಂತ ವರ್ಣನೆಯನ್ನು ನೀಡಲಾಗಿದೆ. ನಿಜ ಅರ್ಥದಲ್ಲಿ ಶುದ್ಧರೂಪದ ಬ್ರಾಹ್ಮಣತ್ವ ಯಾವುದು ಎಂಬುದರ ಸವಿವರ ಚಿತ್ರಣ ಇದರಲ್ಲಿದೆ.

ತಪಸ್ಸು, ಗಾಯಿತ್ರಿ–ಉಪಾಸನೆ, ಸ್ವಾಧ್ಯಾಯ ಹಾಗೂ ಆತ್ಮಜ್ಞಾನ ಇವುಗಳ ಅನುಸರಣೆಯು ಬ್ರಾಹ್ಮಣನ ಶ್ರೇಷ್ಠ ಧರ್ಮವಾಗಿದೆ. ಶಾಸ್ತ್ರಾಧ್ಯಯನ ಮಾಡುವುದು – ಮಾಡಿಸುವುದು, ಯಜ್ಞ ಮಾಡುವುದು – ಮಾಡಿಸುವುದು ಹಾಗೂ ದಾನ ಪಡೆಯುವುದು–ನೀಡುವುದು–ಇವು ಬ್ರಾಹ್ಮಣನ ಆರು ಮುಖ್ಯ ವರ್ಣ ಧರ್ಮಗಳು ಎಂದು ತಿಳಿಸಲಾಗಿದೆ. ಆದಾಗ್ಯೂ ಇವುಗಳ ನಿರ್ವಹಣೆ ಯಲ್ಲಿಯೂ ತ್ಯಾಗ ಮನೋಭಾವ ಹಾಗೂ ಸಂತೋಷಚಿತ್ತದಿಂದ ಇರುವುದು ಮುಖ್ಯ ಲಕ್ಷಣಗಳಾಗಿವೆ.

ಬ್ರಾಹ್ಮಣನು ಸ್ವಲ್ಪ ಧನವನ್ನೂ ಸಂಗ್ರಹಿಸಬಾರದೆಂದು ಇದೆ. ಏಕೆಂದರೆ ಧನ–ಸಂಪತ್ತುಗಳು ತಪಸ್ಸು ಇತ್ಯಾದಿ ಕಲ್ಯಾಣ ಕಾರ್ಯಗಳ ಮಾರ್ಗದಲ್ಲಿ ಪ್ರಬಲ ಅಡ್ಡಿಗಳಾಗಿವೆ. ಧರ್ಮಶಾಸ್ತ್ರದಲ್ಲಿ ಬ್ರಾಹ್ಮಣನು ದಾನ ಸ್ವೀಕರಿಸ ಬೇಕೆಂದು ಆಜ್ಞೆಮಾಡಲಾಗಿದೆ. ಆದರೆ ದಾನವನ್ನು ಪ್ರತಿಗ್ರಹಿಸುವಾಗ ಲೋಭ, ಮೋಹಗಳಿಗೆ ವಶನಾಗಬಾರದು ಎಂದಿದೆ. ಹೀಗೆ ಮಾಡುವುದರಿಂದ ಅವನ ಬ್ರಹ್ಮ ತೇಜಸ್ಸು ನಷ್ಟವಾಗಿ ಹೋಗುತ್ತದೆ. ಆದುದರಿಂದ ಧರ್ಮ ಪೂರ್ವಕ, ನ್ಯಾಯಪೂರ್ವಕ ರೀತಿಯಲ್ಲಿ ಧನವನ್ನು ಸಂಪಾದಿಸುವುದು ಅವಶ್ಯಕ ವಾಗಿದೆ. ಬಹಳಷ್ಟು ಧನದ ಅವಶ್ಯಕತೆ ಇದ್ದಲ್ಲಿ ಮಾತ್ರ ದಾನವನ್ನು ಸ್ವೀಕರಿಸ ಬೇಕು. ಅನ್ಯೋಪಾರ್ಜಿತ ಧನವನ್ನು ಸ್ವೀಕರಿಸಲೇಬಾರದು.

ಬ್ರಾಹ್ಮಣರಲ್ಲಿ ಒಂದು ದಿವ್ಯವಾದ ಬ್ರಹ್ಮತೇಜಸ್ಸು ಇರುತ್ತದೆ. ಇದನ್ನು ಪಡೆಯುವುದಕ್ಕಾಗಿಯೇ ರಾಜರ್ಷಿ ವಿಶ್ವಾಮಿತ್ರನು ಘೋರವಾದ ತಪಸ್ಸನ್ನು ಮಾಡಿ, ಕ್ಷತ್ರಿಯತ್ವದಿಂದ ಮೇಲೇರಿ, ಬ್ರಹ್ಮತೇಜಸ್ಸನ್ನು ಪಡೆದನು. ಸಶರೀ ಯಾಗಿ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಲು ಪ್ರಯತ್ನಿಸಿದ. ಅದು ವಿಫಲ ವಾದಾಗ ಎರಡನೇ ಸ್ವರ್ಗ, ಸಪ್ತರ್ಷಿ, ಗ್ರಹ–ನಕ್ಷತ್ರಗಳನ್ನು ನಿರ್ಮಾಣ ಮಾಡಿ, ಬೇರೆಯೇ ಆದ ಬ್ರಹ್ಮಾಂಡವನ್ನು ನಿರ್ಮಾಣ ಮಾಡಿದ. ಬ್ರಹ್ಮತೇಜ ಸಂಪನ್ನ ಬ್ರಾಹ್ಮಣನು ಬ್ರಹ್ಮನಿಗೆ ಸಮಾನನಾಗುವನು ಹಾಗೂ ಹೊಸ ಸೃಷ್ಟಿ ಯನ್ನೇ ಮಾಡಬಲ್ಲನು. ಹೀಗಿರುವಾಗ ದಿವ್ಯ ಸಂಪತ್ತುಗಳನ್ನು ನಿರ್ಮಾಣ

ಮಾಡುವುದು ಅವನಿಂದ ಸಾಧ್ಯವಿಲ್ಲವೇನು ? ಹೀಗಿರುವಾಗ ಅವನಿಗೆ ಪ್ರತಿಗ್ರಹದ ಆವಶ್ಯಕತೆಯಾದರೂ ಏಕಿದ್ದೀತು ? ತನ್ನ ತಪಸ್ಸು, ವಿದ್ಯೆ ಹಾಗೂ ಮಂತ್ರಬಲದಿಂದ ಎಲ್ಲವನ್ನು ಮಾಡುವ ಸಾಮರ್ಥ್ಯವನ್ನು ಅವನು ಹೊಂದಿರುತ್ತಾನೆ. ಆದುದರಿಂದ ಬ್ರಾಹ್ಮಣನಿಗೆ ಪ್ರತಿಗ್ರಹವು ಸರ್ವಥಾ ತ್ಯಜಿಸುವಂತಹುದು. ಈ ರಹಸ್ಯವನ್ನು ಭಗವಾನ್ ಸೂರ್ಯನು ಅನೇಕ ಉದಾಹರಣೆಗಳೊಂದಿಗೆ, ಅನೇಕ ರೀತಿಗಳಲ್ಲಿ ಅರುಣನಿಗೆ ಉಪದೇಶ ಮಾಡಿದ್ದಾನೆ.

ಧನದ ಲೋಭದಲ್ಲಿ ಬಿದ್ದು ಅವನು ದಾನವನ್ನು ಸ್ವೀಕರಿಸಿದಲ್ಲಿ ವಿಷರಹಿತ ಸರ್ಪದಂತೆ ಅವನು ಸತ್ವಹೀನ, ತೇಜೋಹೀನನಾಗುತ್ತಾನೆ. ವಿದ್ಯೆ, ವಿವೇಕ, ಬುದ್ಧಿ, ಜ್ಞಾನಗಳು ಅವನಲ್ಲಿ ನಷ್ಟವಾಗುತ್ತವೆ. ಅವನಲ್ಲಿನ ಪುಣ್ಯವೂ ನಶಿಸಿ ಹೋಗುತ್ತದೆ. ಆದುದರಿಂದ ಅವನು ಅಪರಿಗ್ರಾಹಿಯಾಗಿ, ಶಾಸ್ತ್ರ ಮರ್ಯಾದೆಯನ್ನು ಕಾಪಾಡಬೇಕಾಗುತ್ತದೆ. ಅವನು ಕರ್ತವ್ಯಚ್ಯುತನಾದಲ್ಲಿ ಅವನಲ್ಲಿನ ಬ್ರಾಹ್ಮಣತ್ವವು ವ್ಯರ್ಥವಾಗುತ್ತದೆ. ಅವನು ಉಪವಾಸ, ಜಪ, ತಪ ಇತ್ಯಾದಿ ಧರ್ಮಾಚರಣೆಗಳಲ್ಲಿ ನಿರತನಾಗಿರುವುದರ ಮುಖಾಂತರ ಬ್ರಾಹ್ಮಣತ್ವವನ್ನು ಕಾಪಾಡಿಕೊಳ್ಳಬೇಕು. ತ್ಯಾಗದಿಂದಲೇ ಬ್ರಾಹ್ಮಣನಲ್ಲಿನ ಬ್ರಾಹ್ಮಣತ್ವವು ಪೂಜ್ಯತೆಯನ್ನು ಪಡೆಯುತ್ತದೆ.

ಭಗವಾನ್ ಆದಿತ್ಯನು ಅರುಣನೊಂದಿಗೆ ಹೀಗೆಂದು ಹೇಳುತ್ತಾನೆ. "ಹೇ ಕಾಶ್ಯಪೇಯ ! ಪರಿಗ್ರಹ (ದಾನ ಸ್ವೀಕಾರ)ವು ಬಾಹ್ಯವಾಗಿ ನೋಟದಲ್ಲಿ ಮಧುವಿನಂತೆ ಸಿಹಿಯಾಗಿ ಕಂಡುಬರುತ್ತದೆ. ಆದರೆ ಇದು ವಿಷದ ಸಮಾನ ಪರಿಣಾಮವನ್ನು ಉಂಟುಮಾಡುತ್ತದೆಯಾದರೂ ದಾನ ಮಾಡುವವನಿಗೆ ಪುಣ್ಯ ಪ್ರಾಪ್ತವಾಗುತ್ತದೆ –

ಪ್ರತಿಗ್ರಹಃ ಕಾಶ್ಯಪೇಯ ಮಧ್ವಾಸ್ವಾದೋ ವಿಷೋಪಮಃ |
ಬ್ರಾಹ್ಮಣಾಯ ಭವೇನ್ನಿತ್ಯಂ ದಾತಾ ಧರ್ಮೇಣ ಯುಜ್ಯತೇ ||3||

ದಾನ ಸ್ವೀಕಾರದಿಂದ ಬ್ರಾಹ್ಮಣನ ಬಾಹ್ಯತೇಜಸ್ಸು ನಷ್ಟವಾಗುತ್ತದೆ. ಆದುದರಿಂದ ಪ್ರತಿಗ್ರಹ ಸ್ವೀಕರಿಸಿದ ನಂತರ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ಅತ್ಯಂತ ಆವಶ್ಯಕ –

ಪ್ರತಿಗ್ರಹೇಣ ವಿಪ್ರಾಣಾಂ ಬ್ರಾಹ್ಮಂ ತೇಜಃ ಪ್ರಶಾಮ್ಯತಿ |
ಅತಃ ಪ್ರತಿಗ್ರಹಂ ಕೃತ್ವಾ ಪ್ರಾಯಶ್ಚಿತ್ತಂ ಸಮಾಚರೇತ್ ||26||

ದೋಷಪೂರ್ಣವಾದ ದಾನವನ್ನು ಸ್ವೀಕರಿಸುವುದರಿಂದ ದಾನ ಮಾಡುವವನ ದೋಷಗಳು ಹಾಗೂ ಪಾಪಗಳಿಗೆ ದಾನಸ್ವೀಕರಿಸಿದವನೂ ಭಾಗಿಯಾಗುತ್ತಾನೆ. ಭಿಕ್ಷಾದಿಗಳ ಮುಖಾಂತರ (ತಿಥಿ ಇತ್ಯಾದಿ ಅಪರ ಕರ್ಮಗಳಲ್ಲಿ) ಬ್ರಾಹ್ಮಣನು ಅನ್ನವನ್ನು ಸ್ವೀಕರಿಸಿದರೂ ಕೂಡ, ಅದರ ಪರಿಹಾರಕ್ಕಾಗಿ ಅವನು ಗಾಯಿತ್ರಿ ಇತ್ಯಾದಿ ಪುಣ್ಯಪ್ರದ ಮಂತ್ರಗಳ ಜಪವನ್ನು ಕೈಗೊಳ್ಳಬೇಕು. ಆಗಲೇ ದೋಷ-ಪಾಪಗಳಿಗೆ ಶಾಂತಿ ಉಂಟಾಗುತ್ತದೆ.

ದುಷ್ಟಪ್ರತಿಗ್ರಹಂ ಕೃತ್ವಾ ವಿಪ್ರೋ ಭವತಿ ಕಿಲ್ಬಿಷೀ |
ಅಪಿ ಭಿಕ್ಷಾಗೃಹೀತೆ ತು ಪುಣ್ಯಮಂತ್ರಮುದೀರಯೇತ್ ||27||

ವಿದ್ವಾಂಸರಾಗಿರುವವರಂತೂ ದಾನವನ್ನು ಪ್ರಪ್ರಥಮವಾಗಿ ಸ್ವೀಕರಿಸಲೇ ಬಾರದು. ಹಾಗೆ ಪಡೆದಲ್ಲಿ ಶಾರೀರಿಕ ಶುದ್ಧಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು, ಜಪ ಮಾಡಬೇಕು, ಹೋಮ ಮಾಡಬೇಕಾಗಿರುತ್ತದೆ. ದಾನವಾಗಿ ಸ್ವೀಕರಿಸಿದ ಧನವನ್ನು ದಾನವಾಗಿ ಹಿಂತಿರುಗಿಸಬೇಕು, ಗೋವುಗಳ ಸೇವೆಯಲ್ಲಿ ನಿರತನಾಗಿರಬೇಕು, ದೀನ-ದುಃಖಿಗಳಲ್ಲಿ ಹಂಚಬೇಕು. ಈ ರೀತಿಯಲ್ಲಿ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು, ಹಣದ ಸದುಪಯೋಗ ಮಾಡುವುದರಿಂದ ಪ್ರತಿಗ್ರಹಜನ್ಯ ದೋಷ ಪಾಪದಿಂದ ಅವನು ಮುಕ್ತನಾಗುವನು –

ತಸ್ಮಾತ್ ಪ್ರತಿಗ್ರಹಂ ಕೃತ್ವಾ ಪ್ರಾಯಶ್ಚಿತ್ತಂ ಸಮಾಚರೇತ್ ||41||

** ** **

ಪ್ರಾಯಶ್ಚಿತ್ತೇ ಕೃತೇ ವಿಪ್ರೋ ಮುಚ್ಯತೇ ದುಷ್ಪರಿಗ್ರಹಾತ್ ||43||

ದಾನವಾಗಿ ಪಡೆದ ಹಣ ಸ್ಥಿರವಾದುದಲ್ಲ, ಅದು ಸಮೂಲವಾಗಿ ನಷ್ಟವಾಗುತ್ತದೆ.

ಪ್ರತಿಗ್ರಹಾರ್ಜಿತಂ ದ್ರವ್ಯಂ ಸರ್ವಂ ನಶ್ಯತಿ ಮೂಲತಃ ||73||

ಆದುದರಿಂದ ಅಂತಹ ಧನವನ್ನು ಯಜ್ಞಾದಿ ಪುಣ್ಯಾನುಷ್ಠಾನಗಳಲ್ಲಿ, ದೇವಸ್ಥಾನಗಳು, ಬಾವಿ-ಕೊಳಗಳ ನಿರ್ಮಾಣಗಳು ಇತ್ಯಾದಿ ಸತ್ಕರ್ಮಗಳಲ್ಲಿ ತೊಡಗಿಸಬೇಕು –

ತಸ್ಮಾತ್ ಪ್ರತಿಗ್ರಹಧನಂ ನ ಸ್ಥಿರಂ ಸ್ಯಾತ್ ಕದಾಚನ |
ಪ್ರಾಜ್ಞಃ ಪ್ರತಿಗ್ರಹಂ ಕೃತ್ವಾ ತದ್ಧನಂ ಸದ್ಗತಿಂ ನಯೇತ್ ||139||

ಪ್ರಾಯಶ್ಚಿತ್ತಗಳಲ್ಲಿ ಅನೇಕ ರೀತಿಗಳು ಇದ್ದರೂ ಕೂಡ, ಶ್ರೀಮನ್ನಾರಾಯಣನ ಸ್ಮರಣೆಯು ಅತ್ಯುತ್ತಮವಾದ ಪ್ರಾಯಶ್ಚಿತ್ತವಾಗಿದೆ –

ಪ್ರಾಯಶ್ಚಿತ್ತಂ ತು ತಸ್ಯೈವ ಹರೇಃ ಸ್ಮರಣಂ ಪರಂ ||145||

ಪಡೆದ ದಾನವನ್ನು ಮಾರುವುದರಲ್ಲಿ ಅಷ್ಟೊಂದು ದೋಷವಿಲ್ಲ ಎಂದು ಸೂರ್ಯ ಭಗವಾನನು ಅರುಣನಿಗೆ ತಿಳಿಸುತ್ತಾನೆ –

ಪ್ರತಿಗ್ರಹೇ ನ ದೋಷಃ ಸ್ಯಾದ್ ದೋಷಸ್ತಸ್ಯೈವ ವಿಕ್ರಯೇ ||146||

ವಿದ್ಯಾದಾನ, ಭೂಮಿದಾನ ಹಾಗೂ ಕಪಿಲಾ (ಗೋ) ದಾನಗಳನ್ನು ಪ್ರತಿಗ್ರಹ (ದಾನ) ಎಂದು ತಿಳಿಯಬಾರದು ಮತ್ತು ಅವುಗಳನ್ನು ಸ್ವೀಕರಿಸುವುದರಲ್ಲಿ ಯಾವ ದೋಷವೂ ಇಲ್ಲ. ಈ ಮೂರನ್ನೂ 'ಅತಿದಾನ' ಎಂದು ಕರೆಯಲಾಗುವುದು. ಈ ಮೂರನ್ನು ಪ್ರತಿಗ್ರಹದಲ್ಲಿ ಸೇರಿಸಲಾಗಿದ್ದರೂ 'ಪರೋಪಕಾರ' ವೆಂದೇ ಕರೆಯಲಾಗುತ್ತದೆ. ಆದುದರಿಂದ ಇವುಗಳಲ್ಲಿ ಯಾವುದೇ ದೋಷವಿಲ್ಲ ಎಂಬ ಭಾವನೆ. ಹಸುವಿನ ಗವ್ಯ (ಹಾಲು ಇತ್ಯಾದಿ) ಪದಾರ್ಥಗಳನ್ನು ಯಾಜ್ಞಾದಿ ಸತ್ಕಾರ್ಯಗಳಲ್ಲಿ ಉಪಯೋಗಿಸುವುದರಿಂದ ಎಲ್ಲರಿಗೂ ಕಲ್ಯಾಣವಾಗುತ್ತದೆ. ಗೋಪಾಲನೆಯಿಂದ ಪುಣ್ಯವೂ ಲಭಿಸುತ್ತದೆ ಹಾಗೂ ಅದೊಂದು ಪುಣ್ಯಕಾರ್ಯವಾಗುತ್ತದೆ. ಇದೇ ರೀತಿಯಲ್ಲಿ ವಿದ್ಯಾದಾನವೂ ಕೂಡ. ವಿದ್ಯಾರ್ಜನೆಯಿಂದ ಜನರಿಗೆ ಕ್ಷೇಮವಾಗುತ್ತದೆ. ಇದೇ ರೀತಿಯಲ್ಲಿ ಭೂಮಿದಾನವೂ ಕೂಡ. ಭೂಮಿಯನ್ನು ಸ್ವೀಕರಿಸಿ, ಅದರಲ್ಲಿ ವ್ಯವಸಾಯ ಮಾಡಿ, ಉತ್ಪನ್ನಗಳನ್ನು ಪಡೆಯುವುದರಿಂದ, ಅಂತಹ ಉತ್ಪನ್ನಗಳನ್ನು ಮಾನವರಿಗೇ ಅಲ್ಲದೆ ಪಶುಪಕ್ಷಿಗಳಿಗೂ (ತಿರ್ಯಕ್ ಪ್ರಾಣಿಗಳಿಗೂ) ಪೋಷಣೆಯಾಗುತ್ತದೆ. ಹಸುವಿನ ವಿಷಯದಲ್ಲಿ –

ಪ್ರತಿಗ್ರಹಸ್ತತಸ್ತಸ್ಯಾಃ ಪುಣ್ಯಾತ್ ಪುಣ್ಯತರಃ ಸ್ಮೃತಃ ||67||

ಇದೇ ರೀತಿಯಲ್ಲಿ ಭೂಮಿದಾನದ ಬಗ್ಗೆಯೂ ಹೇಳಲಾಗಿದೆ-ಭೂಮಿದಾನ ನೀಡುವವನು ಹಾಗೂ ಪಡೆಯುವವನು – ಇಬ್ಬರೂ ಪುಣ್ಯಕಾರ್ಯವನ್ನು ಮಾಡಿದಂತಾಗುತ್ತದೆ. ಇದರಿಂದ ಸ್ವರ್ಗಪ್ರಾಪ್ತಿಯೂ ಆಗುತ್ತದೆ –

ಭೂಮಿಂ ಯಃ ಪ್ರತಿಗೃಹ್ಣಾತಿ ಭೂಮಿಂ ಯಶ್ಚ ಪ್ರಯಚ್ಛತಿ ।
ಉಭೌ ತೌ ಪುಣ್ಯಕರ್ಮಾಣೌ ನಿಯತಂ ಸ್ವರ್ಗಗಾಮಿನೌ ||89||

*** *** ***

ರಾಜನಿಂದ ನೀಡಲ್ಪಟ್ಟ ದಾನವು ತುಂಬಾ ಭಯಾನಕವಾದುದು ಎಂದು ಸೂರ್ಯ ಭಗವಾನನು ಅರುಣನಿಗೆ ತಿಳಿಸುವನು. ಇದು ಜೇನುತುಪ್ಪದಂತೆ

ದ್ದರೂ ಪರಿಣಾಮವು ಮಾತ್ರ ವಿಷ ಸಮಾನವಾದುದು. ಆದುದರಿಂದ ಇಂತಹ ಘೋರರೂಪದ ಲೋಭದಲ್ಲಿ ಬೀಳಬಾರದು ಎಂದು ತಿಳಿಸಲಾಗಿದೆ–

ರಾಜ ಪ್ರತಿಗ್ರಹೋ ಘೋರೋ ಮಧ್ವಾಸ್ವಾದೋ ವಿಷೋಪಮಃ |
ತಂ ಜ್ಞಾತ್ವಾ ಮಾನವಃ ಕಸ್ಮಾತ್ ಕರಿಷ್ಯತಿ ಪ್ರಲೋಭನಮ್ ||74||

ನಿಜ ಅರ್ಥದಲ್ಲಿ ತ್ಯಾಗವೇ ಬ್ರಾಹ್ಮಣನ ಮುಖ್ಯ ವೃತ್ತಿಯಾಗಬೇಕು. ದಾನ ಸ್ವೀಕರಿಸುವುದರಿಂದ ಅವನು ಸದಾ ದೂರವಿರುವುದೇ ಉತ್ತಮ. ದಾನದ ಭೀಷಣ ದೋಷಣಗಳ ಪರಿಣಾಮವನ್ನು ಅರಿತು, ದಾನವನ್ನು ಸ್ವೀಕರಿಸದ ಎಷ್ಟೋ ಉದಾಹರಣೆಗಳು ಪುರಾಣಾದಿ ಗ್ರಂಥಗಳಲ್ಲಿವೆ. ಇದಕ್ಕೆ ಸಪ್ತರ್ಷಿಗಳ ಕಥಾನಕವು ಉತ್ತಮ ಉದಾಹರಣೆಯಾಗಿದೆ.

## 13. ಲೌಗಾಕ್ಷಿ ಸ್ಮೃತಿ

ಸ್ಮೃತಿ ಸಾಹಿತ್ಯದಲ್ಲಿ ಲೌಗಾಕ್ಷಿ ಮಹರ್ಷಿ ವಿರಚಿತ ಲೌಗಾಕ್ಷಿ ಸ್ಮೃತಿಯು ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇದು ಸಾಕಷ್ಟು ದೊಡ್ಡದಾದ ಗ್ರಂಥವಾಗಿದೆ.

ಇದರಲ್ಲಿ ಮುಖ್ಯವಾಗಿ ಜಾತಕರ್ಮ, ನಾಮಕರಣ, ಉಪನಯನ, ವಿವಾಹಾದಿ ಸಂಸ್ಕಾರಗಳ ಪ್ರಯೋಗ ವಿಧಿಯನ್ನು ನೀಡಲಾಗಿದೆ. ಪ್ರತಿಯೊಂದು ಕರ್ಮದ ವೈದಿಕ ಮಂತ್ರಗಳು ಹಾಗೂ ಪದ್ಧತಿಗಳ ನಿರೂಪಣೆಯನ್ನು ಇದರಲ್ಲಿ ನಿರೂಪಿಸಲಾಗಿದೆ.

ಉಪನಯನ ಪ್ರಕರಣದಲ್ಲಿ ಬ್ರಹ್ಮಚಾರಿ ಧರ್ಮವನ್ನು ವಿಸ್ತಾರ ರೀತಿಯಲ್ಲಿ ವಿವರಿಸಲಾಗಿದೆ. ವಿವಾಹ ಸಂಸ್ಕಾರ ಪ್ರಕರಣದಲ್ಲಿ ಔಪಾಸನಾ ಹೋಮ ಹಾಗೂ ಚತುರ್ಥಕರ್ಮಗಳನ್ನು ವಿಸ್ತಾರ ರೀತಿಯಲ್ಲಿ ಪ್ರತಿಪಾದಿಸಲಾಗಿದೆ. ನಂತರದಲ್ಲಿ ಗೃಹಸ್ಥನ ನಿತ್ಯನೈಮಿತ್ತಿಕ ಕರ್ಮಗಳನ್ನು ಸವಿಸ್ತಾರವಾಗಿ ವರ್ಣಿಸಲಾಗಿದೆ. ಇದರಲ್ಲಿ ಬಾಹ್ಯಾಭ್ಯಂತರ ಶೌಚ, ದಂತಧಾವನ, ಸ್ನಾನ, ಸಂಧ್ಯಾವಿಧಿ, ಗಾಯಿತ್ರೀ ಜಪ, ಗಾಯಿತ್ರಿಯ 24 ಮುದ್ರೆಗಳು, ಬ್ರಹ್ಮ–ಯಜ್ಞ, ದೇವ–ಪಿತೃ ತರ್ಪಣ, ಭೀಷ್ಮ–ತರ್ಪಣಗಳನ್ನು ವಿವರಿಸಲಾಗಿದೆ. ಇದರೊಂದಿಗೆ ಸವಿಸ್ತಾರವಾಗಿ ಪಂಚಾಯತನ ಪೂಜೆಯಲ್ಲಿ ಗಣೇಶ, ಸೂರ್ಯ, ದುರ್ಗೆ, ವಿಷ್ಣು ಹಾಗೂ ಶಿವ – ಈ ಐದೂ ದೇವರುಗಳ ಪೂಜೆಯ ವಿಧಿಯನ್ನು ನಿರೂಪಿಸಲಾಗಿದೆ.

ಆ ನಂತರದಲ್ಲಿ ಪಂಚಮಹಾಯಜ್ಞದ ವಿಧಾನ, ಅತಿಥಿ ಸತ್ಕಾರದ ಮಹಿಮೆ, ಭೋಜನ ಮಾಡುವ ರೀತಿ, ಭಕ್ಷ್ಯಾಭಕ್ಷ್ಯ ವಿಚಾರ, ಸ್ತ್ರೀಧರ್ಮ, ಗೋದಾನ-ಇತ್ಯಾದಿಗಳ ಚಿತ್ರಣದೊಂದಿಗೆ ಕಡೆಯಲ್ಲಿ ಬಹಳ ವಿಸ್ತಾರವಾದ ರೀತಿಯಲ್ಲಿ ವೈಶ್ವೇದೇವನ ವಿವರಣೆ ಮತ್ತು ಶ್ರಾದ್ಧದ ಸಂಪೂರ್ಣ ಪ್ರಕ್ರಿಯೆಗಳನ್ನು ತಿಳಿಸಲಾಗಿದೆ. ಮಧ್ಯಮಧ್ಯದಲ್ಲಿ ಬಹಳ ಸುಂದರವಾದ ಉಪದೇಶಗಳನ್ನು ನೀಡಲಾಗಿದೆ.

ಮಹರ್ಷಿ ಲೌಗಾಕ್ಷಿಯು ಧರ್ಮಾಚರಣೆಯು ಪರಮಶ್ರೇಯಸ್ಕರ ಸಾಧನವೆಂದು ತಿಳಿಸಲಾಗಿದೆ.

## ಲಕ್ಷವರ್ತೀ ದೀಪದಾನದ ಮಹಿಮೆ

ಗಂಡಸಾಗಲಿ, ಹೆಂಗಸಾಗಲಿ ತಾನು ಮಾಡಿರುವ ಘೋರ ದುಷ್ಕೃತ್ಯ ಕರ್ಮಗಳ ಹಾಗೂ ಪ್ರಕಟಿಸಲಾಗದಂತಹ ಏಕಾಂತದಲ್ಲಿ ಮಾಡಿದ ಪಾಪಗಳ ನಿವಾರಣೆಗಾಗಿ 'ಲಕ್ಷವರ್ತೀ (ಒಂದು ಲಕ್ಷ ದೀಪಗಳ) ದೀಪದಾನ' ಮಾಡುವುದು ಉತ್ತಮ ಮಾರ್ಗವಾಗಿದೆ ಎಂದು ಮಹರ್ಷಿ ಲೌಗಾಕ್ಷಿಯು ವಿವರಿಸಿದ್ದಾನೆ.

ವೈಶಾಖ, ಕಾರ್ತೀಕ ಹಾಗೂ ಮಾಘ ಮಾಸಗಳಲ್ಲಿ ವಿಷ್ಣು ಅಥವಾ ಶಿವನ ಪ್ರೀತ್ಯರ್ಥವಾಗಿ ಲಕ್ಷ ದೀಪಾರಾಧನೆಯನ್ನು ಏರ್ಪಡಿಸುವುದು ಸಕಲ ದೋಷ ಪರಿಹಾರಾರ್ಥಕ್ಕೆ ಮಾರ್ಗವೆಂದು ತಿಳಿಯುವುದು. ದೀಪಗಳಿಗೆ ಸಾಧ್ಯವಾದಷ್ಟು ಹಸುವಿನ ತುಪ್ಪವನ್ನು ಉಪಯೋಗಿಸಬೇಕು. ಯಾವ ತಿಂಗಳಲ್ಲಿ ದೀಪದಾನ ಮಾಡಬೇಕಾಗಿದೆಯೊ ಆ ತಿಂಗಳ ಪೌರ್ಣಮಿಯಂದು ಉದ್ಯಾಪನವನ್ನು ಮಾಡಬೇಕು.

ಯಸ್ಮಿನ್ ಮಾಸೇ ಸಮಾಪ್ತಿಃ
ಸಾತ್ ತತ್ ಪೌರ್ಣಮ್ಯಾಂ ಸಮಿಪನಮ್ ||260||

ಹಾಗೆಂದು ಆ ತಿಂಗಳುಗಳಲ್ಲೆ ಮಾಡಬೇಕೆಂಬುದೇನೂ ಇಲ್ಲ. ಶ್ರದ್ಧಾ ಭಕ್ತಿಗಳಿಂದ ಈ ದೀಪೋತ್ಸವವನ್ನು ಮಾಡಬಹುದು. ಆದರೆ ದೀಪದಾನಕ್ಕೆ ಕಾರ್ತೀಕ ಮಾಸವೇ ಸರ್ವಶ್ರೇಷ್ಠವಾದುದು –

ದೀಪಾರಾಧನಕೃತ್ಯಸ್ಯ ಕಾರ್ತಿಕಸ್ತೂತ್ತಮೋತ್ತಮಃ ।
ಕಾರ್ತಿಕೆ ತತ್ಕೃತಂ ಕರ್ಮ ಕೋಟಿಕೋಟಿ ಗುಣಂ ಭವೇತ್ ||

ಮಹಾವಿಷ್ಣುವಿನ ವಿಶೇಷ ಆರಾಧನೆಯನ್ನು ಮಾಡಿ, ಕಾರ್ತೀಕ ಮಾಸದಲ್ಲಿ ಒಂದು ದೀಪವನ್ನು ದಾನ ಮಾಡಿದರೂ ಸಾಕು, ಅಂತಹ ವ್ಯಕ್ತಿಯ ಸಂಚಿತಪಾಪಗಳಷ್ಟೂ ನಷ್ಟವಾಗುತ್ತವೆ. ಒಂದು ದೀಪಕ್ಕೇ ಇಷ್ಟೊಂದು ಪುಣ್ಯ ವಿರುವಾಗ, ಒಂದು ಲಕ್ಷದೀಪ ಬೆಳಗಿದರೆ ಹೇಳುವುದೇನು ? ಅಂತಹವನ ಪುಣ್ಯಕ್ಕೆ ಎಣೆಯುಂಟೆ ?

ಏಕೇನ ದೀಪದಾನೇನ ದೇವದೇವಸ್ಯ ಕಾರ್ತಿಕೆ ॥
ಆಜನ್ಮ ಸಂಚಿತಂ ಪಾಪಂ ತತಕ್ಷಣಾದೇವ ನಶ್ಯತಿ ।
ಕಿಂ ಪುನರ್ಲಕ್ಷ ಸಂಖ್ಯಾಕೈ ವರ್ತಿವೃಂದೋದ್ಭವೈಃ ||260||

## ಯಮಳ ಪುತ್ರರ ವ್ಯವಸ್ಥೆ

ಲೌಗಾಕ್ಷಿಸ್ಮೃತಿಯಲ್ಲಿ ವಿವಾಹದ ಪ್ರಕರಣದಲ್ಲಿ ಸಂಕ್ಷೇಪವಾಗಿ 'ಔರಸ' ಹಾಗೂ 'ದತ್ತಕ' ಪುತ್ರರ ಬಗ್ಗೆಯೂ ಸಂಕ್ಷೇಪವಾದ ವರ್ಣನೆಯನ್ನು ನೀಡ ಲಾಗಿದೆ. ಅವಳಿ-ಜವಳಿಯ ಜ್ಯೇಷ್ಠ-ಕನಿಷ್ಠರ ಬಗ್ಗೆ ವಿವರಿಸುತ್ತಾ ಯಾರು ಮೊದಲು ಹುಟ್ಟಿರುವರೊ ಅವನನ್ನು ಕನಿಷ್ಠ (ಚಿಕ್ಕವ)ನೆಂದೂ, ನಂತರದಲ್ಲಿ ಹುಟ್ಟಿದವನನ್ನು ಜ್ಯೇಷ್ಠನೆಂದೂ ಪರಿಗಣಿಸಬೇಕೆಂದು ಹೇಳಲಾಗಿದೆ. ಇದಕ್ಕೆ ತಕ್ಕಹಾಗೆ ನಂತರ ಹುಟ್ಟಿದ ಜ್ಯೇಷ್ಠನೇ ತಂದೆಯ ಕರ್ಮಗಳನ್ನು ಮಾಡಲು ಯೋಗ್ಯನಾಗಿರುವನು ಎಂದು ಈ ಸ್ಮೃತಿಯು ಹೇಳುತ್ತದೆ –

ಯಮಯೋಃ ಪುತ್ರಯೋರ್ಮಧ್ಯೇ ಪೂರ್ವಂ ಜಾತಃ ಕನೀಯಸಃ ।
ಪಶ್ಚಾಜ್ಜಾತಸ್ತು ವಿಜ್ಞೇಯೋ ಜ್ಯೇಷ್ಠಃ ಕರ್ಮಸು ಸತ್ಕೃತಃ ||246||

## ಅಗ್ನಿಯ ಧ್ಯಾನ ಹಾಗೂ ಆತನ ಪೂಜೆ

ಔಪಾಸನ ಹೋಮದ ಪ್ರಕರಣದಲ್ಲಿ ಭಗವಾನ್ ಅಗ್ನಿದೇವನ ಧ್ಯಾನ ಮಾಡ ಬೇಕಾದ ನಿರೂಪಣೆಯನ್ನು ನೀಡಲಾಗಿದೆ. ಹಾಗೆಯೇ ಮುಂದುವರೆಯುತ್ತಾ ಅಗ್ನಿಯ ಏಳು ಕೈಗಳು, ನಾಲ್ಕು ಕೊಂಬುಗಳು, ಏಳು ನಾಲಿಗೆಗಳು, ಎರಡು ತಲೆಗಳು ಹಾಗೂ ಮೂರು ಪಾದಗಳನ್ನು ವರ್ಣಿಸಲಾಗಿದೆ. ಆತನ ಮುಖಗಳು ಸದಾ ಪ್ರಸನ್ನತೆಯಿಂದ ಕೂಡಿರುತ್ತವೆ. ಸುಖಪೂರ್ವಕ ಆಸನದ ಮೇಲೆ ವಿರಾಜಮಾನನಾಗಿರುವನು. ಆತನ ಮುಖ ಮಂಡಲದ ಮೇಲೆ ಅತ್ಯಂತ ಮಧುರವಾದ ಮುಗುಳುನಗೆ ಸುಶೋಭಿತವಾಗಿರುತ್ತದೆ. ಆತನ ಎಡಭಾಗದಲ್ಲಿ ಸ್ವಾಹಾ ದೇವಿಯು, ಬಲಭಾಗದಲ್ಲಿ ಸ್ವಧಾದೇವಿಯು ವಿರಾಜಮಾನ

ರಾಗಿರುತ್ತಾರೆ. ಆತನು ಎಡಗಡೆಯ ಕೈಗಳಲ್ಲಿ ಶಕ್ತಿ, ಅನ್ನ, ಸೃಚ ಹಾಗೂ ಸೃವಾಗಳನ್ನು ಹೊಂದಿರುತ್ತಾನೆ; ಅಂತೆಯೇ ಬಲಗಡೆಯ ಕೈಗಳಲ್ಲಿ ತೋಮರ, ವ್ಯಜನ ಹಾಗೂ ತುಪ್ಪದ ಪಾತ್ರೆಗಳು ಇರುತ್ತವೆ.

ಸಪ್ತಹಸ್ತಶ್ಚತುಶ್ಶೃಂಗಃ ಸಪ್ತಜಿಹ್ವೋ ದ್ವಿಶೀರ್ಷಕಃ |
ತ್ರಿಪಾತ್ಪ್ರಸನ್ನವದನಃ ಸುಖಾಸೀನಃ ಶುಚಿಸ್ಮಿತಃ |
ಸ್ವಾಹಾಂ ತು ದಕ್ಷಿಣೇ ಪಾರ್ಶ್ವೇ ದೇವೀಂ ವಾಮೇ ಸ್ವಧಾಂ ತಥಾ |
ಬಿಭ್ರದ್ ದಕ್ಷಿಣ ಹಸ್ತೈಸ್ತು ಶಕ್ತಿಮನ್ನಂ ಸೃಚಂ ಸೃವಂ |
ತೋಮರಂ ವ್ಯಜನಂ ವಾಮೈರ್ಘೃತಪಾತ್ರಂ ತುಂ ಧಾರಯನ್ |
ಆತ್ಮಾಭಿಮುಖಮಾಸೀನ ಏವಂರೂಪೋ ಹುತಾಶನಃ ||268||

[ಸ್ಮೃತಿಗಳಲ್ಲಿ ಬಹುಶಃ ವೇದಾರ್ಥವೇ ಸಮಾವೇಶವಾಗಿರಬೇಕೆನ್ನಿಸುತ್ತದೆ. ಭಗವಾನ್ ಅಗ್ನಿದೇವನ ಪ್ರಾರ್ಥನೆಗಳು ಋಗ್ವೇದ (4/58/3), ಯಜುರ್ವೇದ (17/91) ಗಳಲ್ಲಿ ಈ ರೀತಿ ಇವೆ.

ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾದ್ವೇ
ಶೀರ್ಷೇ ಸಪ್ತ ಹಸ್ತಾಸೋ ಅಸ್ಯ |
ತ್ರಿಧಾ ಬದ್ಧೋ ವೃಷಭೋ ರೋರವೀತಿ
ಮಹೋದೇವೋ ಮರ್ತ್ಯಾಂ ಆ ವಿವೇಶ | ]

ಈ ರೀತಿಯ ಸ್ವಸ್ವರೂಪವನ್ನು ಹೊಂದಿರುವ ಹುತಾಶನನನ್ನು ತನ್ನೆದುರುಗಡೆ ಪ್ರತ್ಯಕ್ಷವಾಗಿ ಕುಳಿತಿರುವಂತೆ ಭಾವಿಸಿ, ಸಾಧಕನು ಶ್ರದ್ಧಾಭಕ್ತಿಗಳಿಂದ ಆತನ ಯಜನ-ಪೂಜನೆ ಹಾಗೂ ಆರಾಧನೆಯನ್ನು ಮಾಡಬೇಕು.

ಅಂತೆಯೇ ಆತನನ್ನು ಈ ರೀತಿಯಲ್ಲಿ ಪ್ರಾರ್ಥಿಸಬೇಕು-

ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ |
ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೆ ಹವ್ಯವಾಹನ ||269||

ಹವನದ ದ್ರವ್ಯಗಳನ್ನು ಸ್ವೀಕರಿಸುವಂತಹ ಹವ್ಯವಾಹನನಾದ, ಹೇ ಅಗ್ನಿದೇವನೆ ! ನೀನು ನನಗೆ ಶ್ರದ್ಧಾ, ಮೇಧಾ, ಉತ್ತಮವಾದ ಯಶಸ್ಸು, ಪ್ರಜ್ಞಾ, ವಿದ್ಯೆ, ಸದ್ಬುದ್ಧಿ, ಐಶ್ವರ್ಯ, ಬಲ, ಆಯು, ತೇಜಸ್ಸು ಹಾಗೂ ಆರೋಗ್ಯ-ಇತ್ಯಾದಿಗಳನ್ನು ಕರುಣಿಸು.

ನಿಷ್ಕಾಮ ಧರ್ಮಾಚರಣೆಯಿಂದ ಪರಮಜ್ಞಾನ ಪ್ರಾಪ್ತಿ

ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಆತ್ಮೋದ್ಧಾರಕ್ಕಾಗಿ ಸ್ವತಃ ಪ್ರಯತ್ನಿಸ

ಬೇಕೆಂದು ಮಹರ್ಷಿ ಲೌಗಾಕ್ಷಿಯು ತಿಳಿಸುತ್ತಾನೆ. ಆತ್ಮೋದ್ಧಾರ ಮಾಡಿಕೊಳ್ಳುವುದಕ್ಕೆ ಅವನು ತನ್ನನ್ನು ಭಗವತ್ ಪ್ರಾಪ್ತಿಗೆ ಯೋಗ್ಯನನ್ನಾಗಿ ಮಾಡಿಕೊಳ್ಳುವುದು ಅವಶ್ಯಕ. ಇದಕ್ಕಾಗಿ ಸಾಕಷ್ಟು ಜ್ಞಾನವನ್ನು ಪಡೆದಿರಬೇಕು. ಈ ಜ್ಞಾನವು ಅನೇಕ ಕರ್ಮಗಳನ್ನು ಮಾಡುವುದರಿಂದ, ಗೃಹಸ್ಥಾಶ್ರಮವನ್ನು ಅನುಸರಿಸುವುದರಿಂದ, ಧನವನ್ನು ತ್ಯಾಗ ಮಾಡುವುದರಿಂದ, ದಾನಾದಿ ಕರ್ಮಗಳನ್ನು ಮಾಡುವುದರಿಂದ, ತಪಸ್ಸು ಮಾಡುವುದರಿಂದ, ನೂರಾರು ಪುಣ್ಯ ಕಾರ್ಯಗಳನ್ನು ಮಾಡುವುದರಿಂದ ಬರುವುದಿಲ್ಲ. ಬದಲಾಗಿ ಚಿತ್ತ ಹಾಗೂ ಅಂತಃಕರಣಗಳನ್ನು ಯಾವಾಗಲೂ ನಿರ್ಮಲ, ಪವಿತ್ರ ಹಾಗೂ ಸಾತ್ತ್ವಿಕವಾಗಿ ಇಟ್ಟುಕೊಳ್ಳುವುದರಿಂದ ಆ ಜ್ಞಾನವು ಲಭಿಸುತ್ತದೆ. ಮನಸ್ಸನ್ನು ಸದಾಕಾಲದಲ್ಲಿಯೂ ಶುದ್ಧಿಯಾಗಿಟ್ಟುಕೊಳ್ಳಬೇಕು. ವ್ಯಕ್ತಿಯು ಶುದ್ಧ ಹೃದಯದಿಂದ, ಪರಮಪವಿತ್ರ ಬುದ್ಧಿಯಿಂದ ತನ್ನ ವರ್ಣಾಶ್ರಮ ಧರ್ಮವನ್ನು ಧರ್ಮಶಾಸ್ತ್ರಾನುಸಾರ ನಿಷ್ಕಾಮ ಭಾವದಿಂದ ಪಾಲಿಸುತ್ತಾ ಹೋದಲ್ಲಿ ಈ 'ಸಮ್ಯಕ್ ಜ್ಞಾನ'ವನ್ನು ಪಡೆಯಬಹುದು. ಇದರಿಂದ ಅವನ ಕಲ್ಯಾಣವೂ ಆಗುತ್ತದೆ.

ನ ಕರ್ಮಣಾ ನ ಪ್ರಜಯಾ ನ ಧನತ್ಯಾಗತೋಽಪಿ ವಾ |
ತಪಸಾ ಕೇವಲೇನಾಪಿ ತಥಾ ಪುಣ್ಯಶತಾದಪಿ ||
ಜ್ಞಾನಂ ನ ಜಾಯತೇ ನೃಣಾಂ ಕಿಂತು ತಚ್ಚಿತ್ತಶುದ್ಧಿತಃ |
ಸಾ ಚಿತ್ತ ಶುದ್ಧಿಸ್ತು ತಥಾ ನಿತ್ಯೈಸ್ತೈರೇವ ಕರ್ಮಭಿಃ ||270||

## ಹಿತಕರವೂ, ಶ್ರೇಯಸ್ಕರವೂ ಆದ ಕಾರ್ಯ ಮಾಡಬೇಕು

ಎಲ್ಲ ರೀತಿಗಳಲ್ಲೂ ಯಾವ ಕಾರ್ಯವು ಮಂಗಳಮಯವಾಗಿರುತ್ತದೆಯೊ ಅದೇ ಕಾರ್ಯವನ್ನು ನಿರಂತರವಾಗಿ ಮಾಡುತ್ತಿರಬೇಕು. ಎಲ್ಲ ಶಾಸ್ತ್ರಗಳಿಂದ ಅಭಿಮತ ಹೊಂದಿರುವ, ಎಲ್ಲ ರೀತಿಗಳಲ್ಲೂ ಪ್ರಶಂಸನೀಯವಾದ ಕಾರ್ಯವಿರುತ್ತದೆಯೊ ಅದೇ ಯೋಗ್ಯವಾಗಿರುತ್ತದೆ. ಯಾವ ಕಾರ್ಯವು ದೇಶ ಕಾಲಕ್ಕೆ ಅನುರೂಪವಾಗಿರುತ್ತದೆಯೋ, ವೇದವಿಹಿತವಾಗಿರುತ್ತದೆಯೊ, ಕುಲಕ್ಕೆ ಅನುಕೂಲವಾಗಿರುತ್ತದೆಯೊ, ಬಂಧುಬಾಂಧವರು ಹಾಗೂ ಶಿಷ್ಟಜನರ ಮುಖಾಂತರ ಆಚರಿಸಲ್ಪಡುತ್ತದೆಯೊ, ಅಂತಹ ಕಾರ್ಯವು ಮಾಡಲು ಯೋಗ್ಯವಾದುದಾಗಿರುತ್ತದೆ. ಶಾಸ್ತ್ರಗಳಲ್ಲಿ ನಿಂದ್ಯವಾದುದಾಗಿರುವುದನ್ನು, ಸಜ್ಜನರಿಗೆ ಸರಿಹೊಂದದ ಕೆಟ್ಟ ಕೆಲಸಗಳನ್ನು ಎಂದಿಗೂ ಮಾಡಬಾರದು. ವಿದ್ವತ್ ಜನರು

ಇಂತಹವುಗಳನ್ನು ತ್ಯಜಿಸಬೇಕಾದುದು ಅವಶ್ಯಕ.

ಹಿತಂ ಶ್ರೇಯಸ್ಕರಂ ಭೂರಿ ಕರ್ಮ ಕಾರ್ಯಂ ಮನೀಷಿಭಿಃ |
ಸತಾಮನುದ್ವೇಗ ಕರಂ ಸರ್ವಶಾಸ್ತ್ರೈಕ ಸಮ್ಮತಂ |
ಅಹೇಯಂ ಸರ್ವವಿಂದೂನಾಂ ಯತ್ ಸ್ಯಾತ್ ಕರ್ತವ್ಯಮೇವ ತತ್ ||
ದೇಶಕಾಲಂ ವೈದಿಕಂ ಚ ಸಮಯಂ ಸ್ವಕುಲಕ್ಷಯಂ |
ಸ್ವಬಂಧು ಶಿಷ್ಟಹವ್ಯಂ ಯತ್ ಕರ್ತವ್ಯಂ ನ ತು ಚೇತರತ್ ||273||

## ನಿವಾಸಯೋಗ್ಯ ಉತ್ತಮ ದೇಶ

ಸಜ್ಜನ ವ್ಯಕ್ತಿಗಳು ಇರುವ, ವೇದಜ್ಞ ವಿದ್ವಾಂಸ ಬ್ರಾಹ್ಮಣರು ಇರುವ, ಅಗ್ನಿಹೋತ್ರ ಇತ್ಯಾದಿ ಪುಣ್ಯಕಾರ್ಯಗಳ ಅನುಷ್ಠಾನ ಮಾಡುವವರು ಇರುವ ದೇಶವು (ಸ ದೇಶಃ ಪರಮ ಉತ್ತಮಃ) ವಾಸ ಮಾಡಲು ಯೋಗ್ಯವಾದುದಾಗಿದೆ. 'ಅಸದೇಕ ನಿವಾಸೇನ ಕುದೇಶತ್ವಂ ತಥಾ ಸ್ಮೃತಂ' ಎಂಬಂತೆ ಸಜ್ಜನರಲ್ಲದ, ದುಷ್ಟವ್ಯಕ್ತಿಗಳು ವಾಸ ಮಾಡುವ ದೇಶವು 'ಕುಕ್ಷೇತ್ರ' ದುಷ್ಟ ದೇಶ ಎಂದೆನ್ನಿಸಿಕೊಳ್ಳುತ್ತದೆ. ಆದುದರಿಂದ ಸತ್ಪುರುಷರು ಇರುವ ಸ್ಥಳವೇ ವಾಸ ಮಾಡಲು ಯೋಗ್ಯವಾದ ಸ್ಥಳವಾಗಿದೆ.

## ಹದಿನಾಲ್ಕು ಮತ್ತು ಹದಿನೆಂಟು ವಿದ್ಯೆಗಳು

ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವವೇದಗಳೊಂದಿಗೆ ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು ಹಾಗೂ ಜ್ಯೋತಿಷ-ಎನ್ನುವ ವೇದಾಂಗಗಳೊಂದಿಗೆ ಮೀಮಾಂಸಾದರ್ಶನ, ನ್ಯಾಯದರ್ಶನ, ಪುರಾಣ ಹಾಗೂ ಧರ್ಮ ಶಾಸ್ತ್ರಗಳು ಸೇರಿ ಹದಿನಾಲ್ಕು ವಿದ್ಯೆಗಳಾಗುತ್ತವೆ. ಇವೆಲ್ಲವುಗಳ ಮೂಲ ಧರ್ಮ ತತ್ತ್ವವಾಗಿರುತ್ತದೆ. ಇದರೊಂದಿಗೆ ಆಯುರ್ವೇದ, ಧನುರ್ವೇದ, ಗಂಧರ್ವ ವೇದ, ಅರ್ಥಶಾಸ್ತ್ರಗಳು ಸೇರಿ ಒಟ್ಟು ಹದಿನೆಂಟು ವಿದ್ಯೆಗಳಾಗುತ್ತವೆ.

ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ |
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶಃ ||
ಆಯುರ್ವೇದೊ ಧನುರ್ವೇದೋ ಗಂಧರ್ವೋ ವೇದ ಏವ ಚ |
ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶ ಸ್ಮೃತಾಃ ||275||

## ಕಲಿಯುಗದ ಮಹಿಮೆ

ಸತ್ಯಯುಗದಲ್ಲಿ ಧರ್ಮಸಿದ್ಧಿಯು ಹತ್ತು ವರ್ಷಗಳಲ್ಲಿ ಆಗುತ್ತಿತ್ತು

ಇದು ತ್ರೇತಾಯುಗದಲ್ಲಿ ಒಂದು ವರ್ಷದಲ್ಲಿ ಉಂಟಾಗುತ್ತಿತ್ತು. ಇದು ದ್ವಾಪರ ಯುಗದಲ್ಲಿ ಒಂದು ತಿಂಗಳಲ್ಲಿ ಸಿದ್ಧಿಸುವುದು ಇದೇ ಧರ್ಮಸಿದ್ಧಿಯು ಕಲಿಯುಗ ದಲ್ಲಿ ಒಂದು ದಿನದಲ್ಲಿ ಸಾಧ್ಯವಾಗುತ್ತದೆ. ಅಂದರೆ ಕಲಿಯುಗದಲ್ಲಿ ಸ್ವಲ್ಪವೇ ಧರ್ಮ ಸಾಧನೆಯು ಭಕ್ತಿಭಾವಪೂರ್ವಕವಾಗಿ ಮಾಡಿದ ಆರಾಧನೆಯಿಂದ ಸಿದ್ಧಿ ಪ್ರಾಪ್ತವಾಗುತ್ತದೆ. ಆದುದರಿಂದ ಕಲಿಯುಗದಲ್ಲಿ ಬಹಳ ಬೇಗ ಉತ್ತಮ ಪ್ರತಿಫಲ ದೊರೆಯುತ್ತದೆ.

ಯತ್ಕೃತೆ ದಶಭಿರ್ವರ್ಷೈಃ ತ್ರೇತಾಯಾಂ ಹಾಯನೇತು ||
ದ್ವಾಪರೇ ತಸ್ಯ ಮಾಸೇನ ಹ್ಯಹೋರಾತ್ರಾತ್ ಕಲೌ ಯುಗೇ |
ಧರ್ಮಸಿದ್ಧಿ ರ್ಭವೇನ್ನೃಣಾಂ ಕಲಿಃ ಸಾಧುಸ್ತತೋ ಮಹಾನ್ ||277||

ಶಿಷ್ಯನಿಗೆ ಗುರುಸೇವೆ, ಪತ್ನಿಗೆ ಪತಿಸೇವೆಯೇ ಹೊರತು ತೀರ್ಥ, ವ್ರತ ಇತ್ಯಾದಿಗಳು ಅಂತಹ ವಿಶೇಷ ಮಹತ್ವವಾದವುಗಳಲ್ಲ. ಇದೇ ರೀತಿಯಲ್ಲಿ ಪುತ್ರನಿಗೆ. ತಂದೆ–ತಾಯಿಯರ ಸೇವೆಯೇ ಮುಖ್ಯವಾದುದು. ಇದಲ್ಲದೆ ಬೇರೆ ಯಾವುದೇ ತಪಸ್ಸು, ತೀರ್ಥ ದರ್ಶನ, ವ್ರತ ಇತ್ಯಾದಿಗಳ ಅವಶ್ಯಕತೆಯೇ ಇಲ್ಲ. ಏಕೆಂದರೆ ಮಾತಾಪಿತೃಗಳು ಪುತ್ರನಿಗೆ ಭೂಮಿಯ ಮೇಲೆ ಓಡಾಡಿಕೊಂಡಿರುವ, ಪ್ರತ್ಯಕ್ಷವಾಗಿರುವ ಪರಮಾತ್ಮನಾಗಿರುವನು. ಪರಮಾತ್ಮನ ಸೇವೆಯಿಂದ ಸ್ವತಃ ಆತನೇ ಅನುಗ್ರಹಿಸುವನೊ, ಅದೇ ರೀತಿಯಲ್ಲಿ ತಂದೆ–ತಾಯಿಯರ ಸೇವೆಯಿಂದ ಸ್ವತಃ ಪರಮಾತ್ಮನೇ ಪ್ರಸನ್ನನಾಗಿ, ಅನುಗ್ರಹಿಸುವನು. ತಂದೆ–ತಾಯಿಯರ ಸೇವೆಯಿಂದ ಎಲ್ಲ ವ್ರತಗಳನ್ನು ಮಾಡಿದ ಪುಣ್ಯವು ಲಭಿಸುತ್ತದೆ. ಇದಕ್ಕೆ ಸುಕರ್ಮನ ಪಿತೃ–ಭಕ್ತಿಯೇ ಉತ್ತಮ ಉದಾಹರಣೆ.

## 14. ಪುಲಸ್ತ್ಯ ಸ್ಮೃತಿ

ಬ್ರಹ್ಮರ್ಷಿ ಪುಲಸ್ತ್ಯನು ಬ್ರಹ್ಮನ ಮಾನಸ ಪುತ್ರನು. ಈತನೇ ಪುಲಸ್ತ್ಯ ಸ್ಮೃತಿಯ ಪ್ರಣೇತನು. ಈತನು ಸಪ್ತರ್ಷಿಗಳಲ್ಲಿ ಒಬ್ಬನಾಗಿರುವುದೇ ಅಲ್ಲದೆ ಪ್ರಜಾಪತಿಗಳಲ್ಲಿ ಓರ್ವನನ್ನಾಗಿ ಪರಿಗಣಿಸಲಾಗಿದೆ. ಸೃಷ್ಟಿಯ ವಿಸ್ತಾರದಲ್ಲಿ ಈತನ ಪಾತ್ರ ಮಹತ್ತರವಾದುದು.

ಸಪ್ತರ್ಷಿ ಮಂಡಲದಲ್ಲಿದ್ದು ಪ್ರಯಾಣ ಮಾಡುತ್ತಾ ಪ್ರಪಂಚದ ಜೀವಿಗಳ ಗತಿ ವಿಧಿಗಳನ್ನು ಈತನು ಗಮನಿಸುತ್ತಿರುತ್ತಾನೆ. ತನ್ನ ತಪಸ್ಸು, ಜ್ಞಾನ

ಹಾಗೂ ದೈವೀ ಸಂಪತ್ತಿನ ಮುಖಾಂತರ ಜಗತ್ಕಲ್ಯಾಣವನ್ನು ಹರಡುವಿಕೆಯಲ್ಲಿ ತನ್ಮಯನಾಗಿರುತ್ತಾನೆ. ಈತನು ಸ್ವಾಭಾವಿಕವಾಗಿ ದಯಾಳುವಾಗಿರುವನು. ಈತನನ್ನು ಯೋಗವಿದ್ಯೆಯ ಆಚಾರ್ಯನೆಂದೂ ಪರಿಗಣಿಸಲಾಗಿದೆ. ಈತನು ಬ್ರಹ್ಮನಿಗೆ ಸಮಾನ ತೇಜಸ್ವಿಯೂ ಹೌದು. ಈತನಲ್ಲಿ ಉತ್ತಮ ಗುಣಗಳಿರುವ ಕಾರಣ ದೇವತೆಗಳು ಈತನನ್ನು ವಿಶೇಷವಾಗಿ ಪ್ರೀತಿಸುವರು. ಈತನ ಮನಸ್ಸು ಸದಾ ಧರ್ಮವನ್ನೇ ಚಿಂತಿಸುತ್ತಿರುತ್ತದೆ. ವಿಶ್ರವನ ತಂದೆಯಾಗಿರುವ ಈತನು ಕುಬೇರ ಹಾಗೂ ರಾವಣರ ಪಿತಾಮಹನೂ ಹೌದು. ತಪಸ್ಸು, ವಿದ್ಯೆ, ಬಲ, ತೇಜಸ್ಸು, ಆಧ್ಯಾತ್ಮ ಜ್ಞಾನ ಹಾಗೂ ಧರ್ಮಾಚರಣೆಗಳಲ್ಲಿ ಈತನು ಸರ್ವೋತ್ಕೃಷ್ಟನು.

ಈತನು ಪ್ರಜಾಪತಿಯಾದುದರಿಂದ ತನ್ನ ಪ್ರಜೆಗಳ ಕಲ್ಯಾಣಕ್ಕಾಗಿ ಅವರ ದೈನಿಕ ಆಚಾರ-ವಿಚಾರಗಳ ನಿಯಂತ್ರಣಕ್ಕಾಗಿ ಒಂದು ಧರ್ಮ ಸಂಹಿತೆಯನ್ನು ರಚಿಸಿ, ಅದಕ್ಕೆ 'ಪುಲಸ್ತ್ಯ ಸ್ಮೃತಿ' ಎಂಬ ಹೆಸರನ್ನು ನೀಡಿದನು. ಅದೇ ಹೆಸರಿನಿಂದ ಈ ಸ್ಮೃತಿ ಪ್ರಸಿದ್ಧಿಯನ್ನು ಪಡೆದಿದೆ.

ಬಹುಶಃ ಈ ಸ್ಮೃತಿಯು ತುಂಬಾ ದೊಡ್ಡ ಗ್ರಂಥವಾಗಿದ್ದಿರಬೇಕು. ಆದರೆ ಪ್ರಸ್ತುತ ಇದರ ರೂಪ ತುಂಬಾ ಅಲ್ಪವಾದುದಾಗಿದ್ದು, ಕೇವಲ 30 ಶ್ಲೋಕಗಳನ್ನು ಮಾತ್ರ ಹೊಂದಿದೆ ಪ್ರಾಚೀನ ನಿಬಂಧ ಗ್ರಂಥಗಳಾದ ಮದನ ಪಾರಿಜಾತ, ವಿಜ್ಞಾನೇಶ್ವರ ವಿರಚಿತ ಮಿತಾಕ್ಷರಾ ಟೀಕಾ, ಕಾಲಮಾಧವೀಯ ಹಾಗೂ ಹೇಮಾದ್ರಿಂವರುಗಳ ಅನೇಕ ರಚನೆಗಳಲ್ಲಿ ಪ್ರಮಾಣ ರೂಪವಾಗಿ ಈತನ ಶ್ಲೋಕಗಳನ್ನು ಉದ್ಧೃತಗೊಳಿಸಲಾಗಿದೆ. ಹಾಗೆ ಉದಾಹರಿಸಿದ ಶ್ಲೋಕಗಳು ಈಗಿನ ಪುಲಸ್ತ್ಯ ಸ್ಮೃತಿಯಲ್ಲಿ ಇಲ್ಲ. ಇದರಿಂದ ತಿಳಿದು ಬರುವ ವಿಚಾರವೇನೆಂದರೆ ಬಹುಶಃ ಇತ್ತೀಚಿನವರೆಗೂ ಇದರ ವಿಸ್ತೃತ ರೂಪ ಪ್ರಚಾರದಲ್ಲಿದ್ದು, ತದನಂತರದಲ್ಲಿ ಇಂದಿನ ರೂಪವನ್ನು ಪಡೆದಿರಬಹುದು ಎಂದು ನಂಬಲಾಗಿದೆ. ಉದಾಹರಣೆಗೆ ಹೇಮಾದ್ರಿಯ ಪುರುಷಾರ್ಥ ಚಿಂತಾಮಣಿಯಲ್ಲಿ ಪುಲಸ್ತ್ಯ ವಿರಚಿತ ಕೆಲವೊಂದು ಶ್ಲೋಕಗಳನ್ನು ಆತನವೆಂದು ಉದಾಹರಿಸಲಾಗಿದೆ. ಆದರೆ ಈಗ ಸಿಕ್ಕಿರುವ ಪುಲಸ್ತ್ಯ ಸ್ಮೃತಿಯಲ್ಲಿ ಅವು ಕಂಡು ಬರುವುದಿಲ್ಲ.

ಧರ್ಮೇಷು ನಿಯತಾ ಯೇ ಚ ಧರ್ಮಶಾಸ್ತ್ರಾರ್ಥ ಚಿಂತಕಾಃ |
ವೇದಶಾಸ್ತ್ರವಿದೋ ಯೇ ವೈ ತೇಷಾಂ ವಚನಮೌಷಧಂ ||
(ಹೇಮಾದ್ರಿ. ಪರಿ. ಖಂಡ. ಅ. 6)

ಅಂದರೆ ಧರ್ಮಾಚರಣೆಯಲ್ಲಿ ನಿರತರಾಗಿರುವವರು ಧರ್ಮಶಾಸ್ತ್ರಗಳ ಸೂಕ್ಷ್ಮಾರ್ಥಗಳ ಚಿಂತನೆಯಲ್ಲಿ ನಿರತರಾಗಿರುವರು. ಅಂತೆಯೇ ವೇದಶಾಸ್ತ್ರಗಳನ್ನು ತಿಳಿದಿರುವವರು ಅದರಲ್ಲಿ ತಲ್ಲೀನರಾಗಿರುತ್ತಾರೆ. ಈ ರೀತಿಯ ತತ್ತ್ವಜ್ಞಾನ ಸಂಪನ್ನರೂ, ಸದಾಚಾರ–ಧರ್ಮಪರಾಯಣರೂ ಆದ ಋಷಿ-ಮುನಿಗಳ ವಚನಗಳು ಔಷಧದ ತರಹ ಹಿತಕರವಾದುದೂ, ಕಲ್ಯಾಣಕಾರಕವಾದುದೂ ಆಗಿರುತ್ತವೆ. ಇದೇ ರೀತಿಯಲ್ಲಿ ಧರ್ಮಶಾಸ್ತ್ರಗಳಲ್ಲಿ ಋಷಿ–ಮುನಿಗಳು ಹೇಳಿರುವ ವಚನಗಳನ್ನು ಎಲ್ಲರೂ ಯಾವುದೇ ತರ್ಕ–ವಿತರ್ಕಗಳಿಗೆ ಒಳಪಡಿಸದೆ ಆಚರಣೆಯಲ್ಲಿ, ವ್ಯವಹಾರದಲ್ಲಿ ತರುವುದು ಯೋಗ್ಯವಾಗಿದೆ. ಇವು ಇಹಲೋಕ, ಪರಲೋಕಗಳೆರಡರಲ್ಲೂ ಮಂಗಳವನ್ನು ಉಂಟುಮಾಡುವವುಗಳಾಗಿವೆ. ಆದುದರಿಂದ ಶಾಸ್ತ್ರವಿಚಾರಗಳ ಬಗ್ಗೆ ಸ್ವಲ್ಪವೂ ಅನುಮಾನ ಪಡದೆ ಅವುಗಳನ್ನು ಯಥಾವತ್ತಾಗಿ, ತಪ್ಪದೆ ಪಾಲಿಸಬೇಕಾಗಿದೆ.

ಇದೇ ರೀತಿಯಲ್ಲಿ ಶ್ರಾದ್ಧ, ಪ್ರಾಯಶ್ಚಿತ್ತ, ಸದಾಚಾರ – ಇವುಗಳ ಬಗ್ಗೆಯೂ ಮಹರ್ಷಿ ಪುಲಸ್ತ್ಯನು ಅನೇಕ ಸುಂದರ ವಚನಗಳನ್ನು ರಚಿಸಿದ್ದಾನೆ. ಪುರಾಣಗಳಲ್ಲಿ ಈತನ ಅನೇಕ ಧರ್ಮಶಾಸ್ತ್ರೀಯ ಪ್ರಕರಣಗಳು ಕಂಡುಬಂದಿವೆ.

ಅನೇಕ ಋಷಿ–ಮಹರ್ಷಿಗಳು ಕುರುಕ್ಷೇತ್ರದಲ್ಲಿ ಮಹಾತ್ಮಾ ಪುಲಸ್ತ್ಯರಿಂದ ಶೃತಿ–ಸ್ಮೃತಿ ಹಾಗೂ ಆಗಮಗಳಿಂದ ಪ್ರತಿಪಾದಿತವಾದ ಧರ್ಮೋಪದೇಶಗಳನ್ನು ಆಲಿಸಿದರೆಂದೂ, ಇವೇ ಪುಲಸ್ತ್ಯನ ಹೆಸರಿನಿಂದ ಮುಂದೆ ಪ್ರಸಿದ್ಧಿಯನ್ನು ಪಡೆದವೆಂದೂ ಈ ಸ್ಮೃತಿಯ ಪ್ರಾರಂಭದಲ್ಲಿ ತಿಳಿಸಲಾಗಿದೆ –

ಕುರುಕ್ಷೇತ್ರೇ ಮಹಾತ್ಮಾನಂ ಪುಲಸ್ತ್ಯಮೃಷಯೋಽಬ್ರುವನ್ |
ತಾಂಶ್ಚಧರ್ಮಾನ್ ಪ್ರಕಾರಾಂಶ್ಚ ನೋ ವದ ಸ್ಮಾರ್ತಮಾಗಮಂ ||1||

ಮುಖ್ಯವಾಗಿ ಈ ಸ್ಮೃತಿಯಲ್ಲಿ ನಾಲ್ಕು ವರ್ಣಗಳ, ನಾಲ್ಕು ಆಶ್ರಮಗಳ ಮುಖ್ಯ ಧರ್ಮ (ಕರ್ತವ್ಯ)ಗಳನ್ನೂ, ಅವುಗಳೊಂದಿಗೆ ಸಂಕ್ಷೇಪದಲ್ಲಿ ರಾಜಧರ್ಮವನ್ನೂ ವರ್ಣಿಸಲಾಗಿದೆ. ಇದರಲ್ಲಿ ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮ ಧರ್ಮ, ನೈಮಿತ್ತಿಕ ಧರ್ಮ ಹಾಗೂ ರಾಜಧರ್ಮ – ಎನ್ನುವ

ಐದು ರೀತಿಯ ಧರ್ಮಗಳು (ಪಂಚಧಾವಸ್ಥಿತಂ ಧರ್ಮಂ ಶೃಣುಧ್ವಂ ದ್ವಿಜಸತ್ತಮಾಃ ಶ್ಲೋ. 2) ವಿಶೇಷ ಧರ್ಮಗಳೆಂದು ತಿಳಿಸಲಾಗಿದೆಯೆಂದು ಹೇಳಲಾಗಿದೆ. ಈ ಎಲ್ಲ ಧರ್ಮಗಳ ಪಾಲನೆಯನ್ನು ಮಾಡಬೇಕೆಂದು ಆಜ್ಞಾಪಿಸಲಾಗಿದೆ. ಏಕೆಂದರೆ ಸರ್ವಧರ್ಮ ಪಾಲನೆಯಲ್ಲಿ ಪರಮಶ್ರೇಯವು ಅಡಗಿದ್ದು, ಶ್ರೇಯಸ್ಕರವಾಗಿದ್ದು, ಅಭ್ಯುದಯಪ್ರಾಪ್ತಿಯು ಉಂಟಾಗುತ್ತದೆ ಎಂದು ಹೇಳಲಾಗಿದೆ.

ಉಕ್ತಃ ಪಂಚವಿಧೋ ಧರ್ಮಃ ಶ್ರೇಯೋಽಭ್ಯುದಯ ಹೇತುಕಃ ।<br>
ಪುರುಷಾಣಾಂ ಯಥಾಯೋಗಂ ಸ ಚ ಸೇವ್ಯಃ ಫಲಾರ್ಥಿನಾ ॥27॥

### ಸಂನ್ಯಾಸಧರ್ಮ

ಮಹರ್ಷಿ ಪುಲಸ್ತ್ಯನು ಸನ್ಯಾಸಧರ್ಮವನ್ನು ನಿರೂಪಿಸುತ್ತಾ 'ಪ್ರಪಂಚದಲ್ಲಿ ಏನೇನಿದೆ, ಏನೇನು ಆಗುತ್ತಿದೆ – ಇವೆಲ್ಲವೂ ಪರಮಾತ್ಮನ ಶಕ್ತಿಯಿಂದ ಆದುದು, ತನಗೆ ತಾನೇ ಆದುದು' ಎಂದು ಸನ್ಯಾಸಿಯು ತಿಳಿಯಬೇಕು ಎಂಬುದಾಗಿ ತಿಳಿಸುತ್ತಾನೆ. ಲೋಕದೃಷ್ಟಿಯಿಂದ ಮಾನವನು ಎಲ್ಲವನ್ನೂ ತಾನೇ ಮಾಡಿದ್ದಾಗ್ಯೂ, ಅವೆಲ್ಲವೂ ಜಗತ್‌ಕರ್ತನ ಕೃಪೆಯಿಂದಾದುದು ಎಂದೇ ತಿಳಿಯಬೇಕು. ತನ್ನದು, ತಾನು ಮಾಡಿದುದು ಎನ್ನುವುದರ ಪ್ರಾಮುಖ್ಯತೆಯನ್ನು ಬಿಡಬೇಕು. ಭಿಕ್ಷೆಯಿಂದ ಪಡೆದ ಶುದ್ಧರೂಪದ ಅನ್ನವನ್ನು ಜೀವನ ನಿರ್ವಹಣೆಗಾಗಿ ಉಪಯೋಗಿಸಿಕೊಳ್ಳಬೇಕು. ಯಾವುದೇ ಒಂದು ಕುಟೀರವಾಗಲಿ, ಆಶ್ರಮವಾಗಲಿ ಮಾಡಬಾರದು. ವೃಕ್ಷದ ಕೆಳಗೆ ಆತನು ವಾಸಿಸಬೇಕು. ಯಾವುದೇ ವಸ್ತುವಾಗಲಿ, ಪದಾರ್ಥವಾಗಲಿ, ಧನಸಂಪತ್ತಾಗಲಿ ಸ್ವಲ್ಪವೂ ಸ್ವೀಕರಿಸಬಾರದು, ಅವನ್ನು ಸಂಗ್ರಹಿಸಿಡಲೂಬಾರದು. ಯಾರಿಗೂ ದ್ರೋಹ ಮಾಡಬಾರದು. ಎಲ್ಲ ಜೀವಿಗಳನ್ನೂ ಸಮನಾಗಿ ಕಾಣಬೇಕು. ಎಲ್ಲವೂ ಭಗವಂತನ ಪ್ರತಿರೂಪಗಳೆಂದೇ ಪರಿಗಣಿಸಬೇಕು. ಪ್ರಿಯ–ಅಪ್ರಿಯರೊಂದಿಗೆ, ಸುಖದುಃಖಗಳಲ್ಲಿ ಸಮಾನ ಭಾವದೊಂದಿಗೆ ನಡೆದುಕೊಳ್ಳಬೇಕು. ಪ್ರತಿಕೂಲ–ಅನುಕೂಲ ಸ್ಥಿತಿಗಳಲ್ಲಿ ಯಾವುದೇ ಪರಿಸ್ಥಿತಿಯಲ್ಲಿ ವಿಕಾರವಶನಾಗಬಾರದು; ನಿರ್ವಿಕಾರ ಭಾವದಿಂದ, ಸಮಚಿತ್ತದಿಂದ ಇರಬೇಕು. ಬಾಹ್ಯ–ಆಂತರ್ಯ – ಇವೆರಡರಲ್ಲೂ ಶುದ್ಧಿಯಾಗಿರಬೇಕು. ನಿಯಮಗಳು ಹಾಗೂ ವ್ರತಗಳನ್ನು ಪಾಲಿಸುತ್ತಿರಬೇಕು. ಮನಸ್ಸಿನ ಭಾವವನ್ನು ಶುದ್ಧವಾಗಿರಿಸಿ

ಕೊಳ್ಳಬೇಕು. ಆ ಭಾವನೆಗಳು ಯಾವುದೇ ರೀತಿಯ ವಿಕಾರಕ್ಕೂ ಒಳಗಾಗ ಬಾರದು. ಎಲ್ಲ ಇಂದ್ರಿಯಗಳೂ ವಶದಲ್ಲಿದ್ದು ಧಾರಣಾ–ಧ್ಯಾನದ ಬಲದ ಮೇಲೆ ಪ್ರತಿನಿತ್ಯವೂ ಬ್ರಹ್ಮಚಿಂತನಾರೂಪ ಸಮಾಧಿಯ ಆನಂದಸಾಗರದಲ್ಲಿ ನಿಮಗ್ನನಾಗಿರಬೇಕು.

ಸರ್ವಾರಂಭಪರಿತ್ಯಾಗೋ ಭೈಕ್ಷಾನ್ನಂ ವೃಕ್ಷಮೂಲತಾ |
ನಿಷ್ಪರಿಗ್ರಹತಾದ್ರೋಹಃ ಸಮತಾ ಸರ್ವಜಂತುಷು ||19||
ಪ್ರಿಯಾಪ್ರಿಯ ಪರಿಷ್ವಂಗಃ ಸುಖದುಃಖಾವಿಕಾರಿತಾ |
ಸಬಾಹ್ಯಾಭ್ಯಂತರಾಶೌಚಂ ನಿಯಮೋ ವ್ರತಕಾರಿತಾ ||20||
ಸರ್ವೇಂದ್ರಿಯ ಸಮಾಹಾರೋ ಧಾರಣಾಧ್ಯಾನನಿತ್ಯತಾ |
ಭಾವಶುದ್ಧಿಸ್ತದೇತ್ಯೇವಂ ಪರಿವ್ರಾಜ್‌ಧರ್ಮ ಉಚ್ಯತೆ ||21||

### ಸಾಮಾನ್ಯ ಧರ್ಮ

ನಾಲ್ಕು ವರ್ಣಗಳ, ನಾಲ್ಕು ಆಶ್ರಮಗಳ ವಿಶೇಷ ಧರ್ಮವನ್ನು ವಿವರಿಸಿದ ನಂತರ ಎಲ್ಲರೂ ಪಾಲಿಸಬೇಕಾದ ವರ್ಣಾಶ್ರಮ ಧರ್ಮದ ಆವಶ್ಯಕ ಧರ್ಮಗಳನ್ನು ವಿವರಿಸಲಾಗಿದೆ. ಇವು ಸಾಮಾನ್ಯ ಧರ್ಮವೆಂದು ಕರೆಯಲಾಗಿದೆ. ಈ ಸಾಮಾನ್ಯ, ಆವಶ್ಯಕ ಧರ್ಮಗಳನ್ನು ಪಾಲಿಸದೆ, ವಿಶೇಷ ಧರ್ಮಗಳನ್ನು ಪಾಲಿಸುವಂತಿಲ್ಲ. ಅದು ವ್ಯರ್ಥವೂ ಹೌದು. ಸತ್ಯ, ಅಹಿಂಸೆ, ಬಾಹ್ಯಾಭ್ಯಂತರ ಶುದ್ಧಿ ಹಾಗೂ ಪವಿತ್ರತೆ, ದಯೆ, ಕ್ಷಮೆ ಇತ್ಯಾದಿ ಸಾಮಾನ್ಯ ಧರ್ಮಗಳನ್ನು ಬ್ರಾಹ್ಮಣರೊಡಗೂಡಿ ಎಲ್ಲ ಧರ್ಮಗಳವರೂ, ಎಲ್ಲ ಆಶ್ರಮಗಳವರೂ ಆಚರಿಸಲೇಬೇಕೆಂಬ ನಿಯಮವಿದೆ.

ಅಹಿಂಸಾ ಸತ್ಯವಾದಶ್ಚ ಸತ್ಯಂ ಶೌಚಂ ದಯಾ ಕ್ಷಮಾ |
ವರ್ಣಿನಾಂ ಲಿಂಗಿನಾಂ ಚೈವ ಸಾಮಾನ್ಯೋ ಧರ್ಮ ಉಚ್ಯತೇ ||22||

ಈ ರೀತಿಯಲ್ಲಿ ಪುಲಸ್ತ್ಯ ಸ್ಮೃತಿಯಲ್ಲಿ ಅನೇಕ ಉಪದೇಶಗಳು, ವ್ಯಾವಹಾರಿಕ ವಿಷಯಗಳನ್ನು ತಿಳಿಸಲಾಗಿದೆ.

ಈ ಕೃತಿಯು ಚಿಕ್ಕದಾದರೂ ಚೊಕ್ಕವಾದುದಾಗಿದೆ.

## 15. ಅಂಗಿರಸ ಸ್ಮೃತಿ

ಮಹರ್ಷಿ ಅಂಗಿರಸನು ಬ್ರಹ್ಮನ ಮಾನಸ ಪುತ್ರನು. ಬ್ರಹ್ಮನ ಮುಖ

ದಿಂದ ಈತನ ಸೃಷ್ಟಿಯಾಯಿತು. (ಅಂಗಿರೋ ಮುಖತೊ-ಶ್ರೀಮದ್ಭಾಗವತ 3/12/24) ವಿಸ್ತಾರ ಪ್ರಜಾಸೃಷ್ಟಿಗಾಗಿ, ಆ ಪ್ರಜೆಗಳ ಪಾಲನೆಗಾಗಿ ಈತನನ್ನು ಪ್ರಜಾಪತಿ ಎಂದೂ ಕರೆಯಲಾಯಿತು. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ವರುಣಯಜ್ಞ ಮಾಡುತ್ತಿದ್ದಾಗ ಈತ ಜನಿಸಿದನೆಂದು ಹೇಳಲಾಗುತ್ತದೆ.

ಈತನು ಕರ್ದಮ ಋಷಿಯ ಮಗಳಾದ ಶ್ರದ್ಧಾಳನ್ನು ಮದುವೆಯಾಗಿ, ದೇವಗುರು ಬೃಹಸ್ಪತಿ, ಉಚಥ್ಯ (ಉತಥ್ಯ), ಸಂವರ್ತ (ವಯಸ್ಯ) ರೆಂಬ ಪುತ್ರರನ್ನೂ; ಸಿನೀವಾಲೀ, ಕುಹೂ, ರಾಕಾ, ಅನುಮತಿ–ಎಂಬ ನಾಲ್ವರು ಪುತ್ರಿಯರನ್ನೂ ಪಡೆದನು. ಈತನು ವಸುದೆಯೆಂಬ ತರುಣಿಯನ್ನು ವಿವಾಹವಾಗಿದ್ದನೆಂದೂ ಹೇಳಲಾಗುತ್ತದೆ. ಮೇಲೆ ತಿಳಿಸಿದ ಹೆಣ್ಣುಮಕ್ಕಳೇ ಅಲ್ಲದೆ ಅರ್ಚಿಷ್ಮತೀ, ಮಹಿಷ್ಮತೀ, ಮಹಾಮತೀ ಎಂಬ ಪುತ್ರಿಯರನ್ನೂ ಈತ ಪಡೆದಿದ್ದನೆಂದು ಭಾರತವು ತಿಳಿಸುತ್ತದೆ. ಇದೇ ರೀತಿಯಲ್ಲಿ ಸ್ವಧೆ ಎಂಬ ಪತ್ನಿಯಲ್ಲಿ ಪಿತೃದೇವತೆಗಳನ್ನೂ, ಸತಿ ಎಂಬ ಪತ್ನಿಯಲ್ಲಿ ಅಥರ್ವಾಂಗೀರಸನನ್ನೂ ಪಡೆದನೆಂದು ಭಾಗವತವು ತಿಳಿಸುತ್ತದೆ.

ಮಹರ್ಷಿ ಅಂಗಿರಸನು ಅಥರ್ವ ವೇದದ ಪ್ರವರ್ತಕನಾದುದರಿಂದ ಈತನನ್ನು 'ಅಥರ್ವಾ' ಎಂದೂ ಕರೆಯಲಾಗುತ್ತದೆ. ವೇದಗಳು ಹಾಗೂ ಪುರಾಣಗಳಲ್ಲಿ ಕಲ್ಪಭೇದದ ಮುಖಾಂತರ ಈತನನ್ನು ಕುರಿತಾದ ಅನೇಕ ಆಖ್ಯಾನಗಳಿವೆ. ಈ ವಿವರಗಳು ಈತನ ತಪಸ್ಸು, ಜ್ಞಾನ, ಧ್ಯಾನ, ಸದಾಚಾರ ಹಾಗೂ ಲೋಕೋಪಕಾರದ ದರ್ಶನವನ್ನು ನೀಡುತ್ತವೆ. ಇಂತಹ ಕಥಾನಕಗಳಲ್ಲಿ ಒಂದು ಈ ರೀತಿ ಇದೆ –

ಒಮ್ಮೆ ಅಗ್ನಿದೇವನಿಗೆ ದೇವತೆಗಳ ಮೇಲೆ ಸಿಟ್ಟು ಬಂದಿತು. ಯಾರಿಗೂ ಕಾಣದಂತೆ ಎಲ್ಲಿಯೋ ಹೋಗಿ ಅವಿತುಕೊಂಡ. ಆಗ ಬ್ರಹ್ಮನು ಕಣ್ಮರೆಯಾದ ಅಗ್ನಿಯ ಕಾರ್ಯವನ್ನು ನಿರ್ವಹಿಸುವಂತೆ ಅವನ ಸ್ಥಾನದಲ್ಲಿ ಅಂಗಿರಸನನ್ನು ನಿಯಮಿಸಿದ. ಕೆಲವು ಯುಗಗಳು ಕಳೆದುವು. ಅಗ್ನಿಯ ಸಿಟ್ಟು ಕಡಿಮೆಯಾಯಿತು. ಹಿಂತಿರುಗಿ ಬಂದ ಅವನಿಗೆ ತನ್ನ ಅಧಿಕಾರ ತಪ್ಪಿಹೋಗಿದೆಯೆಂದು ಚಿಂತಾಕ್ರಾಂತನಾದ. ಇದನ್ನು ಗಮನಿಸಿದ ಅಂಗಿರಸನು ಅಗ್ನಿಯ ಮೇಲೆ ಕನಿಕರಗೊಂಡು, ಅವನ ಅಧಿಕಾರವನ್ನು ಅವನಿಗೇ ಹಿಂತಿರುಗಿಸಿ, ತಾನು ತನ್ನ

ಆಶ್ರಮಕ್ಕೆ ಹಿಂತಿರುಗಿದ.

ಸಪ್ತರ್ಷಿಗಳಲ್ಲಿ ಓರ್ವನೆಂದು ಈತನನ್ನು ಪರಿಗಣಿಸಲಾಗಿದೆ. ಈತನು ಎಲ್ಲ ಜೀವಿಗಳಿಗೂ ಭಕ್ತಿ, ಜ್ಞಾನ, ಸದಾಚಾರಗಳ ಬಗ್ಗೆ ಉಪದೇಶ ನೀಡಿ, ಅವರನ್ನೆಲ್ಲ ಸನ್ಮಾರ್ಗದ ಕಡೆ ಕರೆದೊಯ್ಯಲು ಪ್ರೇರೇಪಿಸಿ, ಅವರಿಗೆ ಭಗವತ್ಪ್ರಾಪ್ತಿ ಒದಗುವಂತೆ ಮಾಡಿದ್ದಾನೆ. ಈತನ ತಪಸ್ಸಿನ ಮುಖ್ಯ ಗುರಿಯೂ ಇದೇ ಆಗಿದೆ. ಎಲ್ಲ ಜೀವಿಗಳನ್ನೂ ಪರಮ ಕರುಣೆಯಿಂದ ಈತನು ಕಾಣುತ್ತಿದ್ದನು. ಈತನ ಅನೇಕ ಉಪದೇಶಗಳು ವೇದ, ಉಪನಿಷತ್ತು ಹಾಗೂ ಪುರಾಣಗಳಲ್ಲಿ ಕಂಡುಬರುತ್ತವೆ. ಮುಂಡಕೋಪನಿಷತ್ತಿನ ಪ್ರವರ್ತಕನೂ ಈತನೇ ಎಂದು ಹೇಳಲಾಗುತ್ತದೆ. ಅದರಲ್ಲಿ ಈತನು ಮಹಾಶಾಲ ಶೌನಕನಿಗೆ ಬ್ರಹ್ಮತತ್ತ್ವದ ಉಪದೇಶ ನೀಡಿದನೆಂದು ಇದರಲ್ಲಿ ಹೇಳಲಾಗಿದೆ. ಪರಾತ್ಪರ ಪುರುಷೋತ್ತಮನನ್ನು ತತ್ತ್ವದಿಂದ ಜ್ಞಾನ ಪಡೆಯುವುದರ ಮುಖಾಂತರ ಜೀವಾತ್ಮದ ಬಂಧನದ ಬಿಡುಗಡೆಯಾಗುವುದೆಂದು ತಿಳಿಸಲಾಗಿದೆ. ಸಂಶಯ ಗಳೇನಿದ್ದರೂ ಸಂಪೂರ್ಣವಾಗಿ ಪರಿಹಾರವಾಗುತ್ತದೆ. ಎಲ್ಲ ರೀತಿಯ ಶುಭಾ ಶುಭ ಕರ್ಮಗಳೂ ನಷ್ಟವಾಗುತ್ತವೆ – ಎಂದು ಅದರಲ್ಲಿ ತಿಳಿಸಲಾಗಿದೆ –

ಭಿದ್ಯತೆ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ |
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ||
(ಮುಂಡಕ–2/2/8)

ಯಾವಾಗಲೂ ಸತ್ಯಕ್ಕೇ ವಿಜಯ, ಸುಳ್ಳಿಗಲ್ಲ – ಎಂದು ಸತ್ಯಧರ್ಮದ ಮಹಿಮೆಯ ಬಗ್ಗೆ ಅಂಗಿರಸನು ಹೇಳುತ್ತಾನೆ. ಕಾರಣ-ಪರಮಾತ್ಮನು ಸತ್ಯ ಸ್ವರೂಪನು. ಆದುದರಿಂದ ಆತನನ್ನು ಪಡೆಯಲು ಪ್ರತಿ ವ್ಯಕ್ತಿಯೂ ಸತ್ಯರೂಪೀ ಧರ್ಮಪಥದ ಆಶ್ರಯವನ್ನು ಸ್ವೀಕರಿಸಬೇಕು. ಪರಮಾತ್ಮನನ್ನು ತಲುಪುವ ಈ ದೇವಯಾನ ಮಾರ್ಗವು ಸತ್ಯಕ್ಕಿಂತಲೂ ಹೆಚ್ಚು ಪ್ರತಿಷ್ಠಿತ ವಾದುದಾಗಿದೆ. ಅಸತ್ಯಮಾರ್ಗದಲ್ಲಿ ಮುಂದುವರೆಯುವವನು ಪರಮಾತ್ಮ ಪ್ರಾಪ್ತಿಯನ್ನು ಪಡೆಯಲಾರನು. ಸುಳ್ಳು ಮಾತನಾಡುವುದು, ಡಂಭಾಚಾರ, ಕಪಟಗಳು ಅಧಃ ಪತನಕ್ಕೆ ದಾರಿ ಮಾಡಿಕೊಡುತ್ತವೆ –

ಸತ್ಯಮೇವ ಜಯತಿ ನಾನೃತಂ
ಸತ್ಯೇನ ಪಂಥಾ ವಿತತೋ ದೇವಯಾನಃ || ಮುಂಡಕ–3/1/6 ||

ಇಂತಹ ಅನೇಕ ಮಾರ್ಮಿಕ ಉಪದೇಶಗಳು ಅಂಗಿರಸನ ವಾಣಿಯಲ್ಲಿ ತುಂಬಿವೆ. ಇವುಗಳಲ್ಲಿ ಕೆಲವನ್ನಾದರೂ ಆಚರಣೆಗೆ ತಂದಲ್ಲಿ ವ್ಯಕ್ತಿಯ ಪರಮ ಕಲ್ಯಾಣವು ತಪ್ಪದೆ ಆಗುತ್ತದೆ.

ಮಹರ್ಷಿ ಅಂಗಿರಸನ ಹೆಸರಿನಲ್ಲಿ ಅನೇಕ ಸ್ಮೃತಿಗಳಿವೆ. ಇವೆಲ್ಲವೂ ಮಾನವನು ಧರ್ಮಾಚರಣೆ ಮಾಡುವುದರ ಬಗ್ಗೆ ಹೆಚ್ಚು ಒತ್ತು ನೀಡುತ್ತವೆ. ಅಸತ್ಯಮಾರ್ಗವನ್ನು ತ್ಯಜಿಸುವಂತೆ ಸೂಚಿಸಲಾಗಿದೆ. ಇದೇ ಸುಂದರತಮ ಶಿಕ್ಷಣವೆಂದು ಈತ ತಿಳಿಸುತ್ತಾನೆ. ಆತನ ಕೆಲವು ಸ್ಮೃತಿಗಳ ಸಂಕ್ಷಿಪ್ತ ರೂಪವನ್ನಿಲ್ಲಿ ನೀಡಲಾಗಿದೆ –

## (ಅ) ಅಂಗಿರಾಸ್ಮೃತಿ (1)

ಈ ಸ್ಮೃತಿ ತುಂಬಾ ಸಣ್ಣ ಕೃತಿ. ಇದರಲ್ಲಿ 72 ಶ್ಲೋಕಗಳಿವೆ. ಮುಖ್ಯವಾಗಿ ಇದರಲ್ಲಿ ಗೃಹಸ್ಥಾಶ್ರಮ ಧರ್ಮದ ವರ್ಣನೆ ಇದೆ. ಇದರೊಂದಿಗೆ ಖಾದ್ಯಾಖಾದ್ಯ ಶುದ್ಧಿ, ದ್ರವ್ಯಶುದ್ಧಿ, ಪ್ರಾಯಶ್ಚಿತ್ತ, ಅನ್ನದ ಶುದ್ಧಿ, ಗೋವಧದ ಪ್ರಾಯಶ್ಚಿತ್ತ ಇತ್ಯಾದಿಗಳ ವರ್ಣನೆಗಳಿವೆ.

### ನೀಲೀ ಬಣ್ಣದ ವಸ್ತ್ರದ ನಿಷೇಧ

ನೀಲೀ ಬಣ್ಣದ ಬಟ್ಟೆಗಳನ್ನು ಧರಿಸಬಾರದೆಂದು ಅಂಗಿರಸನು ತಿಳಿಸುತ್ತಾನೆ. ಕಾರಣ ನೀಲೀ ವರ್ಣದ ವಸ್ತ್ರ ಧರಿಸಿ ಮಾಡಿದ ಸ್ನಾನ, ದಾನ, ಜಪ, ಹೋಮ, ಸ್ವಾಧ್ಯಾಯ – ಪಿತೃತರ್ಪಣ ಹಾಗೂ ಪಂಚ ಮಹಾಯಜ್ಞ – ಇವೆಲ್ಲವೂ ವ್ಯರ್ಥವಾಗುತ್ತದೆ.

ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ |
ವೃಥಾ ತಸ್ಯ ಮಹಾಯಜ್ಞಾ ನೀಲೀ ವಸ್ತ್ರಸ್ಯ ಧಾರಣಾತ್ ||14||

ಒಂದು ವೇಳೆ ಅಜ್ಞಾನದಿಂದ ನೀಲೀ ವರ್ಣದ ವಸ್ತ್ರವನ್ನು ಧರಿಸಿದಲ್ಲಿ ಒಂದು ಅಹೋರಾತ್ರಿ ಉಪವಾಸ ಮಾಡಿ, ಪಂಚಗವ್ಯವನ್ನು ಸೇವಿಸಿ, ತನ್ನನ್ನು ತಾನು ಶುದ್ಧಿ ಮಾಡಿಕೊಳ್ಳಬೇಕು –

ಅಹೋರಾತ್ರೋಷಿತೋ ಭೂತ್ವಾ ಪಂಚಗವ್ಯೇನ ಶುಧ್ಯತಿ ||

### ಗೋವಧೆಗೆ ಪ್ರಾಯಶ್ಚಿತ್ತ

ಗೋವಧೆಯು ಮಹಾನ್ ಪಾಪಕರವಾದ ಕಾರ್ಯ ಎಂದು ಮಹರ್ಷಿ ಅಂಗಿರಸನು ಹೇಳುತ್ತಾನೆ. ಮೇವು ಹಾಕುವಾಗ, ನೀರು ಕುಡಿಸುವಾಗ,

ಔಷಧಿ ಅಥವಾ ಚಿಕಿತ್ಸೆ ಸಮಯದಲ್ಲಿ ಶುದ್ಧ ಭಾವದಿಂದ ನೋಡಿಕೊಂಡಾಗ್ಯೂ, ಒಂದುವೇಳೆ ದೈವಯೋಗದಿಂದ ಆ ಹಸುವು ಮರಣಿಸಿದಲ್ಲಿ, ಸಾಕುವವನಿಗೆ ಇದು ಸಂಬಂಧವಿಲ್ಲ ಎಂದುಕೊಂಡರೂ, ಇದಕ್ಕಾಗಿ ಗೋಹತ್ಯೆಯ ಪಾಪದಲ್ಲಿ ನಾಲ್ಕನೇ ಒಂದು ಭಾಗದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದು ಅವಶ್ಯಕ.

ಹಸುವಿಗೆ ಅದಕ್ಕೆ ಶೃಂಗಾರ ಮಾಡುವುದಕ್ಕಾಗಿ ಒಡವೆಯಾಗಿ ಘಂಟೆಯನ್ನು ತೊಡಿಸಿದಲ್ಲಿ, ಅಂತಹ ಘಂಟೆಯಿಂದ ಆ ಹಸುವು ಮರಣಿಸಿದಲ್ಲಿ, ಗೋಹತ್ಯೆಯ ಪ್ರಾಯಶ್ಚಿತ್ತದ ಅರ್ಧ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

ಭೋಜನೇ ಚೈವ ಪಾನೇ ಚ ತಥಾ ಔಷಧ ಭೇಷಜ್ಯೈಃ |
ಏವಂ ಮ್ರಿಯಂತೇ ಯಾ ಗಾವಃ ಪಾದಮೇಕಂ ಸಮಾಚರೇತ್ ||
ಘಂಟಾಭರಣದೋಷೇಣ ಯತ್ರ ಗೌರ್ವಿನಿಪೀಡ್ಯತೇ |
ಚರೇದರ್ಧವ್ರತಂ ತೇಷಾಂ ಭೂಷಣಾರ್ಥಂ ಹಿ ತತ್ಕೃತಮ್ ||25–26||

ಒಂದು ವೇಳೆ ದೊಣ್ಣೆಯ ಪೆಟ್ಟಿನಿಂದ ಹಸುವು ಮೂರ್ಛೆಗೊಂಡಲ್ಲಿ, ಅಥವಾ ಪ್ರಜ್ಞೆ ತಪ್ಪಿ ಕೆಳಗೆ ಬಿದ್ದಲ್ಲಿ ಪ್ರಾಯಶ್ಚಿತ್ತ ರೂಪದಲ್ಲಿ ಎಂಟು ಸಾವಿರ ಗಾಯಿತ್ರಿ ಜಪ ಮಾಡಬೇಕು. ಇದರಿಂದ ಸಂಬಂಧಪಟ್ಟ ವ್ಯಕ್ತಿಯು ಶುದ್ಧನಾಗುವನು.

ಮೂರ್ಛಿತೆ ಪತಿತೆ ಚಾಪಿ ಗವಿಯಷ್ಟಿ ಪ್ರಹಾರಿತೆ |
ಗಾಯತ್ರ್ಯಷ್ಟ ಸಹಸ್ರಂ ತು ಪ್ರಾಯಶ್ಚಿತ್ತ ವಿಶೋಧನಂ ||34||

## ಅಸಮರ್ಥ ಬಾಲಕನಿಗೆ ಪಾಪವಿಲ್ಲ

ಗೊತ್ತೊ, ಗೊತ್ತಿಲದೆಯೊ ಪಾಪ ಮಾಡಿದ ಬಾಲಕನಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದರಲ್ಲಿ ಅಸಮರ್ಥನಾದಾಗ ಅವನ ಪರವಾಗಿ ಬಾಲಕನ ತಂದೆ ಅಥವಾ ಗುರು ಪ್ರಾಯಶ್ಚಿತ್ತವನ್ನು ಅನುಷ್ಠಾನ ಮಾಡಿದಲ್ಲಿ ಬಾಲಕನ ಪಾಪ ತೊಳೆದುಹೋಗುತ್ತದೆ –

ಅಸಮರ್ಥಸ್ಯ ಬಾಲಸ್ಯ ಪಿತಾ ವಾ ಯದಿ ವಾ ಗುರುಃ |
ಯಮುದ್ದಿಶ್ಯ ಚರೇದ್ಧರ್ಮಂ ಪಾಪಂ ತಸ್ಯ ನ ವಿದ್ಯತೇ ||32||

## ಮಾಡಿದ ಪಾಪ ಅವನ ಅನ್ನದಲ್ಲಿರುತ್ತದೆ

ಮಾನವನು ಮಾಡುವ ದುಷ್ಕೃತ್ಯಗಳ ಹಾಗೂ ನಿಂದನೀಯ ಕರ್ಮಗಳ ಪಾಪವು ಅವನ ಅನ್ನದಲ್ಲಿ ಆಶ್ರಯ ಪಡೆದಿರುತ್ತದೆ. ಆದುದರಿಂದ ಅಂತಹವನಿಂದ

ಪಡೆದ ಅನ್ನದ ಮುಖಾಂತರ, ಆ ಪಾಪವನ್ನೂ ಸ್ವೀಕರಿಸದಂತಾಗುತ್ತದೆ. ಇದರಿಂದ ಅನ್ನ ಸ್ವೀಕರಿಸಿದವನೂ ಕೂಡ ಪಾಪಿಯಾಗುತ್ತಾನೆ. ಆದುದರಿಂದ ಶುದ್ಧರೂಪದ, ನ್ಯಾಯೋಪಾರ್ಜಿತ ಹಾಗೂ ಸದಾಚಾರಿಯ ಅನ್ನವನ್ನೇ ಸ್ವೀಕರಿಸಬೇಕು.

ದುಷ್ಕೃತಂ ಹಿ ಮನುಷ್ಯಾಣಾಂ ಅನ್ನಮಾಶ್ರಿತ್ಯ ತಿಷ್ಠತಿ |
ಯೋ ಯಸ್ಯಾನ್ನಂ ಸಮಶ್ನಾತಿ ಸ ತಸ್ಯಾಶ್ನಾತಿ ಕಿಲ್ಬಿಷಂ ||58||

### ಪಾದುಕೆಗಳನ್ನು ಎಲ್ಲಿ ಧರಿಸಬಾರದು ?

ಯಜ್ಞಶಾಲೆ, ಗೋ ಶಾಲೆ, ಪೂಜಾಮಂದಿರ, ದೇವಾಲಯ ಹಾಗೂ ಬ್ರಾಹ್ಮಣರ ಸನ್ನಿಧಿಯಲ್ಲಿ, ಭೋಜನ ಮಾಡುವಾಗ, ಜಪ ಮಾಡುವ ಸನ್ನಿವೇಶ ಇಂತಹ ಸಂಧರ್ಭ ಸನ್ನಿವೇಶಗಳಲ್ಲಿ ಪಾದುಕೆಗಳನ್ನು ಧರಿಸಬಾರದು –

ಅಗ್ನ್ಯಾಗಾರೇ ಗವಾಂ ಗೋಷ್ಠೇ ದೇವ ಬ್ರಾಹ್ಮಣ ಸನ್ನಿಧೌ |
ಆಹಾರೇ ಜಪಕಾಲೇ ಚ ಪಾದುಕಾನಾಂ ವಿಸರ್ಜನಂ ||61||

### ಪತಿವ್ರತೆಯಲ್ಲದವಳ ಅನ್ನ ಸ್ವೀಕರಿಸಬಾರದು

ಪತಿಯ ಆಜ್ಞೆ (ಮಾತು)ಗಳನ್ನು ಉಲ್ಲಂಘಿಸುವವಳನ್ನು ಅವಳ ಅಧರ್ಮ ನಡವಳಿಕೆಗಳಿಂದಾಗಿ, ಅಂತಹವಳನ್ನು 'ಕಾಮಚಾರಿಣೀ' ಎಂದು ಕರೆಯ ಲಾಗುತ್ತದೆ. ತನ್ನ ಇಷ್ಟ ಬಂದಂತೆ ನಡೆಯುವವಳು ಎಂದರ್ಥ. ಇಂತಹ ಸ್ತ್ರೀಯ ಅನ್ನ ಅಥವಾ ಊಟವನ್ನು ಸ್ವೀಕರಿಸಬಾರದು –

ಭರ್ತೃಶಾಸನ ಮುಲ್ಲಂಘ್ಯ ಯಾ ಚ ಸ್ತ್ರೀ ವಿಪ್ರವರ್ತತೇ |
ತಸ್ಯಾಶ್ಚೈವ ನ ಭೋಕ್ತವ್ಯಂ ವಿಜ್ಞೇಯಾ ಕಾಮಚಾರಿಣೀ ||69||

### (ಆ) ಅಂಗಿರಾಸ್ಮೃತಿ (2)

ಈ ಎರಡನೇ ಪುಸ್ತಕದ ಹೆಸರೂ ಕೂಡ 'ಅಂಗಿರಾಸ್ಮೃತಿ' ಎಂದೇ ಇದೆ. ಇದರಲ್ಲಿ 168 ಶ್ಲೋಕಗಳಿವೆ. ಇದರಲ್ಲಿ ಹಾಗೂ ಮೊದಲನೆ ಅಂಗಿರಾಸ್ಮೃತಿ ಯಲ್ಲಿ ಕೆಲವು ಶ್ಲೋಕಗಳು ಸಮಾನವಾಗಿವೆ.

ಧರ್ಮಜಿಜ್ಞಾಸೆಯನ್ನು ಇರಿಸಿಕೊಂಡಿರುವ ಭಾರದ್ವಾಜಾದಿ ಮಹರ್ಷಿಗಳ ಪ್ರಶ್ನೆಗಳಿಗೆ ಮಹರ್ಷಿ ಅಂಗಿರಸನು ನೀಡಿದ ಉಪದೇಶಗಳ ಸಂಗ್ರಹವೇ ಈ ಎರಡನೇ ಅಂಗಿರಸಸ್ಮೃತಿ (ಧರ್ಮಶಾಸ್ತ್ರ) ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದರಲ್ಲಿ ಮುಖ್ಯವಾಗಿ ನಾಲ್ಕು ಆಶ್ರಮಗಳ, ನಾಲ್ಕು ವರ್ಣಗಳ ಧರ್ಮ

ನಿಯಮಗಳ ವರ್ಣನೆಗಳು, ಪ್ರಾಯಶ್ಚಿತ್ತ-ವಿಧಿಗಳು ಹಾಗೂ ಪ್ರಾಯಶ್ಚಿತ್ತ ವ್ರತಗಳ ವರ್ಣನೆ ಇದೆ.

### ಪಾಪಕ್ಕೆ ತಕ್ಕ ಉತ್ತಮ ಪ್ರಾಯಶ್ಚಿತ್ತ

ಎಲ್ಲ ರೀತಿಯ ಪಾಪಗಳಿಗೂ ಒಂದಲ್ಲ ಒಂದು ಉಪಾಯವನ್ನು ಅವುಗಳ ನಿವೃತ್ತಿಗಾಗಿ ಅಂಗಿರಸನು ಸೂಚಿಸಿದ್ದಾನೆ. ಪಾಪ ಮಾಡಿದವನು ವೇದಜ್ಞ ಬ್ರಾಹ್ಮಣನಾದರೆ, 'ಮತ್ತೆಂದೂ ಇಂತಹ ಪಾಪವನ್ನೆಸಗುವುದಿಲ್ಲ' ಎಂದು ಪ್ರತಿಜ್ಞೆ ಮಾಡಿ, ಮತ್ತೆ ಮತ್ತೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು, ಮಾಡಿದ ಪಾಪಕ್ಕೆ ಪ್ರತಿಯಾಗಿ ಮನಸ್ಸಿನಲ್ಲಿ ದುಃಖಗೊಳ್ಳುತ್ತಾ, ಶೋಕಗೊಂಡು, ಉತ್ತಮ ಕೆಲಸ ಕಾರ್ಯಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದರಿಂದ ಮಾಡಿದ ಪಾಪವು ನಾಶವಾಗುತ್ತದೆ.

ಕೃತ್ವಾ ಪಾಪಂ ಹಿ ಶೋಚನ್ ವೈ ಬ್ರಾಹ್ಮಣೋ ವೇದಪಾರಗಃ |
ಸ್ಮೃತ್ಯರ್ಥಂ ವಿಂದತಿ ಯೋऽಪಿ ತಸ್ಮಾತ್ ಪಾಪಾನ್ ಪ್ರಮುಚ್ಯತೇ ||
ನೈವ ಕುರ್ಯಾಂ ಪುನರಿತಿ ನಿವೃತ್ತ್ಯಾತ್ಮಾ ಭವೇದ್ಯದಿ ||99-100||

### ದೈವ ಬಲದಿಂದ ಪಾಪಕರ್ಮಗಳಲ್ಲಿ ಪ್ರವೃತ್ತರಾಗದಿರಿ

ವ್ಯಕ್ತಿಯು 'ದೇವತೆಗಳ ವರಪ್ರಸಾದ', ಶಾಸ್ತ್ರಗಳ ಬಲ', 'ನಂತರದಲ್ಲಿ ಇದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವೆನು' ಎಂಬ ಭಾವನೆಗಳಿಂದ ಪಾಪಕರ್ಮ ಗಳನ್ನು ಮಾಡಬಾರದು. ಹೀಗೆ ಮಾಡುವುದರಿಂದ ಅವನು ಕರ್ಮ ದೇವಾಪರಾಧಕ್ಕೆ, ಶಾಸ್ತ್ರಾಪರಾಧ, ಪ್ರಾಯಶ್ಚಿತ್ತ ಸಂಬಂಧದ ಅಪರಾಧಕ್ಕೆ ಒಳಗಾಗುತ್ತಾನೆ. ನಿಂದ್ಯ ಕರ್ಮವನ್ನು ಜ್ಞಾನಾಜ್ಞಾನದಿಂದಲಾಗಲಿ, ಆಕಸ್ಮಿಕವಾಗಲಿ ಮಾಡಿದರೂ ಅದು ಪಾಪ ಕರ್ಮವೇ ! ಅದು ಅವನನ್ನು ತಪ್ಪದೆ ಸುಡುತ್ತದೆ.

ನ ದೈವಬಲಮಾಶ್ರಿತ್ಯ ಪಾಪಕರ್ಮರತಿರ್ಭವೇತ್ |
ಅಜ್ಞಾನದ್ವಾ ಪ್ರಮಾದಾದ್ವಾ ದಹತೇ ಕರ್ಮ ನೇತರೇತ್ ||102||

### ಮರಣಾಶೌಚ, ಜನನಾಶೌಚಗಳ ದೋಷ ವಿಚಾರ

ಮನೆಯಲ್ಲಿ ಯಾರದಾದರೂ ಸಾವು ಉಂಟಾದಾಗ, ಆ ಮನೆಯಲ್ಲಿರುವ ವರಿಗೆ ಶವ-ಜನ್ಯ ಸೂತಕ ಉಂಟಾಗುತ್ತದೆ. ಆ ಸಾವಿನಿಂದ ಉಂಟಾದ ಅಶೌಚದ ನಡುವೆ ಜನನಾಶೌಚ ಉಂಟಾದಲ್ಲಿ ಮರಣಾಶೌಚ ಮುಖ್ಯ್ವಾಯ

ದೊಂದಿಗೆ ಜನನಾಜನ್ಯ ಸೂತಕದ ಶುದ್ಧಿಯೂ ಉಂಟಾಗುತ್ತದೆ. ಮರಣಾ ಶೌಚದ ನಂತರದಲ್ಲಿ ಜನನಾಶೌಚ ಇರುವುದಿಲ್ಲ. ಆದರೆ ಜನನಾಶೌಚದಿಂದ ಮರಣಾಶೌಚದ ಶುದ್ಧಿ ಉಂಟಾಗುವುದಿಲ್ಲ –

ಶವಸೂತೇ ಸಮುತ್ಪನ್ನೇ ಸೂತಕಂ ತು ಭವೇದ್ಯದಿ |
ಶವೇನ ಶುದ್ಧ್ಯತೇ ಸೂತಿನಂ ಸೂತ್ಯಾ ಶುದ್ಧ್ಯತೇ ಶವಮ್ ||164||

## (ಇ) ಅಂಗಿರಾಸ್ಮೃತಿ (3)

ಮೇಲಿನ ಎರಡೂ ಸ್ಮೃತಿಗಳೂ ಅಲ್ಲದೆ, ಇನ್ನೆರಡು ಬೃಹತ್ ಸ್ಮೃತಿಗಳೂ ದೊರೆತಿವೆ. ಇವೆರಡೂ ಸೇರಿ ಅಂಗಿರಾಸ್ಮೃತಿ ಎಂದಾಗಿದೆ. ಇವುಗಳಲ್ಲಿ ಮೊದಲನೆಯದು ' ಪೂರ್ವಾಂಗೀರಸ ಸ್ಮೃತಿ ' ಎಂದೂ, ಎರಡನೆಯದನ್ನು 'ಉತ್ತರಾಂಗೀರಸ ಸ್ಮೃತಿ' ಎಂದೂ ಕರೆಯಲಾಗುತ್ತದೆ.

### 1. ಪೂರ್ವಾಂಗೀರಸ ಸ್ಮೃತಿ

ಈ ಸ್ಮೃತಿಯಲ್ಲಿ 1132 ಶ್ಲೋಕಗಳಿವೆ. ಈ ಸ್ಮೃತಿಯಲ್ಲಿ ಮುಖ್ಯವಾಗಿ ಧರ್ಮದ ಸ್ವರೂಪ, ವ್ಯಾಹೃತಿಗಳ ಮಹಿಮೆ, ಔರಸ ಹಾಗೂ ದತ್ತಕ ಪುತ್ರರ ಅಧಿಕಾರಗಳ ಮೀಮಾಂಸೆ, ಶ್ರಾದ್ಧದಲ್ಲಿ ಗ್ರಾಹ್ಯಾಗ್ರಾಹ್ಯ ವಸ್ತುಗಳು, ಶ್ರಾದ್ಧಗಳಲ್ಲಿನ ಭೇದಗಳು, ಶ್ರಾದ್ಧಕ್ಕೆ ಯೋಗ್ಯರಾದ ಬ್ರಾಹ್ಮಣರು, ಶ್ರಾದ್ಧದೇಶ, ಶ್ರಾದ್ಧ ಪ್ರಯೋಗ, ಸಪಿಂಡೀಕರಣ ವಿಧಾನ, ಶ್ರಾದ್ಧದಲ್ಲಿ ಸೌತೇಕಾಯಿ, ಹಲಸಿನಕಾಯಿಯ ಶ್ರೇಷ್ಠತೆ, ಮಹಾಲಯ ಅಮಾವಾಸ್ಯೆಯ ಶ್ರಾದ್ಧ, ಶ್ರಾದ್ಧದೇವ (ವಿಶ್ವೇದೇವ) ಹಾಗೂ ಅಶೌಚ ಪ್ರಕ್ರಿಯೆ ಇತ್ಯಾದಿಗಳನ್ನು ಸವಿಸ್ತಾರವಾಗಿ ವರ್ಣಿಸಲಾಗಿದೆ.

### ಅನಾಥನ ಸಂಸ್ಕಾರದಿಂದ ಪುಣ್ಯಪ್ರಾಪ್ತಿ

ಯಾವಾನಾದರೂ ಅನಾಥನು ಮೃತ ಹೊಂದಿದಲ್ಲಿ, ಅಂತಹ ಅನಾಥ ಪ್ರೇತವನ್ನು ದಹನ ಸಂಸ್ಕಾರ ಮಾಡಿದಲ್ಲಿ, ಹಾಗೆ ಮಾಡಿದಂತಹ ವ್ಯಕ್ತಿಗೆ ಮಹಾನ್ ಪುಣ್ಯವು ಲಭಿಸುತ್ತದೆ. ಇದರಿಂದ ಅನಾಥ ಪ್ರೇತದ ಉದ್ಧಾರವೂ ಆಗುತ್ತದೆ. ಅಂತಿಮ ಸಂಸ್ಕಾರಗಳನ್ನು ನೆರವೇರಿಸಿದವನಿಗೆ ಅಶ್ವಮೇಧ ಯಜ್ಞದ ಫಲವು ಪ್ರಾಪ್ತವಾಗುತ್ತದೆ –

ಅನಾಥಪ್ರೇತ ಸಂಸ್ಕಾರಾತ್ ಅಶ್ವಮೇಧಫಲಂ ಲಭೇತ್ ||141||

## ವೇದಪಠನದಿಂದ ಪಾಪಗಳ ನಿವೃತ್ತಿ

ವೇದಗಳು ಸಾಕ್ಷಾತ್ ನಾರಾಯಣ ಸ್ವರೂಪವು. ಅವು ಅಪಾರ ಜ್ಞಾನ ಭಂಡಾರದ ನಿಧಿಗಳು. ಇಂತಹ ವೇದಗಳನ್ನು ಪಠಿಸುವವನು ಸಕಲ ಪಾಪ ಗಳಿಂದ ಮುಕ್ತನಾಗುವನು. ಇದರಲ್ಲಿ ಯಾವುದೇ ಅನುಮಾನವೂ ಇಲ್ಲ.

ತಾದೃಶಸ್ಯಾಸ್ಯ ವೇದಸ್ಯ ಪಠನಾತ್ ಸರ್ವಕಿಲ್ಬಿಷೈಃ ।
ಸದ್ಯ ಏವ ವಿಮುಕ್ತಃ ಸ್ಯಾತ್ ಪಾತಕೀ ನಾತ್ರ ಸಂಶಯಃ ||

## ದೇವತೆಗಳಿಗೆ ನೈವೇದ್ಯದ ಅರ್ಪಣೆ

ದೇವತೆಗಳಿಗಾಗಿ ನೈವೇದ್ಯವನ್ನು ಸಿದ್ಧಪಡಿಸುವುದಕ್ಕಾಗಿ ಅಡಿಗೆಯನ್ನು ಮಾಡಲಾಗುವುದು. ಯಾವ ಪಾತ್ರೆಯಲ್ಲಿ ಅಡಿಗೆ ಮಾಡಿದೆಯೊ, ಅದೇ ಪಾತ್ರೆಯಲ್ಲಿ ನೈವೇದ್ಯ ಮಾಡಬಾರದು. ಬೇರೆ ಪಾತ್ರೆಯಲ್ಲಿ ಆ ಅಡಿಗೆಯನ್ನು ಇರಿಸಿ, ಶುದ್ಧ ರೀತಿಯಲ್ಲಿ ಪವಿತ್ರತಾಪೂರ್ವಕವಾಗಿ ಶ್ರದ್ಧಾಭಕ್ತಿಗಳಿಂದ ನಿವೇದನ ಮಾಡಬೇಕು. ಅರ್ಪಿಸುವ ಅಡಿಗೆಯು ಅಸಹ್ಯವಾಗಿದ್ದಲ್ಲಿ ಹೆಚ್ಚು ಬಿಸಿ, ಹೆಚ್ಚು ತಣ್ಣಗೆ ಇದ್ದಲ್ಲಿ, ಅಥವಾ ಅಡಿಗೆ ಮಾಡಿದ ಪಾತ್ರೆಯಲ್ಲೇ ಮೋಹವಶದಿಂದ ನೈವೇದ್ಯ ಮಾಡಿದಲ್ಲಿ, ಹಾಗೆ ಮಾಡಿದಂತಹ ವ್ಯಕ್ತಿಯು ನರಕವನ್ನು ಸೇರುವನು.

ಅಸಹ್ಯೋಽಷ್ಣಂ ಮಹೋಽಷ್ಣಂ ವಾ ಪಕ್ವಪಾತ್ರಗಮೇವ ವಾ ||
ಯೋ ನಿವೇದಯತೇ ಮೋಹಾದ್ದೇವಾಯ ನರಕೇ ಭವೇತ್
||241-242||

## ಆತ್ಮಕಲ್ಯಾಣದ ಬಗ್ಗೆ ಸದಾ ಚಿಂತಿಸಬೇಕು

ಮಾನವ ಶರೀರವು ನಾಶವಾಗುವಂತಹುದು ಹಾಗೂ ಕ್ಷಣಭಂಗುರ ವಾದುದು. ಜೀವಿಗಳ ಮರಣ ಯಾವಾಗ ಎಂಬುದು ಯಾರಿಗೂ ಗೊತ್ತಿಲ್ಲ. ಯಾವ ಕ್ಷಣದಲ್ಲಾದರೂ ಮೃತ್ಯುವು ವ್ಯಕ್ತಿಯನ್ನು ಅಪಹರಿಸಬಹುದು. ಮುಂದಿನ ಕ್ಷಣ ಅವನಿಗೆ ಏನಾಗುತ್ತದೆ ಎಂಬುದು ಅವನಿಗೇ ಗೊತ್ತಿರುವುದಿಲ್ಲ. ಆದುದರಿಂದ ಮಾನವನು ತನ್ನ ಆತ್ಮಕಲ್ಯಾಣದ ಬಗ್ಗೆ ಸದಾ ಯೋಚಿಸುತ್ತಿರ ಬೇಕು. ಯಾವ ರೀತಿಯಲ್ಲಿ ನಿಜವಾದ ಕಲ್ಯಾಣವಾಗುತ್ತದೆ ಎಂಬುದನ್ನು ಅರಿತು, ಮಾನವನು ಅದರ ಸಾಧನೆಯಲ್ಲಿ ಸದಾ ತೊಡಗಿರಬೇಕು.

ಜಲಬುದ್ ಬುದಸಂಕಾಶಂ ಮರ್ತ್ಯತ್ವಂ ಕಥಿತಂ ಬುಧೈಃ |

ನ ಹಿ ಪ್ರಮಾಣಂ ಜಂತೂನಾಮುತ್ತರಕ್ಷಣ ಜೀವನೇ ||
ತಸ್ಮಾದಾತ್ಮಹಿತಂ ನಿತ್ಯಂ ಚಿಂತಯನ್ನೇವ ತಚ್ಚರೇತ್ ||315-316||

## 2. ಉತ್ತರಾಂಗೀರಸ ಸ್ಮೃತಿ

ಮೂರನೇ ಅಂಗೀರಸ ಸ್ಮೃತಿಯು ಉತ್ತರಾರ್ಧ ಭಾಗವಾಗಿರುವ ಇದರಲ್ಲಿ 12 ಅಧ್ಯಾಯಗಳಿದ್ದು, 175 ಶ್ಲೋಕಗಳಿವೆ. ಈ ಸ್ಮೃತಿಯಲ್ಲಿರುವಂತೆ ಚಿಕ್ಕ ಚಿಕ್ಕ ಅಧ್ಯಾಯಗಳು ಪೂರ್ವಾಂಗಿರಸದಲ್ಲಿ ಇಲ್ಲ.

### ಧರ್ಮಶಾಸ್ತ್ರಗಳ ಪ್ರಾಮಾಣಿಕತೆ

ದಿವ್ಯಜ್ಞಾನ, ತಪಸ್ಸು, ಸದಾಚಾರ ಸಂಪನ್ನ ಋಷಿಗಳ ಮುಖಾಂತರ ಹಿಂದೆ ಧರ್ಮಾಚರಣೆಗಾಗಿ ಯಾವ ಆಚಾರ ಸಂಹಿತೆ ರೂಪಗೊಂಡಿದೆಯೊ ಅದೇ ಧರ್ಮಶಾಸ್ತ್ರದ ದಿಗ್ದರ್ಶನವಾಗಿದೆ. ಸರ್ವರಿಗೂ ಇದೇ ಧರ್ಮಶಾಸ್ತ್ರವಾಗಿದ್ದು, ಧರ್ಮ–ಕರ್ಮ ನಿರ್ಣಯದಲ್ಲಿ ಪ್ರಮಾಣಗಳಾಗಿವೆ – ಎಂದು ಈ ಸ್ಮೃತಿಯ ಪ್ರಾರಂಭದಲ್ಲೆ ತಿಳಿಸಲಾಗಿದೆ. ಇದಕ್ಕೆ ಅನುರೂಪವಾದ ಆಚಾರ–ವಿಚಾರಗಳ ಹಾಗೂ ಆಹಾರ–ವಿಹಾರಗಳನ್ನು ನಿಯಂತ್ರಿಸಬೇಕು. ಅಂತಹ ಮಹಾತ್ಮರು ತಿಳಿಸಿರುವ ವಚನಗಳನ್ನು ಅತಿಕ್ರಮಣ ಮಾಡಬಾರದು. ಧರ್ಮಶಾಸ್ತ್ರಗಳಲ್ಲಿ ವಿವರಿಸಿರುವ ವಿಚಾರಗಳೇ ಅಲ್ಲದೆ ಬೇರೆ ಕೆಲವು 'ಧರ್ಮ ಮರ್ಯಾದೆ'ಗಳನ್ನು ಕೆಲವು ಬುದ್ಧಿವಂತ ವಿದ್ವಾಂಸರು ತಿಳಿಸಿರಬಹುದು. ಆದರೆ ಅವರು ತಿಳಿಸಿರುವ ಮರ್ಯಾದಾ ವಿಷಯಗಳು ಹಾಗೂ ಕರ್ಮಗಳು ಅವರ ಸ್ವಂತ ಅಭಿಪ್ರಾಯಗಳಿಗೆ ಅನುಗುಣವಾಗಿರುವುದರ ಕಾರಣ, ವಿಧಿ–ವಿಧಾನಗಳಿಂದ ಭಿನ್ನವಾಗಿರುವುದರ ಕಾರಣ ಮಕ್ಕಳಾಟದಂತೆ ನಿರರ್ಥಕವಾದುದು. ಆದುದರಿಂದ ಧರ್ಮ ಕರ್ಮದ ನಿರ್ಣಯದಲ್ಲಿ ಧರ್ಮಶಾಸ್ತ್ರಗಳ ತೀರ್ಮಾನವೇ ಸರ್ವಮಾನ್ಯವಾದುದು, ಅಂತಿಮವಾದುದು. ಬುದ್ಧಿವಂತ ವ್ಯಕ್ತಿಗಳ ಅಭಿಮತಕ್ಕೆ ಯಾವುದೇ ಬೆಲೆಯಿಲ್ಲ.

ಯತ್ಪೂರ್ವಮೃಷಿಭಿಃ ಪ್ರೋಕ್ತಂ ಧರ್ಮಶಾಸ್ತ್ರಮನುತ್ತಮಂ |
ತತ್ಪ್ರಮಾಣಂ ತು ಸರ್ವೇಷಾಂ ಲೋಕಧರ್ಮಾನುವರ್ಣನಂ || 8 ||
ನ ಹಿ ತೇಷಾಮತಿಕ್ರಮ್ಯ ವಚನಾನಿ ಮಹಾತ್ಮನಾಂ |
ಪ್ರಜಾನ್ಯೈರಪಿ ವಿದ್ವದ್ಭಿಃ ಶಕ್ಯಮನ್ಯತ್ ಪ್ರಭಾಷಿತುಂ ||1-10||

ಸ್ವಾಭಿಪ್ರಾಯಕೃತಂ ಕರ್ಮಂ ವಿಧಿವಿಜ್ಞಾನವರ್ಜಿತಂ ।
ಕ್ರೀಡಾಕರ್ಮೇವ ಬಾಲಾನಾಂ ತತ್ಸರ್ವಂ ಸ್ಯಾನ್ನಿರರ್ಥಕಂ ||1-10||

### ಮಾಡಿದ ಪಾಪವನ್ನು ಬಚ್ಚಿಡಬಾರದು

ವ್ಯಕ್ತಿಯು ಯಾವುದಾದರೂ ಪಾಪವನ್ನು ಮಾಡಿದ್ದಲ್ಲಿ, ಅದನ್ನು ಅವನು ಬಚ್ಚಿಡಬಾರದು. ಹಾಗೇನಾದರೂ ಬಚ್ಚಿಟ್ಟರೆ ಆ ಪಾಪವು ಬೆಳೆಯುತ್ತಾ ಹೋಗುತ್ತದೆ. ಆ ಪಾಪವು ಚಿಕ್ಕದಾಗಿರಲಿ, ದೊಡ್ಡದಾಗಿರಲಿ, ಅದನ್ನು ನಮ್ರತೆಯಿಂದ ಧರ್ಮಸೂಕ್ಷ್ಮತತ್ತ್ವಗಳನ್ನು ಅರಿತಿರುವ ಧರ್ಮ ಪರಿಷತ್ತಿನಲ್ಲಿ ಒಪ್ಪಿಕೊಳ್ಳುವುದು ಒಳ್ಳೆಯದು. ಧರ್ಮಜ್ಞರಿಗೆ ಪ್ರತಿಯೊಂದು ಪಾಪಕ್ಕೂ ಮಾಡಬೇಕಾದ ವೈದ್ಯವೇನೆಂಬುದು ತಿಳಿದಿರುತ್ತದೆ. ಆದುದರಿಂದ ಆ ಧರ್ಮಜ್ಞರು ಯಾವ ಯಾವ ಉಪಾಯಗಳಿಂದ ಆ ಪಾಪಗಳನ್ನೂ ದೂರ ಮಾಡಬಹುದು ಎಂಬುದುನ್ನು ತಿಳಿದಿದ್ದು, ಪಾಪ ಮಾಡಿದವನಿಗೆ ಉಪದೇಶ ಉಪಾಯಗಳ ಚಿಕಿತ್ಸೆಯನ್ನು ನೀಡುವರು.

ಕೃತ್ವಾ ಪಾಪಂ ನ ಗೂಹೇತ್ ಗೂಹ್ಯಮಾನಂ ತು ವರ್ಧತೇ ।
ಸ್ವಲ್ಪಂ ವಾಥ ಪ್ರಭೂತಂ ವಾ ಧರ್ಮವಿದ್ಭ್ಯೋ ನಿವೇದಯೇತ್ || 2-4 ||

ತೇಹಿ ಪಾಪ ಕೃತಾಂ ವೈದ್ಯಾಂ ಬೋದ್ಧಾರಶ್ಚೈವ ಪಾಪ್ಮನಾಂ ।
ದುಃಖಸ್ಯೈವ ಯಥಾ ವೈದ್ಯಾ ಸಿದ್ಧಿಮಂತೋ ರುಜಾಯತಾಂ ||2-5||

### ತಪ್ಪೊಪ್ಪಿಗೆಯಿಂದ ಪಾಪ ಮುಕ್ತಿ

ಸತ್ಯದ ಮರ್ಯಾದೆಯಲ್ಲಿ ಸ್ಥಿರವಾಗಿರುವುದರಿಂದ ಹಾಗೂ ಸತ್ಯ ಮಾರ್ಗದ ಆಶ್ರಯ ಪಡೆಯುವುದರಿಂದ ರಾಜನಾದವನೂ ಕೂಡ ಪ್ರತಿಷ್ಠಿತ ಸ್ಥಾನವನ್ನು ಪಡೆಯುತ್ತಾನೆ. ಸತ್ಯದ ನಿಯಮಗಳನ್ನು ಪಾಲಿಸುವುದರಿಂದ ಸೂರ್ಯನು ಪ್ರಕಾಶಿಸುವನು. ಮೂರು ಲೋಕಗಳು ಕ್ಷೇಮವಾಗಿರುತ್ತವೆ. ಈ ರೀತಿ ಎಲ್ಲವೂ ಸತ್ಯದಲ್ಲಿಯೇ ಪ್ರತಿಷ್ಠಿತವಾಗಿರುತ್ತದೆ. ಅದೇ ಮಾನವನಿಗೆ ಪರಮಗತಿಯೂ ಹೌದು. ಸತ್ಯವನ್ನು ಅನುಸರಿಸುವ ವ್ಯಕ್ತಿಯು ಸದಾ ಸುಖವನ್ನು ಪಡೆಯುವನು. ಅಸತ್ಯದ ಆಶ್ರಯವನ್ನು ಪಡೆಯುವವನು, ಕಷ್ಟ ನಷ್ಟಗಳಿಗೆ ಗುರಿಯಾಗುವನು. ಮಾಡಿದ ಪಾಪಗಳನ್ನು ಬಚ್ಚಿಟ್ಟು, ಸುಳ್ಳು ಹೇಳುತ್ತಾ ಇರುವವನು ಎಂದೆಂದಿಗೂ ಶುದ್ಧಿವ್ಯಕ್ತಿಯಾಗುವುದಿಲ್ಲ-

ಯದಿ ಚೇದ್ವಕ್ಷ್ಯತೇ ಸತ್ಯಂ ನಿಯತಂ ಪ್ರಾಪ್ಸ್ಯತೇ ಸುಖಂ |
ಯದ್‌ಗೃಹೀತೋ ಹ್ಯಸತ್ಯೇನ ನ ಚ ಶುಧ್ಯೇತ ಕರ್ಹಿಚಿತ್ || 3–3 ||

ಶುದ್ಧ ಮನಸ್ಯನಾಗಿರುವವನು ಆದಿ, ಮಧ್ಯ, ಅಂತ್ಯ–ಎಲ್ಲ ಕಾಲಗಳಲ್ಲೂ ಸತ್ಯವನ್ನೇ ಹೇಳಬೇಕು, ಸುಳ್ಳನ್ನು ಹೇಳಲೇಬಾರದು.

ಪಾಪ ಮಾಡಿದ ವ್ಯಕ್ತಿಯು ತಾನು ಮಾಡಿದ ಪಾಪವನ್ನು ಧರ್ಮ ಪರಿಷತ್‌ನಲ್ಲಿ ಇದ್ದುದನ್ನು ಇದ್ದ ಹಾಗೆ ಹೇಳಿ ಬಿಟ್ಟರೆ, ಅವರು ಯೋಚನೆ ಮಾಡಿ, ಆ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ನಿರ್ಣಯಿಸುವರು –

ಶೃಣುಷ್ವ ಭೋ ಇದಂ ವಿಪ್ರಯತ್ತ ಆದಿಶ್ಯತೇ ವ್ರತಂ |
ತತ್ತದ್ಯತ್ನೇನ ಕರ್ತವ್ಯಮನ್ಯಥಾ ತೇ ವೃಥಾ ಭವೇತ್ || 3–10 ||
ಯದಾ ಚ ತೇ ಭವೇಚ್ಚೀರ್ಣಂ ತದಾ ಶುದ್ಧಿಪ್ರಕಾಶನಂ || 3–11 ||

ಹೇ ವಿಪ್ರನೆ ! ಆಲಿಸು ! ಈ ಧರ್ಮಸಭೆಯು ಮುಖಾಂತರ ನಿರ್ಣಯಿಸಿರುವ ಪ್ರಾಯಶ್ಚಿತ್ತವನ್ನು ಸರಿಯಾದ ರೀತಿಯಲ್ಲಿ ಪ್ರಯತ್ನಪೂರ್ವಕವಾಗಿ ಪಾಲಿಸು. ನಿನ್ನ ಪ್ರಾಯಶ್ಚಿತ್ತ ವ್ರತವು ಪೂರ್ಣಗೊಂಡಾಗ, ಪಾಪಗಳಿಂದ ನೀನು ಮುಕ್ತನಾಗಿ, ಶುದ್ಧನಾಗುವೆ. ಇದಕ್ಕೆ ವ್ಯತಿರೇಕವಾಗಿ ನೀನು ನಡೆದುಕೊಂಡಿದ್ದೇ ಆದರೆ, ನೀನು ಮಾಡಿದುದೆಲ್ಲವೂ ವ್ಯರ್ಥವಾಗುತ್ತದೆ.

### ಪಾಯಶ್ಚಿತ್ತದ ನಂತರ ಪಾಪವೆಲ್ಲಿಹೋಗುತ್ತದೆ ?

ಪ್ರಾಯಶ್ಚಿತ್ತದ ನಂತರ ಪಾಪಿಯಲ್ಲಿನ ಪಾಪವು ಎಲ್ಲಿಗೆ ಹೋಗುತ್ತದೆ ? ಯಾರ ಆಶ್ರಯ ಪಡೆಯುತ್ತದೆ ? — ಎನ್ನುವುದಕ್ಕೆ ಈ ಸ್ಮೃತಿಯು ಉತ್ತರ ನೀಡುತ್ತದೆ. ಮಾಡುವ ಕರ್ತನಿಗಾಗಲಿ, ಧರ್ಮ ಪರಿಷತ್‌ನ ಸದಸ್ಯರಿಗಾಗಲಿ ಈ ಪಾಪವು ಸೋಕುವುದಿಲ್ಲ. ವಾಯು ಮತ್ತು ಸೂರ್ಯನ ಕಿರಣಗಳಲ್ಲಿ ಯಾವ ರೀತಿ ನೀರು ವಿಲೀನವಾಗುತ್ತದೆಯೊ, ಅದೇ ರೀತಿ ಪಾಪವೂ ಕೂಡ ಅನಂತದಲ್ಲಿ ಲೀನವಾಗುತ್ತದೆ.

ನೈವ ಗಚ್ಛತಿ ಕರ್ತಾರಂ ನೈವ ಗಚ್ಛತಿ ಪಾರ್ಷದಂ ।
ಮಾರುತಾರ್ಕಾಂಶುಸಂಯೋಗಾಜ್ಜಲವತ್ ಸಂಪ್ರಶೀರ್ಯತೇ ||6–10||

### ಸೂಕ್ತ ಪ್ರಾಯಶ್ಚಿತ್ತ ಹೇಳದಾಗ

ಪಾಪ ಮಾಡಿರುವವನು ಪ್ರಾಯಶ್ಚಿತ್ತದ ಬಗ್ಗೆ ಕೇಳಲು ಬರುತ್ತಾನೆ ಎಂದಿಟ್ಟುಕೊಳ್ಳೋಣ. ಆಗ ಪ್ರಾಯಶ್ಚಿತ್ತ ಹೇಳುವವನಿಗೆ ಏನೂ ಗೊತ್ತಿಲ್ಲ

ದಿದ್ದಾಗ ಏನಾಗುತ್ತದೆ ? ಪ್ರಾಯಶ್ಚಿತ್ತದ ಪರಿಯನ್ನು ಹೇಳುವವನು ಏನೂ ತಿಳಿಯದೆ, ಧರ್ಮಶಾಸ್ತ್ರದ ಆಶ್ರಯವನ್ನು ಪಡೆಯದೆ, ಅಥವಾ ಗೊತ್ತಿದ್ದರೂ ಸರಿಯಾದ ರೀತಿಯಲ್ಲಿ ಪ್ರಾಯಶ್ಚಿತ್ತದ ಬಗ್ಗೆ ಹೇಳದೆ, ಬೇರೇನೊ ಹೇಳಿದರೆ, ಆಗ ಪಾಪ ಮಾಡಿದವನ ನೂರರಷ್ಟು ಪಾಪ ತಪ್ಪುದಾಂಗೆ ಎಳೆದವನಿಗೆ ಸೇರುತ್ತದೆ –

ಯತ್ತು ದತ್ತಮಜಾನದ್ಭಿಃ ಪ್ರಾಯಶ್ಚಿತ್ತಂ ಸಮಾಗತೈಃ ।
ತತ್ಪಾಪಂ ಶತಧಾ ಭೂತ್ವಾ ದಾತೃನೇವೋಪ ತಿಷ್ಠತಿ ||6–15||

ಬ್ರಾಹ್ಮಣ ಮಹಿಮೆ

ಈ ಸ್ಮೃತಿಯ ಕಡೆಯ ಅಧ್ಯಾಯದಲ್ಲಿ ಬ್ರಾಹ್ಮಣರ ಮಹಿಮೆಯನ್ನು ವಿಶೇಷತಃ ನಿರೂಪಿಸಲಾಗಿದೆ. ಬ್ರಾಹ್ಮಣರನ್ನು ದೇವತೆಗಳು ಹಾಗೂ ಪಿತೃಗಳಿಗಿಂತಲೂ ಶ್ರೇಷ್ಠರೆಂದು ನಂಬಲಾಗಿದೆ. ಏಕೆಂದರೆ ಬ್ರಾಹ್ಮಣರು ಪ್ರಸನ್ನರಾದರೆ ದೇವತೆಗಳು ಹಾಗೂ ಪಿತೃಗಳೂ ಕೂಡ ಪ್ರಸನ್ನರಾಗುವರು. ಎಲ್ಲ ದೇವತೆಗಳೂ ಬ್ರಾಹ್ಮಣರಲ್ಲಿ ಉಪವಿಷ್ಟರಾಗಿರುವರು. ಬ್ರಾಹ್ಮಣರ ಚರಣಧೂಳಿ ಪರಮಪವಿತ್ರವಾದುದು.

ಸಮಸ್ತ ಸಂಪತ್ಸಮವಾಪ್ತಿಹೇತವಃ
ಸಮುತ್ಥಿತಾಪತ್ಕುಲಧೂಮಕೇತವಃ ।
ಅಪಾರ ಸಂಸಾರ ಸಮುದ್ರಸೇತವಃ
ಪುನಂತು ಮಾಂ ಬ್ರಾಹ್ಮಣ ಪಾದಪಾಂಸವಃ || 12–16 ||

*** *** ***

## 16. ಸಂವರ್ತ ಸ್ಮೃತಿ

ಸಂವರ್ತನು ಅಂಗಿರಸನ ಮಗ, ಬೃಹಸ್ಪತಿ, ಉಚಥ್ಯರ ಸಹೋದರ. ಯೋಗ, ಜ್ಞಾನ, ತಪಸ್ಸು, ವೈರಾಗ್ಯ ಹಾಗೂ ಅಧ್ಯಾತ್ಮಿಕಗಳ ಶಕ್ತಿ ಸಂಪನ್ನನೂ, ಅಧ್ಯಾತ್ಮವೇತ್ತರಲ್ಲೆ ಶ್ರೇಷ್ಠ ಮಹರ್ಷಿಯೂ ಆಗಿದ್ದನು. ಈತನ ಜೀವನ ಚರಿತ್ರೆಯು ವೇದ, ಇತಿಹಾಸ, ಪುರಾಣಗಳು ಹಾಗೂ ಮಹಾಭಾರತಾದಿಗಳಲ್ಲಿ ಬಹಳ ವಿಸ್ತೃತ ರೀತಿಯಲ್ಲಿ ವರ್ಣಿಸಲ್ಪಟ್ಟಿದೆ. ಈತನು ಶಿವಭಕ್ತನೂ, ಗಾಯಿತ್ರಿಯ ಮಹಾನ್ ಉಪಾಸಕನೂ, ತನ್ನ ಭಕ್ತರ ಪರನು ಉಪಾಸಕನೊ ಆಗಿದ್ದನು. ಮಂತ್ರದ್ರಷ್ಟಾರ ಮಹರ್ಷಿ ವಾಮದೇವ ಹಾಗೂ

ಇತರೇ ಋಷಿಗಳ ಗುರುವೂ ಆಗಿದ್ದನು. ವಾಮದೇವ, ಮಾರ್ಕಂಡೇಯ ಇತ್ಯಾದಿ ಋಷಿಗಳಿಗೆ ನೀಡಿದ ಉಪದೇಶಗಳೇ 'ಸಂವರ್ತ ಸ್ಮೃತಿ' ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ.

ಆತ್ಮವಿದ್ಯೆಯಲ್ಲಿ ಸದಾ ತಲ್ಲೀನನಾಗಿರುತ್ತಿದ್ದ ಈತನು ಅಂತರ್ಮುಖಿ ವೃತ್ತಿ ಸಂಪನ್ನ ಮಹಾಯೋಗಿಯೂ ಆಗಿದ್ದನು. ಆದುದರಿಂದ ಈತನಿಗೆ ಬಾಹ್ಯ ಜಗತ್ತಿನ ಸಂಪರ್ಕ ತುಂಬಾ ಕಡಿಮೆ ಇತ್ತು. ಈತನಲ್ಲಿ ಅದ್ಭುತ ಮಂತ್ರಶಕ್ತಿ ಇತ್ತು. ಈತನು ಅವಧೂತ ವೇಷದಲ್ಲಿ ಗುಪ್ತ ರೀತಿಯಲ್ಲಿ ಎಲ್ಲೆಡೆ ಸಂಚರಿಸುತ್ತಾ ಧರ್ಮ ಪ್ರಚಾರ ಮಾಡುತ್ತಿದ್ದನು. ಭಗವಾನ್ ವಿಶ್ವನಾಥನ ನಗರವಾದ ಕಾಶಿಯು ಈತನಿಗೆ ಅತ್ಯಂತ ಪ್ರಿಯವಾಗಿತ್ತು. ಪ್ರತಿನಿತ್ಯ ಪ್ರಚ್ಛನ್ನ ವೇಷದಲ್ಲಿ ನಗರ ಪ್ರವೇಶ ಮಾಡಿ ಭಗವಾನ್ ವಿಶ್ವನಾಥನ ದರ್ಶನ ಮಾಡುತ್ತಿದ್ದನು.

ಮರುತ್ತನು ಸೂರ್ಯವಂಶದ ಅದಿಕ್ಷಿತ ರಾಜನ ಮಗ. ಈತನು ಮಹಾ ಪರಾಕ್ರಮಿಯೂ, ಬಲಾಢ್ಯನೂ ಆಗಿದ್ದುದರಿಂದ ಈತನು 'ಮರುತ್ತ' ಎಂಬ ಹೆಸರಿನಿಂದ ಪ್ರಸಿದ್ಧನಾದ.

ಈ ಮರುತ್ತನು ಇಂದ್ರನಿಗಿಂತಲೂ ಪರಾಕ್ರಮಿಯೂ, ಶ್ರೀಮಂತನೂ ಎನಿಸಿದ್ದ. ಇವನು ಒಮ್ಮೆ ಯಾಗ ಮಾಡಬೇಕೆಂದುಕೊಂಡು, ಬೃಹಸ್ಪತಿಯನ್ನು ಋತ್ವಿಜನನ್ನಾಗಿ ಕರೆದ. ಮಾನವರು ಮಾಡುವ ಯಜ್ಞಕ್ಕೆ ಬರುವುದಿಲ್ಲವೆಂದು ತಿಳಿಸಿ, ಯಜ್ಞ ನಡೆಯುವಿಕೆಗೇ ಅಡ್ಡಬಂದ ಬಳಿಕ ನಾರದನ ಸಲಹೆಯಂತೆ ಬೃಹಸ್ಪತಿಯ ತಮ್ಮನಾದ ಸುವರ್ತನನ್ನು ಕರೆದು ತಂದು ಯಜ್ಞ ಮಾಡತೊಡಗಿದ. ಇದನ್ನು ಗಮನಿಸಿದ ಇಂದ್ರನು ಯಜ್ಞಕ್ಕೆ ವಿಘ್ನಗಳನ್ನು ತಂದೊಡ್ಡಿದ. ಆದರೆ ಸಂವರ್ತನ ಮಂತ್ರಬಲದ ಮುಂದೆ ಅವನ ಸಾಹಸ ಸಾಗಲಿಲ್ಲ. ಕಡೆಗೆ ಇಂದ್ರಾದಿಗಳು ಪ್ರತ್ಯಕ್ಷರಾಗಿ ಆಹುತಿಗಳನ್ನು ಸ್ವೀಕರಿಸಿದರು. ಮರುತ್ತುಗಳು ಎಲ್ಲರಿಗೂ ಊಟವನ್ನು ಬಡಿಸಿದರು; ವಿಶ್ವೇದೇವತೆಗಳು ಸಭಾಸದರಾಗಿದ್ದರು. ಈ ಯಜ್ಞದಲ್ಲಿ ಬ್ರಾಹ್ಮಣರಿಗೆ ಹಂಚಿಕೊಟ್ಟು ಉಳಿದ ಹಣವನ್ನು ಹಿಮವತ್ಪ್ರಾಂತ್ಯದಲ್ಲಿ ಹೂತಿಟ್ಟ. ಈ ಸಂದರ್ಭದಲ್ಲಿ ತನ್ನನ್ನು ಕೊಲ್ಲಬಂದ ಇಂದ್ರನ ತೋಳನ್ನು ಸಂವರ್ತನು ಸ್ತಂಭನ ಮಾಡಿದ್ದ. ವ್ಯಾಸನ ಸೂಚನೆ

ಯಂತೆ ಯುಧಿಷ್ಠಿರನು ಈ ಹಣವನ್ನು ಪಡೆದು, ತನ್ನ ಅಶ್ವಮೇಧಯಾಗಕ್ಕೆ ಉಪಯೋಗಿಸಿಕೊಂಡ.

ಪರಶಿವನ ಆರಾಧನೆಯಿಂದ ಈತನಲ್ಲಿ ಅಪಾರ ಆತ್ಮಶಕ್ತಿ ಸಂಗ್ರಹಿತ ವಾಗಿತ್ತು. ಈತನ ಲೋಕ ವ್ಯವಹಾರವೂ ಕೂಡ ಜಗತ್ ಕಲ್ಯಾಣಕ್ಕೇ ಮೀಸಲಾಗಿತ್ತು. ಅಧ್ಯಾತ್ಮ ವಿದ್ಯೆಯಲ್ಲಿ ಪಾರಂಗತನಾಗಿದ್ದ ಈತನ ಉಪದೇಶ ಗಳು ರೋಚಕವೂ, ದಿವ್ಯವಾದುದೂ ಆಗಿದ್ದುವು. ಈತನ ಸ್ಮೃತಿಯು 227 ಶ್ಲೋಕಗಳಿಂದ ಕೂಡಿದ್ದು ಸರ್ವರಿಗೂ ಉಪಾದೇಯವಾಗಿದೆ.

ಈ ಸ್ಮೃತಿಯನ್ನು ಐದು ಭಾಗಗಳಾಗಿ ವಿಭಾಗಿಸಬಹುದು – ನಾಲ್ಕು ವರ್ಣಾಶ್ರಮ ಧರ್ಮದ ವಿವರಣೆಗೂ, ಐದನೆಯದರಲ್ಲಿ ಪ್ರಾಯಶ್ಚಿತ್ತ ವಿಧಾನದ ವರ್ಣನೆಯೂ ಇದೆ.

## ಗಾಯಿತ್ರೀ ಮಹಿಮೆ

ಈತನ ಸ್ಮೃತಿಯು ಹೆಚ್ಚಾಗಿ ಗಾಯಿತ್ರಿಯ ಮಹಿಮೆಯನ್ನು ವರ್ಣಿಸು ತ್ತದೆ. ನಿತ್ಯವೂ ಗಾಯಿತ್ರಿ ಜಪದಲ್ಲಿ ಹೆಚ್ಚು ಸಮಯವನ್ನು ಕಳೆಯುತ್ತಿದ್ದ ಈತನು ಎಲ್ಲ ಸಿದ್ಧಿಗಳ ಮೂಲ ಗಾಯಿತ್ರಿ ಉಪಾಸನೆಯೇ ಎಂದು ನಂಬಿದ್ದನು. ಇದರಂತೆ ಈತನ ಸ್ಮೃತಿಯ ಪ್ರಕರಣಗಳ ಮಧ್ಯೆಮಧ್ಯೆ ಗಾಯಿತ್ರಿ ಉಪಾಸನೆಯ ಬಗ್ಗೆ ಹೆಚ್ಚು ಒತ್ತು ನೀಡಿದ್ದಾನೆ. ಕಲಿಧರ್ಮದ ಮಹಿಮೆಯ ಬಗ್ಗೆಯೂ ಈತನು ತಿಳಿಸಿದ್ದಾನೆ. ಪಾತಕ–ಮಹಾಪಾತಕ–ಉಪಪಾತಕಗಳ ಪ್ರಾಯಶ್ಚಿತ್ತ ವಿಧಾನಗಳನ್ನು ಸಂಕ್ಷೇಪದಲ್ಲಿ ವರ್ಣಿಸಿದ್ದಾನೆ. ಮಾಘ, ಕಾರ್ತೀಕ ಮಾಸಗಳ ಪೌರ್ಣಮಿ ತಿಥಿಗಳಂದು ಸತ್ಪಾತ್ರ ಬ್ರಾಹ್ಮಣರಿಗೆ ಎಳ್ಳು, ಚಿನ್ನ, ವಸ್ತ್ರ ಹಾಗೂ ಅನ್ನಗಳನ್ನು ಶ್ರದ್ಧಾಪೂರ್ವಕವಾಗಿ ದಾನ ಮಾಡುವುದ ರಿಂದ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

ಮಾಘಮಾಸೇ ತು ಸಂಪ್ರಾಪ್ತೇ ಪೌರ್ಣಮಾಸ್ಯಾಮುಪೋಹಿತಃ ।
ಬ್ರಾಹ್ಮಣೇಭ್ಯಸ್ತಿಲಾನ್ ದತ್ವಾ ಸರ್ವಪಾಪೈಃ ಪ್ರಮುಚ್ಯತೇ ||203||
ಉಪವಾಸೀ ನರೋ ಭೂತ್ವಾ ಪೌರ್ಣಮಾಸ್ಯಾಂ ಚ ಕಾರ್ತೀಕೆ |
ಹಿರಣ್ಯಂ ಮಸ್ತ್ರಮನ್ನಂ ವಾ ದತ್ವಾ ಮುಚ್ಯೇತ ದುಷ್ಕೃತೈಃ ||204||

ಈ ರೀತಿಯಲ್ಲಿ ತನ್ನ ಅಧಿಕಾರಾನುಸಾರ ಐದು ಅಹೋರಾತ್ರಿಗಳ ಪರ್ಯಂತ ಗಾಯಿತ್ರಿ ಜಪದಿಂದ ಐಹಿಕ ಹಾಗೂ ಆಮುಷ್ಮಿಕ ಎಲ್ಲ ಪಾಪ

ಗಳಿಂದ ನಿಷ್ಕೃತಿಯನ್ನು ಪಡೆಯುತ್ತಾನೆ. ಆದುದರಿಂದ ಗಾಯಿತ್ರೀ – ಉಪಾಸನೆಯ ವಿನಹ ಈ ಸಿಟ್ಟಿನಲ್ಲಿ ಬೇರೆ ಯಾವ ಉಪಾಯವೂ ಕಂಡು ಬರುವುದಿಲ್ಲವೆಂದು ಸಂವರ್ತ ಮುನಿಯು ತಿಳಿಸುತ್ತಾನೆ.

ಗಾಯತ್ರ್ಯಾಸ್ತು ಪರಂ ನಾಸ್ತಿ ಶೋಧನಂ ಪಾಪಕರ್ಮಣಾಮ್ ||214||

## ದಾನದ ಮಹಿಮೆ

ಎಲ್ಲ ಧರ್ಮಗಳಿಗಿಂತಲೂ ದಾನ ಧರ್ಮವು ವಿಶೇಷ ಮಹತ್ವವನ್ನು ಪಡೆದಿರುವುದು ಎಂಬುದನ್ನು ಸಂವರ್ತನು ಈ ಸ್ಮೃತಿಯಲ್ಲಿ ತೋರಿಸಿಕೊಟ್ಟಿದ್ದಾನೆ. ದಾನವು ಅತ್ಯಂತ ಮಹಿಮೆಯುಳ್ಳದ್ದು. ಬೇರೆ ಸ್ಮೃತಿಕಾರರೂ ಕೂಡ 'ದಾನಂ ಹಿ ಸರ್ವವ್ಯಸನಾನಿ ಹಂತಿ', 'ದಾನಮೇಕಂ ಕಲೌಯುಗೇ' ಎಂದು ಹೇಳಿ ದಾನದ ಮಹಿಮೆಯನ್ನು ಪ್ರಶಂಸಿಸಿದ್ದಾರೆ.

ಎಲ್ಲ ಸಿದ್ಧಾಂತಗಳೂ ದಾನದ ಸ್ಥಾನವನ್ನು ಉತ್ತಮ ಮಾರ್ಗವೆಂದು ತಿಳಿಸಿವೆ. ಎಲ್ಲ ದಾನಗಳಿಗಿಂತ ಅಭಯದಾನ, ಗೋದಾನ, ಅನ್ನದಾನ ಹಾಗೂ ವಿದ್ಯಾದಾನ – ಈ ನಾಲ್ಕೂ ದಾನಗಳು ವಿಶೇಷ ಮಹತ್ವವನ್ನು ಹೊಂದಿರುವಂತಹವು ಎಂದು ಸಂವರ್ತನು ತಿಳಿಸಿದ್ದಾನೆ. ಈತನು ಮುಕ್ತ ಕಂಠದಿಂದ ಇವುಗಳನ್ನು ಪ್ರಶಂಸಿಸಿದ್ದಾನೆ.

1. ಅಭಯದಾನ : ಎಲ್ಲ ಜೀವಿಗಳಿಗೂ ಅಭಯದಾನ ನೀಡುವ ವ್ಯಕ್ತಿಯು ಎಲ್ಲ ಕಾಮನೆಗಳನ್ನು ಪಡೆಯುವನು, ಅಲ್ಲದೆ ದೀರ್ಘಾಯುವನ್ನು ಪಡೆಯುವನು. ಇದರ ಮುಖಾಂತರ ಸುಖ ಜೀವನವನ್ನು ನಡೆಸುವನು – ಎಂದು ಸಂವರ್ತನು ತಿಳಿಸುತ್ತಾನೆ. ಅಂತಹವನಿಗೆ ಕ್ಲೇಶವೂ ಇರುವುದಿಲ್ಲವೆನ್ನುತ್ತಾನೆ.

ಭೂತಾಭಯ ಪ್ರದಾನೇನ ಸರ್ವಕಾಮಾನವಾಪ್ನುಯಾತ್ |
ದೀರ್ಘಮಾಯುಶ್ಚ ಲಭತೇ ಸುಖೀ ಚೈವ ತಥಾ ಭವೇತ್ || 53 ||

ಎಲ್ಲ ಜೀವಿಗಳ ಹೃದಯದಲ್ಲೂ ಪರಮಾತ್ಮನು ನಿವಸಿಸುತ್ತಾನೆ. ಆದುದರಿಂದ ಅಭಯದಾನವು ಸರ್ವೋತ್ತಮ ದಾನವಾಗಿದೆ. ಅಭಯದಾನದಲ್ಲಿ ಶರಣಾಗತ ರಕ್ಷಣೆಯ ಭಾವವಿರುವುದರಿಂದ ದಾತನಲ್ಲಿ ಭಗವದೀಯ ಶಕ್ತಿಯು ಪ್ರವೇಶವಾಗುತ್ತದೆ. ಶರಣಾಗತರನ್ನು ರಕ್ಷಿಸುವುದು ಎಲ್ಲದಕ್ಕಿಂತಲೂ ಹಿರಿದಾದ ಧರ್ಮವಾಗಿದೆ.

ಮಹರ್ಷಿ ಸಂವರ್ತನು ಕರುಣಾಮಯನು. ಪ್ರಾಣಿರಕ್ಷಣೆ ಹಾಗೂ ಎಲ್ಲ ಜೀವಿಗಳ ಕಲ್ಯಾಣದಲ್ಲಿ ನಿರತನಾಗಿರುತ್ತಿದ್ದನು. ಆದುದರಿಂದ ಉತ್ತಮ ಅಹಿಂಸಾ ಧರ್ಮರೂಪೀ ಉಪದೇಶವನ್ನು ಎಲ್ಲರ ಮುಖ್ಯ ಕರ್ತವ್ಯವೆಂದು ನಿರ್ದಿಷ್ಟ ಗೊಳಿಸಿದ್ದಾನೆ.

2. ಸುವರ್ಣದಾನ, ಪೃಥ್ವೀದಾನ ಹಾಗೂ ಗೋದಾನ : ಈ ಮೂರೂ ದಾನಗಳ ವಿಶೇಷತೆಯನ್ನು ಸಂವರ್ತನು ವಿವರಿಸಿದ್ದಾನೆ. ಅಗ್ನಿಯ ಪ್ರಥಮ ಪುತ್ರನೇ ಸುವರ್ಣ (ಸ್ವರ್ಣ)ವು. ಆದುದರಿಂದ ಅವನು (ಅದು) ಅಗ್ನಿಯ ಸಮಾನ ಹೊಳೆಯುತ್ತಿರುತ್ತಾನೆ(ತ್ತದೆ.) ಅದು ಅಗ್ನಿಯಂತೆ ಪವಿತ್ರವೂ ಹೌದು.

ಇದೇ ರೀತಿಯಲ್ಲಿ ಪೃಥ್ವಿಯು ಭಗವಾನ್ ವಿಷ್ಣುವಿನ ಪತ್ನಿ ಹಾಗೂ ಶಕ್ತಿಯಾಗಿದ್ದಾಳೆ. ಅಂತೆಯೇ ಗೋವು ಸೂರ್ಯನ ಮಗಳು (ಸೂರ್ಯಸುತಾ). ಎಂದು ನಂಬಲಾಗಿದೆ.

ಈ ಮೂರೂ ಅತ್ಯಂತ ಅಲೌಕಿಕ ಹಾಗೂ ದಿವ್ಯ ಪದಾರ್ಥಗಳಾಗಿವೆ. ಇವು ಮೂರನ್ನೂ ದಾನ ಮಾಡುವುದರಿಂದ ಮೂರು ಲೋಕಗಳನ್ನು ದಾನ ಮಾಡಿದಂತಹ ಪುಣ್ಯವು ಪ್ರಾಪ್ತವಾಗುತ್ತದೆ.

ಅಗ್ನೇರಪತ್ಯಂ ಪ್ರಥಮಂ ಸುವರ್ಣಂ
ಭೂರ್ವೈಷ್ಣವೀ ಸೂರ್ಯಸುತಾಶ್ಚ ಗಾವಃ |
ಲೋಕಾಸ್ತ್ರಯಸ್ತೇನ ಭವಂತಿ ದತ್ತಾ
ಯಃ ಕಾಂಚನಂ ಗಾಂ ಚ ಮಹೀಂ ಚ ದದ್ಯಾತ್ || 74 ||

ಗೋದಾನದ ಬಗ್ಗೆ ಹೇಳುತ್ತಾ ಸ್ವರ್ಣಶೃಂಗಗಳು, ವಸ್ತ್ರಾಲಂಕಾರ ಗಳಿಂದ ಸುಸಜ್ಜಿತವಾದ, ಸುಲಕ್ಷಣವೂ, ಕರುವಿನ ಸಮೇತದ ಹಸುವನ್ನೇ ದಾನ ಮಾಡಬೇಕೆಂದು ಸಂವರ್ತನು ತಿಳಿಸುತ್ತಾನೆ. ಈ ರೀತಿಯ ಗೋದಾನ ಮಾಡುವುದರಿಂದ ಆ ಗೋವಿನ ಶರೀರದಲ್ಲಿ ಎಷ್ಟು ರೋಮಗಳಿರುತ್ತವೆಯೊ ಅಷ್ಟು ಸಾವಿರ ವರ್ಷಗಳ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ–ಎಂದು ಆತನು ಹೇಳುತ್ತಾನೆ.

ಯೋ ದದಾತಿ ಶಫೈ ರೈಪ್ಯೈರ್ಹೇಮ ಶೃಂಗೀಮರೋಹಿಣೀಮ್ |
ಸವತ್ಸಾಂ ವಾಸಸಾ ವೀತಾಂ ಸುಶೀಲಾಂ ಗಾಂ ಪಯಸ್ವಿನೀಮ್ ||77||

ತಸ್ಯಾಂ ಯಾವಂತಿ ರೋಮಾಣಿ ಸವತ್ಸ್ಯಾಯಾಂ ದಿವಂ ಗತಃ |
ತಾವದ್ವರ್ಷಸಹಸ್ರಾಣಿ ಸ ನರೋ ಬ್ರಹ್ಮಣೋಽಂತಿಕೇ || 78 ||

ಈ ರೀತಿಯಲ್ಲಿ ಸಂವರ್ತನು ಧರ್ಮಾತ್ಮನು, ಪುಣ್ಯಾತ್ಮನು ಆಗಿದ್ದುದರಿಂದಲೇ ಗೋಮಾತೆಯ ಅನನ್ಯ ಉಪಾಸಕನಾಗಿದ್ದನು.

**3. ಅನ್ನದಾನ :** ಅನ್ನದಾನದ ಮಹಿಮೆಯನ್ನು ಸಂವರ್ತನು ಹೊಗಳಿದ್ದಾನೆ. ಏಕೆಂದರೆ ಅನ್ನದ ಆಧಾರದ ಮೇಲೆಯೇ ಎಲ್ಲ ಜೀವಿಗಳೂ ಜೀವಿಸಿವೆ. ಪ್ರತಿಯೊಂದು ಕಲ್ಪದಲ್ಲೂ ಸೃಷ್ಟಿಯ ಆರಂಭದಲ್ಲಿ ಪರಮಾತ್ಮನು ಅನ್ನವನ್ನು ಸೃಷ್ಟಿಸುವನು. ಈ ಅನ್ನದಿಂದಲೇ ಜನರು ಜೀವಿಸುತ್ತಿರುವರು. ಆದುದರಿಂದ ಅನ್ನದಾನಕ್ಕಿಂತ ಮಿಗಿಲಾದ ದಾನವಿನ್ನೊಂದಿಲ್ಲ. ಎಲ್ಲಕ್ಕಿಂತಲೂ ಮುಂಚೂಣಿಯಲ್ಲಿರುವ ದಾನವಿದು. ಸಮಸ್ತ ಜೀವಕೋಟಿಯ ಪ್ರಾಣವೂ, ಕ್ರಿಯಾಶಕ್ತಿಯೂ ಇದಾಗಿದೆ. ಆದುದರಿಂದ ಅನ್ನದಾನವನ್ನು ಮಾಡಲೇಬೇಕು.

ಸರ್ವೇಷಾಮೇವ ದಾನಾನಾಂ ಅನ್ನದಾನಂ ಪರಂ ಸ್ಮೃತಮ್ |
ಸರ್ವೇಷಾಮೇವ ಜಂತೂನಾಂ ಯತಸ್ತಜ್ಜೀವಿತಂ || 81 ||
ಯಸ್ಮಾದನ್ನಾತ್ ಪ್ರಜಾಃ ಸರ್ವಾಃ ಕಲ್ಪೇ ಕಲ್ಪೇಽಸೃಜತ್ ಪ್ರಭುಃ |
ತಸ್ಮಾದನ್ನಾತ್ ಪರಂ ದಾನಂ ನ ಭೂತೋ ನ ಭವಿಷ್ಯತಿ || 82 ||
ಅನ್ನದಾನಾತ್ ಪರಂ ದಾನಂ ವಿದ್ಯತೇ ನ ಹಿ ಕಿಂಚನ |
ಅನ್ನಾದ್ ಭೂತಾನಿ ಜಾಯಂತೇ ಜೀವಂತಿ ನ ಚ ಸಂಶಯಃ || 83 ||

**4. ವಿದ್ಯಾದಾನ :** ವಿದ್ಯಾದಾನ, ಜ್ಞಾನದಾನ ಹಾಗೂ ದಿವ್ಯ ತತ್ತ್ವದ ಪ್ರಾಪ್ತಿ ಈ ಮೂರೂ ಒಂದೇ ವಸ್ತುವಾಗಿದೆ. ಈ ದೃಷ್ಟಿಯಿಂದ ವಿದ್ಯಾದಾನದ ಮಹಿಮೆಯನ್ನು ಸಂವರ್ತನು ವರ್ಣಿಸಿದ್ದಾನೆ. ಏಕೆಂದರೆ ವಿದ್ಯೆಯಿಲ್ಲದೆ ಸಮಸ್ತ ಜಗತ್ತು ಮೋಹಾಂಧಕಾರದಲ್ಲಿ ಮುಳುಗಿರುತ್ತದೆ, ವ್ಯಕ್ತಿಯ ಜೀವನಧಾರಣೆ ಮಾಡುವುದು, ಮಾಡದಿರುವುದು ಒಂದೇ ಆಗಿರುತ್ತದೆ. ವಿದ್ಯಾವಂತ ಹಾಗೂ ಜ್ಞಾನಿಯ ಜೀವನ ಸಫಲ ಜೀವನವಾಗಿರುತ್ತದೆ. ಆದುದರಿಂದ ವಿದ್ಯಾದಾನವು ಮಹಾನ್ ಪುಣ್ಯಕಾರ್ಯವಾಗಿರುತ್ತದೆ. ಪರಿಣಾಮವಾಗಿ ಋಷಿ–ಮುನಿಗಳು ಜಗತ್ಕಲ್ಯಾಣಕ್ಕಾಗಿ ಯೋಗಶಕ್ತಿ ಹಾಗೂ ತಪಃಶಕ್ತಿಗಳಿಂದ ಪಡೆದ ತಮ್ಮ ದಿವ್ಯಜ್ಞಾನವನ್ನು ಗ್ರಂಥಗಳ ರೂಪದಲ್ಲಿ ಹೊರಚೆಲ್ಲುತ್ತಾರೆ. ವಿದ್ಯೆಯ ದಾನದಿಂದ ಶುದ್ಧ ಜ್ಞಾನ ಸ್ವರೂಪನಾದ ಪರಮಾತ್ಮನನ್ನು

ಪಡೆಯಬಹುದು.

ವಿದ್ಯಾದಾನೇನ ಪುಣ್ಯೇನ ಬ್ರಹ್ಮಲೋಕೇ ಮಹೀಯತೇ ॥ 89 ॥

ಈ ರೀತಿಯಲ್ಲಿ ವಿದ್ಯೆಯದಾನದಿಂದ ಕೊಟ್ಟವನು, ಪಡೆದವನು ಇಬ್ಬರಿಗೂ ಪರಮ ಕಲ್ಯಾಣವಾಗುತ್ತದೆ.

ಆಚಮನದ ಮಹತ್ವ : ಬೇರೆ ಸ್ಮೃತಿಗಳಲ್ಲಿರುವಂತೆ ಸಂವರ್ತ ಸ್ಮೃತಿಯಲ್ಲಿಯೂ ಆಚಮನದ ಮಹತ್ವವನ್ನು ವಿವರಿಸಲಾಗಿದೆ. ಸ್ನಾನ ಮಾಡಿದ ನಂತರ, ನೀರು ಕುಡಿದ ನಂತರ, ಊಟ ಮಾಡಿದ ನಂತರ, ಬೇರೆಯವರನ್ನು ಮುಟ್ಟಿದ ನಂತರ, ಅವರಿಂದ ಮುಟ್ಟಿಸಿಕೊಂಡ ನಂತರ ಆಚಮನ ಮಾಡುವುದು ಅತ್ಯಂತ ಆವಶ್ಯಕ.

ಈ ಕಾರ್ಯಗಳ ನಂತರ ಆಚಮನವನ್ನು ಮಾಡದಿದ್ದಲ್ಲಿ, ಮಾನವನಲ್ಲಿ ಅಶುಚಿತ್ವ ಹೆಚ್ಚಾಗುತ್ತದೆ. ಅವನ ಕೆಲಸ ಕಾರ್ಯಗಳನ್ನು ದೇವತೆಗಳು ಸ್ವೀಕರಿಸಲಾರರು. ಇದು ಆಚಮನ ಮಂತ್ರದ ವಿಧಾನದ ಪರಿಯಲ್ಲೇ ನಡೆಸಬೇಕು. ಶಾಸ್ತ್ರಾನುಸಾರ ಇದನ್ನು ಅನುಸರಿಸುವುದು ಆವಶ್ಯಕ.

ಆಚಮನದ ವಿಧಿ ಈ ರೀತಿ ಇರುತ್ತದೆ – ಪಂಚೆಯನ್ನು ಕಚ್ಚೆ ಹಾಕಿ ಉಡಬೇಕು, ಶಿಖೆಯನ್ನು ಕಟ್ಟಬೇಕು, ಯಜ್ಞೋಪವೀತ ಉಪವೀತಿಯಲ್ಲಿರಬೇಕು, ಉತ್ತರ, ಈಶಾನ್ಯ ಅಥವಾ ಪೂರ್ವ ದಿಕ್ಕಿಗೆ ಮುಖಮಾಡಿ ಕುಳಿತುಕೊಳ್ಳಬೇಕು, ಕೈ ಮೊಣಕಾಲುಗಳ ಒಳಗಡೆ ಬರಬೇಕು, ಗೋವಿನ ಕಿವಿಯ ತರಹ ಕೈಯ್ಯನ್ನು ಮಾಡಿಕೊಳ್ಳಬೇಕು, ಕನಿಷ್ಠ ಹಾಗೂ ಉಂಗುಷ್ಠ ಬೆರಳುಗಳನ್ನು ಬೇರೆ ಮಾಡಿಕೊಳ್ಳಬೇಕು, ಉಳಿದ ಬೆರಳುಗಳನ್ನು ಒಟ್ಟಿಗೆ ನೆಟ್ಟಗೆ ಇಟ್ಟುಕೊಳ್ಳಬೇಕು. ಈ ರೀತಿಯಲ್ಲಿ ಬ್ರಹ್ಮತೀರ್ಥದಿಂದ ವರ್ಣೋಚಿತ ಮರ್ಯಾದೆಯ ಜಲದಿಂದ 'ಓಂ ಕೇಶವಾಯ ನಮಃ', 'ಓಂ ನಾರಾಯಣಾಯ ನಮಃ', 'ಓಂ ಮಾಧವಾಯ ನಮಃ' ಎಂದು ಒಂದೊಂದು ಮಂತ್ರವನ್ನು ಹೇಳುತ್ತಾ, ಆ ತೀರ್ಥವನ್ನು ಸೇವಿಸಬೇಕು. ಹಾಗೆ ಸೇವಿಸುವಾಗ ಶಬ್ದ ಮಾಡಬಾರದು. ಆಚಮನದ ನಂತರ ಉಂಗುಷ್ಠದಿಂದ ತುಟಿಗಳನ್ನು ಎರಡು ಸಲ ಒರೆಸಿಕೊಂಡು, ನಂತರದಲ್ಲಿ 'ಓಂ ಹೃಷೀಕೇಶಾಯ ನಮಃ' ಎಂದು ಹೇಳಿ ಕೈ ತೊಳೆದುಕೊಳ್ಳಬೇಕು.

*** *** *** ***

# 17. ಕಣ್ವಸ್ಮೃತಿ

ಮಹರ್ಷಿ ಕಣ್ವನಿಂದ ಪ್ರಣೀತವಾದ 'ಕಣ್ವಸ್ಮೃತಿ'ಯು ಸ್ಮೃತಿ ವಾಙ್ಮಯದಲ್ಲಿ ಒಂದು ಮಹತ್ವಪೂರ್ಣ ಸ್ಥಾನವನ್ನು ಪಡೆದಿದೆ. ಈತ ಋಗ್ವೇದದ ಅಷ್ಟಮ ಮಂಡಲದ ಮುಖ್ಯ ಮಂತ್ರಿಗಳ ದ್ರಷ್ಟಾರನಾಗಿದ್ದಾನೆ. ಆದುದರಿಂದಲೇ ಇದನ್ನು 'ಕಣ್ವಮಂಡಲ' ಎಂದು ಕರೆಯಲಾಗುತ್ತದೆ.

ಶುಕ್ಲ ಹಾಗೂ ಕೃಷ್ಣ ಯಜುರ್ವೇದಗಳಲ್ಲಿನ ಶುಕ್ಲ ಯಜುರ್ವೇದಕ್ಕೆ ಎರಡು ಸಂಹಿತೆಗಳಿವೆ–ಮೊದಲನೆಯದು ಮಾಧ್ಯಂದಿನ ಎಂದು, ಎರಡನೆಯದು ಕಾಣ್ವ ಎಂದು. ಈ ಕಾಣ್ವ ಸಂಹಿತೆಯ ಪ್ರವರ್ತಕನು ಕಣ್ವನಾಗಿದ್ದಾನೆ.

ಹಿಂದೊಮ್ಮೆ ಯಜುರ್ವೇದದ ಕಾಣ್ವಶಾಖೆಯು ಭಾರತಾದ್ಯಂತ ಹರಡಿತ್ತು. ಆದರೆ ಈಗ ಉತ್ತರ ಭಾರತದಲ್ಲಿ ಮಾತ್ರ ಶುಕ್ಲ ಯಜುರ್ವೇದದ ಮಾಧ್ಯಂದಿನ ಸಂಹಿತೆಯು ಹೆಚ್ಚು ಪ್ರಚಾರದಲ್ಲಿದೆ. ಅಂತೆಯೇ ದಕ್ಷಿಣ ಭಾರತದಲ್ಲಿ ಕಾಣ್ವ ಸಂಹಿತೆಯು ಹೆಚ್ಚು ಪ್ರಚಾರದಲ್ಲಿದೆ.

ಬ್ರಾಹ್ಮಣ ಗ್ರಂಥಗಳಲ್ಲಿ ಶತಪಥ ಬ್ರಾಹ್ಮಣದ ಕಾಣ್ವಶಾಖೆಯೊಂದಿದೆ. ಇದರ ಪ್ರವರ್ತಕನು ಕಣ್ವ ಮಹರ್ಷಿಯೇ ಆಗಿದ್ದಾನೆ.

ಇದೇ ರೀತಿಯಲ್ಲಿ ಉಪನಿಷತ್ತುಗಳಲ್ಲಿಯೂ ಕೂಡ 'ಕಣ್ವೋಪನಿಷತ್' ಎನ್ನುವ ಹೆಸರಿನ ಒಂದು ಉಪನಿಷತ್ತು ಇದೆ.

ಈ ರೀತಿಯಲ್ಲಿ ಮಹಾತ್ಮಾ ಕಣ್ವನು ಅತ್ಯಂತ ಪ್ರಾಚೀನಕಾಲದ ವೈದಿಕ ಋಷಿಯಾಗಿದ್ದಾನೆ. ಶಕುಂತಲೆಯ ಧರ್ಮಪಿತನ ರೂಪದಲ್ಲಿ ಮಹರ್ಷಿ ಕಣ್ವನು ತಪೋಮಯತೆ ಹಾಗೂ ಧರ್ಮಮಯತೆಯ ಸರ್ವವಿಶ್ರುತವಾದುದು. ಈತನು ತನ್ನ ಧರ್ಮಕನ್ಯೆ (ದತ್ತುಪುತ್ರಿ) ಯಾದ ಶಕುಂತಲೆಯನ್ನು ಬೀಳ್ಕೊಡುವ ಸಮಯದಲ್ಲಿ ಆಕೆಗೆ ನೀಡಿದ ಉಪದೇಶವು ಗೃಹಸ್ಥ ಹಾಗೂ ಪತಿವ್ರತಾ ಧರ್ಮದ ಚೂಡಾಮಣಿಯಾಗಿದ್ದು, ಅವರುಗಳಿಗೆ ಆದರ್ಶವಾಗಿದೆ.

ಈತನ ಉಪದೇಶಗಳಲ್ಲಿ ಉತ್ತಮ ಭಾವನೆಗಳು ತುಂಬಿವೆ. ಉತ್ತಮ ಗೃಹಸ್ಥಾಶ್ರಮಕ್ಕೆ ಸದ್ಗೃಹಿಣಿಯೇ ಮೂಲಭೂತ ಆಧಾರ. ಇಂತಹ ಸದ್ಗೃಹಿಣಿಯ ಕರ್ತವ್ಯಗಳೇನು–ಎಂಬುದನ್ನು ಕಣ್ವಮಹರ್ಷಿ ನಿರ್ದಿಷ್ಟಗೊಳಿಸಿದ್ದಾನೆ. ಅದರಂತೆ ಪ್ರತಿಯೊಬ್ಬ ಗೃಹಿಣಿಯೂ ಇವನ್ನು ಪರಿಪಾಲಿಸಿ, ಅನುಸರಿಸುವುದು ಅಗತ್ಯವಾಗಿದೆ.

ಕಣ್ವನು ವೇದ ಸಂಹಿತೆಗಳ ಆಚಾರ್ಯನೂ ಆಗಿದ್ದಾನೆ. ಈತನು ಬ್ರಾಹ್ಮಣ ಗ್ರಂಥಗಳ ಪ್ರವರ್ತಕನಾಗಿದ್ದು, ಉಪನಿಷತ್ತುಗಳ ತತ್ತ್ವೋಪದೇಶಕನಾಗಿರುವುದರೊಂದಿಗೆ ಓರ್ವ ಮಹಾನ್ ಶಾಸ್ತ್ರಕಾರನೂ ಆಗಿದ್ದಾನೆ. ಈತನು ತ್ಯಾಗಿಯೂ, ವಿರಕ್ತನೂ, ನಿಷ್ಕಾಮ ಸಿದ್ಧಿ ಮಹಾತ್ಮನೂ ಆಗಿದ್ದು, ವೇದ ವೇತ್ತನು, ತತ್ತ್ವೋಪದೇಷ್ಟನು, ಆಧ್ಯಾತ್ಮಜ್ಞಾನಯೋಗಿ, ಕರ್ತವ್ಯನಿಷ್ಠ ಹಾಗೂ ಸದಾಚಾರಿಯೂ ಆಗಿರುವನು.

ಸದಾಚಾರ ಹಾಗೂ ಧರ್ಮಾಚರಣೆಗಳ ಬಗ್ಗೆ ಈತನು ವಿಶೇಷ ಒತ್ತು ನೀಡಿರುವನು. ಜನರು ತಮ್ಮ ಕರ್ತವ್ಯ–ಕೆಲಸಗಳ ಬಗ್ಗೆ ಸ್ಪಷ್ಟ ಜ್ಞಾನವಿರಲಿ, ತಮ್ಮ ಧರ್ಮದ ಬಗ್ಗೆ ಸ್ಪಷ್ಟ ತಿಳಿವು ಇರಲಿ, ಹಿತಕರ ಹಾಗೂ ಅಹಿತಕರ ಕಾರ್ಯಗಳಾವುವು ಎಂಬುದರ ಪರಿಜ್ಞಾನ ವ್ಯಕ್ತಿಗಳಲ್ಲಿ ಇರಬೇಕು ಎಂದು ಕಣ್ವನು ಒತ್ತಿ ಹೇಳಿದ್ದಾನೆ. ಇದರ ಬಗ್ಗೆಯೇ 'ಕಣ್ವಸ್ಮೃತಿ' ಎನ್ನುವ ಧರ್ಮ ಶಾಸ್ತ್ರವನ್ನು ರಚಿಸಿರುವುದು.

'ಕಣ್ವ ಸ್ಮೃತಿ'ಯಲ್ಲಿ 800 ಶ್ಲೋಕಗಳಿವೆ. ಕೃತಿಯ ಪ್ರಾರಂಭದಲ್ಲಿ ಲೋಕೋಪಕಾರದ ಸನಾತನ ಧರ್ಮದ ಜಿಜ್ಞಾಸೆಯನ್ನು ನೀಡಲಾಗಿದೆ. ಸರ್ವತ್ರ, ಸರ್ವದಾ ಎಲ್ಲರಲ್ಲಿಯೂ ಈಶ್ವರ ಬುದ್ಧಿ ಹೊಂದಿದ್ದು, ಅವರು ತಮ್ಮ ತಮ್ಮ ಕರ್ತವ್ಯ ಕರ್ಮಗಳನ್ನು ಮಾಡುತ್ತಾ, ಅವೆಲ್ಲವನ್ನೂ ಕೃಷ್ಣಾರ್ಪಣೆ ಮಾಡುವುದರಿಂದ ದುಷ್ಟಗುಣಗಳಾವುವೂ ಬಳಿ ಸುಳಿಯುವುದಿಲ್ಲ. ಇದರ ಬಗ್ಗೆ ಯಾರೂ ಯಾವ ರೀತಿಯ ಅನುಮಾನವನ್ನು ಹೊಂದಿರಬಾರದು. ಇದೇ 'ಧರ್ಮಸಾರ' ಎಂದು ಕಣ್ವನು ತಿಳಿಸಿದ್ದಾನೆ.

ಕ್ರಿಯಾ ಕರ್ತಾ ಕಾರಯಿತಾ ಕಾರಣಂ ತತ್ಫಲಂ ಹರಿಃ |
ಸರ್ವಮೀಶ್ವರಮೇವೇತಿ ಬುದ್ಧಿರ್ಯಸ್ಯ ಸದಾ ಸ್ಥಿರಾ || 9 ||
ಸ ಏವ ಕೃತಕೃತ್ಯೋ ಹಿ ಸ ತು ಜ್ಞಾನಸ್ಯ ಭಾಜನಮ್ |
ತತ್ಕೃತಸ್ಯ ಚ ಕಾರ್ಯಸ್ಯ ವೈಗುಣ್ಯಂ ನೈವ ಜಾಯತೇ || 10 ||
ಕದಾಚಿದಪಿ ಕೇನಾಪಿ ನಾತ್ರ ಕಾರ್ಯಾ ವಿಚಾರಣಾ || 11 ||

ಎಲ್ಲೆಡೆ, ಎಲ್ಲರಲ್ಲಿಯೂ ಭಗವದ್ಬುದ್ಧಿ ಇರಬೇಕು. ಇದಕ್ಕಿಂತ ಉತ್ತಮ ಅವಸ್ಥೆ ಬೇರೆ ಇನ್ನಾವುದಿದ್ದೀತು !

ಭಾರದ್ವಾಜ, ವಿಶ್ವಾಮಿತ್ರ ಸ್ಮೃತಿಗಳಲ್ಲಿರುವಂತೆ ಈ ಸ್ಮೃತಿಯಲ್ಲೂ

ಗಾಯಿತ್ರಿ-ಉಪಾಸನೆ, ಸಂಧ್ಯೋಪಾಸನೆ ಹಾಗೂ ನಿತ್ಯ ಕರ್ಮಗಳನ್ನು ಆಚರಿಸಬೇಕಾದ ರೀತಿಯನ್ನು ವರ್ಣಿಸಲಾಗಿದೆ. ಇದರೊಂದಿಗೆ ಇದರಲ್ಲಿ ವೇದಾಧ್ಯಯನದ ಮಹಿಮೆ, ವೈದಿಕ ಕರ್ಮಗಳ ಶ್ರೇಷ್ಠತೆಯನ್ನೂ ತಿಳಿಸ ಲಾಗಿದೆ. ಪ್ರತಿಯೊಂದು ಕಾರ್ಯವನ್ನು ವೇದ ವಿಧಿಯ ಅನುಸಾರ ನಡೆಸ ಬೇಕೆಂದು ಕಣ್ವಮಹರ್ಷಿ ಒತ್ತಾಯ ಮಾಡಿದ್ದಾನೆ. ಉಪನಯನ, ಮದುವೆ ಇತ್ಯಾದಿ ಸಂಸ್ಕಾರಗಳ ವಿಧಿ ವಿಧಾನಗಳೂ ಇದರಲ್ಲಿ ವಿವರಿಸಲಾಗಿದೆ. ದತ್ತಕ ಪುತ್ರನ ಮೀಮಾಂಸೆಯ ವಿವರಗಳಿಲ್ಲಿವೆ. ವೈದಿಕ ಯಜ್ಞಗಳ ವಿಸ್ತಾರ ವರ್ಣನೆ ಯನ್ನೂ ಇದರಲ್ಲಿ ನೀಡಲಾಗಿದೆ. ಅಧಿಕಾರಾನುಸಾರ ಉಪನಯನದ ಸಮಯ ದಲ್ಲಿ ವಿಧಿಪೂರ್ವಕ ಗಾಯಿತ್ರಿಮಂತ್ರದ ದೀಕ್ಷೆಯನ್ನು ಗ್ರಹಿಸಿ, ಅದರ ಅರ್ಥ ವನ್ನು ಅರಿತು, ಗಾಯಿತ್ರಿ ಮಾತೆಯ ಧ್ಯಾನ ಮಾಡುತ್ತಾ ಗಾಯಿತ್ರಿ ಮಂತ್ರ ವನ್ನು ಮಾಡಬೇಕು. ಗಾಯಿತ್ರಿಯು ವೇದ ಮಾತೆ, ಸಮಸ್ತ ವಿಶ್ವವೂ ಈಕೆಯ ರೂಪವಾಗಿದೆ. ಈ ಮಂತ್ರದ ಋಷಿ ವಿಶ್ವಾಮಿತ್ರನಾಗಿದ್ದಾನೆ, ಹಾಗೆಯೇ ಸವಿತೆಯು ದೇವತೆಯಾಗಿದ್ದಾಳೆ. ಈ ಮಂತ್ರದ ಅರ್ಥ ಈ ರೀತಿ ಇದೆ — 'ಪರಮಾತ್ಮಾ ಸವಿತಾದೇವನ ಗಾಯಿತ್ರೀ ನಾಮಾವಳಿಯ ಅವರ್ಣ ನೀಯ ಮಹಾನ್ ತೇಜಸ್ಸನ್ನು ಚಿಂತನ ಮಾಡುತ್ತಾ, ನಾವು ಧ್ಯಾನ ಮಾಡು ವೆವು. ನಮ್ಮ ಬುದ್ಧಿಯನ್ನು ನಿತ್ಯ ಸತ್ಕಾರ್ಯಗಳಲ್ಲಿ ತೊಡಗಿಸುವಂತೆ ಹಾಗೂ ನಮ್ಮನ್ನು ನಿತ್ಯ ಸತ್ಕರ್ಮಗಳಲ್ಲಿ ನಿರತನಾಗಿರುವ ಪ್ರೇರಣೆಯನ್ನು ನೀಡಲಿ. '

ಯೋ ನಃ ಪ್ರಚೋದಯಾನ್ನಿತ್ಯಂ ಧಿಯಃ ಕರ್ಮಸು ಸತ್ಸು ವೈ ||185||
ವರೇಣ್ಯಂ ಸವಿತುಶ್ಚಾಪಿ ದೇವಸ್ಯ ಪರಮಾತ್ಮನಃ |
ಗಾಯತ್ರ್ಯಾಖ್ಯಂ ಚ ತದ್ಭರ್ಗಸ್ತೇಜೋ ಧೀಮಹಿ ಚಿಂತಯಾ ||186||

ಈ ಸ್ಮೃತಿಯಲ್ಲಿ ಸಂಧ್ಯಾಕರ್ಮದ ನಿತ್ಯ ಕರಣೀಯತೆಗಳು ಹಾಗೂ ಮಹಿಮೆಯ ವಿಶೇಷ ಆಖ್ಯಾನಗಳನ್ನು ನೀಡಲಾಗಿದೆ. ಸಂಧ್ಯೆಯ ವಂದನೆಯಲ್ಲಿ ವಿಘ್ನಗಳನ್ನು ತಂದುಕೊಂಡಲ್ಲಿ ತುಂಬಾ ಪಾಪ ಉಂಟಾಗುತ್ತದೆ –

ನ ಸಂಧ್ಯಾ ವಿಘ್ನಕರಣಾದನ್ಯತ್ ಪಾಪಂ ತು ವಿದ್ಯತೇ || 286 ||

ಗೃಹಸ್ಥಾಶ್ರಮದ ಮುಖ್ಯ ಉಪಯೋಗಗಳೆಂದರೆ ಧರ್ಮ ಸಂಸ್ಥಾಪನೆ ಹಾಗೂ ಪರೋಪಕಾರಗಳೆಂದು ಗೃಹಸ್ಥಧರ್ಮದ ಮಹಿಮೆಯೆಂದು ಈ ಸ್ಮೃತಿ ಯಲ್ಲಿ ತಿಳಿಸಲಾಗಿದೆ.

ಗಾರ್ಹಸ್ಥ್ಯಂ ಧರ್ಮಕಾರ್ಯಾಯ ಪರೋಪಕೃತಿಹೇತುವೆ ||459||

## ಧರ್ಮಶಾಸ್ತ್ರದಲ್ಲಿ ನಿರ್ದೇಶಿಸಿದ ಕರ್ಮಗಳನ್ನೆ ಮಾಡಬೇಕು

ಶೃತಿ (ವೇದ), ಸ್ಮೃತಿ ಇತ್ಯಾದಿ ಶಾಸ್ತ್ರಗಳಲ್ಲಿ ಯಾವಯಾವ ಕರ್ತವ್ಯಗಳನ್ನು ಮಾಡಬೇಕೆಂದು ತಿಳಿಸಲಾಗಿದೆಯೊ, ಆ ಕರ್ತವ್ಯಗಳನ್ನೆ ಮಾಡಬೇಕು, ಅದೇ ವಿಹಿತವಾದುದು, ಶಾಸ್ತ್ರ ವಿರುದ್ಧದ ಬೇರೆ ಯಾವುದೇ ಆಚರಣೆಯನ್ನು ಆಚರಿಸಬಾರದು-ಎಂದು ಕಣ್ವ ಮಹರ್ಷಿ ತಿಳಿಸಿದ್ದಾನೆ. ಆದರೆ ಪ್ರಮಾದ ವಶಾತ್ ಹಾಗೇನಾದರೂ ನಡೆದದ್ದೇ ಆದರೆ ಆ ದೋಷ ನಿವಾರಣೆಗಾಗಿ ಶ್ರದ್ಧಾ ಭಕ್ತಿ ಪೂರ್ವಕ ಹಾಗೂ ತುಂಬು ನಂಬಿಕೆಯೊಂದಿಗೆ ವೇದ, ಗೃಹ್ಯಸೂತ್ರಗಳು, ಧರ್ಮಶಾಸ್ತ್ರಗಳು, ಸ್ಮೃತಿ ಹಾಗೂ ಪುರಾಣಗಳಲ್ಲಿ ಹೇಳಿರುವಂತಹ ಪ್ರಾಯಶ್ಚಿತ್ತ ವಿಧಾನಗಳನ್ನು ಅನುಸರಿಸಬೇಕು. ಹೀಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದರಿಂದ ದೋಷವು ನಷ್ಟವಾಗಿ, ಆ ವ್ಯಕ್ತಿಯು ಪವಿತ್ರನಾಗುತ್ತಾನೆ. ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದಲ್ಲಿ, ಅವನ ಪಾಪದೋಷವು ಹೆಚ್ಚಾಗುತ್ತಾ ಹೋಗುತ್ತದೆ.

ಶೃತಿಸ್ಮೃತ್ಯುದಿತಂ ಕರ್ಮ ವಿಹಿತಂ ವೇದಕಸ್ಯಯತ್ |
ತದುಕ್ತೇನೈವ ಮಾರ್ಗೇಣ ಕರ್ತವ್ಯಂ ನಾನ್ಯಥಾ ಚರೇತ್ || 68 ||
ಯದಿ ಪ್ರಮಾದೇನ ಕೃತಮನ್ಯಥಾ ಶಾಸ್ತ್ರವರ್ತ್ಮನಃ |
ತಸ್ಯ ತದ್ದೋಷಶಾಂತ್ಯರ್ಥಂ ಸದ್ಯಚ್ಚಿತ್ತಂ ಶೃತೀರಿತಂ || 69 ||
ಸ್ಮೃತ್ಯುಕ್ತಂ ವಾಥಿ ಸೂತ್ರೋಕ್ತಂ ಪುರಾಣೋಕ್ತಂ ಮಥಾಪಿ ವಾ |
ಸಮಾಚರೇದ್ವಿಧಾನೇನ ಭಕ್ತಿಶ್ರದ್ಧಾಪುರಸ್ಸರಂ || 70 ||
ಕೃತಮಾತ್ರೇ ತು ತಸ್ಮಿನ್ ವೈ ಪ್ರಾಯಶ್ಚಿತ್ತೇ ತಕ್ಷಣಾತ್ ತತಃ |
ತದ್ದೋಷೋ ವಿಲಯಂ ಯಾತಿ ತೇನಾರ್ಥಸ್ಯಾತ್ ಕೃತೀ ಶುಚಿಃ ||71||
ಭವೇದೇವ ನ ಸಂದೇಶೋನ ಚೇದ್ದೋಷ್ಯಾಭಿವರ್ತತೇ || 72 ||

## ಪ್ರಾತಃಸ್ಮರಣೀಯ ಮಂಗಳಶ್ಲೋಕ

ಪ್ರಾತಃಕಾಲದಲ್ಲಿ ಪರಮಾತ್ಮನ ಶುಭಪ್ರದ ಹೆಸರನ್ನು ಹೇಳಿಕೊಳ್ಳುವುದರಿಂದ ಪರಮ ಕಲ್ಯಾಣವೂ, ಪುಣ್ಯಪ್ರಾಪ್ತಿಯಾಗುವಂತಹ ಸದವಕಾಶ ಉಂಟಾಗುತ್ತದೆ. ಇದರೊಂದಿಗೆ ಪಾಪದೋಷಗಳಿಗೆ ಶಾಂತಿಯೂ ಉಂಟಾಗುತ್ತದೆ. ಆದುದರಿಂದ ಪ್ರತಿದಿನ ಪ್ರಾತಃಕಾಲ ಮಂಗಳ ಶ್ಲೋಕಗಳ ಪಠಣವನ್ನು ಮಾಡ

ಬೇಕು. ಇದರ ಬಗ್ಗೆ ಕಣ್ವ ಮಹರ್ಷಿಯು ಹೀಗೆಂದು ಹೇಳಿದ್ದಾನೆ –

'ಬೆಳಗಿನ ಜಾವ ಎದ್ದು, ಕೈಕಾಲು ಮುಖಗಳನ್ನು ತೊಳೆದು ಶುಭ್ರ ಮಾಡಿಕೊಂಡು, ವಿಧಿಪೂರ್ವಕ ಆಚಮನ ಮಾಡಿ ಸಪ್ತರ್ಷಿಗಳು ಹಾಗೂ ಮೈನಾಕ, ಮೇರು, ಮಂದರ, ಗಂಧಮಾದನ, ಲೋಕಾಲೋಕ, ಗಿರಿರಾಜ ಹಿಮವಂತ, ಕೈಲಾಸೇತ್ಯಾದಿ ಇತರೇ ಕುಲ ಪರ್ವತಗಳು: ಜಗಜ್ಜನನಿಯರಾದ ಪಾರ್ವತೀ, ಅಹಲ್ಯಾ, ದ್ರೌಪದೀ, ತಾರಾ, ಮಂಡೋದರೀ, ಸೀತಾ, ಅರುಂಧತೀ, ಲಕ್ಷ್ಮೀ, ಭಾರತೀ, ಪರಮೇಶ್ವರೀ, ಇಂದ್ರಾಣೀ ಹಾಗೂ ಇತರೇ ದೇವಿಯರ ಸ್ಮರಣೆ ಮಾಡಬೇಕು. ಬ್ರಹ್ಮನಿಷ್ಠರೂ, ಸಂಯಮ–ನಿಯಮ ನಿರತರೂ, ಧರ್ಮಾನುಷ್ಠಾನ ಪರಾಯಣರೂ, ಮಹಾಭಾಗ ಬ್ರಾಹ್ಮಣರ ಸ್ಮರಣೆ ಮಾಡಬೇಕು. ಲೋಕಪಾಲ, ಲೋಕನಾಥ ಹಾಗೂ ಬ್ರಹ್ಮಾ, ವಿಷ್ಣು ಹಾಗೂ ಮಾಹೇಶ್ವರರ ಸ್ಮರಣೆ ಮಾಡಿ ಪ್ರಣಾಮಗಳನ್ನು ಸಲ್ಲಿಸಬೇಕು. ಇವರೆಲ್ಲರೂ ಶುಭವನ್ನು ಉಂಟುಮಾಡುವ ಹಾಗೂ ನಿತ್ಯ ಕಲ್ಯಾಣದ ಮೂರ್ತಿಗಳಾಗಿದ್ದಾರೆ. (ಕಣ್ವಸ್ಮೃತಿ–ಶ್ಲೋಕ 74–78).

### ಯಜ್ಞ–ಸಂಸ್ಥಾ

ಇದೇ ರೀತಿಯಲ್ಲಿ ಕಣ್ವ ಮಹರ್ಷಿಯು ತನ್ನ ಸ್ಮೃತಿಯಲ್ಲಿ ವೇದಾಧಿಕಾರ ಹಾಗೂ ಬ್ರಾಹ್ಮಣನಿಗಾಗಿ ವೇದಾದಿ ಶಾಸ್ತ್ರಗಳ ಅಧ್ಯಯನವನ್ನು ಅತ್ಯಂತ ಆವಶ್ಯಕತೆಯ ಕರ್ತವ್ಯವನ್ನಾಗಿ ತಿಳಿಸಿದ್ದಾನೆ. ಬ್ರಾಹ್ಮಣನ ಮೂಲ ಕರ್ತವ್ಯ ಈ ಶಾಸ್ತ್ರಗಳ ಸ್ವಾಧ್ಯಾಯವೇ ಆಗಿರಬೇಕು ಎಂದಿದ್ದಾನೆ. ಈ ವೇದಾದಿ ಶಾಸ್ತ್ರಗಳಲ್ಲಿ ಶುದ್ಧ ಧರ್ಮದ ಪ್ರತಿಪಾದನೆ ಇದೆ, ವೇದ ವಿಹಿತ ಕರ್ಮಗಳ ಅನುಷ್ಠಾನ ಹಾಗೂ ತದನುಸಾರ ಜೀವನ ನಡೆಸುವಿಕೆ – ಇವು ಮುಖ್ಯ ಧರ್ಮಾಚರಣೆಯಾಗಿರುತ್ತದೆ.

ಯಜ್ಞಗಳ ವಿಶೇಷ ಮಹಿಮೆಯನ್ನು ವೇದಗಳಲ್ಲಿ ತಿಳಿಸಲಾಗಿದೆ. ಯಜ್ಞಗಳ ಮುಖಾಂತರ ಪರಮಾತ್ಮನನ್ನು ತೃಪ್ತಿಗೊಳಿಸುವ ವಿಧಾನವನ್ನೂ ಇವುಗಳಲ್ಲಿ ಹೇಳಲಾಗಿದೆ. ಶರೀರ ಹಾಗೂ ಅಂತಃಕರಣದ ಶುದ್ಧಿ ಹಾಗೂ ಜೀವನದಲ್ಲಿ ದಿವ್ಯತೆಯನ್ನು ಪಡೆಯುವುದಕ್ಕಾಗಿ ಯಜ್ಞವು ಅತ್ಯಂತ ಆವಶ್ಯಕ–

'ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೆ ತನುಃ |'

'ದ್ರವ್ಯ ದೇವತಾ ತ್ಯಾಗಃ' – ಈ ಪರಿಭಾಷೆಯನುಸಾರ, ಯಜ್ಞಗಳಿಗೆ ದ್ರವ್ಯಾತ್ಮಕ, ದೇವತಾತ್ಮಕ ಹಾಗೂ ತ್ಯಾಗ ಕ್ರಿಯಾತ್ಮಕ – ಎನ್ನುವ ಯಜ್ಞದ

ಮೂರು ಲಕ್ಷಣಗಳಿವೆಯೆಂದು ಹೇಳಲಾಗುತ್ತದೆ. 489-500ರ ವರೆಗಿನ ಶ್ಲೋಕಗಳು ಯಜ್ಞಗಳ ವರ್ಣನೆಯನ್ನು ನೀಡಿವೆ.

ಯಜ್ಞಗಳಲ್ಲಿ ಅನೇಕ ಭೇದ – ಪ್ರಭೇದಗಳಿವೆ. ಆದರೆ ಇವೆಲ್ಲವುಗಳ ಸಮನ್ವಯವಾಗಿ 1) ಪಾಕಯಜ್ಞ ಸಂಸ್ಥಾ, 2) ಸೋಮಯಜ್ಞ ಸಂಸ್ಥಾ ಹಾಗೂ 3) ಹವಿರ್ಯಜ್ಞ ಸಂಸ್ಥಾ ಎನ್ನುವ ಮೂರು ವಿಭಾಗಗಳನ್ನು ಕಾಣಬಹುದು. ಈ ಪ್ರತಿಯೊಂದು ವಿಭಾಗದಲ್ಲಿಯೂ ಏಳು-ಏಳು ಯಜ್ಞಗಳು ಸಮ್ಮಿಳಿತವಾಗಿವೆ.

ಈ ರೀತಿಯಲ್ಲಿ ಸ್ಥೂಲವಾಗಿ 21 ರೀತಿಯ ವೈದಿಕ ಯಜ್ಞಗಳಿವೆ. ಇವುಗಳಲ್ಲಿಯೂ ಕೂಡ ಮತ್ತೆ ಅನೇಕ ಪ್ರಭೇದಗಳಿವೆ. ಕಣ್ವ ಮಹರ್ಷಿಯು ಈ ಎಲ್ಲ ಯಜ್ಞಗಳ ವಿವರಣೆಯನ್ನು ತನ್ನ ಸ್ಮೃತಿಯಲ್ಲಿ ತಿಳಿಸಿದ್ದಾನೆ.

1. ಪಾಕಯಜ್ಞ ಸಂಸ್ಥಾ : ೧) ಔಪಾಸನ ಹೋಮ, ೨) ವೈಶ್ವೇದೇವ, ೩) ಪಾರ್ವಣ ಶ್ರಾದ್ಧ, ೪) ಅಷ್ಟಕಾ ಶ್ರಾದ್ಧ, ೫) ಮಾಸಿಕ ಶ್ರಾದ್ಧ, ೬) ಸರ್ಪಬಲಿ ಹಾಗೂ ೭) ಈಶಾನ ಬಲಿ.

2. ಸೋಮಯಜ್ಞ ಸಂಸ್ಥಾ : ೧) ಅಗ್ನಿಷ್ಟೋಮ, ೨) ಅತ್ಯಗ್ನಿಷ್ಟೋಮ, ೩) ಉಕ್ಥ್ಯ, ೪) ಷೋಡಶೀ, ೫) ಅತಿರಾತ್ರ, ೬) ಅಪ್ತೋರ್ಯಾಮ, ೭) ವಾಜಪೇಯ.

3. ಹವಿರ್ಯಜ್ಞ – ಸಂಸ್ಥಾ : ೧) ಅಗ್ನಿಹೋತ್ರ, ೨) ದರ್ಶಪೌರ್ಣಮಾಸ, ೩) ಆಗ್ರಯಣ, ೪) ಚಾತುರ್ಮಾಸ್ಯ, ೫) ನಿರೂಢ ಪಶುಬಂಧ, ೬) ಸೌತ್ರಾಮಣಿ, ೭) ಪಿತೃಯಜ್ಞ.

### ಧರ್ಮಾಚರಣೆಯ ಮಹಿಮೆ

ಈ ಸ್ಮೃತಿಯ ಕೊನೆಯಲ್ಲಿ ಎಲ್ಲ ಕರ್ಮಗಳಿಗೂ ಸದಾಚಾರವೇ ವಿಶೇಷ ಮಹಿಮೆಯುಳ್ಳದ್ದು ಎಂದು ಕಣ್ವಋಷಿಯು ನಿರೂಪಿಸುತ್ತಾ ನಿತ್ಯಶೌಚ – ಸ್ನಾನಾದಿ ಕ್ರಿಯೆಗಳಿಂದ ಶರೀರ ಶುದ್ಧಿಮಾಡಿ, ಯಮ-ನಿಯಮಾದಿಗಳ ಪಾಲನೆಯಿಂದ ಅಂತಃಕರಣದ ಶುದ್ಧಿಯನ್ನು ಮಾಡಬೇಕೆಂದು ತಿಳಿಸುತ್ತಾನೆ. ಪ್ರತಿಯೊಬ್ಬರೂ ಸದಾಚಾರ ಹಾಗೂ ಧರ್ಮಾಚರಣೆಯ ಪಾಲನೆ ಮಾಡಬೇಕು, ಯಾವಾಗಲೂ ಅಗ್ನಿ ಇತ್ಯಾದಿ ದೇವತೆಗಳನ್ನು ಉಪಾಸನೆ ಮಾಡಬೇಕು, ಯಾವಾಗಲೂ ಪವಿತ್ರರಾಗಿ, ನಿರ್ಮಲರಾಗಿರಬೇಕು; ಸದಾ ಸಂತುಷ್ಟರಾಗಿರ

ಬೇಕು; ಸದಾಶಾಂತರಾಗಿರಬೇಕು, ಈರ್ಷ್ಯಾಸೂಯೆ ದೋಷಗಳಿಂದ ದೂರವಿರ ಬೇಕು – ಈ ರೀತಿಯಲ್ಲಿ ಬ್ರಹ್ಮಯಜ್ಞ ರೂಪೀ ಕ್ರಿಯೆಗಳಿಂದ ಶುದ್ಧರಾಗಿದ್ದಲ್ಲಿ ಯಜ್ಞಯಾಗಾದಿಗಳ ಫಲವು ಪ್ರಾಪ್ತವಾಗುತ್ತದೆ ಎಂದು ಕಣ್ವಮುನಿ ತಿಳಿಸುತ್ತಾನೆ.

ನಿತ್ಯಸ್ನಾನಃ ಸದಾಚಾರಃ ಸದಾವಹ್ನಿಃ ಸದಾ ಶುಚಿಃ ||791||
ಸದಾತುಷ್ಟಃ ಸದಾಶಾಂತಃ ಸದಾಸೂಯಾವಿವರ್ಜಿತಃ ||792||
ಬ್ರಹ್ಮಮೇಧಾ ಕ್ರಿಯಾಶುದ್ಧಃ ಪೂರ್ವತುಲ್ಯೋ ಭವತ್ಯಪಿ ||793||

## ಬ್ರಹ್ಮಾರ್ಪಣ ಬುದ್ಧಿಯಿಂದ ಕಾರ್ಯ ಮಾಡಬೇಕು

ವ್ಯಕ್ತಿಯು ಪರಮಾತ್ಮನಲ್ಲಿ ಸಮರ್ಪಣಾ ಬುದ್ಧಿ ಇರಿಸಿಯೇ ಕರ್ಮಗಳ ಅನುಷ್ಠಾನ ಮಾಡಬೇಕು. ಫಲಾಪೇಕ್ಷೆ ಇಲ್ಲದೆ, ಕೇವಲ ಕರ್ತವ್ಯ ದೃಷ್ಟಿ ಯಿಂದ ಕೆಲಸಮಾಡಿ, ಅದನ್ನು ಭಗವಂತನಿಗೇ ಅರ್ಪಿಸಬೇಕು.

ಬ್ರಹ್ಮಾರ್ಪಣಧಿಯಾ ಸರ್ವಂ ಕರ್ಮ ತತ್ ಕ್ರಿಯತೇ ಪರಂ ||321||

ಕಾರ್ಯದ ಪ್ರಾರಂಭದಲ್ಲಿ 'ಪರಮೇಶ್ವರನನ್ನು ಪ್ರಸನ್ನಗೊಳಿಸುವುದ ಕ್ಕಾಗಿಯೇ ಈ ಕರ್ಮವನ್ನು ಮಾಡುತ್ತಿದ್ದೇನೆ' – ಎಂದು ಹೇಳಿಯೇ ಆ ಕಾರ್ಯವನ್ನು ಪ್ರಾರಂಭಿಸಬೇಕು. ಕರ್ಮದ ಕೊನೆಯಲ್ಲಿ 'ಅನೇನ ಕರ್ಮಣಾ ಭಗವಾನ್ ದೇವಃ, ಪರಮಾತ್ಮಾ ಹರಿಃ ಸದಾ ಪ್ರೀಣಾತು'. ಈ ಕರ್ಮದಿಂದ ಭಗವಾನ್ ಶ್ರೀ ಹರಿಯು ಪ್ರಸನ್ನನಾಗಲಿ' – ಎಂಬುದಾಗಿ ಹೇಳಿ ಜಲತ್ಯಾಗ ಮಾಡಿ ಭಗವಂತನಿಗೆ ಅರ್ಪಿಸಬೇಕು –

ಆರಂಭಕಾಲೇ ಸಂಕಲ್ಪೇ ಪರಮೇಶ್ವರ ತುಷ್ಟಯೇ |
ಕರಿಷ್ಯಾಮಿತಿ ಸಂಕಲ್ಪ್ಯ ತತ್ತಕರ್ಮ ಯಥಾವಿಧಿ ||409||
ಸಮನುಷ್ಠಾಯ ತತ್ಪಶ್ಚಾತ್ ತತ್ತತ್ ಕರ್ಮಾಂತ ಏವ ಹಿ |
ಪ್ರೀಣಾತು ಭಗವಾನ್ ದೇವಃ ಪರಮಾತ್ಮಾ ಸದಾ ಹರಿಃ ||410||
ಅನೇನ ಕರ್ಮಣಾ ಚೇತಿ ತ್ಯಾಗಂ ಕುರ್ವಾಜ್ಜಲೇನ ವೈ ||411||

** ** ** **

# 18. ಪ್ರಜಾಪತಿ ಸ್ಮೃತಿ

ಮಹಾತ್ಮಾ ರುಚಿ ಎಂಬ ಮಹರ್ಷಿ ಹಿಂದೆ ಇದ್ದ. ಈತ ಪ್ರಜಾಪತಿ ಸ್ಥಾನದಲ್ಲಿ ಬಹಳ ವರ್ಷಗಳ ಕಾಲ ಅಧಿಷ್ಠಿತನಾಗಿದ್ದ. ಈತನು ರಚಿಸಿದ

ಸ್ಮೃತಿಯೇ 'ಪ್ರಜಾಪತಿ ಸ್ಮೃತಿ' ಎಂಬ ಹೆಸರು ಪಡೆಯಿತು. ಈತನ ದಿವ್ಯ ಚರಿತ್ರೆಯು ಪುರಾಣಗಳಲ್ಲಿ ವಿಶದವಾಗಿ ವರ್ಣಿತವಾಗಿದೆ. ಈತನ ಬಗ್ಗೆ ಪ್ರಚಾರದಲ್ಲಿರುವ ಕಥೆಯೂ ಈ ರೀತಿ ಇದೆ –

ಬಹಳ ಹಿಂದಿನ ಕಾಲದ ಮಾತು. ಪ್ರಜಾಪತಿ ರುಚಿಯು ನಿವೃತ್ತಿ ಮಾರ್ಗದ ಆಶ್ರಯ ಪಡೆದು ಸ್ವಾಧ್ಯಾಯ, ಜಪ, ತಪ, ಯೋಗದ ಸಾಧನದಲ್ಲಿ ನಿರತನಾಗಿದ್ದನು. ಬ್ರಹ್ಮಚಿಂತನೆಯಲ್ಲಿ ಆತ ಸದಾ ಮಗ್ನನಾಗಿರುತ್ತಿದ್ದನು. ಈತನ ಈ ರೀತಿಯ ವಿರಕ್ತಿಯನ್ನು ಕಂಡು, ಈತನ ಪಿತೃಗಳು ಈತನಿಗೆ ಗೃಹಸ್ಥ ಧರ್ಮವನ್ನು ಸ್ವೀಕರಿಸುವಂತೆ ತಿಳಿಸಿದರು. ಆದರೆ ರುಚಿಯು ತಾನು ಮೋಕ್ಷ ಪಡೆಯಲು ತಾನು ಅನುಸರಿಸುತ್ತಿರುವ ಮಾರ್ಗವೇ ಸರಿಯೆಂದು ತಿಳಿಸಿದನು. ಎಷ್ಟೇ ತಿಳಿಯ ಹೇಳಿದರೂ, ಪಿತೃಗಳ ಮಾತನ್ನು ಆತ ಕೇಳಲಿಲ್ಲ.

ಆಗ ಪಿತೃಗಳು ಹೇಳಿದರು. "ನೀನು ನಮ್ಮ ಮಾತನ್ನು ಕೇಳದಿದ್ದರೆ, ನಮ್ಮ ಪತನವಾಗುವುದು ಖಂಡಿತ. ಅದರೊಂದಿಗೆ ನಿನ್ನ ಅಧೋಗತಿಯೂ ಖಂಡಿತ !" ಎಂದು ಹೇಳಿ ಅದೃಶ್ಯರಾದರು. ಪಿತೃಗಳ ಮಾತುಗಳನ್ನು ಕೇಳಿ ರುಚಿಯ ಮನಸ್ಸು ಉದ್ವಿಗ್ನಗೊಂಡಿತು. ತಪಸ್ಸಿನ ಮುಖಾಂತರ ಬ್ರಹ್ಮನನ್ನು ಮೆಚ್ಚಿಸಬೇಕೆಂದು ತೀರ್ಮಾನಿಸಿದನು. ಅಂತೆಯೇ 100 ವರ್ಷಗಳವರೆಗೆ ಕಠೋರ ತಪಸ್ಸನ್ನು ಮಾಡಿದನು. ಇದರಿಂದ ಪ್ರಸನ್ನನಾದ ಬ್ರಹ್ಮನು ಪ್ರತ್ಯಕ್ಷನಾಗಿ 'ರುಚಿ ! ನಿನ್ನ ತಪಸ್ಸಿನಿಂದ ಪ್ರಸನ್ನನಾದೆನು. ನಿನ್ನ ಇಚ್ಛೆ ಏನಿದೆಯೊ ಹೇಳು !" ಎಂದನು. ಆಗ ಪಿತೃಗಳು ತಿಳಿಸಿದ, ಗೃಹಸ್ಥ ಧರ್ಮವನ್ನು ತಾನು ಸ್ವೀಕರಿಸಲು ಸಿದ್ಧನಾಗಿರುವುದಾಗಿ ತಿಳಿಸಿದನು. ಬ್ರಹ್ಮನು ಪ್ರಸನ್ನಗೊಂಡು ಹೇಳಿದನು. " ವಿಪ್ರವರನೆ ! ನೀನು ಪ್ರಜಾಪತಿಯಾಗುವೆ ! ನಿನ್ನಿಂದ ಪ್ರಜಾಸೃಷ್ಟಿಯಾಗುತ್ತದೆ. ಆ ಪ್ರಜೆಗಳನ್ನು ಧರ್ಮಾಚರಣೆಗೆ ಒಳಗಾಗುವಂತೆ ಅವರನ್ನು ಪಾಲಿಸಿ, ಪೋಷಿಸುವೆ. ಕಡೆಯಲ್ಲಿ ನಿನಗೆ ಉತ್ತಮ ಗತಿಯು ಪ್ರಾಪ್ತವಾಗುತ್ತದೆ. ನೀನು ಪಿತೃಗಳನ್ನು ಪೂಜಿಸಿದ್ದೇ ಆದರೆ ನಿನಗೆ ನಿನ್ನ ಮನೋವಾಂಛಿತ ಪತ್ನಿ ದೊರೆಯುವಂತೆ ಅವರು ಆಶೀರ್ವದಿಸುವರು. ನೀನು ಪುತ್ರವಂತನಾಗಿ, ನಿನ್ನ ಪಿತೃಗಳು ಸಂತುಷ್ಟರಾಗುವರು."

ನಂತರ ರುಚಿಯು ನದೀ ದಡ ಸೇರಿ, ಪಿತೃಗಳಿಗೆ ತರ್ಪಣಾದಿಗಳನ್ನು ಸಲ್ಲಿಸಿ, ಅವರನ್ನು ಸ್ತುತಿಸಿದನು. ಈ ಭಕ್ತಿಪೂರ್ವಕ ಸ್ತುತಿಯಿಂದ ಪ್ರಭಾವಿತರಾಗಿ ಅವನ ಎದುರು ಪಿತೃಗಳ ತೇಜಃ ಪುಂಜ ರೂಪ ಪ್ರಕಟವಾಯಿತು. ಅದು

ಸಂಪೂರ್ಣ ಆಕಾಶವನ್ನು ಆವರಿಸಿತು. ಆ ಉದ್ದೀಪ್ತ ಪ್ರಕಾಶಮಂಡಲವನ್ನು ನೋಡಿ, ರುಚಿಯು ದೀರ್ಘ ದಂಡ ನಮಸ್ಕಾರ ಮಾಡಿ ಅವರನ್ನು ಪ್ರಸನ್ನಗೊಳಿಸುವ ಭಾವಪೂರ್ಣ ಸ್ತುತಿಯನ್ನು ಹಾಡಿದನು.

ಆಗ ಸಂತುಷ್ಟರಾದ ಪಿತೃಗಳು ವರವನ್ನು ಕೇಳುವಂತೆ ರುಚಿಯನ್ನು ಕೇಳಿದರು. ಆಗ ವಿನಯಪೂರ್ವಕವಾಗಿ ರುಚಿಯು ಹೇಳಿದನು, "ಹೇ ಪಿತೃಗಳೆ ! ಸೃಷ್ಟಿ ಕಾರ್ಯವನ್ನು ಮಾಡುವಂತೆ ಬ್ರಹ್ಮನು ನನಗೆ ಆದೇಶಿಸಿರುವನು. ಆದುದರಿಂದ ದಿವ್ಯ ಗುಣಗಳಿಂದ ಕೂಡಿದ ಓರ್ವ ಉತ್ತಮ ಪತ್ನಿಯನ್ನು ನೀಡುವಂತೆ ಪ್ರಾರ್ಥಿಸುತ್ತೇನೆ."

ಆಗ ಪಿತೃಗಳು, "ವತ್ಸ ! ನಿನ್ನ ಭಕ್ತಿಯಿಂದ ನಾವು ಸಂತುಷ್ಟರಾಗಿದ್ದೇವೆ, ನಿನಗೆ ಈಗಲೇ ಇದೇ ಸಮಯದಲ್ಲಿ ಉತ್ತಮ ಗುಣಗಳ ಪತ್ನಿಯೋರ್ವಳು ಪ್ರಾಪ್ತಳಾಗುವಳು. ಅವಳಲ್ಲಿ ನಿನಗೆ ಶ್ರೇಷ್ಠನಾದ ಮನುವು ಜನಿಸುವನು. ಅವನು ನಿನ್ನದೇ ಆದ 'ಮನು ಪ್ರಜಾಪತಿ' (ರೌಚ್ಯ ಪ್ರಜಾಪತಿ) ಎಂಬ ಹೆಸರಿನಿಂದ ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗುವನು. ಅವನಿಗೂ ಪರಾಕ್ರಮಿ, ಬಲಶಾಲಿ, ಗುಣವಂತ ಹಾಗೂ ಧರ್ಮಾತ್ಮಾ ಪುತ್ರರು ಜನಿಸುವರು. ಅವರು ಈ ಪೃಥ್ವಿಯನ್ನೇ ಪಾಲನೆ ಮಾಡುವರು. ನೀನು ನಿಜ ಅರ್ಥದಲ್ಲಿ ಪ್ರಜಾಪತಿ ಎಂದು ಕರೆಯಿಸಿಕೊಳ್ಳುವೆ" ಎಂಬ ವರವನ್ನು ನೀಡಿ, ಅಂತರ್ಧಾನರಾದರು.

ಆದೇ ಸಮಯದಲ್ಲಿ ನದಿಯ ಮಧ್ಯಭಾಗದಿಂದ ಪ್ರಮ್ಲೋಚಾ ಎನ್ನುವ ಹೆಸರಿನ ಓರ್ವ ಅಪ್ಸರೆಯು ತನ್ನ ಮಗಳೊಂದಿಗೆ ಪ್ರತ್ಯಕ್ಷಳಾಗಿ, ರುಚಿಯೊಂದಿಗೆ ಮಧುರ ಸ್ವರದಲ್ಲಿ ಹೇಳಿದಳು, "ಹೇ ತಪೋಧನ ! ಇವಳು ನನ್ನ ಕನ್ಯಾರತ್ನವಾಗಿರುವಳು. ಇವಳ ಹೆಸರು 'ಮಾಲಿನಿ' ಎಂದು. ಇವಳನ್ನು ನೀನು ಪತ್ನಿರೂಪದಲ್ಲಿ ಸ್ವೀಕರಿಸು. ಇವಳಲ್ಲಿ ನಿನಗೆ ಸರ್ವೋತ್ತಮ ಪುತ್ರನು ಜನಿಸುವನು. ಅವನು 'ರೌಚ್ಯಮನು' ಎನ್ನುವ ಹೆಸರನಿಂದ ವಿಖ್ಯಾತನಾಗುವನು."

ಆಗ ರುಚಿಗೆ ತನ್ನ ಪಿತೃಗಳ ಮಾತುಗಳು ನಿಜವೆನ್ನಿಸಿತು. 'ತಥಾಸ್ತು' ಎಂದು ಹೇಳಿ ಮಾಲಿನಿಯನ್ನು ಅನೇಕ ಋಷಿಗಳ ಸಮ್ಮುಖದಲ್ಲಿ ಪತ್ನಿಯನ್ನಾಗಿ ಸ್ವೀಕರಿಸಿದ. ಇದೇ ಮಾಲಿನಿಯಿಂದ 'ರೌಚ್ಯಮನು'ವು ಆವಿರ್ಭಾವವಾದನು. ಇವನು 'ರೌಚ್ಯಮನ್ವಂತರ'ದ ಅಧಿಪತಿಯಾದನು.

ಈ ರೀತಿಯಲ್ಲಿ ರುಚಿ ಮುನಿಯ ಜೀವನ ಚರಿತ್ರೆಯು ಅನೇಕ ದೀಪ್ತಿಮಾನ ಘಟನೆಗಳಿಂದ ಕೂಡಿವೆ. ತನ್ನ ಪ್ರಜೆಗಳ ನಿಮಿತ್ತ ನೀಡಿದ ಉಪದೇಶಗಳು 'ಪ್ರಜಾಪತಿ ಸ್ಮೃತಿ' ಎನ್ನುವ ಹೆಸರಿನಿಂದ ಪ್ರಖ್ಯಾತವಾಗಿವೆ. ಈಗ ಸಿಕ್ಕಿರುವ ಪ್ರಜಾಪತಿ ಸ್ಮೃತಿಯಲ್ಲಿ ೨೦೦ ಶ್ಲೋಕಗಳಿವೆ. ಇದರ ವಕ್ತಾರನು ಬ್ರಹ್ಮನು, ಶ್ರೋತ್ರವು ರುಚಿ ಪ್ರಜಾಪತಿ.

ರುಚಿ ಪ್ರಜಾಪತಿಯು ಪಿತೃಗಳ ಅನನ್ಯ ಭಕ್ತನು. ಈತನ ದೃಷ್ಟಿಯಲ್ಲಿ ದೇವತೆಗಳಿಗಿಂತಲೂ ಪಿತೃಗಳು ಹೆಚ್ಚು ಮಹಿಮೆಯುಳ್ಳವರೂ, ಶಕ್ತಿ ಸಾಮರ್ಥ್ಯಗಳನ್ನು ಉಳ್ಳವರೂ ಆಗಿದ್ದಾರೆ. ಆದುದರಿಂದ ಈತನು ಈ ಸ್ಮೃತಿಯನ್ನು ಪಿತೃದೇವರುಗಳನ್ನು ಪ್ರಸನ್ನಗೊಳಿಸುವುದಕ್ಕಾಗಿ ರಚಿಸಿದ್ದಾನೆ. ತರ್ಪಣ ಹಾಗೂ ಶ್ರಾದ್ಧಗಳ ಬಗೆಗೆ ವಿಶೇಷ ಪರಾಮರ್ಶೆಯನ್ನು ನೀಡಿದ್ದಾನೆ. ಇದರಲ್ಲಿ ಆದ್ಯೋಪಾಂತ ಶ್ರಾದ್ಧ-ಪ್ರಕ್ರಿಯೆಯನ್ನು ವಿಧಿ-ವಿಧಾನದೊಂದಿಗೆ ವಿವೇಚಿಸಿದ್ದಾನೆ.

ಈ ಸ್ಮೃತಿಯ ಪ್ರಾರಂಭದಲ್ಲಿ ರುಚಿಯು ಬ್ರಹ್ಮನನ್ನು, "ಹೇ ಬ್ರಹ್ಮನ್! ನಾನು ಪಿತೃಗಳ ಆಜ್ಞೆಯಂತೆ, ನಿನ್ನ ಅನುಗ್ರಹದಿಂದ ಗೃಹಸ್ಥ ಧರ್ಮವನ್ನು ಸ್ವೀಕರಿಸಿದ್ದೇನೆ. ನಾನು ನನ್ನ ಪತ್ನಿ ಮಾಲಿನಿಯೊಂದಿಗೆ ಅನೇಕ ತೀರ್ಥ ಕ್ಷೇತ್ರಗಳನ್ನು ಸುತ್ತಾಡಿ, ಪಿತೃಗಳ ನಿಮಿತ್ತ ಅನೇಕ ರೀತಿಯ ಶ್ರಾದ್ಧಾದಿ ಕರ್ಮಗಳನ್ನು ನಿರ್ವಹಿಸಿದೆ. ಆದರೆ ಹೇ ದೇವ ದೇವ! ಶ್ರಾದ್ಧ ವಿಷಯಗಳು ತುಂಬಾ ವಿಸ್ತಾರವಾಗಿದ್ದು, ಅಲ್ಲಲ್ಲಿ ಅದರ ಕ್ರಿಯೆಗಳಲ್ಲಿ ಅಜ್ಞಾನದ ಕಾರಣ ಅನೇಕ ಸಂಶಯಗಳು ತಲೆದೋರಿವೆ. ನೀನು ಶ್ರಾದ್ಧಾದಿ ವಿಷಯಗಳನ್ನು ವೇದಾದಿ ಶಾಸ್ತ್ರ ದೃಷ್ಟಿಯಿಂದ ಸಕಲವನ್ನು ಅರಿತವನಾಗಿರುವೆ. ಆದುದರಿಂದ ಶ್ರಾದ್ಧ ಕ್ರಿಯೆಗಳಲ್ಲಿ ಯಾವ ಅನುಮಾನಗಳೂ ಬರದಂತೆ ನೀನು ನನಗೆ ಸಂಪೂರ್ಣ ಶ್ರಾದ್ಧ ಕಲ್ಪಗಳ ಬಗ್ಗೆ ಉಪದೇಶ ನೀಡುವ ಕೃಪೆ ತೋರು!"

ಆ ನಂತರ ಬ್ರಹ್ಮನು ರುಚಿಯ ಪ್ರಾರ್ಥನಾನುಸಾರ 'ಶ್ರಾದ್ಧಕಲ್ಪ' ವನ್ನು ಉಪದೇಶಿಸಿದನು. ಇದೇ 'ಪ್ರಜಾಪತಿ ಸ್ಮೃತಿಃ ಎಂದು ಪ್ರಖ್ಯಾತವಾಯಿತು.

ಮುಖ್ಯವಾಗಿ ಇದರಲ್ಲಿ ಶ್ರಾದ್ಧದ ಕಾಲ, ಶ್ರಾದ್ಧಕರ್ತನ ಕರ್ತವ್ಯಗಳು,

ಶ್ರಾದ್ಧ–ದ್ರವ್ಯ, ಶ್ರಾದ್ಧ–ದೇಶ, ಶ್ರಾದ್ಧ–ಪಾಕಕರ್ತರು, ಬ್ರಾಹ್ಮಣ-ನಿಮಂತ್ರಣ, ಶ್ರಾದ್ಧಕ್ಕೆ ಯೋಗ್ಯನಾದ ಬ್ರಾಹ್ಮಣ, ಶ್ರಾದ್ಧದ ನಿಯಮ, ಶ್ರಾದ್ಧದಲ್ಲಿ ಉಪಯೋಗಿಸುವ ಪದಾರ್ಥಗಳು, ಶ್ರಾದ್ಧ ಸಂಬಂಧದ ಊಟ, ಶ್ರಾದ್ಧದ ದೇವತೆಗಳು, ಶ್ರಾದ್ಧಕ್ಕೆ ಸಂಬಂಧಪಟ್ಟ ವಿವಿಧ ಮಂತ್ರಗಳು, ಪಿತೃಗಳ ಆವಾಹನೆ, ಆಸನ, ಅರ್ಘ್ಯ, ಹೋಮ, ಪಾತ್ರಾಲಂಭನ, ಬ್ರಾಹ್ಮಣ-ಭೋಜನ, ಪಿಂಡದಾನ, ಪಿತೃಗಳನ್ನು ಪ್ರಾರ್ಥಿಸುವಿಕೆ, ಅವರುಗಳಿಂದ ಕ್ಷಮಾದಾನ ಹಾಗೂ ಆ ನಂತರದ ಕ್ರಿಯೆಗಳು ಇತ್ಯಾದಿಗಳು ನಿರೂಪಿತವಾಗಿವೆ.

ಪ್ರಾರಂಭದಲ್ಲಿ ಶ್ರಾದ್ಧ ಕಾಲದ ಬಗ್ಗೆ ತಿಳಿಸುತ್ತಾ ಈ ರೀತಿ ಹೇಳಲಾಗಿದೆ ತಿಥಿಯ ಕ್ಷಯ ಹಾಗೂ ವೃದ್ಧಿಯಾಗುವಾಗ (ಅಮಾವಾಸ್ಯೆ, ಪೌರ್ಣಮಿಗಳಂದು) ; ಸೂರ್ಯ ಹಾಗೂ ಚಂದ್ರಗ್ರಹಣಗಳಂದು ; ಉಗಾದಿ ತಿಥಿಗಳಂದು (ವೈಶಾಖಮಾಸದ ಶುಕ್ಲ ತದಿಗೆ–ಅಕ್ಷಯ ತೃತೀಯಾ ; ಕಾರ್ತೀಕ ಮಾಸದ ಶುಕ್ಲ ನವಮೀ–ಅಕ್ಷಯ ನವಮೀ ; ಮಾಘ ಮಾಸದ ಹುಣ್ಣಿಮೆ ಹಾಗೂ ಭಾದ್ರಪದ ಮಾಸದ ಶುಕ್ಲ ಪಕ್ಷದ ತ್ರಯೋದಶೀ–ಈ ನಾಲು ತಿಥಿಗಳು ಕೃತ, ತ್ರೇತಾದಿ ನಾಲ್ಕು ಯುಗಗಳ ತಿಥಿಗಳಾಗಿವೆ) ; ಮಹಾಲಯ ; ಅಮಾವಾಸ್ಯೆಗಳಂದು ; ವಿಶೇಷ ಪರ್ವ ದಿನಗಳಂದು ; ಸಂಕ್ರಾಂತಿ ; ವೈಧೃತಿ, ವ್ಯತಿಪಾತ ಇತ್ಯಾದಿ ಯೋಗದಿನಗಳಂದು, ಅಷ್ಟ–ಅನ್ವಷ್ಟಕಗಳಂದು ; ಮನ್ವಾದಿ ತಿಥಿಗಳಂದು ಹಾಗೂ ವ್ರತಾದಿಗಳಂದು ತಪ್ಪದೆ ಶ್ರಾದ್ಧವನ್ನು ಖಂಡಿತ ಮಾಡಬೇಕು.

ನಂದೀ ಮುಖದ ಶ್ರಾದ್ಧದ ಪ್ರಶಂಸೆ ಹಾಗೂ ಅದರ ವರ್ಣನೆಯನ್ನು ವಿವರಿಸುತ್ತಾ ನಂದೀ ಮುಖ–ಶ್ರಾದ್ಧ ಮಾಡುವುದರಿಂದ ಪ್ರಸನ್ನರಾಗುವ ಪಿತೃಗಳು ಆರೋಗ್ಯ, ಯಶಸ್ಸು, ಎಲ್ಲ ರೀತಿಯ ಸೌಖ್ಯ, ಐಶ್ವರ್ಯ ಹಾಗೂ ಸಂತಾನಗಳನ್ನು ಪ್ರದಾನ ಮಾಡುವರು–

ತಸ್ಯಾರೋಗ್ಯಂ ಯಶಃ ಸೌಖ್ಯ ವಿವರ್ಧಂತೇ ಧನ ಪ್ರಜಾಃ ||19||

ಮಹಾಲಯದಲ್ಲಿ, ಪಿತೃಗಳ ಕ್ಷಯ ತಿಥಿಯಲ್ಲಿ, ಗ್ರಹಣದಲ್ಲಿ ಹಾಗೂ ಗಯೆಯಲ್ಲಿ ಯಾರು ಶ್ರದ್ಧಾಪೂರ್ವಕವಾಗಿ ಪಿತೃಗಳಿಗೆ ಶ್ರಾದ್ಧವನ್ನು ಮಾಡುವರೊ, ಅಂತಹವರು ಅಶ್ವಮೇಧಾದಿ ದೊಡ್ಡ ಯಾಗಗಳನ್ನಾಗಲಿ ಹಾಗೂ ಇತರೇ

ಪುಣ್ಯಪ್ರದ ಧರ್ಮ ಕಾರ್ಯಗಳನ್ನಾಗಲಿ ಮಾಡುವುದರಿಂದ ಆಗುವ ಪ್ರಯೋಜನವಾದರೂ ಏನು ? ಅಂದರೆ ಶ್ರಾದ್ಧ ಕರ್ಮದಿಂದ ಮೇಲೆ ತಿಳಿಸಿದ ಎಲ್ಲ ಫಲಗಳೂ ಪ್ರಾಪ್ತವಾಗುತ್ತವೆ.

ಶ್ರಾದ್ಧಂ ಕೃತಂ ಯೇನ ಮಹಾಲಯೇऽಸ್ಮಿನ್
ಪಿತ್ರೋಃ ಕ್ಷಯಾ ಹೇ ಗ್ರಹಣೇ ಗಯಾಯಾಂ ।
ಕಿಮಶ್ವಮೇಧೈಃ ಪುರುಷೈರನೇಕೈಃ
ಪುಣ್ಯೈರಿಷ್ಟೈ ರನ್ಯ ತಮೈಃ ಕೃತೈಃ ಕಿಮ್ ||20||

ಶ್ರದ್ಧಾ ಭಕ್ತಿಪೂರ್ವಕವಾಗಿ, ಪರಿಶುದ್ಧ ಭಾವನೆಯಿಂದ ಪವಿತ್ರ ವಸ್ತುಗಳನ್ನು, ಅವು ಕಡಿಮೆ ಪ್ರಮಾಣದಲ್ಲಿದ್ದರೂ ಸರಿಯೆ, ಯಾರು ಪಿತೃಗಳಿಗೆ ಅರ್ಪಿಸುವರೋ ಅದು ಕೋಟಿ ಪುಣ್ಯ ಫಲಪ್ರದವಾಗಿರುತ್ತದೆ–ಎಂದು ಪ್ರಜಾಪತಿ ರುಚಿಯು ತಿಳಿಸುವನು–

ಶ್ರದ್ಧಯಾ ಸ್ವಲ್ಪ ಮಾತ್ರಂ ಚ ದತ್ತಂ ಕೋಟಿ ಗುಣಂ ಭವೇತ್
||25||

ರುಚಿಯು ಮುಂದುವರೆದು, ನರಕಕ್ಕೆ ಬಿದ್ದಿರುವ ಪಿತೃಗಳಿಗೆ ತೀರ್ಥಗಳ ಜಲವು ದುರ್ಲಭವಾದುದು. ಆದುದರಿಂದ ಪಿತೃಗಳ ನಿಮಿತ್ತ ಗಯಾ, ಪುಷ್ಕರ, ಪ್ರಯಾಗ, ಇತ್ಯಾದಿ ಪುಣ್ಯ ತೀರ್ಥಗಳಿಗೆ ಯಾತ್ರೆ ಹೋಗಿ ಶ್ರಾದ್ಧ, ಪಿಂಡ ಪ್ರದಾನ ಹಾಗೂ ತರ್ಪಣಾದಿ ಕರ್ಮಗಳನ್ನು ಶ್ರದ್ಧೆಯಿಂದ ಯಾರು ಮಾಡುವರೊ, ಅಂತಹ ಶ್ರಾದ್ಧಕರ್ತನ ಮುಖಾಂತರ ಸಂತೃಪ್ತಗೊಂಡ ಆ ಎಲ್ಲ ಪಿತೃಗಳೂ ನರಕದಿಂದ ಮುಕ್ತರಾಗಿ ಅಕ್ಷಯವಾದ ಸ್ವರ್ಗದಲ್ಲಿ ನಿವಾಸ ಮಾಡುವರು–ಎಂಬುದು ರುಚಿಯ ಅಭಿಮತವಾಗಿದೆ–

ಪಿತೄಣಾಂ ನರಕ ಸ್ಥಾನಾಂ ಜಲಂ ತೀರ್ಥಸ್ಯ ದುರ್ಲಭಮ್ ।
ತೇನ ಸಂತರ್ಪಿತಾಃ 'ಸರ್ವೇ ಸ್ವರ್ಗ' ಯಾಂತೀತಿ ಮದ್ವಚಃ ||29||

ಪ್ರತಿ ದಿನ ಶ್ರಾದ್ಧ ಮಾಡುವ ಸಂಪ್ರದಾಯವೂ ಉಂಟು. ಇದನ್ನು 'ನಿತ್ಯ ಶ್ರಾದ್ಧ' ಎಂದು ಕರೆಯಲಾಗುತ್ತದೆ. ಯಾವ ರೀತಿಯಲ್ಲಿ 'ಅಹರಹಃ ಸಂಧ್ಯಾಂ ಉಪಾಸೀತಾ' ಎನ್ನುವ ರೀತಿಯಲ್ಲಿ ಪ್ರತಿ ಸಂಧ್ಯಾವಂದನೆಯನ್ನು ಮಾಡಬೇಕಾಗಿದೆಯೊ, ಅದೇ ರೀತಿಯಲ್ಲಿ ಪಿತೃಗಳನ್ನು ಪ್ರಸನ್ನಗೊಳಿಸುವುದಕ್ಕಾಗಿ 'ನಿತ್ಯಶ್ರಾದ್ಧ'ವನ್ನು ಸದಾ ಮಾಡಬೇಕಾಗಿದೆ. ನಿತ್ಯ ಶ್ರಾದ್ಧವು

ಭಗವಾನ್ ವಿಷ್ಣುವಿನ ಸ್ವರೂಪವಾಗಿದೆ. ಆದುದರಿಂದ 'ನಿತ್ಯಶ್ರಾದ್ಧ'ವನ್ನು ಮಾಡುವುದರಿಂದ ವಿಷ್ಣು ಭಗವಾನನು ಪ್ರಸನ್ನಗೊಂಡು, ಪಿತೃಗಳನ್ನು ಸಂತೃಪ್ತಗೊಳಿಸುವನು–

ನಿತ್ಯ ಶ್ರಾದ್ಧಂ ಸದಾ ಕಾರ್ಯಂ ಪಿತೃಣಾಂ ತೃಪ್ತಿ ಹೇತುಕಮ್ ।
ಸ ವಿಷ್ಣುರಿತಿ ವಿಜ್ಞೇಯೋ ನಿತ್ಯಂ ಪ್ರೀಣಾತಿ ಪೂರ್ವಜಾನ್ ॥36॥

ಅಗಸ್ತ್ಯ ಪುಷ್ಪ, ಭೃಂಗರಾಜ, ತುಳಸೀ, ಶತಪತ್ರ, ತಿಲ ಹಾಗೂ ತಿಲಪುಷ್ಪ–ಈ ಆರು ಪಿತೃಗಳಿಗೆ ಅತ್ಯಂತ ಪ್ರಿಯವಾದವುಗಳಾಗಿವೆ. ಆದುದರಿಂದ ಪಿತೃಕಾರ್ಯಗಳಲ್ಲಿ ಇವನ್ನು ಉಪಯೋಗಿಸಲೇಬೇಕು–

ಅಗಸ್ತ್ಯಂ ಭೃಂಗರಾಜಂ ಚ ತುಳಸೀ ಶತಪತ್ರಿಕಾ ।
ತಿಲಂ ಚ ತಿಲ ಪುಷ್ಪಂ ಚ ಪ್ರದೇತೇ ಪಿತೃವಲ್ಲಭಾಃ ॥101॥

ಬಾಡಿದ ಹೂಗಳು ಹಾಗೂ ತಂಗಳು ನೀರನ್ನು ಶ್ರಾದ್ಧಾದಿ ಕರ್ಮಗಳಲ್ಲಿ ಹಾಗೂ ದೇವರ ಪೂಜೆಯಲ್ಲಿ ಉಪಯೋಗಿಸಬಾರದು. ಆದರೆ ಗಂಗಾಜಲ ಹಾಗೂ ತುಳಸೀದಳ ಅಥವಾ ತುಳಸೀ ಪುಷ್ಪಗಳಿಗೆ ಬಾಡುವಿಕೆಯ ದೋಷವಿರುವುದಿಲ್ಲ. ಆದುದರಿಂದ ಇವು ಸದಾ ಗ್ರಾಹ್ಯವಾದವುಗಳಾಗಿರುತ್ತವೆ.

ತ್ಯಜೇತ್ ಪರ್ಯುಷಿತಂ ಪುಷ್ಪಂ ತ್ಯಜೇತ್ ಪರ್ಯುಷಿತಂ ಜಲಂ ।
ನ ತ್ಯಜೇಜ್ಜಾಹ್ನವೀತೋಯಂ ತುಳಸೀದಳ ಪಂಕಜಮ್ ॥108॥

ಸಗಣಿಯಿಂದ ಸ್ವಚ್ಛ ಮಾಡಿದ ಭೂಮಿ, ಗೋಮೂತ್ರದಿಂದ ನೆನೆದ ಭೂಮಿ, ವಿಷ್ಣು ಭಗವಾನ್ ಚರಣಗಳು ಹಾಗೂ ಗಂಗಾಜಲದಿಂದ ಸೇವಿತವಾದ ಭೂಮಿ–ಎಲ್ಲ ದೇವತಾ ಕಾರ್ಯಗಳಿಗೂ ಪವಿತ್ರವಾದ, ಪ್ರಶಸ್ತ ಹೊಆಗಿದ್ದು ತೀರ್ಥಕ್ಷೇತ್ರ ಸ್ವರೂಪವನ್ನು ಪಡೆಯುತ್ತದೆ.

ಗೋಮಯೇನೋಪಲಿಪ್ತಾ ಭೂಃ ಪವಿತ್ರಾ ಸರ್ವ ಕರ್ಮಸು ।
ಗೋಮೂತ್ರೇಣೋಕ್ಷಿತಾ ತೀರ್ಥಂ ವಿಷ್ಣುಪಾದಾಂಬು ಸೇವಿತಾ ॥109॥

ಪ್ರಜಾಪತಿ ರುಚಿಯು ದಯಾ ಧರ್ಮವೇ ಮುಖ್ಯ ಧರ್ಮವೆಂದು ತಿಳಿಸುತ್ತಾ, ಸಮಸ್ತ ಜೀವಿಗಳ ಮೇಲೆ ದಯೆಯನ್ನು ತೋರಿಸಬೇಕೆಂದೂ, ಅವುಗಳೆಲ್ಲವುಗಳ ಕಲ್ಯಾಣ ಕಾರ್ಯಗಳಲ್ಲಿ ತತ್ಪರರಾಗಿರಬೇಕೆಂದು ಉಪದೇಶಿಸುತ್ತಾನೆ. ಪುಣ್ಯ ಪಡೆಯಬೇಕೆನ್ನುವ ಅಭಿಲಾಷೆ ಇದ್ದಲ್ಲಿ, ಇತರರಿಗೆ ಒಳ್ಳೆಯದಾಗಬೇಕೆಂಬ ಇಚ್ಛೆ ಇದ್ದಲ್ಲಿ ಎಲ್ಲ ಜೀವಿಗಳ ಮೇಲೂ ದಯೆ ಹಾಗೂ

ಕರುಣೆಯನ್ನು ತೋರಿಸಬೇಕು. ಮನಸ್ಸು, ಮಾತು, ಕರ್ಮದಿಂದ ಅಹಿಂಸಾ ಭಾವವನ್ನು ಪ್ರಕಟಿಸುವುದೇ ಎಲ್ಲದಕ್ಕಿಂತ ಮುಖ್ಯವಾದ ಧರ್ಮವಾಗಿದೆ. ಆದುದರಿಂದ ಪ್ರತಿಯೊಂದು ಪ್ರಾಣಿಯನ್ನು, ಪ್ರತಿಯೊಬ್ಬ ವ್ಯಕ್ತಿಯನ್ನೂ ತನ್ನ ಆತ್ಮಕ್ಕೆ ಸಮಾನ ಎಂದು ಭಾವಿಸಿ, ಅವುಗಳ ಮೇಲೆ ಪ್ರೀತಿ ತೋರಿ, ಅವುಗಳೊಂದಿಗೆ ಮಿತ್ರತೆ, ದಯೆ ಹಾಗೂ ಆದರದ ಉಚ್ಚ ಭಾವವನ್ನು ಹೊಂದಿರಬೇಕು–

ಕಾರುಣ್ಯಮ್ ಪ್ರಾಣಿಷು ಪ್ರಾಯಃ ಕರ್ತವ್ಯಂ ಪುಣ್ಯಹೇತ ವೇ ।
ಅಹಿಂಸಾ ಪರಮೋ ಧರ್ಮಸ್ತಸ್ಮಾದಾತ್ಮವದಾ ಚರೇತ್ ||148||

# 19. ಕಪಿಲಸ್ಮೃತಿ

ಸೃಷ್ಟಿಯ ಪ್ರಾರಂಭದ ಪದ್ಮಕಲ್ಪದ, ಸ್ವಯಂಭೂಮನ್ವಂತರದ ಸಮಯ ಪಿತಾಮಹ ಬ್ರಹ್ಮನು ಸೃಷ್ಟಿಯ ವಿಸ್ತಾರದ ಕಾರ್ಯದಲ್ಲಿ ನಿರತನಾಗಿದ್ದಾನೆ. ಆತನು ತನ್ನ ಮಾನಸ ಪುತ್ರನಾದ ಕರ್ದಮನಿಗೆ ಪ್ರಜಾವೃದ್ಧಿ ಮಾಡುವಂತೆ ಆಜ್ಞಾಪಿಸಿದನು.

ಕರ್ದಮ ಮಹರ್ಷಿಯು ತಂದೆಯ ಆಜ್ಞಾನುಸಾರ ತಪಸ್ಸು ಮಾಡ ತೊಡಗಿದನು. ಹತ್ತು ಸಾವಿರ ವರ್ಷಗಳವರೆಗೂ ತಪಸ್ಸು ಮಾಡಿದ ಈ ಮಹಾನ್ ತಪಸ್ಸಿನಿಂದ ಪ್ರಸನ್ನನಾದ ನಾರಾಯಣನು ಪ್ರಸನ್ನಗೊಂಡು, ಪ್ರತ್ಯಕ್ಷನಾಗಿ, ಹೀಗೆಂದನು, ಮಹಾಮುನೆ ! ಸ್ವಯಂ ಭೂ ಮನುವು ತನ್ನ ದಿವ್ಯಲಕ್ಷಣ ಸಂಪನ್ನಳಾದ ದೇವಹೂತಿ ಎನ್ನುವ ಕನ್ಯೆಯನ್ನು ಕರೆದುಕೊಂಡು, ನಿನ್ನ ಬಳಿಗೆ ಬರುತ್ತಾನೆ. ಅವಳು ತುಂಬಾ ಸಾಧ್ವಿಯೂ, ನಿನಗೆ ತುಂಬಾ ಯೋಗ್ಯಳೂ ಆಗಿರುವಳು. ಅವಳಿಂದ ನಿನಗೆ ಒಂಭತ್ತು ಪುತ್ರಿಯರು ಪ್ರಾಪ್ತರಾಗುವರು. ನಾನೂ ಕೂಡ ನನ್ನ ಅಂಶ ರೂಪದಲ್ಲಿ ನಿನಗೆ ಮಗನಾಗಿ ಅವತಾರಗೊಂಡು, ಸಾಂಖ್ಯ ಶಾಸ್ತ್ರವನ್ನು ರಚನೆ ಮಾಡುವೆನು.

ಸಹಾಹಂ ಸ್ವಾಂ ಶಕಲಯಾ ತ್ವದ್ವೀರ್ಯೇಣ ಮಹಾಮುನೇ ।
ತವ ಕ್ಷೇತ್ರೇ ದೇವಹೂತ್ಯಾಂ ಪ್ರಣೇಶ್ಯೆ ತತ್ತ್ವ ಸಂಹಿತಾಂ ||

(ಶ್ರೀಮದ್ಭಾಗವತ 3/21/32)

ಪರಮಾತ್ಮನ ಕೃಪೆಯಿಂದ ಆತನು ಹೇಳಿದಂತೆಯೇ ಎಲ್ಲವೂ ನಡೆಯಿತು.

ಕರ್ದಮ-ದೇವಹೂತಿಯರ ಮಗನಾಗಿ ಕಪಿಲನ ಅವತಾರವಾಯಿತು. ಈತನ ಮುಖಾಂತರ ಸಮಸ್ತ ಜಗತ್ತಿಗೆ ಜ್ಞಾನ ಹಾಗೂ ಭಕ್ತಿಗಳು ಲಭಿಸಿದುವು. ತನ್ನ ತಾಯಿಗೇ ಮೊಟ್ಟಮೊದಲನೆಯದಾಗಿ ತತ್ತ್ವಜ್ಞಾನ ಹಾಗೂ ಈಶ್ವರ-ಭಕ್ತಿಗಳ ಬಗ್ಗೆ ಉಪದೇಶ ನೀಡಿದ.

'ಪ್ರತಿ ವ್ಯಕ್ತಿಯ ಮನಸ್ಸಿನಲ್ಲೂ ಪ್ರಪಂಚದ ಎಲ್ಲ ಭೋಗಗಳನ್ನು ದೂರ ಮಾಡುವ ವೈರಾಗ್ಯಭಾವವು ಉದಯಿಸಿದಲ್ಲಿ, ಜ್ಞಾನ ಪ್ರಾಪ್ತಿಯಾಗುತ್ತದೆ. ಮಾನವ ಶರೀರದಲ್ಲಿ ರಕ್ತ, ಮೂಳೆ, ಮಾಂಸ ಬಿಟ್ಟು ಬೇರೆ ಏನೂ ಇಲ್ಲ. ಇಂತಹ ಘೃಣಿತ ದೇಹದ ಬಗ್ಗೆ ಆಸಕ್ತನಾಗಿ, ವ್ಯಕ್ತಿಯು ಅನೇಕ ಅನರ್ಥಗಳನ್ನು ಮಾಡುವನು. ಇದರ ಫಲವಾಗಿ ಬಹಳ ಕಷ್ಟದಿಂದ ಅಂತಹವನು ಸಾವನ್ನು ಅಪ್ಪುವನು. ಸಾವಿನ ನಂತರ ಅವನ ಪಾಪದ ಫಲವಾಗಿ ನರಕದಲ್ಲಿ ಅನೇಕ ವರ್ಷಗಳವರೆವಿಗೆ ಭಯಾನಕ ಕಷ್ಟಗಳನ್ನು ಅನುಭವಿಸುವನು. ಪರಮಾತ್ಮನ ಕೃಪೆಯಿಂದಲೇ ಅವನು ಮಾನವ ಜನ್ಮವನ್ನು ಪಡೆಯುವನು. ಗರ್ಭದಲ್ಲಿರುವಾಗಲೇ ಅನೇಕ ದುಃಖಗಳನ್ನು ಅನುಭವಿಸುವನು. ಬಾಲ್ಯದಲ್ಲಿ ಪರಾಧೀನತೆ ಇದ್ದು, ವಿವಶತೆಯಿಂದ ಅನೇಕ ಕಷ್ಟಗಳನ್ನು ಅನುಭವಿಸುವನು. ಯೌವನದಲ್ಲಿ ಕಾಮಕ್ರೋಧಾದಿ ವಿಕಾರಗಳಿಂದ ಮಾನವನು ಕುರುಡನಾಗುತ್ತಾನೆ. ಅನೇಕ ಚಿಂತಾಗ್ನಿಗಳಿಂದ ಜ್ವಲಿಸುತ್ತಿರುವನು. ವೃದ್ಧಾವಸ್ಥೆಯಂತೂ ದುಃಖರೂಪದ ಮತ್ತೊಂದು ಅವತಾರ.

'ಈ ರೀತಿಯಲ್ಲಿ ಮಾನವ ಜನ್ಮ ಪೂರ್ತಿ ಕ್ಲೇಶಪೂರ್ಣವಾದುದು. ನಿರಂತರ ಚಿಂತನೆಯಿಂದ, ಸತ್ಕರ್ಮಗಳ ಪುಣ್ಯಪ್ರಭಾವದಿಂದ ಅವನಲ್ಲಿ ವೈರಾಗ್ಯದ ಉದಯವಾಗುತ್ತದೆ. ಆಗ ಅವನು ಈ ಜಗತ್ತಿನ ದುಃಖಗಳನ್ನು ಅರಿಯುವನು. ಪರಮಾತ್ಮನ ಚರಣಗಳಲ್ಲಿ ಪ್ರೇಮ ಉಂಟಾಗುವುದರಿಂದ, ಪರಮಾತ್ಮನ ಧ್ಯಾನ ಮಾಡುತ್ತಾ, ಆತನ ಅನೇಕ ದಿವ್ಯಗುಣಗಳ ಕೀರ್ತನ ಮಾಡುವುದರಿಂದ ವ್ಯಕ್ತಿಯ ಹೃದಯ ಶುದ್ಧವಾಗುತ್ತದೆ.'

'ನಿಷ್ಕಾಮ ಭಕ್ತಿಯ ಮುಖಾಂತರ ಪರಮಾತ್ಮನಲ್ಲಿ ಮನಸ್ಸನ್ನು ಕೇಂದ್ರೀಕರಿಸಿ, ಪ್ರಪಂಚದ ಬಂಧನದಲ್ಲಿರುವ ಐದೂ ಕೋಶಗಳು ನಿಧಾನವಾಗಿ ಕರಗತೊಡಗುತ್ತವೆ. ಭಕ್ತಿಯ ನಿರ್ಮಲ ಚಿತ್ತದಿಂದಲೇ ಜ್ಞಾನದ ಉದಯವಾಗುವುದು. ಭಗವಂತನಲ್ಲಿ ಶರಣಾಗತನಾಗದೆ ಹೃದಯವು ಶುದ್ಧವಾಗುವುದಿಲ್ಲ.

ಆದುದರಿಂದ ಮಾನವನು ನಿಧಾನ-ನಿಧಾನವಾಗಿ ದುಃಖರೂಪೀ ಪ್ರಾಪಂಚಿಕ ಭೋಗಗಳಿಂದ ಮನಸ್ಸನ್ನು ದೂರ ಮಾಡಿ, ಪರಮಾತ್ಮನ ಪಾದಾರವಿಂದಗಳಲ್ಲಿ ಒಂದಾಗಬೇಕು.'

-ಎಂಬುದು ಮಹಾತ್ಮಾ ಕಪಿಲನ ಉಪದೇಶಗಳ ಸಂಕ್ಷಿಪ್ತ ರೂಪವಾಗಿದೆ.

ಭಾಗವತ ಧರ್ಮದ ಹನ್ನೆರಡು ಮುಖ್ಯ ಆಚಾರ್ಯರಲ್ಲಿ ಕಪಿಲನು ಒಬ್ಬನಾಗಿರುವನು. ಈತನು ಸಾಂಖ್ಯ ಧರ್ಮದ ಪ್ರವರ್ತಕನು ಹಾಗೂ ದಯೆ ಹಾಗೂ ಅಹಿಂಸಾ ಧರ್ಮಗಳ ಮುಖ್ಯ ವಿಸ್ತಾರಕನೆಂದೂ ನಂಬಲಾಗಿದೆ.

ಮಹಾಭಾರತ ಹಾಗೂ ಪುರಾಣಗಳಲ್ಲಿ ಈತನ ದಿವ್ಯೋಪದೇಶಗಳು ದೊರೆಯುತ್ತವೆ. ಧನ, ಮದಾಂಧರ ಗತಿ ಏನಾಗುತ್ತದೆ, ಹೇಗಾಗುತ್ತದೆ ಎಂಬುದನ್ನು ಈತನು ಹೀಗೆ ವಿವರಿಸಿದ್ದಾನೆ -

'ಐಶ್ವರ್ಯದ ಮದದಿಂದ ಉನ್ಮತ್ತನಾದವನು, ಕಾಮಿಯಾದವನು, ಅಹಂಕಾರದಿಂದ ಮೂಢನಾದವನು - ಇಂತಹವರಲ್ಲಿ ವಿವೇಕವಿರುವುದಿಲ್ಲ. ದುಷ್ಟರು ಸಜ್ಜನರನ್ನು ಗೋಳು ಹೊಯ್ದುಕೊಳ್ಳುವುದರಲ್ಲಿ ಆಶ್ಚರ್ಯವೇನೂ ಇಲ್ಲ. ನದಿಯ ವೇಗವು ದಡದಲ್ಲಿನ ಬೃಹತ್ ವೃಕ್ಷಗಳನ್ನು ಬುಡಮೇಲು ಮಾಡುತ್ತದೆ. ಧನ, ಯೌವ್ವನ, ಪರಸ್ತ್ರೀಯರು ಇರುವ ಕಡೆಯಲ್ಲಿ ಬರೀ ಮೂರ್ಖರು, ಕುರುಡರೇ ಇರುತ್ತಾರೆ. ದುಷ್ಟನ ಬಳಿಯಲ್ಲಿ ಲಕ್ಷ್ಮಿ ಇದ್ದಲ್ಲಿ, ಅಂತಹವನು ಲೋಕಕಂಟಕನಾಗಿ, ಅದನ್ನೇ ನಾಶಮಾಡುವನು. ಬೀಸು ಗಾಳಿ ಯಾವ ರೀತಿಯಲ್ಲಿ ಉರಿಯುವ ಬೆಂಕಿಯನ್ನು ವಿಸ್ತರಿಸಲು ಸಹಾಯ ಮಾಡುತ್ತದೆಯೊ, ಹಾವಿಗೆ ಕುಡಿಸಿದ ಹಾಲು ಯಾವ ರೀತಿಯಲ್ಲಿ ವಿಷವನ್ನು ಹೆಚ್ಚಿಸುವುದರಲ್ಲಿ ಸಹಾಯ ಮಾಡುತ್ತದೆಯೊ, ಅದೇ ರೀತಿಯಲ್ಲಿ ದುಷ್ಟನ ಬಳಿ ಇರುವ ಲಕ್ಷ್ಮಿಯು ಅವನ ದುಷ್ಟತೆಯನ್ನು ಹೆಚ್ಚು ಮಾಡುತ್ತದೆ. ಧನ ಮದದಿಂದ ಅಂಧನಾದವನು ಕಣ್ಣಿದ್ದೂ ಕುರುಡನಾಗಿರುವನು, ಅವನಿಗೆ ಒಳ್ಳೆಯದು ಯಾವುದೂ ಕಾಣುವುದಿಲ್ಲ. ತನ್ನ ಒಳ್ಳೆಯದರ ಬಗ್ಗೆ ಯೋಚಿಸಿದಾಗಲೇ ಅವನು ಉತ್ತಮನಾಗುವನು.'

ಈ ರೀತಿಯಲ್ಲಿ ಮಹಾತ್ಮಾ ಕಪಿಲನು ಪರೋಪಕಾರಿ, ಸದಾಚಾರ ಸಂಪನ್ನನು ಹಾಗೂ ಧರ್ಮಪರಾಯಣನೂ ಆಗಿದ್ದನು. ಈತನ ಅವತಾರವು ಪ್ರಪಂಚದಲ್ಲಿ ಸದ್ಧರ್ಮ, ಜ್ಞಾನ, ಭಕ್ತಿ, ಪ್ರೇಮ, ದಯೆ, ಸತ್ಕರ್ಮನು

ಸ್ಥಾನಗಳ ಮಾರ್ಗವನ್ನು ಲೋಕರಿಗೆ ತೋರಿಸುವುದಕ್ಕಾಗಿಯೇ ಆದುದು. 'ಜೀವಿಗಳು ಸತ್ಕರ್ಮಗಳನ್ನು ಮಾಡುತ್ತಾ ತತ್ತ್ವ ಜ್ಞಾನವನ್ನು ಹೇಗೆ ಪಡೆಯುವುದು ? ಎನ್ನುವುದೇ ಈತನ ಜೀವನ ದರ್ಶನವಾಗಿತ್ತು. ಈತನು ಸಂಖ್ಯಾಶಾಸ್ತ್ರವನ್ನು ರಚಿಸಿರುವುದೇ ಅಲ್ಲದೆ ಧರ್ಮಶಾಸ್ತ್ರದ ಒಂದು ಬೃಹತ್ ಸಂಹಿತೆಯನ್ನು 'ಕಪಿಲ ಸ್ಮೃತಿ' ಎನ್ನುವ ಹೆಸರಿನಲ್ಲಿ ರಚಿಸಿದ್ದಾನೆ. ಇದಲ್ಲದೆ ಕಪಿಲಗೀತಾ, ಕಪಿಲ ಪಾಂಚರಾತ್ರ ಇತ್ಯಾದಿ ಗ್ರಂಥಗಳನ್ನು ಈತನೇ ಬರೆದಿರುವ ನೆಂದು ಹೇಳಲಾಗುತ್ತದೆ.

ಕಪಿಲಸ್ಮೃತಿಯು ಮೂಲತಃ ತುಂಬಾ ವಿಸ್ತಾರವಾದ ಗ್ರಂಥ. ಇದರಲ್ಲಿ ಸುಮಾರು 100 ಅನುಷ್ಟುಪ್ ಶ್ಲೋಕಗಳಿವೆ. ಇದರಲ್ಲಿ ವೇದಾದಿ ಶಾಸ್ತ್ರಗಳು, ಪುರಾಣಗಳು ಹಾಗೂ ಮನು ಇತ್ಯಾದಿ ಧರ್ಮಶಾಸ್ತ್ರಗಳ ಭಾವನೆಗಳನ್ನು ಸಾರಸಂಗ್ರಹ ರೂಪವನ್ನು ನೀಡಲಾಗಿದೆ. ಈ ಸ್ಮೃತಿಯು ಕಪಿಲ–ಶೌನಕರ ಸಂವಾದ ರೂಪದಲ್ಲಿ ರಚಿಸಲಾಗಿದೆ. ಮಹರ್ಷಿ ಕಪಿಲನು ಇದರ ವಕ್ತಾರ ನಾಗಿದ್ದು, ಶೌನಕ ಸಂಹಿತೆಯ ಆಚಾರ್ಯನಾದ ಶೌನಕನು ಇದರ ಶ್ರೋತೃ ವಾಗಿದ್ದಾನೆ.

## ವೇದಜ್ಞಾನದ ಮಹತ್ವ

ಈ ಸ್ಮೃತಿಯ ಪ್ರಾರಂಭಿಕ ಶ್ಲೋಕಗಳಲ್ಲಿ ವೇದಗಳ ಮಹಿಮೆಯನ್ನು ಹಾಡಲಾಗಿದೆ. ಇದರ ಪ್ರಕಾರ ವೇದಗಳನ್ನು ಸ್ವರ, ಮಾತ್ರ–ಇತ್ಯಾದಿಗಳಿಂದಲೇ ಅಧ್ಯಯನ ಮಾಡಬೇಕೆಂದು ಹೇಳಲಾಗಿದೆ. ಈ ಮಾತನ್ನು ಒತ್ತಿ ಹೇಳುತ್ತಾ, ವೇದಪಾಠದ ಅಧಿಕಾರಿಗಳು ಮಾತ್ರ ಇದನ್ನು ಪಠಿಸಬೇಕು ಎಂದು ಕಪಿಲನು ತಿಳಿಸಿದ್ದಾನೆ.

ವೇದ ಪಠಣವನ್ನು ಮಾಡಬೇಕಾದರೆ, ಅಂತಹ ವ್ಯಕ್ತಿಯು ಶುದ್ಧ ಆಚಾರ–ವಿಚಾರ ಸಂಪನ್ನನಾಗಿರಬೇಕು. ಅಂತೆಯೇ ವಿಧಿಪೂರ್ವಕವಾಗಿ ಸಂಧ್ಯಾದಿ ನಿತ್ಯಕರ್ಮಗಳನ್ನು ಅನುಷ್ಠಾನ ಮಾಡುವಂತಹವನಾಗಿರಬೇಕು. ಅಪವಿತ್ರ ರೀತಿಯಲ್ಲಿ ಶೌಚಾಚಾರದ ನಿಯಮಗಳನ್ನು ಪಾಲಿಸದೆ, ಮಂತ್ರಗಳ ಸ್ವರ–ವರ್ಣಾದಿಗಳ ಜ್ಞಾನವಿಲ್ಲದೆ ವೇದವನ್ನು ಪಠಿಸಬಾರದು. ಸಾಕ್ಷಾತ್ ನಾರಾಯಣನೇ ವೇದ. ಆದುದರಿಂದ ವೇದದ ಸರಿಯಾದ ಅರ್ಥವನ್ನು, ಸರಿ ಯಾದ ರೀತಿಯಲ್ಲಿ ಅರಿತಿರುವ ತತ್ವಜ್ಞ ವ್ಯಕ್ತಿಯು ನಾರಾಯಣನೇ ಆಗಿರುತ್ತಾನೆ.

ವೇದೋ ನಾರಾಯಣಃ ಸಾಕ್ಷಾತ್ ತದರ್ಥಜ್ಞಃ ಸ ಏವ ಹಿ ||37||

ಈ ರೀತಿಯಲ್ಲಿ ಪ್ರಾರಂಭದಲ್ಲಿ ವೇದ ಜ್ಞಾನದ ಮಹತ್ವವನ್ನು ಪ್ರತಿಪಾದನೆ ಮಾಡಿರುವ ಕಪಿಲ ಮಹರ್ಷಿಯು, ಮುಂದುವರೆದು ವಿಸ್ತಾರ ರೂಪದಲ್ಲಿ ಶ್ರಾದ್ಧ ಪ್ರಕರಣ, ದತ್ತಕ ಪುತ್ರನ ಮೀಮಾಂಸೆ, ದಾನ ಪ್ರಕರಣ, ಮುತ್ತೈದೆ ಹಾಗೂ ವಿಧವಾ ಸ್ತ್ರೀಯರ ಕರ್ತವ್ಯ, ರಾಜ ಧರ್ಮದಲ್ಲಿ ದಂಡ ವಿಧಾನ ಹಾಗೂ ಪ್ರಾಯಶ್ಚಿತ್ತ ಪ್ರಕರಣಗಳನ್ನು ವಿವರಿಸಿದ್ದಾನೆ.

## ಶ್ರಾದ್ಧ ಪ್ರಕರಣ

ಪಿತೃಗಳ ಶ್ರಾದ್ಧವನ್ನು ತಪ್ಪದೆ ಆಚರಿಸಬೇಕು. ಇದರಲ್ಲಿ ಯಾವ ರೀತಿಯಲ್ಲಿ ಕ್ರಿಯೆಯ ಲೋಪ ಆಗಬಾರದು. ಪಿತೃಗಳು ಎಲ್ಲವನ್ನು ಬಲ್ಲವರು. ಶ್ರಾದ್ಧಕರ್ತನ ಪರಿಸ್ಥಿತಿ, ಅವನಲ್ಲಿನ ಶ್ರದ್ಧಾಭಾವವನ್ನು ಅರಿಯಬಲ್ಲವರಾಗಿರುತ್ತಾರೆ. ಅವರುಗಳು ದಯಾಳುಗಳಾಗಿರುವುದರಿಂದ ಸ್ವಲ್ಪಮಾತ್ರದ ಭಕ್ತಿಯಿಂದಲೇ ಅವರು ಪ್ರಸನ್ನರಾಗುವರು. ಶ್ರಾದ್ಧಕರ್ತನು ಶ್ರಾದ್ಧದ ಎಲ್ಲ ಉಪಕರಣಗಳನ್ನು ಶುದ್ಧ ಮನಸ್ಸಿನಿಂದ ಅಳವಡಿಸಿಕೊಳ್ಳಬೇಕು. ಯಾವುದೇ ರೀತಿಯ ಜಿಪುಣತನವನ್ನು ತೋರಿಸಬಾರದು. ವಿಷಮ ಪರಿಸ್ಥಿತಿ ಉಂಟಾದಲ್ಲಿ, ಅನಾನುಕೂಲ ಉಂಟಾದಲ್ಲಿ, ಮಾನಸಿಕವಾಗಿ ಆ ತೊಂದರೆಗಳ ಬಗ್ಗೆ ಕ್ಷಮಾ-ಪಣೆ ಹೇಳಿಕೊಂಡಲ್ಲಿ ಇಂತಹ ವರ್ತನೆಯಿಂದ ತೃಪ್ತರಾಗಿ ಕರ್ತನನ್ನು ಪಿತೃಗಣವು ಮನ್ನಿಸುತ್ತದೆ. ಆದರೆ ಎಲ್ಲ ಅನುಕೂಲಗಳಿದ್ದೂ ತಿಥಿಯನ್ನು ಮಾಡದೆ ಇರುವುದು ಪಾಪವಾಗುತ್ತದೆ-

ಕುತ್ರ ಕೇನ ಕಥಂ ಕಸ್ಮಾತ್ ಪ್ರಭಾವಿಷ್ಯತಿ ವೃ ತದಾ |
ಕಿಂ ಕುರ್ಮಶ್ಚೇತಿ ತಚ್ಚಿಂತಾಪರ ಏವ ಸ್ಥಿತೋ ಭವೇತ್ ||61||
ತಾವನ್ಮಾತ್ರೇಣ ತೇಷಾಂ ತು ನಿತ್ಯಮೇವ ವಿಧಾನತಃ |
ಕೃತಮೇವ ಭವೇಚ್ಛ್ರಾದ್ಧಂ ಕೀರ್ತನಾದೇವ ಕೇವಲಮ್ ||62||

ಪ್ರೇತತ್ವದ ನಿವೃತ್ತಿಗಾಗಿ ಸಪಿಂಡೀಕರಣ ಶ್ರಾದ್ಧದ ಅವಶ್ಯಕತೆಯನ್ನು ತಿಳಿಸಲಾಗಿದೆ. ಈ ರೀತಿಯ ಸಪಿಂಡೀಕರಣ ಶ್ರಾದ್ಧವನ್ನು ಮಾಡದೆ ಪ್ರೇತತ್ವಕ್ಕೆ ಮುಕ್ತಿ ದೊರೆಯುವುದಿಲ್ಲ-

ಸಪಿಂಡೀಕರಣಾಭಾವೇ ಪ್ರೇತತ್ವಂ ನ ನಿವರ್ತತೆ ||

ಮೃತನಾದ ವ್ಯಕ್ತಿಗೆ ಹತ್ತು ದಿನಗಳವರಗೆ 'ಪ್ರೇತ' ರೂಪವಿರುತ್ತದೆ.

ಇದರ ನಿಮಿತ್ತ 'ದಶರಾತ್ರ-ಶ್ರಾದ್ಧ' ವನ್ನು ಮಾಡಬೇಕು. ಆಮೇಲೆ ಸಪಿಂಡೀಕರಣ ಶ್ರಾದ್ಧವನ್ನು ಮಾಡಬೇಕು. ಇದರಲ್ಲಿ ಪ್ರೇತದ ಪಿಂಡವನ್ನು ಪಿತೃಗಳ ಪಿಂಡದಲ್ಲಿ ಸೇರಿಸಲಾಗುತ್ತದೆ. ಈ ಕಾರಣದಿಂದಲೇ ಇದನ್ನು 'ಸಪಿಂಡೀಕರಣ ಶ್ರಾದ್ಧ'ವೆಂದು ಕರೆಯಲಾಗುವುದು.

ಈ ರೀತಿಯಲ್ಲಿ ಈ ಹತ್ತನೇ ದಿನದ ನಂತರ ಮೃತ ವ್ಯಕ್ತಿಯನ್ನು ಪಿತೃಗಳ ರೂಪದಲ್ಲಿ ಕಾಣಲಾಗುವುದು. ಅಂದರೆ ಅವರನ್ನು 'ಪಿತೃಗಣ'ವೆಂದು ಪರಿಗಣಿಸಲಾಗುವುದು. ಇದರ ಪರಿಣಾಮವಾಗಿ ಸಗೋತ್ರ, ಪಿಂಡವಿಡುವವರಲ್ಲಿ ಸಮಾನರಾಗಿರುವವರಿಗೆ (ಸಪಿಂಡಿಗಳು) ಹತ್ತು ದಿನಗಳವರೆಗೆ ಜನನಾ ಶೌಚ, ಹಾಗೂ ಮರಣಾ ಶೌಚಗಳಿರುತ್ತವೆ.

ದಶರಾತ್ರಂ ಸಪಿಂಡಾನಾಂ ಜಾತಕಂ ಮೃತಕಂ ಸ್ಮೃತಮ್ ||109||

ಸಪಿಂಡೀಕರಣ ಶ್ರಾದ್ಧದ ನಂತರ ಉದಕುಂಭ ದಾನವನ್ನು ಮಾಡಬೇಕಾಗುತ್ತದೆ. ಇದರ ನಂತರ ಮಾಸಿಕ ಶ್ರಾದ್ಧಗಳನ್ನು ಪಾರ್ವಣ ಶ್ರಾದ್ಧದ ವಿಧಾನದಲ್ಲಿ ಮಾಡಬೇಕಾಗುತ್ತದೆ. ಕಡೆಯಲ್ಲಿ ವರ್ಷಾಬ್ಧಿಕ ಶ್ರಾದ್ಧವನ್ನು ಮಾಡಬೇಕು. ಪುತ್ರಹೀನನಾದ ಚಿಕ್ಕಪ್ಪ, ದೊಡ್ಡಣ್ಣ, ಮಾತಾಮಹ ಹಾಗೂ ಆತನ ಪತ್ನಿಯರ ಶ್ರಾದ್ಧವನ್ನು ತಂದೆಗೆ ಮಾಡುವ ರೀತಿಯಲ್ಲೆ ಶ್ರಾದ್ಧವನ್ನು ಮಾಡಬೇಕು—

ಅಪುತ್ರಸ್ಯ ಪಿತೃವ್ಯಸ್ಯ ಭ್ರಾತುಶ್ಚೈವಾಗ್ರ ಜನ್ಮನಃ ||130||
ಮಾತಾಮಹಸ್ಯ ತತ್ ಪತ್ನ್ಯಾಃ ಶ್ರಾದ್ಧಂ ಪಿತೃವದಾಚರೇತ್ ||131||

ದೇವಪೂಜೆ ಇತ್ಯಾದಿಗಳ ಮುಖಾಂತರವೂ ಕೂಡ ಪಿತೃಕರ್ಮ, ತರ್ಪಣ ಶ್ರಾದ್ಧಾದಿಗಳನ್ನು ಮಾಡಬಹುದು, ಹಾಗೂ ಇವುಗಳಿಂದ ಶ್ರಾದ್ಧಕ್ಕೆ ಹೆಚ್ಚಿನ ಮಹತ್ವ ಉಂಟಾಗುತ್ತದೆ. ಎಲ್ಲ ಗ್ರಹಗಳಲ್ಲಿ ಸೂರ್ಯನು ಶ್ರೇಷ್ಠನಾಗಿರುವಂತೆ ಎಲ್ಲ ಕರ್ಮಗಳಲ್ಲಿಯೂ ಪಿತೃಕರ್ಮವು ಉತ್ತಮೋತ್ತಮ ಕರ್ಮವಾಗಿದೆ—

ಕರ್ಮಭ್ಯೋ ನಿಖಿಲೇಭ್ಯೋ ವೈ ಸೂರ್ಯಗ್ರಹ ಗ್ರಹಾಧಿಕಃ ||292||
ಪೈತೃಕಂ ಕರ್ಮ ಪರಮಮಧಿಕಂ ಚೋತ್ತಮೋತ್ತಮಮ್ ||293||

ಇದರ ಪ್ರಕಾರ ಕಲಿಯುಗದಲ್ಲಿ ಶ್ರಾದ್ಧ ಹಾಗೂ ಸಂಧ್ಯಾವಂದನೆ ಕರ್ಮಗಳು ಓರ್ವ ವ್ಯಕ್ತಿಯಲ್ಲಿ 'ವಿಪ್ರತ್ವ' ವನ್ನು ಪ್ರತಿಷ್ಠಾಪಿಸುವುದು. ಅವನ ನಿವೃತ್ತಿಯುತ ಇವೆರಡೇ ಪರಮ ಹೇತುವಾದವುಗಳು. ಆದುದರಿಂದ ಶ್ರದ್ಧಾ-ಭಕ್ತಿ

ಪೂರ್ವಕವಾಗಿ ಈ ಎರಡೂ ಸತ್ಕರ್ಮಗಳನ್ನು ಅವಶ್ಯಕವಾಗಿ ಮಾಡಲೇಬೇಕು.

ವಿಪ್ರತ್ವಂ ಶ್ರಾದ್ಧ ಸಂಧ್ಯಾಭ್ಯಾಂ ಕಲೌ ನಾನ್ಯೇನ ನಿವೃತ್ತಿಃ |
ತಸ್ಮಾತು ತದ್‌ದ್ವಯಂ ಸಮ್ಯಕ್ ಭಕ್ತ್ಯಾನುಷ್ಠೇಯಮೇವ ವೈ ||296||

ಮಗಳು ಹಾಗೂ ಮಗನ ಮದುವೆ, ಗೃಹಪ್ರವೇಶ, ಚೂಡಾಕರ್ಮ, ಸೀಮಂತೋನ್ನಯನ, ಪುತ್ರಜನ್ಮ–ಇತ್ಯಾದಿ ಶುಭಕಾರ್ಯಗಳಲ್ಲಿ ನಂದೀಮುಖ ಶ್ರಾದ್ಧ ಹಾಗೂ ಪಿತೃಗಳ ಪೂಜೆಯನ್ನು ಮಾಡಬೇಕು.(74–75)

ಇದೇ ಶ್ರಾದ್ಧ ಪ್ರಕರಣವನ್ನು ವಿವರಿಸುತ್ತಾ 'ದೌಹಿತ್ರ'ನ ವಿಶೇಷತೆ ಹಾಗೂ 'ದತ್ತಕ' ಪುತ್ರನ ಸ್ವೀಕಾರ ವಿಧಿ ಹಾಗೂ ಅವರುಗಳಿಗೆ ಇದರ ಬಗ್ಗೆ ಇರುವ ಶ್ರಾದ್ಧಾಧಿಕಾರದ ವಿವರಗಳನ್ನು ಬಹಳಷ್ಟು ವಿವರವಾಗಿ ವರ್ಣಿಸಲಾಗಿದೆ

'ಕಪಿಲಸ್ಮೃತಿ' ಯಲ್ಲಿ ದಾನ ಮಾಡುವುದರ ಪ್ರಾಮುಖ್ಯತೆಯನ್ನು ವಿಸ್ತಾರವಾಗಿ ವಿವರಿಸಲಾಗಿದೆ. ಮುಖ್ಯವಾಗಿ ಧರಾದಾನ, ಧೇನುದಾನ, ಗಜ ದಾನ, ರಥದಾನ, ವಸ್ತ್ರದಾನ, ವೃಷಭದಾನ, ಶಯ್ಯಾದಾನ, ತುಲಾದಾನ, ರತ್ನದಾನ, ಮಹೌಷಧಿ ದಾನ, ಹಿರಣ್ಯದಾನ, ಸಪ್ತಧಾನ್ಯ ದಾನ ಹಾಗೂ ದೇವ ಪ್ರತಿಮಾ ದಾನ ಇತ್ಯಾದಿ ಅನೇಕ ವಿಧಗಳ ದಾನಗಳನ್ನು ವರ್ಣಿಸಲಾಗಿದೆ. ಆದರೆ ಇವೆಲ್ಲವುಗಳಲ್ಲಿ ಭೂ(ಮಿ)ದಾನವು ಸರ್ವೋತ್ಕೃಷ್ಟವಾದುದು.

ಧರಾದಾನಂ ಪ್ರಶಂಸಂತಿ ಸರ್ವದಾನೋತ್ತಮೋತ್ತಮಮ್ ||429||

ದಾನದ ವಿಷಯದಲ್ಲಿ ಮಹರ್ಷಿ ಕಪಿಲನು ಕೆಲವೊಂದು ಮಹತ್ವದ ವಿವರ ಗಳನ್ನು ತಿಳಿಸಿದ್ದಾನೆ. ದಾನವನ್ನು ಸತ್ಪಾತ್ರನಿಗೆ, ವಿಧಿಪೂರ್ವಕವಾಗಿ ನೀಡ ಬೇಕು. ನಿಷ್ಕಾಮ ಭಾವದಿಂದ ಬ್ರಹ್ಮಜ್ಞಾನವನ್ನು ಪಡೆಯುವುದಕ್ಕಾಗಿ ಮಾತ್ರ ಅದರ ಗುರಿಯಾಗಿರಬೇಕು. ಭಗವಂತನ ತೃಪ್ತ್ಯರ್ಥವಾಗಿ, ಅವನ ಪ್ರೀತ್ಯರ್ಥ ವಾಗಿ ದಾನ ಮಾಡಿದಲ್ಲಿ ಅಂತಹ ಕಾರ್ಯವು ಕೆಲವೊಂದು ಲೋಪದೋಷಗಳು ಹಾಗೂ ವೈಫಲ್ಯತೆಗಳು ಇದ್ದಾಗ್ಯೂ ಅದು ಅಪೂರ್ಣವಾಗುವುದಿಲ್ಲ. ಪರಮಾತ್ಮನ ಕೃಪೆಯಿಂದ ಅದು ಪೂರ್ಣವೆಂದೇ ಹೇಳಬೇಕು. ಅಂತಹುದು ಫಲಪ್ರದವಾಗಿರುವುದೂ ಆಗಿರುತ್ತದೆ. ಒಂದು ವೇಳೆ ಪ್ರತಿಫಲವನ್ನು ಅಪೇಕ್ಷಿಸಿ ದಾನ ಮಾಡಿದ್ದೇ ಆದರೆ ಅದು ಅಪೂರ್ಣವಾದುದಾಗಿದ್ದು, ವಿಧಿದೋಷದಿಂದ ಕೂಡಿರುತ್ತದೆ. ಕರ್ಮದ ಅಂಗದಲ್ಲಿ ಲೋಪವಾಗುವುದರಿಂದ ಕಾಮ್ಯ–ಕರ್ಮದ ಪೂರ್ಣತೆಯು ಸಫಲತೆಯಲ್ಲಿ ಸಂಶಯ ಉಂಟಾಗುತ್ತದೆ.

ಒಂದು ವೇಳೆ ಲೋಭದಿಂದ, ಮೋಸಗಾರಿಕೆ ಹಾಗೂ ನೀಚತನಗಳಿಂದ ದಾನ ಮಾಡಿದ್ದೇ ಆದಲ್ಲಿ, ಅಂತಹ ದಾನವು ಸಫಲವಾದುದಾಗಿರುವುದಿಲ್ಲ. ಆದುದರಿಂದ ಸಜ್ಜನರ ಮುಖಾಂತರ ಭಗವತ್ ಪ್ರೀತಿ ನಿಮಿತ್ತವಾಗಿ ದಾನವನ್ನು ಮಾಡಬೇಕು. ಅದರ ಮುಖಾಂತರ ಯಾವುದೇ ಪ್ರತಿಫಲವನ್ನು ಅಪೇಕ್ಷಿಸ ಬಾರದು.

ಕಾಮನಾರಹಿತಾನಿ ಸ್ಯುರ್ಬ್ರಹ್ಮಜ್ಞಾನಾಯ ಕೇವಲವ ॥441॥
ಯತ್ಕಿಂಚಿದಂಗ ಲೋಪೇSಪಿ ಕಾಮ್ಯಂ ಕರ್ಮ ನ ಸಿಧ್ಯತಿ ॥444॥
ಅಪ್ಯನೇಕಾಂಗ ವಿಕಲಂ ಕ್ರಿಯತೇ ಪರಮೇಶ್ವರಸ್ |
ತತ್ಕರ್ಮ ಸಫಲಂ ಸದ್ಯೋ ಭವಿಷ್ಯತಿ ನ ಸಂಶಯಃ ॥445॥
ತಸ್ಮಾತ್ ಸದ್ಭಿಃ ಸದಾ ಕಾರ್ಯಂ ಕರ್ಮ ಮಾತ್ರಂ ನ ಸಂಶಯಃ ॥446॥

ಸ್ವತಃ ನ್ಯಾಯ ರೀತಿಯಲ್ಲಿ ಧನಾರ್ಜನೆ ಮಾಡಿ, ಅಂತಹ ಹಣದಿಂದ ಪಡೆದ ವಸ್ತುವನ್ನೇ ದಾನ ಮಾಡಬೇಕು. ಇಂತಹುದನ್ನು ದಾನ ಮಾಡುವವನೇ ದಾನಕ್ಕೆ ಅಧಿಕಾರಿಯಾಗಿರುತ್ತಾನೆ. ಬೇರೆಯವರ ವಸ್ತುವನ್ನು ಕದ್ದೋ, ಪಡೆದೋ ಮಾಡಿದ ದಾನವು ವ್ಯರ್ಥವಾಗುತ್ತದೆ. ಅನ್ಯಾಯದಿಂದ, ಕಳ್ಳತನ ದಿಂದ, ಮೋಸದಿಂದ ಪಡೆದ ಹಾಗೂ ಛಲ-ಕಪಟಗಳಿಂದ ಹೊಂದಿದ, ಸುಳ್ಳಿನ ಉಪಾಯಗಳಿಂದ ಪ್ರಾಪ್ತಗೊಂಡ ಹಣದ ಮುಖಾಂತರ ಪಡೆದ ವಸ್ತುವನ್ನು ದಾನ ಮಾಡಬಾರದು.

ಸ್ವೀಯಸ್ಯ ದಾನಂ ಕುರ್ಯಾತು ನಾನ್ಯದೀಯಸ್ಯ ವಸ್ತುನಃ |
ನ್ಯಾಯಾರ್ಜಿತಸ್ಯ ದ್ರವ್ಯಸ್ಯ ಪ್ರದಾನಂ ಯೋಗ್ಯತಾ ಭವೇತ್ ॥447॥
ಅನ್ಯಾಯೇನಾರ್ಜಿತಂ ದ್ರವ್ಯಂ ಚೌರ್ಯವ್ಯಾಮೋಹಾದಿಭಿಃ |
ಸಂಪ್ರಾಪ್ತ ಮಾಗತಂ ಚಾಪಿ ದಾನಯೋಗ್ಯಾನಿ ನಾಚರೇತ್ ॥448॥

ಮಾಡಿದ ದಾನದಿಂದ ಯಾರಿಗೂ ನೋವು ಆಗಬಾರದು, ಕಷ್ಟವಾಗ ಬಾರದು, ದುಃಖವಾಗಬಾರದು. ನೋವುಂಟು ಮಾಡುವ ದಾನವು ವ್ಯರ್ಥ ವಾಗುತ್ತದೆ. ಅದು ನಿಷ್ಫಲವೂ, ಅಧರ್ಮಕಾರಕವೂ ಆಗುತ್ತದೆ. ದಾನದ ಉದ್ದೇಶ್ಯವು ಸದ್ಧರ್ಮಾನುಷ್ಠಾನವಾಗಿದೆ. ಬೇರೆಯವರಿಗೆ ನೋವುಂಟು ಮಾಡುವ ದಾನವನ್ನು ಕೊಡುವವನು ಹಾಗೂ ಪಡೆಯುವವನು-ಇಬ್ಬರಿಗೂ ನರಕ ಪ್ರಾಪ್ತಿಯಾಗುತ್ತದೆ.

ಕೃತೇನ ದಾನೇನ ಯಥಾ ಪರಪೀಡಾ ನ ಜಾಯತೆ |
ವೃಥಾ ತಥಾ ಪ್ರಕುರ್ವೀತ ದಾನಂ ಧರ್ಮಾಯ ತತ್ಪರಃ ||449||
ಪರಪೀಡಾಕರಂ ದಾನಂ ದಾತುಸ್ತದ್ ಗ್ರಾಹಕಸ್ಯ ಚ |
ಉಭಯೋರ್ಗರ ಕಾಯ್ಯೈವ ಫಲಿಷ್ಯತಿ ನ ಚಾನ್ಯಥಾ ||450||

### ಧರ್ಮದ ಮಹಿಮೆ

ಹೇಗಾದರೂ ಇರು, ಎಂತಾದರೂ ಇರು ಸದಾ ಧರ್ಮಾಚರಣೆಯಲ್ಲಿ ಜೀವನ ನಿರ್ವಹಿಸು – ಎಂದು ಮಹರ್ಷಿ ಕಪಿಲನು ವಿಶೇಷ ರೀತಿಯಲ್ಲಿ, ಒತ್ತಿ ಹೇಳಿದ್ದಾನೆ. ಧರ್ಮಾಚರಣೆಯು ಪರಮ ಶ್ರೇಯಸ್ಕರವಾದುದು. ಇದು ಪರಮಗಂತವ್ಯವಾಗಿದೆ. ಅಧರ್ಮವನ್ನಂತೂ ಸೇವಿಸಲೇಬಾರದು. ಏಕೆಂದರೆ ಶಾಸ್ತ್ರಗಳು ಇದನ್ನು ಬಲವಾಗಿ ವಿರೋಧಿಸಿವೆ, ಹಾಗೂ ಇದು ನರಕಕ್ಕೆ ಹೇತುವಾಗುತ್ತದೆಯೆಂದು ತಿಳಿಸಿವೆ–

ಸದೈವ ಧರ್ಮಃ ಪರಮಃ ಸೇವ್ಯೋ ನಾಧರ್ಮ ಉಚ್ಯತೇ ||750||
ಧರ್ಮಮಾರ್ಗೇಣ ಸರ್ವೈಸ್ತ್ಯೈಃ ಗಂತವ್ಯೋ ನಾನ್ಯಮಾರ್ಗಕಃ ||751||

## ೩೦. ಯಾಜ್ಞವಲ್ಕ್ಯ ಸ್ಮೃತಿ

ಯಾಜ್ಞವಲ್ಕ್ಯನು ಓರ್ವ ಬ್ರಹ್ಮರ್ಷಿ. ಈತನು ಅಧ್ಯಾತ್ಮವೇತ್ತ, ಯೋಗಿ ಜ್ಞಾನಿ, ಧರ್ಮಾತ್ಮಾ ಹಾಗೂ ಶ್ರೀರಾಮಕಥೆಯ ಪ್ರವಕ್ತನಾಗಿದ್ದಾನೆ. ಪುರಾಣಗಳಲ್ಲಿ ಈತನನ್ನು ಬ್ರಹ್ಮನ ಅವತಾರವೆಂದು ಹೇಳಲಾಗಿದೆ. ಮೊದಲನೇ ಮಹಾಯುಗದಲ್ಲಿ ಈತನು ಚತುರ್ಮುಖನ ದೇಹದಿಂದ ಜನಿಸಿದವನೆಂದು ವಾಯುಪುರಾಣದಲ್ಲಿ ಹೇಳಲಾಗಿದೆ. ವಿಷ್ಣುಪುರಾಣ ಹಾಗೂ ಭಾಗವತದಲ್ಲಿ ಈತನು ಬ್ರಹ್ಮರಾತ (ದೇವರಾತೆ) ನೆಂಬ ಮುನಿಯ ಮಗನೆಂದು ಹೇಳಲಾಗುತ್ತದೆ. ವೇದಾಚಾರ್ಯನಾದ ಮಹರ್ಷಿ ವೈಶಂಪಾಯನನ ಶಿಷ್ಯ ಹಾಗೂ ಸೋದರಳಿಯ. ತನ್ನ ಗುರುವಾದ ವೈಶಂಪಾಯನನಿಂದ ವೇದಗಳ ಜ್ಞಾನವನ್ನು ಪಡೆದ. ಒಮ್ಮೆ ತನ್ನ ಗುರುಗಳ ಶಿಷ್ಯರನ್ನು ಧಿಕ್ಕರಿಸಿದ್ದರಿಂದ ಈತನು ಗುರುಶಾಪಕ್ಕೆ ಒಳಗಾದ. ಕೂಡಲೇ ಗುರುವಾಜ್ಞೆಯಂತೆ ವೈಶಂಪಾಯನನಿಂದ ಕಲಿತ ಎಲ್ಲ ಜ್ಞಾನವನ್ನು ವಮನ ಮಾಡಿದ. ಉಳಿದ ಶಿಷ್ಯರು ತಿತ್ತಿರಿ ಪಕ್ಷಿಗಳ ರೂಪದಲ್ಲಿ ಅದನ್ನು (ಆ ವಿದ್ಯೆಯನ್ನು) ಗ್ರಹಿಸಿದ್ದರಿಂದ, ಯಜುರ್ವೇದದ ಆ ಶಾಖೆಯು 'ತೈತ್ತರೀಯ ಶಾಖೆ' ಎಂಬ ಹೆಸರಿನಿಂದ ಪ್ರಖ್ಯಾತವಾಯಿತು.

ಮತ್ತೆ ವೇದ ಜ್ಞಾನ ಹಾಗೂ ವೇದ ವಿದ್ಯೆಯನ್ನು ಪಡೆಯಲು ತೀರ್ಮಾನಿಸಿದ ಯಾಜ್ಞವಲ್ಕ್ಯನು ಸೂರ್ಯ ಭಗವಾನನ ಉಪಾಸನೆ ಮಾಡಲು ಪ್ರಾರಂಭಿಸಿದನು. ಅಂತೆಯೆ 'ಹೇ ದೇವ ! ಸೂರ್ಯ ಪ್ರಭೋ ! ಇದುವರೆವಿಗೂ ಯಾರಿಗೂ ದೊರೆಯದಂತಹ ಯಜುರ್ವೇದ ಭಾಗದ ಜ್ಞಾನವನ್ನು ನನಗೆ ಅನುಗ್ರಹಿಸು– ಅಹಮಯಾತಯಾಮಯಜುಃ ಕಾಮ ಉಪಸರಾಮಿತಿ!' ಎಂದು ಪ್ರಾರ್ಥಿಸಿದನು. ಯಾಜ್ಞವಲ್ಕ್ಯನ ಈ ಸ್ತುತಿ, ಉಪಾಸನೆಗಳಿಂದ ಪ್ರಸನ್ನನಾದ ಸೂರ್ಯ ಭಗವಾನನು ಅಶ್ವರೂಪದಲ್ಲಿ ಆತನ ಎದುರುಗಡೆ ಪ್ರತ್ಯಕ್ಷನಾಗಿ, ಅದುವರೆವಿಗೂ ಯಾರಿಗೂ ತಿಳಿಯದ ಯಜುರ್ವೇದ ಭಾಗವನ್ನು ಉಪದೇಶ ಮಾಡಿದನು.

ಏವಂ ಸ್ತುತಃ ಸ ಭಗವಾನ್ ವಾಜಿರೂಪ ಧರೋ ಹರಿಃ |
ಯಜೂಂಷ್ಯ ಯಾತಯಾಮಾನಿ ಮುನಯೇ ವದಾತ್ ಪ್ರಸಾದಿತಃ ||
(ಶ್ರೀಮದ್ಭಾಗವತ–12|6|73)

ಅಶ್ವರೂಪದ ಸೂರ್ಯನಿಂದ ಪಡೆದ ಶುಕ್ಲ ಯಜುರ್ವೇದದ ಈ ಶಾಖೆ 'ವಾಜಸನೇಯ' ಅಥವಾ 'ಮಾಧ್ಯಂದಿನ' ಎನ್ನುವ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಕಾರಣದಿಂದಲೇ ಈ ಶಾಖೆಯ ಮುಖ್ಯದ್ರಷ್ಟಾರನು ಯಾಜ್ಞವಲ್ಕ್ಯನಾಗಿದ್ದಾನೆ. 'ವಾಜಸನೇಯೀಸಂಹಿತೆ'ಯ ಆಚಾರ್ಯನಾದುದರಿಂದಲೇ ಈತನನ್ನು 'ವಾಜಸನೇಯ' ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಈ ರೀತಿಯಲ್ಲಿ ಈತನು ವೇದಗಳ ಮುಖ್ಯ ಆಚಾರ್ಯನಾದನು.

ಇದರೊಂದಿಗೆ ಈತನು 'ಶತಪಥ ಬ್ರಾಹ್ಮಣ' ಹಾಗೂ 'ಬೃಹದಾರಣ್ಯಕೋಪನಿಷತ್'ನ ದ್ರಷ್ಟಾರನೂ ಆಗಿದ್ದಾನೆ. ಗಾರ್ಗೀ, ಮೈತ್ರೇಯೀ, ಕಾತ್ಯಾಯಿನಿಯರೊಂದಿಗೆ ಮಾಡಿದ ಜ್ಞಾನ–ವಿಜ್ಞಾನಗಳಿಗೆ ಸಂಬಂಧಪಟ್ಟ ಈತನ ವಿಚಾರ–ವಿಮರ್ಶೆಗಳು, ಚರ್ಚೆ–ಸಂವಾದಗಳು ಬಹಳಷ್ಟು ಅಪೂರ್ವವಾದುದೂ ಮಾರ್ಮಿಕವಾದುದೂ ಆಗಿವೆ.

ಯೋಗಶಾಸ್ತ್ರದ ಪ್ರವೀಣನೂ ಆದ ಯಾಜ್ಞವಲ್ಕ್ಯನು ಸ್ಮೃತಿಕಾರರಲ್ಲಿ ಉತ್ತಮ ಸ್ಥಾನವನ್ನು ಹೊಂದಿರುವವನು ಮನುಸ್ಮೃತಿ ಪ್ರಾಚೀನವಾದುದಾದರೂ ಈತನು ರಚಿಸಿದ ಸ್ಮೃತಿಯ ಪಾವಿತ್ರ್ಯತೆ, ವಿದ್ವತ್ತಿನ ದೃಷ್ಟಿಯಿಂದ ಮನುಸ್ಮೃತಿಗೆ ಯಾವ ರೀತಿಯಲ್ಲಿಯೂ ಕಡಿಮೆಯಾದುದಲ್ಲ. ಯಾಜ್ಞವಲ್ಕ್ಯ

ಸ್ಮೃತಿಯೊಂದಿಗೆ ಬೃಹನ್ಯೋಕ್ತ ಯೋಗಿ ಯಾಜ್ಞವಲ್ಕ್ಯ, ಬೃಹದ್ಯೋಗಿ ಯಾಜ್ಞವಲ್ಕ್ಯ ಇತ್ಯಾದಿಗಳೂ ಕೂಡ ಈತನ ಹೆಸರಿನಿಂದ ಪ್ರಖ್ಯಾತವಾಗಿವೆ.

ಇವೇ ಅಲ್ಲದೆ ಯಾಜ್ಞವಲ್ಕ್ಯ ಗೀತಾ, ಯಾಜ್ಞವಲ್ಕ್ಯೋಪನಿಷತ್, ಯಾಜ್ಞವಲ್ಕ್ಯ ಶಿಕ್ಷಾಗಳೂ ಕೂಡ ಈತನಿಂದ ರಚಿತವಾಗಿ, ಪ್ರಸಿದ್ಧಿಯನ್ನು ಪಡೆದಿವೆ. ಈತನೇ ಮೊಟ್ಟಮೊದಲು ಗಾಯಿತ್ರಿ-ಭಾಷ್ಯವನ್ನು ರಚಿಸಿದವನು. ಇದರಲ್ಲಿ ಗಾಯತ್ರಿಮಂತ್ರದ ಒಂದೊಂದು ಅಕ್ಷರದ ಮೇಲೂ ವಿಸ್ತೃತ ಗೂಢಾರ್ಥದಿಂದ ಕೂಡಿದ ಶ್ಲೋಕಗಳನ್ನು ಈತನು ರಚಿಸಿದ್ದಾನೆ.

ಯಾಜ್ಞವಲ್ಕ್ಯನ ತ್ಯಾಗ, ತಪಸ್ಸು, ಸದಾಚಾರದಿಂದ ಕೂಡಿದ ಜೀವನವು ಮಾನವನಿಗೆ ತುಂಬಾ ಉಪಯೋಗಕರವಾದುದೂ, ಶೈಕ್ಷಣಿಕವಾದುದೂ ಆಗಿದೆ. ತನ್ನ ಗ್ರಂಥಗಳಲ್ಲಿ ಜಗತ್ ಕಲ್ಯಾಣಕ್ಕಾಗಿ ನೀಡಿರುವ ಉಪದೇಶವು ಕರ್ಮ ಕಾಂಡ, ಜ್ಞಾನಕಾಂಡ ಹಾಗೂ ಉಪಾಸನಾಕಾಂಡದ ಸಾರವಾಗಿದೆ. ಆದಾಗ್ಯೂ ಈತನ ಗ್ರಂಥಗಳಲ್ಲಿ 'ಶುಕ್ಲ ಯಜುರ್ವೇದ ವಾಜಸನೇಯ ಸಂಹಿತೆ' ಹಾಗೂ 'ಯಜ್ಞವಲ್ಕ್ಯ ಸ್ಮೃತಿ'ಯು ವಿಶೇಷ ಮಹತ್ವವನ್ನು ಪಡೆದವುಗಳಾಗಿವೆ. ಈತನು ಯಾವ ರೀತಿಯ 'ಧರ್ಮಮರ್ಯಾದೆ'ಯನ್ನು ಸ್ಥಾಪಿಸಲು ಇಷ್ಟ ಪಟ್ಟಿದ್ದನೊ, ಅದು ಎಲ್ಲರಿಂದಲೂ, ಎಲ್ಲ ಕಾಲಗಳಲ್ಲಿಯೂ ಒಪ್ಪಲ್ಪಡುವ ಧಾರ್ಮಿಕ ನಿಯಮಗಳ ಪ್ರತಿರೂಪವಾಗಿರುತ್ತದೆ.

ಈ ಮಹರ್ಷಿಯ ವಾಣಿಯು ಎಂದಿಗೂ ಸುಳ್ಳಾಗಲಾರದು ಎಂಬ ನಂಬಿಕೆ ಅನೇಕ ಪ್ರಾಚೀನರಲ್ಲಿತ್ತು. ಆದುದರಿಂದ ಯಾಜ್ಞವಲ್ಕ್ಯನ ಹೇಳಿಕೆಗಳು ಎಲ್ಲದಕ್ಕೂ ಪ್ರಮಾಣರೂಪದಲ್ಲಿದ್ದು, ಎಲ್ಲರಿಂದಲೂ ಮಾನ್ಯ ಮಾಡಲ್ಪಟ್ಟಿದೆ.

## 1. ಯಾಜ್ಞವಲ್ಕ್ಯ ಸ್ಮೃತಿ

ಒಮ್ಮೆ ಮಿಥಿಲಾನಗರದಲ್ಲಿ ಯಾಜ್ಞವಲ್ಕ್ಯನು ಋಷಿ-ಮುನಿಗಳೊಂದಿಗೆ ಧಾರ್ಮಿಕ ಜಿಜ್ಞಾಸೆಯನ್ನು ನಡೆಸಿದನು. ಆ ಸಮಯದಲ್ಲಿ ಅನೇಕ ಧಾರ್ಮಿಕ ವಿಷಯಗಳು ಚರ್ಚೆಗೆ ಬಂದುವು. ಈ ಚರ್ಚೆಗಳೇ ಮುಂದೆ 'ಯಾಜ್ಞವಲ್ಕ್ಯ ಸ್ಮೃತಿ' ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯಿತು.

ಈ ಸ್ಮೃತಿಯನ್ನು ಆಚಾರ, ವ್ಯವಹಾರ ಹಾಗೂ ಪ್ರಾಯಶ್ಚಿತ್ತ-ಎನ್ನುವ ಮೂರು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ. ಇದರಲ್ಲಿ ಸುಮಾರು ಒಂದು ಸಾವಿರ

ಶ್ಲೋಕಗಳಿವೆ. ಪ್ರತಿ ಅಧ್ಯಾಯದಲ್ಲೂ ಬೇರೆ ಬೇರೆಯೇ ಅವ ಪ್ರಕರಣಗಳಿವೆ.

ಆಚಾರದ ಅಧ್ಯಾಯದಲ್ಲಿ ಉಪೋದ್ಘಾತ, ಬ್ರಹ್ಮಚಾರ್ಯ, ವಿವಾಹ, ವರ್ಣ ಜಾತಿ ವಿವೇಕ, ಗೃಹಸ್ಥ ಧರ್ಮ, ಸ್ನಾತಕ ಧರ್ಮ, ಭಕ್ಷ್ಯಾಭಕ್ಷ್ಯ, ದ್ರವ್ಯಶುದ್ಧಿ, ದಾನ, ಶ್ರಾದ್ಧ, ಗಣಪತಿ ಕಲ್ಪ, ಗ್ರಹಶಾಂತಿ, ರಾಜಧರ್ಮ ಇತ್ಯಾದಿ ಪ್ರಕರಣಗಳಿವೆ.

ವ್ಯವಹಾರಾಧ್ಯಾಯದಲ್ಲಿ ಸಾಧಾರಣ ವ್ಯವಹಾರ ಮಾತೃಕೆ, ಅಸಾಧಾರಣ ವ್ಯವಹಾರ ಮಾತೃಕೆ, ಋಣಾದಾನ, ಉಪನಿಧಿ, ಸಾಕ್ಷಿ, ಲೇಖ್ಯ, ದಿವ್ಯ, ದಾಯ-ವಿಭಾಗ, ಸೀಮಾ ವಿವಾದ, ಸ್ವಾಮಿಪಾಲ ವಿವಾದ, ಸ್ವಾಮಿ ವಿಕ್ರಯ, ದತ್ತಾಪ್ರದಾನಿಕ, ಕ್ರೀತಾನುಶಯ, ಅಭ್ಯುಪೇತ್ಯಾಶುಶ್ರೂಷಾ, ಸಂವಿದ್ವ್ಯತಿಕ್ರಮ, ವೇತನಾದಾನ, ದ್ಯೂತ ಸಮಾಹ್ವಯ, ವಾಕ್ ಪಾರುಷ್ಯ, ದಂಡ ಪಾರುಷ್ಯ, ಸಾಹಸ, ವಿಕ್ರೀಯಾ ಸಂಪ್ರದಾನ, ಸಂಭೂಯ ಸಮುತ್ಥಾನ, ಸ್ತೇಯ, ಸ್ತ್ರೀ ಸಂಗ್ರಹಣ ಹಾಗೂ ಪ್ರಕೀರ್ಣಕ – ಎನ್ನುವ ಇಪ್ಪತ್ತೈದು ಪ್ರಕರಣಗಳಿವೆ.

ಇದೇ ರೀತಿಯಲ್ಲಿ ಮೂರನೆಯದಾದ ಪ್ರಾಯಶ್ಚಿತ್ತದ ಅಧ್ಯಾಯದಲ್ಲಿ ಆಶೌಚ, ಆಪದ್ಧರ್ಮ, ವಾನಪ್ರಸ್ಥಧರ್ಮ, ಯತಿಧರ್ಮ, ಪ್ರಾಯಶ್ಚಿತ್ತ ಹಾಗೂ ಪ್ರಕೀರ್ಣಕ-ಪ್ರಾಯಶ್ಚಿತ್ತ-ಎನ್ನುವ ಆರು ಪ್ರಕರಣಗಳಿವೆ.

ಈ ಸ್ಮೃತಿಯಲ್ಲಿ ಧರ್ಮಶಾಸ್ತ್ರದ ವಿವೇಚನೆಯನ್ನು ಈ ಪ್ರಕರಣಗಳ ವಿಷಯಗಳ ಮುಖಾಂತರ ಸ್ಪಷ್ಟಪಡಿಸಲಾಗಿದೆ. ಈ ಸ್ಮೃತಿಯು ಪರಿವರ್ತಿತ ನಿಬಂಧ ಗ್ರಂಥಗಳಿಗೆ ಆಧಾರವಾಗಿದೆ. ಅಗ್ನಿ ಪುರಾಣ ಮತ್ತು ಗರುಡಪುರಾಣದಲ್ಲಿ ಈ ಸ್ಮೃತಿಯಲ್ಲಿನ ಬಹಳಷ್ಟು ವಿಷಯಗಳು ಬಂದಿವೆ.

ಈ ಸ್ಮೃತಿಯ ಟೀಕೆಗಳು : ಈ ಸ್ಮೃತಿಯನ್ನು ಕುರಿತಾದ ಟೀಕೆಗಳಲ್ಲಿ ಮುಖ್ಯವಾದವುಗಳೆಂದರೆ – ವಿಶ್ವರೂಪನ ಬಾಲಕ್ರೀಡಾ, ವಿಜ್ಞಾನೇಶ್ವರನ ಮಿತಾಕ್ಷರಾ, ಅಪರಾದಿತ್ಯನ ದೀಪಕಾಲಿಕಾ ಎನ್ನುವ ಸಂಸ್ಕೃತ ಟೀಕೆಗಳು ತುಂಬಾ ಪ್ರಸಿದ್ಧವಾದವುಗಳು. ಇವೇ ಅಲ್ಲದೆ ಈ ಸ್ಮೃತಿಯನ್ನು ಕುರಿತಾದ ಬಾಲಬೋಧಿನೀ, ಸುಬೋಧಿನೀ, ಬಾಲಂಭಟ್ಟೀ – ಎನ್ನುವ ಖ್ಯಾತಿವೆತ್ತ ಸಂಸ್ಕೃತ ಟೀಕೆಗಳೂ ಇವೆ.

ವಿಶೇಷತೆಗಳು : (ಅ) ಆಚರಣಾಧ್ಯಾಯ : ಈ ಸ್ಮೃತಿಯ

ಪ್ರಾರಂಭದಲ್ಲಿ ಆತ್ಮದರ್ಶನವನ್ನು (ಸರ್ವತ್ರ ಆತ್ಮ ಬುದ್ಧಿ ಅಥವಾ ಭಗವದ್ಭಕ್ತಿಯನ್ನು) ಪರಮಧರ್ಮವೆಂದು ತಿಳಿಸಲಾಗಿದೆ. ಇದನ್ನು ಪಡೆಯುವುದಕ್ಕೆ ಯೋಗ ಸಾಧನೆಯೇ ಮುಖ್ಯವಾದ ಉಪಾಯವಾಗಿದೆ ಎಂದು ತಿಳಿಸಲಾಗಿದೆ -

ಅಯಂ ತು ಪರಮೋ ಧರ್ಮೋ ಉದ್ಯೋಗೇನಾತ್ಮದರ್ಶನಮ್ ||
(ಯಾಜ್ಞ ಆಚಾರ್ಯಾಧ್ಯಾಯ 8)

ಎಲ್ಲ ಆಶ್ರಮಗಳ ಹಾಗೂ ಎಲ್ಲ ವರ್ಣಗಳ ಸಾಮಾನ್ಯ ಧರ್ಮವನ್ನು ನಿರ್ದೇಶಿಸುತ್ತಾ ಯಾಜ್ಞವಲ್ಕ್ಯನು -

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯ ನಿಗ್ರಹಃ |
ದಾನಂ ದಮೋದಯಾ ಕ್ಷಾಂತಿಃ ಸರ್ವೇಷಾಂ ಧರ್ಮ ಸಾಧನಮ್ ||

ಎಂದು ಆಚಾರಾಧ್ಯಾಯದ 122ನೇ ಶ್ಲೋಕದಲ್ಲಿ ತಿಳಿಸಿದ್ದಾನೆ. ಅಂದರೆ ಮನಸ್ಸು, ಮಾತು, ಶರೀರದ ಮುಖಾಂತರ ಯಾವುದೇ ರೀತಿಯ ಹಿಂಸೆಯನ್ನು ಮಾಡಬಾರದು, ಹಿಂಸೆ ಮಾಡುವ ಭಾವವನ್ನು ಹೊಂದಿರಬಾರದು. ಸತ್ಯವನ್ನೇ ಹೇಳಬೇಕು. ಯಥಾರ್ಥವನ್ನು ನುಡಿಯಬೇಕು. ಕಳ್ಳತನವನ್ನು ಮಾಡಬಾರದು. ಒಳ-ಹೊರಗುಗಳು ಶುದ್ಧವಾಗಿರಬೇಕು. ಇಂದ್ರಿಯ ನಿಗ್ರಹವನ್ನು ಹೊಂದಿರಬೇಕು. ಸತ್ಪಾತ್ರನಿಗೆ ದಾನವನ್ನು ನೀಡಬೇಕು. ಅಂತಃಕರಣವು ಶುದ್ಧಿಯಾಗಿದ್ದು, ಸಂಯಮದಿಂದ ಇರಬೇಕು. ದಯಾಗುಣವನ್ನು ಹೊಂದಿರಬೇಕು. ಕ್ರೋಧ (ಕೋಪ)ವನ್ನು ದೂರ ಮಾಡುವ 'ಕ್ಷಾಂತಿ' ಭಾವವನ್ನು ಹೊಂದಿರಬೇಕು. ಇವೆಲ್ಲವೂ ಧರ್ಮಸಾಧನೆಗೆ ಆಧಾರಗಳು.

ಈ ರೀತಿಯಲ್ಲಿ ಯಾವಾಗಲೂ ಧರ್ಮಾಚರಣೆಯನ್ನೆ ಅನುಸರಿಸಬೇಕೆಂದೂ, ಅಧರ್ಮಾಚರಣೆಯನ್ನು ತ್ಯಜಿಸಬೇಕೆಂದೂ, ಲೋಕವಿರುದ್ಧವಾದ ಧರ್ಮವನ್ನು ಆಚರಿಸಬಾರದೆಂದು ತಿಳಿಸುತ್ತಾ -

ಕರ್ಮಣಾ ಮನಸಾ ವಾಚಾ ಯತ್ನಾದ್ಧರ್ಮ ಸಮಾಚರೇತ್ |
ಅಸ್ವರ್ಗ್ಯ ಲೋಕವಿದ್ವಿಷ್ಟಂ ಧರ್ಮ್ಯಮಪ್ಯಾಚರೇನ್ನ ತು ||156||

ಶರೀರ ಕಷ್ಟಪಟ್ಟು ಧರ್ಮವನ್ನು ಆಚರಿಸಬೇಕು, ಸದಾ ಧರ್ಮದ ಚಿಂತನೆಯನ್ನು ಮಾಡುತ್ತಿರಬೇಕು, ಸದಾ ಧರ್ಮದ ಮಾತನ್ನು ಹೇಳಬೇಕು, ಲೋಕಮರ್ಯಾದೆಗೆ ವಿರುದ್ಧವಾದ ವಿಹಿತ ಧರ್ಮವನ್ನು ಆಚರಣೆಯಲ್ಲಿ ತರಬಾರದು, ಏಕೆಂದರೆ ಅದು ಅಸ್ವೀಕಾರವಾದುದು ಎಂದು ಯಾಜ್ಞವಲ್ಕ್ಯನು ತಿಳಿಸುತ್ತಾನೆ.

ಈ ಸ್ಮೃತಿಯು ದಾನ ಪ್ರಕರಣದಲ್ಲಿ 'ಗೋದಾನ'ದ ಮಹಿಮೆಯನ್ನು ವಿಶೇಷ ರೀತಿಯಲ್ಲಿ ಸೂಚಿಸಲಾಗಿದೆ. ಇದರ ಫಲವು ಅನಂತವಾದುದು ಎಂದೂ ಹೇಳಲಾಗಿದೆ. ದೀನರು, ಅನಾಥರು, ದುರ್ಬಲರಿಗೆ ಸಹಾಯ ಮಾಡಬೇಕು; ರೋಗಿಗಳಿಗೆ ಉಪಚಾರ ಮಾಡಬೇಕು, ಹಾಗೂ ಅವರಿಗೆ ಔಷಧ ದಾನ ಮಾಡಬೇಕು. ಈ ರೀತಿಯ ದಾನವು ಗೋದಾನಕ್ಕೆ ಸಮಾನವಾದುದು ಎಂದು ಹೇಳಲಾಗಿದೆ.

ದಾನ ಪ್ರಕರಣದ ಕಡೆಯಲ್ಲಿ ಬ್ರಹ್ಮವಿದ್ಯೆಯ ದಾನವನ್ನು ಧರ್ಮಮಯ ವಾದುದು, ಸರ್ವೋತ್ಕೃಷ್ಟವಾದುದು ಹಾಗೂ ಬ್ರಹ್ಮಲೋಕ ಪ್ರಾಪ್ತಿಯನ್ನು ನೀಡುವಂತಹುದು ಆಗಿದೆ ಎಂದು ತಿಳಿಸುತ್ತಾನೆ –

ಸರ್ವಧರ್ಮಮಯಂ ಬ್ರಹ್ಮ ಪ್ರದಾನೇಭ್ಯೋಽಧಿಕಂ ಯತಃ |
ತದ್ದದತ್ ಸಮವಾಪ್ನೋತಿ ಬ್ರಹ್ಮಲೋಕಮವಿಚ್ಯುತಮ್ ||212||

ಈ ಸ್ಮೃತಿಯ ಅತ್ಯಂತ ಮಹತ್ವಪೂರ್ಣವಾದುದು ಶ್ರಾದ್ಧ ಪ್ರಕರಣ. ಇದರಲ್ಲಿ ಶ್ರಾದ್ಧದ ಎಲ್ಲ ಪ್ರಕ್ರಿಯೆಗಳು ಹಾಗೂ ಪಿತೃಭಕ್ತಿಯನ್ನು ಕುರಿತಾದ ಮಹತ್ವಪೂರ್ಣ ಉಪದೇಶಗಳನ್ನು ನೀಡಲಾಗಿದೆ.

ಶ್ರಾದ್ಧ ಸಮಯದಲ್ಲಿ ಬ್ರಾಹ್ಮಣರನ್ನು ಕುರಿತಾದ ಪ್ರಾರ್ಥನೆ –

ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ |
ಶ್ರದ್ಧಾ ಚ ನೋ ಮಾ ವ್ಯಗಮದ್ ಹೃದೇಯಂ ಚ ನೋ
ಅಸ್ತ್ವಿತಿ ||240||

ಶ್ರಾದ್ಧಕರ್ತನು ಬ್ರಾಹ್ಮಣರನ್ನು ಕುರಿತು ಹೀಗೆಂದು ಹೇಳಬೇಕು – 'ನಮ್ಮ ವಂಶದಲ್ಲಿ ದಾನ ಮಾಡುವ ಗುಣವುಳ್ಳ ವ್ಯಕ್ತಿಯು ಜನಿಸಲಿ. ಜ್ಞಾನದ ವೃದ್ಧಿಯಾಗಿ, ಪುತ್ರ–ಪೌತ್ರ ಪರಂಪರೆಯು ನಿರಂತರವಾಗಿ ಮುಂದುವರಿಯಲಿ. ಪಿತೃಗಳ ಶ್ರಾದ್ಧ ತರ್ಪಣಾದಿಗಳು ಹಾಗೂ ಇತರೇ ಕರ್ಮಗಳಲ್ಲಿ ನಮ್ಮ ಶ್ರದ್ಧೆಯು ಸ್ವಲ್ಪವೂ ಕಡಿಮೆ ಆಗದಿರಲಿ. ದಾನಾದಿ ಸತ್ಕಾರ್ಯಗಳನ್ನು ಮಾಡಲು ಸಾಕಾಗುವಷ್ಟು ಧನವೂ ನಮಗೆ ಪ್ರಾಪ್ತವಾಗಲಿ.'

ಶ್ರಾದ್ಧ ಭಕ್ತಿ ಹಾಗೂ ವಿಧಿಪೂರ್ವಕವಾಗಿ ಮಾಡಿದ ಶ್ರಾದ್ಧಾದಿ ಕರ್ಮ ಗಳಿಂದ ಪ್ರಸನ್ನರಾಗುವ ಪಿತೃಗಳು ಶ್ರಾದ್ಧ ಕರ್ತನಿಗೆ ದೀರ್ಘಾಯುಸ್ಸು, ಉತ್ತಮ ಸಂತಾನ, ಧನ, ವಿದ್ಯೆ, ಸುಖ, ರಾಜ್ಯ, ಸ್ವರ್ಗ ಹಾಗೂ ಮೋಕ್ಷ

ಇತ್ಯಾದಿಗಳನ್ನು ಅನುಗ್ರಹಿಸುವರು. ಇಹಲೋಕ ಹಾಗೂ ಪರಲೋಕದ ಎಲ್ಲ ಅಭ್ಯುದಯಗಳೂ ಪಿತೃಗಳ ಕೃಪೆಯಿಂದ ಪ್ರಾಪ್ತವಾಗುತ್ತದೆ. ಆದುದರಿಂದ ಇಂತಹ ಅಭ್ಯುದಯಕಾರಿಯಾದ ಧರ್ಮಾಚರಣೆಯನ್ನು ತಪ್ಪದೆ ಕಷ್ಟಪಟ್ಟು ಆಚರಿಸಬೇಕು ಎಂದು ಯಾಜ್ಞವಲ್ಕ್ಯನು ತಿಳಿಸುತ್ತಾನೆ –

ಆಯುಃ ಪ್ರಜಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ |
ಪ್ರಯಚ್ಛಂತಿ ತಥಾ ರಾಜ್ಯಂ ಪ್ರೀತಾ ನೃಣಾಂ ಪಿತಾಮಹಾಃ ||270||

ಮುಂದಿನದೇ ' ಗಣಪತಿ ಕಲ್ಪ ಪ್ರಕರಣ ' ಎಂಬುದು. ಇದನ್ನು 'ವಿನಾಯಕ ಶಾಂತಿ ಕಲ್ಪ ಪ್ರಕರಣ' ಅಥವಾ 'ಗ್ರಹಶಾಂತಿ ಪ್ರಕರಣ' ಎಂದೂ ಕರೆಯುತ್ತಾರೆ. ಇದು ತುಂಬಾ ಪ್ರಸಿದ್ಧವಾದುದು. ಇದೇ ರೂಪದಲ್ಲಿ ಈ ಪ್ರಕರಣವು ಬಹಳಷ್ಟು ಪುರಾಣಗಳಲ್ಲಿ ಕಂಡುಬರುತ್ತದೆ.

ದುಃಸ್ವಪ್ನ ದರ್ಶನ, ಉಪದ್ರವಗಳು ಹಾಗೂ ಕಾರ್ಯಸಿದ್ಧಿಯು ಉಂಟಾಗದಿರುವುದಕ್ಕೆ ವಿನಾಯಕನಿಂದ ಉಂಟಾಗುವ ವಿಘ್ನಗಳೇ ಕಾರಣ. ಆದುದರಿಂದ ವಿಘ್ನಗಳ ಉಪಶಮನ ಹಾಗೂ ಗಣಪತಿಯ ಶಾಂತಿಗಾಗಿ, ವಿನಾಯಕ ಶಾಂತಿ, ಗ್ರಹಗಳ ಪೂಜೆ, ಗ್ರಹಯಜ್ಞ ಇತ್ಯಾದಿಗಳನ್ನು ಆಚರಿಸಬೇಕು. ಇದರಿಂದ ಎಲ್ಲ ರೀತಿಯ ದೋಷಗಳೂ ದೂರವಾಗಿ, ದುಃಖ–ತಾಪ–ಪಾಪಗಳೂ ಕೂಡ ದೂರವಾಗುತ್ತವೆ. ಈ ಪ್ರಕರಣದಲ್ಲಿ ಇದಕ್ಕೆ ಸಂಬಂಧಪಟ್ಟ ಎಲ್ಲ ವಿಧಿಗಳನ್ನು ಕೂಡ ತಿಳಿಸಲಾಗಿದೆ.

ರಾಜಧರ್ಮ ಪ್ರಕರಣದಲ್ಲಿ ರಾಜನಾದವನ (ಆಡಳಿತ ನಡೆಸುವವನ) ಕರ್ತವ್ಯಗಳನ್ನು ವಿವರವಾಗಿ ವಿವರಿಸಲಾಗಿದೆ. ನಿರ್ದಿಷ್ಟವಾದ ರಾಜ್ಯಭಾರ ಕ್ರಮಗಳು ಹಾಗೂ ದಂಡ ವಿಧಾನಗಳನ್ನು ನಿರ್ದೇಶಿಸಲಾಗಿದೆ. ರಾಜನ ಕರ್ತವ್ಯಗಳಲ್ಲಿ ಮುಖ್ಯವಾದುದು ಬ್ರಾಹ್ಮಣರ ಸಮ್ಮಾನ ಹಾಗೂ ಉಳಿದೆಲ್ಲ ಪ್ರಜೆಗಳ ರಕ್ಷಣೆ.

ನಾತಃ ಪರತರೋ ಧರ್ಮೋ ನೃಪಾಣಾಂ ಯತ್ರಣಾರ್ಜಿತಂ |
ವಿಪ್ರೇಭ್ಯೋ ದೀಯತೆ ದ್ರವ್ಯಂ ಪ್ರಜಾಭ್ಯಶ್ಚಾಭಯಂ ಸದಾ ||323||

ರಾಜನಾದವನು ಬ್ರಾಹ್ಮಣರಲ್ಲಿ ಕ್ಷಮಾಬುದ್ಧಿಯನ್ನು ಹೊಂದಿದವನಾಗಿರಬೇಕು, ಮಿತ್ರವರ್ಗದವರೊಂದಿಗೆ ಕುಟಿಲತೆಯನ್ನು ತೋರದೆ ಮಿತ್ರತ್ವದ ವ್ಯವಹಾರವನ್ನು ಮಾಡಬೇಕು. ಶತ್ರುಗಳೊಂದಿಗೆಯೂ ಕೂಡ ಇದೇ ರೀತಿಯ

ವ್ಯವಹಾರವನ್ನು ಮಾಡಬೇಕು. ಭೃತ್ಯ ಹಾಗೂ ಸೇವಕ ವರ್ಗದವರೊಂದಿಗೆ ಹಾಗೂ ತನ್ನ ಪ್ರಜೆಗಳೊಂದಿಗೆ ರಾಜನು ಪಿತೃ ಸಮಾನ ವ್ಯವಹಾರವನ್ನು ಆಚರಿಸಬೇಕು –

ಬ್ರಾಹ್ಮಣೇಷು ಕ್ಷಮೀ ಸ್ನಿಗ್ಧೇಷ್ವಜಿಹ್ಮಃ ಕ್ರೋಧನೋಽರಿಷು |
ಸ್ಯಾದ್ರಾಜಾ ಭೃತ್ಯವರ್ಗೇಷು ಪ್ರಜಾಸು ಚ ಯಥಾ ಪಿತಾ ||334||

ಅನ್ಯಾಯದ ಮುಖಾಂತರ ಯಾವ ರಾಜನು ರಾಷ್ಟ್ರದ ಸಂಪತ್ತನ್ನು ಸ್ವಂತ ಹಾಗೂ ವ್ಯಕ್ತಿಗತ ಕೋಶದ ವೃದ್ಧಿಗಾಗಿ ಉಪಯೋಗಿಸಿಕೊಳ್ಳುವನೊ, ಅಂತಹವನು ಬಹಳ ಬೇಗ 'ಶ್ರೀ' ವಿಹೀನನು (ಧನವಿಲ್ಲದವನು) ಆಗುತ್ತಾನೆ. ಬಂಧು–ಬಾಂಧವರ ಸಮೇತ ಸ್ವತಃ ನಾಶವಾಗುವನು. ಪ್ರಜೆಗಳಿಗೆ ಕಷ್ಟ ಗಳನ್ನು ನೀಡುವುದರಿಂದ, ಅವರಲ್ಲಿ ಜನಿಸಿದ ಸಂತಾಪಜನ್ಯ ಅಗ್ನಿಯು ರಾಜನ ಕುಲವನ್ನು ಹಾಗೂ ಅವನ ಐಶ್ವರ್ಯ, ಪ್ರಾಣಗಳನ್ನು ಸುಟ್ಟು ಹಾಕುವುದರ ವಿನಹ ಶಾಂತಗೊಳ್ಳುವುದಿಲ್ಲ.

ಅನ್ಯಾಯೇನ ನೃಪೋ ರಾಷ್ಟ್ರಾತ್ ಸ್ವಕೋಶಂ ಯೋಽಭಿವರ್ಧಯೇತ್|
ಸೋಽಚಿರಾದ್ವಿಗತ ಶ್ರೀಕೋ ನಾಶಮೇತಿ ಸ ಬಾಂಧವಃ ||340||
ಪ್ರಜಾಪೀಡನ ಸಂತಾನಾತ್ ಸಮುದ್ಭೂತೋ ಹುತಾಶನಃ |
ರಾಜಃ ಕುಲಂ ಶ್ರಿಯಂ ಪ್ರಾಣಾಂಶ್ಚಾದಗ್ಧ್ವಾ ನ ನಿವರ್ತತೇ ||341||

ಆದುದರಿಂದ ರಾಜನಾದವನು ಬಹಳ ಎಚ್ಚರಿಕೆಯಿಂದ, ಸಾವಧಾನ ಪೂರ್ವಕವಾಗಿ ತನ್ನನ್ನು ತಾನು ಪ್ರಜೆಗಳ ಸೇವಕನೆಂದು ತಿಳಿಯುತ್ತಾ, ಅದರಂತೆ ವರ್ತಿಸುತ್ತಾ, ಧರ್ಮ ಮರ್ಯಾದೆಯಲ್ಲಿ ಸ್ಥಿತನಾಗಿ, ಆಡಳಿತದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿರಬೇಕು.

ಆ) ವ್ಯವಹಾರಾಧ್ಯಾಯ : ಯಾಜ್ಞವಲ್ಕ್ಯ ಸ್ಮೃತಿಯ ಎರಡನೇ ಅಧ್ಯಾಯವು 'ವ್ಯವಹಾರಾಧ್ಯಾಯ' ವೆಂದು ಪ್ರಸಿದ್ಧವಾಗಿದೆ. ಇದರಲ್ಲಿ ಹಿಂದೂ ಸನಾತನ ಧರ್ಮಶಾಸ್ತ್ರದ ನಿಯಮ ಕಾನೂನುಗಳನ್ನು ಬಹಳ ವಿಸ್ತಾರವಾಗಿ ವರ್ಣಿಸಲಾಗಿದೆ. ನ್ಯಾಯಾಲಯಾದಿಗಳ ವ್ಯವಸ್ಥೆ, ಶಿಕ್ಷೆ ನೀಡುವ ರೀತಿ, ರಾಜ್ಯಾಡಳಿತದ ಮುಖಾಂತರ ಶಾಂತಿ ಸ್ಥಾಪನೆ, ಸಾಕ್ಷಿಗಳ ವಿವಿಧ ರೂಪಗಳು. ಸಾಲ ತೆಗೆದುಕೊಳ್ಳುವಿಕೆ ಹಾಗೂ ಕೊಡುವ ನಿಯಮಗಳು, ತೆಗೆದುಕೊಳ್ಳುವ ಶಪಥಗಳು, ಸಂಪತ್ತನ್ನು ಹಂಚುವ ನಿಯಮಗಳು, ಸ್ತ್ರೀಧನ, ರಾಜ್ಯದ

ಎಲ್ಲೆಯ ವಿವಾದಗಳನ್ನು ಪರಿಹರಿಸುವ ನಿಯಮಗಳು, ಕೊಳ್ಳು-ಮಾರುವ ಕಾನೂನು ನಿಯಮಗಳು, ಕಳ್ಳತನ ಇತ್ಯಾದಿಗಳಿಗೆ ವಿಧಿಸಲಾಗುವ ದಂಡ ಇತ್ಯಾದಿಗಳನ್ನು ವರ್ಣಿಸಲಾಗಿದೆ. ಈ ಸ್ಮೃತಿಯಲ್ಲಿ ತಿಳಿಸಿರುವ ಕಾನೂನನ್ನು ಕುರಿತಾದ ತೀರ್ಮಾನಗಳು ಬಹಳಷ್ಟು ಪ್ರಾಮಾಣಿಕವಾಗಿದ್ದು, ನ್ಯಾಯಾಲಯ ಗಳಲ್ಲಿ ಇಂದಿಗೂ ರೂಢಿಯಲ್ಲಿವೆ.

ಇ) ಪ್ರಾಯಶ್ಚಿತ್ತಾಧ್ಯಾಯ : ಯಾಜ್ಞವಲ್ಕ್ಯ ಸ್ಮೃತಿಯ ಕಡೆಯ ಅಧ್ಯಾಯವನ್ನು 'ಪ್ರಾಯಶ್ಚಿತ್ತಾಧ್ಯಾಯ' ಎಂಬ ಹೆಸರಿನಿಂದ ಕರೆಯಲಾಗು ತ್ತದೆ. ಇದರಲ್ಲಿ ಮುಖ್ಯವಾಗಿ ಜನನಾಶೌಚ ಹಾಗೂ ಮರಣಾಶೌಚಗಳ ವ್ಯವಸ್ಥೆ, ಆಪದ್ಧರ್ಮ, ವಾನಪ್ರಸ್ಥಧರ್ಮ ಹಾಗೂ ಕಡೆಯಲ್ಲಿ ಕರ್ಮವಿಪಾಕ ಹಾಗೂ ಪ್ರಾಯಶ್ಚಿತ್ತ ಪ್ರಕರಣವಿದೆ. ಯಜ್ಞಾಲ್ಕ್ಯನು ತತ್ತ್ವದ ವಿಚಾರವನ್ನು ತಿಳಿಸುತ್ತಾ ಮಾನವ ಶರೀರ ಕದಲೀಸ್ತಂಭದ ತರಹ ಅಂತಃಸಾರ ಶೂನ್ಯವಾದುದು, ನೀರಿನ ಗುಳ್ಳೆಯ ತರಹ ಕ್ಷಣಿಕ ಹಾಗೂ ನಶ್ವರವಾದುದು, ಆದುದರಿಂದ ಪ್ರಪಂಚದ ಯಾವುದೇ ಪದಾರ್ಥ, ವಸ್ತು ಹಾಗೂ ಪ್ರಾಣಿಯಲ್ಲಿ ಸ್ಥಿರತೆ ಹಾಗೂ ಸ್ಥಾಯಿತ್ವದ ಅನ್ವೇಷಣೆಯನ್ನು ಮಾಡುವುದು ಮೂರ್ಖತನವಾಗು ತ್ತದೆ ಎಂದು ತಿಳಿಸುತ್ತಾನೆ.

ಜನ್ಮಾಂತರೀಯ ಕರ್ಮಭೋಗಕ್ಕಾಗಿ ಪ್ರಾಪ್ತವಾಗುವ ಈ ಪಂಚಭೌತಿಕ ಶರೀರವು ಪಂಚತ್ವವನ್ನು ಪಡೆಯುತ್ತದೆ. ಅಂದರೆ ಪೃಥ್ವೀ, ಜಲ, ಅಪ್ (ಆಕಾಶ), ತೇಜ ಹಾಗೂ ವಾಯು-ಎನ್ನುವ ಐದು ತತ್ವಗಳಲ್ಲಿ ಈ ಶರೀರವು ಲೀನವಾಗುವುದು. ಹಾಗಿರುವಾಗ ಇದಕ್ಕಾಗಿ ಶೋಕಿಸುವುದು ವ್ಯರ್ಥ. ಆದುದರಿಂದ ಸಾಯುವುದು (ಮೃತ್ಯು) ಎನ್ನುವುದು ಆಶ್ಚರ್ಯಕರ ಘಟನೆ ಏನಲ್ಲ. ನೊರೆಯಂತೆ ಈ ಶರೀರವೂ ನಾಶವಾಗುವುದು ಅವಶ್ಯ. ಈ ಕಾರಣ ಸತ್ತವ್ಯಕ್ತಿಯ ಬಗ್ಗೆ ಶೋಕ ಪ್ರಕಟಿಸುವುದು ಸಮಯವನ್ನು ವ್ಯರ್ಥ ಮಾಡು ವುದೇ ಆಗಿದೆ. ಆದುದರಿಂದ ಆ ಆತ್ಮದ ಉದ್ಧಾರಕ್ಕಾಗಿ ತಮ್ಮ ತಮ್ಮ ಶಕ್ತ್ಯಾನುಸಾರ ತರ್ಪಣ, ಪಿಂಡದಾನ ಹಾಗೂ ಶ್ರಾದ್ಧಾದಿ ಧಾರ್ಮಿಕ ಕ್ರಿಯೆ ಗಳನ್ನು ಮಾಡಬೇಕಾದುದು ಅವಶ್ಯಕ.

ಅತೋ ನ ರೋದಿತವ್ಯಂ ಹಿ ಕ್ರಿಯಾಃ ಕಾರ್ಯಾಃ ಸ್ವಶಕ್ತಿತಃ ॥

(ಯಾಜ್ಞ, ಪ್ರಾಯಶ್ಚಿತ್ತ 11)

ಈ ಸ್ಮೃತಿಯಲ್ಲಿ ಆ ಮಹರ್ಷಿಯು ಯಜ್ಞ, ದಾನ, ಸ್ವಾಧ್ಯಾಯ, ಸದಾಚಾರ ಹಾಗೂ ಅಹಿಂಸಾ–ಇತ್ಯಾದಿ ಎಲ್ಲ ಧಾರ್ಮಿಕ ವಿಧಾನಗಳನ್ನು ಅಲ್ಲಲ್ಲಿ ವಿಸ್ತಾರವಾಗಿ ವಿವರಿಸಿ, ಪ್ರಶಂಸಿಸಿದ್ದಾನೆ. ಅವುಗಳ ಆಚರಣೆಗಾಗಿ ನಡೆದುಕೊಳ್ಳಬೇಕಾದ ರೀತಿನೀತಿಗಳ ಬಗ್ಗೆಯೂ ವಿವರಿಸಿದ್ದಾನೆ. ಇದಕ್ಕಾಗಿ ಸ್ಮೃತಿಯ ಪ್ರಾರಂಭದಲ್ಲೆ ಯೋಗ ಸಾಧನೆಯ ಮುಖಾಂತರ ಪರಿಪೂರ್ಣ ರೂಪದಲ್ಲಿ ಪರಮಾತ್ಮನ ಸಾಕ್ಷಾತ್ಕಾರವೇ ಮುಖ್ಯ ಧರ್ಮವೆಂದು ಆತನು ತಿಳಿಸಿದ್ದಾನೆ. ಇದರ ವಿಸ್ತಾರವಾದ ವ್ಯಾಖ್ಯಾನವನ್ನು ಸ್ಮೃತಿಯ ಯತಿಧರ್ಮ ಪ್ರಕರಣದಲ್ಲಿ ನೀಡಿದ್ದಾನೆ. ಚಿತ್ತವೃತ್ತಿಯನ್ನು ಸ್ವಲ್ಪವಾದರೂ ನಿರೋಧ ಮಾಡಿ, ಧ್ಯಾನ ಯೋಗದ ಮುಖಾಂತರ ಸೂಕ್ಷ್ಮರೂಪದ ಆತ್ಮವನ್ನು ತನ್ನ ಹೃದಯದಲ್ಲಿ ಅಂತರ್ಗತವಾಗಿರುವ ಪರಮಾತ್ಮನಲ್ಲಿ ಸಮಾವೇಶ ಗೊಳಿಸಬೇಕೆಂದು ಯಾಜ್ಞವಲ್ಕ್ಯನು ತಿಳಿಸುತ್ತಾನೆ.

ಧ್ಯಾನಯೋಗೇನ ಸಮ್ಪಶ್ಯೇತ್
ಸೂಕ್ಷ್ಮ ಆತ್ಮಾತ್ಮನಿ ಸ್ಥಿತಃ ||64||

ಯೋಗ ಸಾಧನೆಯ ಮುಖಾಂತರ ಪರಮಾತ್ಮತತ್ತ್ವದ ಸಾಕ್ಷಾತ್ಕಾರವನ್ನು ಪಡೆದ ನಂತರ ಜೀವವು ಕ್ರಮಶಃ ಜೀವನ್ಮುಕ್ತ, ದೇಹ ಮುಕ್ತಿ ಹಾಗೂ ಕೈವಲ್ಯ ಪ್ರಾಪ್ತಿಯನ್ನು ಪಡೆದು ಎಲ್ಲ ರೀತಿಗಳಲ್ಲೂ ಕೃತಕೃತ್ಯವಾಗುವುದು. ಅಂತಹ ವ್ಯಕ್ತಿಗೆ (ಜೀವಕ್ಕೆ) ಪುನರ್ಜನ್ಮವಿರುವುದಿಲ್ಲ –

ಸ ಜ್ಞೇಯಸ್ತಂ ವಿದಿನ್ವೇಹ ಪುನರಾಜಾಯತೇ ನ ತು ||109||
ಸಿದ್ಧೇ ಯೋಗೇ ತ್ಯಜನ್ ದೇಹಮಮೃತತ್ವಾಯ ಕಲ್ಪತೇ ||206||

ಯಾರ ಚಿತ್ತ (ವೃತ್ತಿಯು)ವು ಸಮಾಧಿಯಲ್ಲಿ ಸ್ಥಿರವಾಗಿರುವುದಿಲ್ಲವೊ, ಅಂತಹ ವ್ಯಕ್ತಿಯು ಶಬ್ದ ಬ್ರಹ್ಮೋಪಾಸನೆಯ ಮುಖಾಂತರ ಭಗವತ್ಪ್ರಾಪ್ತಿಯನ್ನು ಮಾಡಿಕೊಳ್ಳಲಿ. ಅಂತಹವನು ಭಕ್ತಿ–ಸಂಗೀತ ಹಾಗೂ ಹರಿಕೀರ್ತನೆಗಳ ಮುಖಾಂತರ ಭಗವತ್ಪ್ರಾಪ್ತಿಯನ್ನು ಪಡೆಯುವ ಸರಳ ವಿಧಾನವನ್ನು ಯಾಜ್ಞವಲ್ಕ್ಯನು ನಿರ್ದಿಷ್ಟಗೊಳಿಸಿದ್ದಾನೆ –

ವೀಣಾವಾದನತತ್ತ್ವಜ್ಞಃ ಶ್ರುತಿ ಜಾತಿ ವಿಶಾರದಃ |
ತಾಲಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂ ನಿಯಚ್ಛತಿ ||115||

## 2. ಬ್ರಹ್ಮೋಕ್ತ ಯಾಜ್ಞವಲ್ಕ್ಯ ಸಂಹಿತಾ

ಈ ಸಂಹಿತೆಯು (ಧರ್ಮಶಾಸ್ತ್ರವು) ವಿಸ್ತಾರವಾಗಿದ್ದು, 12 ಅಧ್ಯಾಯಗಳಿಂದ ಕೂಡಿದೆ. ಮುಖ್ಯವಾಗಿ ಇದರಲ್ಲಿ ನಾಲ್ಕು ವೇದಗಳ ಶಾಖೆಗಳು, ಗೃಹಸ್ಥನ ನಿತ್ಯ ನೈಮಿತ್ತಿಕ ಕರ್ಮಗಳ ಹಾಗೂ ವಿಸ್ತಾರ ರೂಪದಲ್ಲಿ ಶ್ರಾದ್ಧ ಕಲ್ಪಗಳ ವರ್ಣನೆಗಳಿವೆ.

ಆ ನಂತರದಲ್ಲಿ ಬ್ರಹ್ಮಚಾರಿಯ ಧರ್ಮ, ತಿಥಿ–ನಿರ್ಣಯ, ವಿನಾಯಕ ಶಾಂತಿ, ದಾನ, ಪ್ರಾಯಶ್ಚಿತ್ತ ಹಾಗೂ ಕೊನೆಯಲ್ಲಿ ಅಶೌಚದ ವರ್ಣನೆ ಇದೆ. ಅನೇಕ ರೀತಿಗಳಲ್ಲಿ ಇದು ಪ್ರಧಾನ ಯಾಜ್ಞವಲ್ಕ್ಯ ಸ್ಮೃತಿಯಂತೆಯೇ ಇದೆ.

## 3. ಬೃಹದ್ಯೋಗಿ ಯಾಜ್ಞವಲ್ಕ್ಯ ಸ್ಮೃತಿ

ಯಾಜ್ಞವಲ್ಕ್ಯ ಮಹರ್ಷಿಯ ಹೆಸರಿನಲ್ಲಿ ಒಂದು ಸ್ಮೃತಿ ದೊರೆತಿದೆ. ಇದರಲ್ಲಿ ತುಂಬಾ ವಿಸ್ತಾರ ರೂಪದಲ್ಲಿ ಯೋಗದ ವರ್ಣನೆ ಇದೆ. ಆದುದರಿಂದಲೇ ಇದನ್ನು 'ಬೃಹದ್ಯೋಗಿ ಯಾಜ್ಞವಲ್ಕ್ಯ ಸ್ಮೃತಿ' ಎಂದು ಕರೆಯಲಾಗುತ್ತದೆ. ಇದರಲ್ಲಿ ದೊಡ್ಡದಾದ 12 ಅಧ್ಯಾಯಗಳಿವೆ. ಅವುಗಳಲ್ಲಿ ಮುಖ್ಯವಾಗಿ ಮಂತ್ರ ಯೋಗ, ಪ್ರಣವಕಲ್ಪ, ವ್ಯಾಹೃತಿ ನಿರ್ಣಯ, ಗಾಯಿತ್ರೀ – ಉಪಾಸನೆ, ಗಾಯಿತ್ರಿ – ಮಂತ್ರ – ನ್ಯಾಸ, ಸಂಧ್ಯೋಪಾಸನೆ, ಸ್ನಾನ – ತರ್ಪಣ – ವಿಧಿ, ಜಪ–ವಿಧಿ, ಪ್ರಾಣಾಯಾಮ, ಧ್ಯಾನ, ಅಧ್ಯಾತ್ಮಯೋಗ, ಸೂರ್ಯೋಪಸ್ಥಾನ ಹಾಗೂ ಯೋಗ ಧರ್ಮ ಇತ್ಯಾದಿಗಳ ವರ್ಣನೆ ಇದೆ. ಈ ಮಹರ್ಷಿಯ ಯೋಗ ನಿರೂಪಣೆಯ ಸಾರವೇನೆಂದರೆ ಪರಮಾತ್ಮಜ್ಞಾನದ ಮುಖಾಂತರ ಪಡೆಯುವ ಪರಮಾತ್ಮಪ್ರಾಪ್ತಿಗಿಂತ ಹೆಚ್ಚಾದ ಲಾಭವು ಬೇರೆ ಯಾವುದರಿಂದಲೂ ದೊರೆಯುವುದಿಲ್ಲ. ಆದುದರಿಂದ ಪರಮಾತ್ಮಜ್ಞಾನ ಅಥವಾ ಆತ್ಮಜ್ಞಾನವು ಎಲ್ಲ ಜ್ಞಾನಗಳಿಂತಲೂ ಶ್ರೇಷ್ಠವಾದುದು –

ಸರ್ವೇಷಾಮಪಿ ಚೈತೇಷಾಮಾತ್ಮಜ್ಞಾನಂ ಪರಂ ಸ್ಮೃತಂ ||11–38||

ಆದುದರಿಂದ ಸಂಪೂರ್ಣ ವಿಶ್ವದ ನಿತ್ಯ ಏಕಮಾತ್ರ ಪ್ರಶಸ್ತನೂ, ಅತಿ ಸೂಕ್ಷ್ಮನಾದುದರಿಂದ ಯಾರಿಗೂ ತತ್‌ಕ್ಷಣ ಅನುಭವಕ್ಕೆ ಬಾರದಿರುವವನೂ ಹಾಗೂ ಕೇವಲ ಯೋಗದ ಮುಖಾಂತರ ಸಮಾಧಿ ಸ್ಥಿತಿಯಲ್ಲಿಯೇ ಸಮ್ಯಕ್ ರೂಪದಲ್ಲಿ ಪ್ರಾಪ್ತನಾಗುವವನೂ ಆದ ಪರಮಾತ್ಮನೇ, ಅವನ ತತ್ತ್ವವೇ ಧ್ಯೇಯವೂ, ಜ್ಞೇಯವೂ ಹಾಗೂ ಪ್ರಾಪ್ಯವೂ ಆಗಿರುವುದು, ಆದುದರಿಂದ

ಹೇಗಾದರಾಗಲಿ, ಯೋಗದ ಮುಖಾಂತರವೇ ಆ ಪರಮಾತ್ಮನನ್ನು ಪಡೆಯುವ ಪ್ರಯತ್ನ ಮಾಡಬೇಕು. ಇಂತಹ ಯೋಗ ಸಿದ್ಧಿಯ ಮುಖಾಂತರವೇ ನಾಥಮುನಿಗಳು, ಯಾಮುನರು ಹಾಗೂ ಶ್ರೀ ರಾಮಾನುಜರು ಪರಮಾತ್ಮ ತತ್ತ್ವವನ್ನು ಪಡೆದರು.

ಇದೇ ಮಹರ್ಷಿ ಯಜ್ಞವಲ್ಕ್ಯನು ತಿಳಿಸಿರುವ ಜ್ಞಾನಯೋಗ ಹಾಗೂ ಧ್ಯಾನಯೋಗಗಳ ಸತ್ಯಸ್ವರೂಪವಾಗಿದೆ.

# 21. ಬುಧ ಸ್ಮೃತಿ

ಬೃಹಸ್ಪತಿಯ ಪತ್ನಿಯಾದ ತಾರೆಯಲ್ಲಿ ಚಂದ್ರನಿಂದ ಜನಿಸಿದವನು ಬುಧ. ಚಂದ್ರನನ್ನು ಆದಿರಾಜ ಎಂದು ಕರೆಯಲಾಗುತ್ತದೆ. ಬುಧನು ಇವನ ಮಗ ನಾದುದರಿಂದ ಇವನನ್ನು 'ರಾಜಪುತ್ರ' ಅಥವಾ 'ರಾಜಕುಮಾರ' ಎಂದೂ ಕರೆಯಲಾಗುತ್ತದೆ.

ಇಳೆ ಎನ್ನುವವಳಲ್ಲಿ ಇವನಿಗೆ ಪುರೂರವನು ಜನಿಸಿದನು. ಇವನೇ ಮುಂದೆ ಚಂದ್ರವಂಶದ ಮೂಲಪುರುಷನಾದ. ಬ್ರಹ್ಮನು ಇವನನ್ನು ಬುಧ ಎಂದು ಕರೆದ. ಕಾರಣ ಇವನ ಬುದ್ಧಿ ತುಂಬಾ ಪ್ರಖರವಾಗಿತ್ತು.

ಬುಧನು ಎಲ್ಲ ಶಾಸ್ತ್ರಗಳಲ್ಲೂ ಪಾರಂಗತನಾಗಿದ್ದನು. ಆನೆಗಳ ಗುಣ ದೋಷ ಹಾಗೂ ಚಿಕಿತ್ಸಾ ವಿಧಾನಗಳಲ್ಲಿ ವಿವೇಚನಾತ್ಮಕ ವರ್ಣನೆಯನ್ನು ಮಾಡಿರುವ 'ಹಸ್ತಿ ಶಾಸ್ತ್ರ'ದ ಆದ್ಯ ಪ್ರವರ್ತಕನಿವನು. ಅಂತೆಯೇ ಚಂದ್ರನ ತರಹ ಇವನು ಕೀರ್ತಿವಂತನಾಗಿದ್ದನು. ಧನ್ವಂತರಿ, ದಿವೋದಾಸ, ಅಶ್ವಿನೀ ಕುಮಾರರು, ನಕುಲ, ಸಹದೇವ, ಯಮ, ಚ್ಯವನ ಹಾಗೂ ಅಗಸ್ತ್ಯ-ಹೀಗೆ ಹದಿನಾರು ಆಯುರ್ವೇದ ಆಚಾರ್ಯರಿದ್ದಾರೆ. ಇವರಲ್ಲಿ ಬುಧನೂ ಒಬ್ಬನೆಂದು ಪರಿಗಣಿಸಲಾಗಿದೆ. ಇದನ್ನು ಬ್ರಹ್ಮವೈವರ್ತ ಪುರಾಣದ ಬ್ರಹ್ಮಖಂಡದ 16ನೇ ಅಧ್ಯಾಯದಲ್ಲಿ ತಿಳಿಸಲಾಗಿದೆ. ಇದರಲ್ಲಿ ಬುಧನನ್ನು 'ಸರ್ವಸಾರತಂತ್ರ' ಎಂಬ ಹೆಸರಿನ ಚಿಕಿತ್ಸಾ ವಿಧಾನ ಶಾಸ್ತ್ರದ ವೈಶಿಷ್ಟ್ಯಪೂರ್ಣ ಗ್ರಂಥವೊಂದರ ಪ್ರವರ್ತಕ ನೆಂದು ಹೆಸರಿಸಲಾಗಿದೆ.

ಪ್ರಾಪಂಚಿಕ ದೃಷ್ಟಿಯ ಅರ್ಥದಲ್ಲಿ ಬುಧ ಎಂದರೆ ವಿದ್ವಾಂಸನು, ಪಂಡಿತನು ಎನ್ನುವ ಅರ್ಥವಿದೆ. ಇದು ಅವನ ಬುದ್ಧಿಮತ್ತತೆ ಹಾಗೂ ಸರ್ವ

ಶಾಸ್ತ್ರಜ್ಞತ್ವದ ಪರಿಚಯ ಮಾಡಿಕೊಡುತ್ತದೆ. ಬ್ರಹ್ಮನು ಈತನನ್ನು ಮಹರ್ಷಿಗೆ ಸಮಾನವಾಗಿ ಪರಿಗಣಿಸಿದ್ದಾನೆ. ಅಂತೆಯೇ ಇವನನ್ನು ಗ್ರಹಗಳಲ್ಲಿ ಓರ್ವನೆಂದೂ ಸಿದ್ಧಪಡಿಸಿದ್ದಾನೆ. ಈ ಕಾರಣದಿಂದ ಬುಧನ ಅನುಗ್ರಹ ಉಂಟಾದಲ್ಲಿ ಅವನ ಕೃಪೆಯಿಂದ ಎಲ್ಲ ಕಾರ್ಯಗಳೂ ಕಲ್ಯಾಣಕಾರಕವಾಗಿ ಮಂಗಳಮಯವಾಗುತ್ತವೆಯೆಂದೂ, ಶುದ್ಧರೂಪದ ನಿರ್ಮಲ ಬುದ್ಧಿ ಪ್ರಾಪ್ತವಾಗುವುದೆಂದೂ ನಂಬಲಾಗಿದೆ. ನವಗ್ರಹಗಳಲ್ಲಿ ಈತನ ಸ್ಥಾನ ಮುಖ್ಯವಾದುದು; ಅಂತೆಯೇ ಸೌರ ಮಂಡಲದಲ್ಲಿ ಈತನ ಸ್ಥಾನ ಬಹು ಮುಖ್ಯವಾದುದು.

ಜ್ಯೋತಿಷ್ಯಶಾಸ್ತ್ರ ಹಾಗೂ ಖಗೋಳಶಾಸ್ತ್ರಗಳ ಅನುಸಾರ ಈತನು ಸೌಮ್ಯ ಸ್ವಭಾವದವನೂ, ಕೃಪಾಳುವೂ, ಪರೋಪಕಾರಿಯೂ ಆಗಿದ್ದಾನೆ. ಈತನು ವಾಣಿ, ವಿದ್ಯಾ-ಬುದ್ಧಿ, ಶಿಲ್ಪವಿದ್ಯೆಗಳಿಗೆ ಕಾರಕನಾಗಿ, ಆಚಾರ್ಯನಾಗಿದ್ದಾನೆ. ಈತನು ಹನ್ನೆರಡು ರಾಶಿಗಳಲ್ಲಿ ಮಿಥುನ ಹಾಗೂ ಕನ್ಯಾರಾಶಿಗಳ ಸ್ವಾಮಿಯಾಗಿದ್ದಾನೆ. ಈತನ ಮೈಬಣ್ಣ ಹಳದಿ (ಬಾದಾಮಿ) ಯದು. ಈತನು ಅತ್ಯಂತ ತೇಜಸ್ವಿಯೂ, ದಿವ್ಯಜ್ಞಾನ ಸಂಪನ್ನನೂ ಹಾಗೂ ಉತ್ಕೃಷ್ಟ ಬುದ್ಧಿಯ ಅಧಿನಾಯಕನೂ ಆಗಿದ್ದಾನೆ. ಈತನ ಅಧಿದೇವತೆ ಹಾಗೂ ಪ್ರತ್ಯಧಿದೇವತೆ ವಿಷ್ಣುಭಗವಾನನಾಗಿದ್ದಾನೆ. ನವರತ್ನಗಳಲ್ಲಿ 'ಪಚ್ಚೆ' ಈತನದ್ದಾಗಿದೆ.

ಈತನ ರಥವೂ ಕೂಡ ಅತ್ಯಂತ ಉಜ್ವಲವಾದುದು ಹಾಗೂ ತೇಜೋಮಯನಾದುದೂ ಆಗಿದೆ. ಇದಕ್ಕೆ ವಾಯು ಸಮಾನವಾದ ಹಳದಿ ವರ್ಣದ ಹತ್ತು ಕುದುರೆಗಳನ್ನು ಕಟ್ಟಲಾಗಿದೆ. ಶ್ವೇತ, ಪಿಶಂಗ, ಸಾರಂಗ, ನೀಲ, ಪೀತ, ವಿಲೋಹಿತ, ಕೃಷ್ಣ, ಹರಿತ, ಪೃಷತ್, ಪೃಷ್ಣಿ-ಎನ್ನುವುದು ಆ ಹತ್ತು ಕುದುರೆಗಳ ಹೆಸರುಗಳು. ಅತ್ಯದ್ಭುತ ವೇಗದಿಂದ ಚಲಿಸುವ ಈ ಎಲ್ಲ ಕುದುರೆಗಳೂ ವಾಯುವಿನಿಂದ ಉತ್ಪನ್ನವಾದವುಗಳು – ಎಂದು ಮತ್ಸ್ಯ ಪುರಾಣ (127/1-3) ತಿಳಿಸುತ್ತದೆ.

ಬುಧನು ಕನ್ಯಾ ರಾಶಿಯಲ್ಲಿ ಉಚ್ಚಸ್ಥಾನವನ್ನೂ, ಮೀನ ರಾಶಿಯಲ್ಲಿ ನೀಚ ಸ್ಥಾನವನ್ನು ಹೊಂದಿರುತ್ತಾನೆ. ವಿಂಶೋತ್ತರೀ ಮಹಾದಶೆಯಲ್ಲಿ ಈತನ ಕಾಲ 17 ವರ್ಷಗಳಾಗಿರುತ್ತದೆ. ನವಗ್ರಹ ಮಂಡಲದಲ್ಲಿ ಈತನ ಆಕೃತಿಯು ಧನುಸ್ಸಿನಂತೆ ನಿರ್ದಿಷ್ಟವಾಗಿದೆ. ಈತನ ಉಪಾಸನೆಯ ವೈದಿಕ ಮಂತ್ರ ಈ ರೀತಿ ಇದೆ –

ಉದ್ಬುಧ್ಯಸ್ವಾಗ್ನೇ ಪ್ರತಿ ಜಾಗೃಹಿ ತ್ವಮಿಷ್ಟಾಪೂರ್ತೇ ಸಂಸೃಜೇಥಾ
ಮಯಂ ಚ |
ಅಸ್ಮಿನ್ತ್ಸಧಸ್ಥೇ ಅಧ್ಯುತ್ತರಸ್ಮಿನ್ ವಿಶ್ವೇ ದೇವಾ ಯಜಮಾನಶ್ಚ
ಸೀದತ || (ಯಜು 15/54)

ಈತನ ಆವಾಹನೆಯನ್ನು ಈ ರೀತಿ ಮಾಡಲಾಗುತ್ತದೆ –

ಪ್ರಿಯಂಗು ಕಲಿಕಾಭಾಸಂ ರೂಪೇಣಾ ಪ್ರತಿಮಂ ಬುಧಂ |
ಸೌಮ್ಯ ಸೌಮ್ಯಗುಣೋಪೇತಂ ಬುಧಮಾವಾಹಯಾಮ್ಯಹಂ ||

ಈ ತಾಂತ್ರಿಕ ಮಂತ್ರವು 'ಬುಂ ಬುಧಾಯ ನಮಃ' ಎಂದಿದೆ.

ಈತನ ಉಪಾಸನೆಯಿಂದ ತನ್ನ ಸೌಮ್ಯರೂಪದಲ್ಲಿ ತನ್ನ ಭಕ್ತರಿಗೆ ಈತನು ದರ್ಶನವನ್ನು ನೀಡಿ, ಅವರುಗಳಿಗೆ ಕಲ್ಯಾಣವನ್ನು ಉಂಟುಮಾಡುವನು. ಇಂದಿಗೂ ನಕ್ಷತ್ರ ಮಂಡಲದಲ್ಲಿ ಸ್ಥಿರನಾಗಿದ್ದುಕೊಂಡು ಪ್ರಪಂಚದ ವಿಧಿ ವಿಧಾನಗಳನ್ನು ವೀಕ್ಷಿಸುತ್ತಾ ಅವರಿಗೆ ಮಂಗಳವನ್ನು ಉಂಟುಮಾಡುತ್ತಿದ್ದಾನೆ.

ಈತನು ರಚಿಸಿರುವ 'ಬುಧಸ್ಮೃತಿ'ಯು ತುಂಬಾ ಸಂಕ್ಷೇಪವಾಗಿದೆ. ಇದು ಸೂತ್ರಗಳ ರೂಪದಲ್ಲಿದ್ದು, ಒಟ್ಟು 40 ಸೂತ್ರಗಳಿವೆ. ಇದು ಸಂಕ್ಷಿಪ್ತವಾಗಿದ್ದಾಗ್ಯೂ, ಧರ್ಮಸೂತ್ರ ಹಾಗೂ ರಾಜಶಾಸ್ತ್ರದ ಎಲ್ಲ ವಿಷಯಗಳನ್ನು ಸಾಂಕೇತಿಕವಾಗಿ ಸೂತ್ರರೂಪದಲ್ಲಿ ವರ್ಣಿಸಲಾಗಿದೆ.

ಈ ಕೃತಿಯ ಪ್ರಾರಂಭದಲ್ಲಿ ಧರ್ಮದ ಸ್ವರೂಪವನ್ನು ವಿವರಿಸುತ್ತಾ 'ಶ್ರೇಯೋಽಭ್ಯುದಯಸಾಧನೋ ಧರ್ಮಃ' ಅಂದರೆ ಧರ್ಮವೇ ಶುಭಕರ ಕಾರ್ಯಗಳ ಹಾಗೂ ಅಭ್ಯುದಯದ ಸಾಧನವಾಗಿದೆ—ಎಂದು ತಿಳಿಸಲಾಗಿದೆ. ಧರ್ಮಾಚರಣೆ ನಡೆಸುವುದರಿಂದ ಮಾನವನಿಗೆ ಪರಮ ಕಲ್ಯಾಣವೂ, ಮಂಗಳಮಯ ಜೀವನವೂ ಹಾಗೂ ಅಭ್ಯುದಯವೂ ಆಗುತ್ತದೆ ಎಂಬುದು ಈ ಸೂತ್ರಗಳ ಕೇಂದ್ರ ವಿಷಯ. ಧರ್ಮವನ್ನು ಅನುಸರಿಸುವುದರಿಂದ ಪ್ರತಿಯೊಬ್ಬ ವ್ಯಕ್ತಿಯ ಹಿತವನ್ನು ಸಾಧಿಸಿದಂತಾಗುತ್ತದೆ. ಈ ಲೋಕದಲ್ಲಿಯಾಗಲಿ, ಪರಲೋಕದಲ್ಲಿಯಾಗಲಿ – ಎಲ್ಲೆಡೆ ಧರ್ಮವೇ ಪರಮ ಮಿತ್ರನೂ, ಸಹಾಯಕನೂ, ಪರಮಗತಿಯೂ ಆಗಿರುತ್ತದೆ. ಆದುದರಿಂದಲೇ ಅಧರ್ಮವನ್ನು ಬಳಿಯಲ್ಲಿ ಸುಳಿಯಗೊಡಬಾರದು. ಅದನ್ನು ದೂರದಲ್ಲಿಯೇ ಇರಿಸಬೇಕು. ಶುದ್ಧರೂಪದ ಧರ್ಮಮಾರ್ಗವನ್ನು ಅವಲಂಬಿಸುವುದೇ, ಆದರ ಆಶ್ರಯ

ಪಡಿಯುವುದೇ ಸುಲಭವಾದ ಮಾರ್ಗವಾಗಿದೆ.

ಆ ನಂತರದಲ್ಲಿ ಈ ಸ್ಮೃತಿಯಲ್ಲಿ ಉಪನಯನ ಹಾಗೂ ವಿವಾಹ ಸಂಸ್ಕಾರದ ವರ್ಣನೆ ಇದೆ. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಗಾಂಧರ್ವ, ಅಸುರ, ಪೈಶಾಚ ಹಾಗೂ ರಾಕ್ಷಸ-ಎನ್ನುವ ಅಷ್ಟವಿಧ ವಿವಾಹಗಳು ಪ್ರಚಲಿತ ವಾಗಿದೆಯೆಂದು ಇದರಲ್ಲಿ ತಿಳಿಸಲಾಗಿದೆ. ಗರ್ಭಾದಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರಣ, ಉಪನಯನ, ವಿವಾಹ, ವಿವಾಹಾಗ್ನಿ ಪರಿಗ್ರಹಣ ಇತ್ಯಾದಿ ಸಂಸ್ಕಾರಗಳನ್ನು ವಿವರಿಸಲಾಗಿದೆ.

ವಿವಾಹ ಸಂಸ್ಕಾರಗಳಲ್ಲಿ ಲಾಜ ಹೋಮ ಇತ್ಯಾದಿ ಅಗ್ನಿಯಲ್ಲಿ ಸಂಪನ್ನ ಗೊಳಿಸುವ ಕ್ರಿಯೆಗಳನ್ನು ವಿವರಿಸಿ, ಅವುಗಳಲ್ಲಿ ಮುಖ್ಯವಾದುದು ಆವಸಥ್ಯಾಗ್ನಿ, ವಿವಾಹಾಗ್ನಿ (ಗೃಹಾಗ್ನಿ) ಸ್ಮಾರ್ತಾಗ್ನಿಗಳ ಬಗ್ಗೆಯೂ ತಿಳಿಸಲಾಗಿದೆ. ವಿವಾಹಾ ನಂತರ ವಧೂವರರು ಆ ಸ್ಥಾಪಿಕ ಅಗ್ನಿಯನ್ನು ಮನೆಗೆ ತಂದು, ಪವಿತ್ರವಾದ ಸ್ಥಳದಲ್ಲಿ ಪ್ರತಿಷ್ಠಾಪಿಸಿ, ಅದರಲ್ಲಿ ತಮ್ಮ ಕುಲಪರಂಪರೆಯ ಅನುಸಾರ ಹವನ ಕಾರ್ಯಗಳನ್ನು ಮಾಡಬೇಕಾದ ಅಗತ್ಯವಿದೆ. ಈ ನಿತ್ಯಹವನ ವಿಧಿಯು ದ್ವಿಜರಿಗೆ ತಪ್ಪದೆ ಮಾಡಬೇಕಾದ ಕಾರ್ಯವೆಂದು ವಿಧಿಸಲಾಗಿದೆ. ಎಲ್ಲ ವಿಶ್ವ ದೇವಾದಿ ಸ್ಮಾರ್ತಕರ್ಮ ಹಾಗೂ ಪಾಕ ಯಜ್ಞಗಳನ್ನು ಇದೇ ಅಗ್ನಿಯಲ್ಲಿ ಅನುಷ್ಠಾನ ಮಾಡಬೇಕಾದ ಅಗತ್ಯವಿದೆ. ಇದೇ ವಿಷಯವನ್ನು ಬುಧಸ್ಮೃತಿ ಯಲ್ಲಿ ಸಂಕೇತ ರೂಪದಲ್ಲಿ 'ತಸ್ಮಿನ್ ಗೃಹಾಣಿ ದೇವ ಪಿತೃ ಮನುಷ್ಯ ವ್ರತ ಯಜ್ಞ ಕರ್ಮಾಣಿ ಕುರ್ಯಾತ್ |' ಎಂದು ತಿಳಿಸಲಾಗಿದೆ. ಅಂತೆಯೇ ಪ್ರತಿಯೊಬ್ಬ ಗೃಹಸ್ಥನೂ ತಪ್ಪದೆ 'ಅತಿಥೀನ್ ಪೂಜಯೇತ್' ಎನ್ನುವಂತೆ ಅತಿಥಿಗಳ ಸೇವಾಪೂಜೆಯನ್ನು ಮಾಡಬೇಕು. ಇದರೊಂದಿಗೆ ತನ್ನ ಸೇವಕ, ನೌಕರ ಹಾಗೂ ಬಂಧು ಬಾಂಧವರ ಪಾಲನೆ ಪೋಷಣೆಯನ್ನು 'ಭೃತ್ಯಾನ್ ಬಂಧೂನ್ ಪೋಷ್ಯವರ್ಗಾಶ್ಚ' ಎನ್ನುವ ಹೇಳಿಕೆಯಂತೆ ಮಾಡಬೇಕು.

## ಯಜ್ಞ ಸಂಸ್ಥೆಗಳು

ವೇದಗಳು, ಬ್ರಾಹ್ಮಣಗಳಲ್ಲಿ ಹಾಗೂ ಆಶ್ವಲಾಯನ, ಸತ್ಯಾಷಾಢ, ಆಪಸ್ತಂಭ, ಪುರಸ್ಕಾರ ಇತ್ಯಾದಿ ಸೂತ್ರ ಗ್ರಂಥಗಳಲ್ಲಿ ಯಜ್ಞಗಳ ವಿವಿಧ ಭೇದಗಳನ್ನು ತಿಳಿಸಲಾಗಿದೆ. ಆದರೆ ಇವೆಲ್ಲವೂ ಹವಿರ್ಯಜ್ಞ, ಸಂಸ್ಥಾ,

ಸೋಮಯಜ್ಞ ಸಂಸ್ಥಾ ಹಾಗೂ ಪಾಕಯಜ್ಞ ಸಂಸ್ಥಾ ಎನ್ನುವುವುಗಳಲ್ಲಿ ಸಮಾವೇಶಗೊಂಡಿವೆ. ಇವುಗಳ ಪ್ರತಿಯೊಂದರಲ್ಲೂ ಮತ್ತೆ ಏಳೇಳು ಯಜ್ಞಗಳು ಸಮಾವೇಶಗೊಂಡಿವೆ. ಇದೇ ಮಾತನ್ನು ಬುಧಸ್ಮೃತಿಯೂ ತಿಳಿಸುತ್ತದೆ.

1. ಹವಿರ್ಯಜ್ಞ – ಸಂಸ್ಥಾ : ಅಗ್ನ್ಯಾಧೇಯ (ಅಗ್ನಿಹೋತ್ರ), ದರ್ಶಪೌರ್ಣಮಾಸ, ಚಾತುರ್ಮಾಸ್ಯ, ನಿರೂಢ ಪಶುಬಂಧ, ಸೌತ್ರಾಮಣಿ, ಆಗ್ರಯಣ ಹಾಗೂ ಪಿಂಡ ಪಿತೃಯಜ್ಞ – ಎನ್ನುವ ಏಳು ಯಜ್ಞಗಳು ಕೂಡಿ ಈ ಸಂಸ್ಥಾಯಜ್ಞವಾಗಿದೆ.

2. ಸೋಮಯಜ್ಞ–ಸಂಸ್ಥಾ : ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ–ಎನ್ನುವ ಏಳು ರೀತಿಯ ಶ್ರೌತ ಯಜ್ಞಗಳನ್ನು ಸೋಮಯಜ್ಞ ಸಂಸ್ಥಾ ಎಂದು ಕರೆಯಲಾಗುತ್ತದೆ. 'ಅಗ್ನಿಷ್ಟೋಮೋಽತ್ಯಗ್ನಿಷ್ಟೋಮಃ ಉಕ್ಥ್ಯಃ ಷೋಡಶೀ ವಾಜಪೇಯಃ–ಇತಿ ಸೋಮಯಾಗಾನನುತಿಷ್ಠೇತ್'.

3. ಪಾಕಯಜ್ಞ–ಸಂಸ್ಥಾ : ಅಷ್ಟಕಾಶ್ರಾದ್ಧ, ಪಾರ್ವಣಶ್ರಾದ್ಧ, ಶ್ರಾವಣೀ, ಆಗ್ರಹಾಯಣೀ, ಚೈತ್ರೀ, ಆಶ್ವಯುಜೀ ಹಾಗೂ ಔಪಾಸನ ಹೋಮ ಎನ್ನುವ ಏಳು ಯಜ್ಞಗಳು ಪಾಕಯಜ್ಞ ಸಂಸ್ಥಾದಲ್ಲಿ ಪರಿಗಣಿಸಲಾಗಿದೆ.

ಪಾಕಯಜ್ಞ ಸಂಸ್ಥಾದ ಯಜ್ಞಹೋಮಾದಿ ಕರ್ಮಗಳು ಗೃಹಾಗ್ನಿ (ಸ್ಮಾರ್ತಾಗ್ನಿ)ಯಲ್ಲಿ ಸಂಪನ್ನಗೊಂಡಿವೆ. ಇದೇ ರೀತಿಯಲ್ಲಿ ಸೋಮಯಜ್ಞ ಹಾಗೂ ಹವಿರ್ಯಜ್ಞ ಸಂಸ್ಥಾಯಜ್ಞಾದಿ ಕರ್ಮಗಳು ಶ್ರೌತಾಗ್ನಿಯಲ್ಲಿ ಒಂದುಗೂಡಿವೆ.

## ದ್ರವ್ಯ ಶುದ್ಧಿ

ಬುಧಸ್ಮೃತಿಯಲ್ಲಿ ಸತ್ಯಮಾರ್ಗದಲ್ಲಿ ಶುದ್ಧರೂಪದಲ್ಲಿ ಸಂಪಾದಿಸಿದ ದ್ರವ್ಯದ ಬಗ್ಗೆ ಹೆಚ್ಚು ಒತ್ತುಕೊಡಲಾಗಿದೆ. ಮಾಡಬೇಕಾದ ಕಾರ್ಯಗಳು, ಕರ್ತವ್ಯಗಳು ಹಾಗೂ ಪುಣ್ಯಾನುಷ್ಠಾನಗಳು ನ್ಯಾಯವಾಗಿ ಸಂಪಾದಿಸಿದ ಹಣದಿಂದ ಹಾಗೂ ಶುದ್ಧ ಭಾವನೆ (ಮನಸ್ಸಿನಿಂದ) ಯಿಂದ ಮಾಡಬೇಕು. ಅನ್ಯಾಯ, ಮೋಸ, ವಂಚನೆ, ಅಧರ್ಮ, ಟಕ್ಕುತನ, ಅತ್ಯಾಚಾರದ ಮೂಲಕ ಪಡೆದ ಧನವು ಮಾನವನ ಸರ್ವಸ್ವವನ್ನೂ ನಾಶಮಾಡುತ್ತದೆ. ಆದುದರಿಂದ

ಸನ್ಮಾರ್ಗದಿಂದ ಸಂಪಾದಿಸಿದ ಧನದಿಂದಲೇ ಶರೀರ ರಕ್ಷಣೆ ಮಾಡಿಕೊಳ್ಳಬೇಕು, ಅಂತಹ ಧನವನ್ನೇ ಧರ್ಮಕಾರ್ಯಗಳಲ್ಲಿ ಉಪಯೋಗಿಸಬೇಕು. ಸುಖ ಭೋಗಗಳಿಂದ, ಲಾಲಸೆಯಿಂದ ಆರ್ಜಿಸಿದ ಧನವು ಸಂಗ್ರಹ ಯೋಗ್ಯ ವಾದುದಲ್ಲ, ಅದು ಮಾನವನ ಪತನಕ್ಕೆ ಕಾರಣವಾಗುತ್ತದೆ. 'ನ್ಯಾಯಾಗತ ಧನೇನ ಕರ್ಮಣಿ' ಎನ್ನುವ ಸೂತ್ರವು ಇದನ್ನು ಸ್ಪಷ್ಟಪಡಿಸುತ್ತದೆ.

ನಾಲ್ಕು ವರ್ಣಗಳ ತಮ್ಮ ತಮ್ಮ ವರ್ಣ ಹಾಗೂ ಆಶ್ರಮ ಧರ್ಮಗಳಲ್ಲಿ ಸ್ಥಿರವಾಗಿದ್ದು, ಸತ್ಕಾರ್ಯಗಳನ್ನು ಮಾಡಬೇಕಾಗಿದೆ. ತನ್ನ ಪ್ರಜೆಗಳು ತಮ್ಮ ತಮ್ಮ ಕರ್ತವ್ಯಗಳನ್ನು ಸರಿಯಾದ ರೀತಿಯಲ್ಲಿ, ಧರ್ಮ ಮಾರ್ಗದಲ್ಲಿ ಪಾಲಿಸದೆ ಇದ್ದರೆ ರಾಜನು ಅಂತಹವರನ್ನು ಶಿಕ್ಷಿಸಿ, ಧರ್ಮಕಾರ್ಯಗಳಲ್ಲಿ ಅವರನ್ನು ನಿಯೋಜಿಸುವ ಅಧಿಕಾರ ಅವನಿಗೆ ಇದೆ.

ವಿಹಿತಮ ಕುರ್ವತೋ ರಾಜ್ಞಾ ಕಾರಯಿತ ವ್ಯಾಃ |
ಬಲವುಶ್ಚೈತಾನ್ ಸ್ವಧರ್ಮೇ ಸ್ಥಾಪಯೇತ್ ||

ಇದಕ್ಕಾಗಿ ರಾಜನು ದಂಡನೀತಿಯನ್ನು ಅನುಸರಿಸಿ, ತಪ್ಪು ಮಾಡಿದವ ರನ್ನು ಶಿಕ್ಷಿಸಿದರೂ, ಅಂತಹ ವಿಧಾನವು ಅವಶ್ಯಕವಾಗಿ ಆಗಬೇಕಾಗಿರುತ್ತದೆ. ಈ ರೀತಿಯಲ್ಲಾದರೂ ಧರ್ಮದ ಮರ್ಯಾದೆಯು ಸ್ಥಿರವಾಗುತ್ತದೆ. ಇದರೊಂದಿಗೆ ರಾಜನೂ ಸ್ವತಃ ಧರ್ಮಾಚರಣೆ ಮಾಡಬೇಕಾದುದೂ ಹಾಗೂ ಪ್ರಜೆಗಳಿಂದ ಧರ್ಮಾನುಷ್ಠಾನ ಮಾಡಿಸಬೇಕಾದುದೂ ಅವಶ್ಯಕ. ಇದರಿಂದ ರಾಜ ಮತ್ತು ಪ್ರಜೆ ಇಬ್ಬರೂ ಧರ್ಮದ ಸಿದ್ಧಿಯನ್ನು ಪಡೆಯುವರು –

ತಥಾ ಕುರ್ವತಃ ಕಾರಯಿತುಶ್ಚೋಭಯೋರ್ಧರ್ಮ ಸಿದ್ಧಿಃ ||

ಈ ರೀತಿಯಲ್ಲಿ ಸಂಕ್ಷಿಪ್ತವಾಗಿದ್ದರೂ 'ಬುಧಸ್ಮೃತಿ'ಯು ಸದಾಚರಣೀ ಯವೂ, ಉಪಾದೇಯವೂ ಆಗಿದೆ.

## 22. ಬೃಹಸ್ಪತಿ ಸ್ಮೃತಿ

ಬೃಹಸ್ಪತಿಯು ಓರ್ವ ಮಹರ್ಷಿ, ಮಹಾನ್ ತಪಸ್ವಿ ಅಂಗಿರಾ (ಅಂಗಿರಸ) ಎನ್ನುವಾತನ ಮಗ. ಈತನು ದೇವತೆಗಳ ಗುರು. ದೇವತೆಗಳು ಈತನನ್ನು ತಮ್ಮ ಆಚಾರ್ಯನಾಗುವಂತೆ ಬೇಡಿದ್ದರಿಂದ ಈತನು ಅವರಿಗೆ ಗುರುವಾದ. ಈತನು ಅತ್ಯಂತ ಸತ್ವ ಸಂಪನ್ನನೂ; ಧರ್ಮನೀತಿಯ ಪರಿಜ್ಞಾತನೂ; ವಾಣೀ, ಬುದ್ಧಿ, ಜ್ಞಾನಗಳ ಅಧಿಷ್ಠಾತನೂ ಮತ್ತು ಮಹಾನ್

ಪರೋಪಕಾರಿಯೂ ಆಗಿರುವನು. ಬೃಹಸ್ಪತಿಯ ಸಮಾನ ವಕ್ತೃತ್ವ ಶಕ್ತಿ ಸಂಪನ್ನನು ಬೇರೆ ಯಾರೂ ಇಲ್ಲ ಎಂದು ಸ್ವತಃ ಭೀಷ್ಮನೇ ಮಹಾಭಾರತ. ಅನುಶಾಸನಪರ್ವದ 111/5ನೇ ಶ್ಲೋಕದಲ್ಲಿ ತಿಳಿಸಿದ್ದಾನೆ –

ವಕ್ತಾ ಬೃಹಸ್ಪತಿ ಸಮೋ ನ ಹ್ಯನ್ಯೋ ವಿದ್ಯತೆ ಕ್ವಚಿತ್ |

ಈತನಿಗೆ ದೇವಗುರು ಹಾಗೂ ವಾಚಸ್ಪತಿ ಎಂಬ ಬಿರುದುಗಳೂ ಉಂಟು. ನಕ್ಷತ್ರ ಮಂಡಲದಲ್ಲಿ ಪ್ರತಿಷ್ಠಿತನಾಗಿದ್ದು, ಗ್ರಹವೊಂದರ ರೂಪದಲ್ಲಿ ಜಗತ್ಕಲ್ಯಾಣ ಚಿಂತನೆಯಲ್ಲಿ ಸದಾ ನಿಮಗ್ನನಾಗಿರುತ್ತಾನೆ. ಏಳು ವಾರಗಳಲ್ಲಿ ಈತನ ಹೆಸರಿನಲ್ಲಿ ಒಂದು ವಾರವಿರುವುದೂ ಸರ್ವವಿದಿತ. ಶಾಸ್ತ್ರೀಯ ದೃಷ್ಟಿಯಿಂದ 'ಬೃಹಸ್ಪತಿ' ವಾರವು ಎಲ್ಲ ರೀತಿಯ ಶುಭಪ್ರದ ಹಾಗೂ ಮಂಗಳಕಾರಕವಾದ ದಿನವಾಗಿದೆ.

ಪುರಾಣಗಳು ಹಾಗೂ ಮಹಾಭಾರತಗಳಲ್ಲಿ ಆಚಾರ್ಯ ಬೃಹಸ್ಪತಿಯ ಚರಿತ್ರೆ ಹಾಗೂ ಉಪದೇಶಪ್ರದ ಆಖ್ಯಾನಗಳು ತುಂಬಿಕೊಂಡಿವೆ. ದೇವತೆಗಳೊಂದಿಗೆ ಅಸುರರು, ಕಿನ್ನರರು, ನಾಗರು, ಗಂಧರ್ವರು—ಇತ್ಯಾದಿ ದೇವಯೋನಿಯವರು ಹಾಗೂ ಮಾನವ ವರ್ಗದವರು ಈತನ ಉಪಾಸನೆ ಮಾಡಿ, ಅನೇಕ ಸತ್ಫಲಗಳನ್ನು ಪಡೆದಿದ್ದಾರೆ. ಈತನು ನೀಡಿರುವ ಧರ್ಮಮಯ ಉಪದೇಶಗಳು ಮಂಗಳಮಯವಾಗಿದ್ದು, ಅಭ್ಯುದಯಪ್ರದವಾಗಿದೆ. ಈತನು ಸ್ವಭಾವತಃ ಶಾಂತಸ್ವರೂಪನು. ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಬೇರೆ ಬೇರೆಯಾಗಿ ವರ್ತಿಸುವ ಈತನು ಶಾಂತ ಸಮಚಿತ್ತದಿಂದ, ಸಾಂತ್ವನ ಪೂರ್ಣವಾದ ಮಧುರ ಮಾತುಗಳಿಂದ ಇತರರನ್ನು ಶಾಂತಗೊಳಿಸುವ ವಿದ್ಯೆಯಲ್ಲಿ ಈತನು ಸಿದ್ಧಹಸ್ತನು.

ಈತನು ಇಂದ್ರನನ್ನು ಕುರಿತು, 'ಹೇ ದೇವರಾಜ ಇಂದ್ರ ! ನೋಡಿದ ಮೊದಲಲ್ಲೇ ಮಧುರವಾಗಿ ಯಾರು ಮಾತನಾಡುವರೊ, ಮುಗುಳುನಗೆಯಿಂದ ಸಂಭಾಷಿಸುವರೊ ಅಂತಹವರನ್ನು ಎಲ್ಲರೂ ಇಷ್ಟಪಡುತ್ತಾರೆ' — ಎಂದು ಹೇಳಿದ್ದಾನೆ.

ಯಸ್ತು ಸರ್ವಮಭಿಪ್ರೇಕ್ಷ್ಯ ಪೂರ್ವಮೇವಾಭಿಭಾಷತೆ |
ಸ್ಮಿತಪೂರ್ವಾಭಿಭಾಷೀ ಚ ತಸ್ಯ ಲೋಕಃ ಪ್ರಸೀದತಿ ||
(ಮಹಾ. ಶಾಂತಿ. 84/6)

ಯುಧಿಷ್ಠಿರನನ್ನು ಕುರಿತು ಈತನು ಹೀಗೆ ಹೇಳಿದ್ದಾನೆ–

ಸರ್ವಭೂತಾತ್ಮಭೂತಸ್ಯ ಸರ್ವಭೂತಾನಿ ಪಶ್ಯತಃ |
ದೇವೋಽಪಿ ಮಾರ್ಗೇ ಮುಹ್ಯಂತಿ ಅಪದಸ್ಯಪದೈಷಿಣಃ ||
(ಮಹಾ. ಅನು. 113/7)

ಅಂದರೆ ಸರ್ವಜೀವಿಗಳಿಗೂ ಯಾವನು ಆತ್ಮನಾಗಿರುವನೊ, ಎಲ್ಲರ ಆತ್ಮಗಳನ್ನು ತನ್ನ ಆತ್ಮ ಎನ್ನುವ ಸಮಭಾವದಿಂದ ನೋಡವನೊ, ಅಂತಹ ಗಮನಾಗಮನ ರಹಿತ ಜ್ಞಾನಿಯ ಅಂತಃ ಸತ್ವವನ್ನು ಅರಿಯುವಾಗ ದೇವತೆಗಳೂ ಕೂಡ ಮೋಹಕ್ಕೆ ಒಳಗಾಗುವರು. ಇದೇ ರೀತಿ –

ನ ತತ್ ಪರಸ್ಯ ಸಂದಧ್ಯಾತ್ ಪ್ರತಿ ಕೂಲಂ ಯದಾತ್ಮನಃ |
ಏಷ ಸಂಕ್ಷೇಪತೋ ಧರ್ಮಃ ಕಾಮಾದನ್ಯಃ ಪ್ರವರ್ತತೆ ||
(ಮಹಾ. ಅನು. 113/8)

ಅಂದರೆ ತನಗೆ ಇಷ್ಟವಾಗದ ಮಾತನ್ನು ಬೇರೆಯವರಿಗೂ ಪ್ರಯೋಗಿಸಬಾರದು. ಇದೇ ಧರ್ಮದ ಸಂಕ್ಷೇಪದಲ್ಲಿನ ಲಕ್ಷಣ. ಇದಕ್ಕೆ ಭಿನ್ನವಾದ ವರ್ತನೆಯನ್ನು ಯಾರು ಅನುಸರಿಸುವರೊ ಅಂತಹವರು ಲೌಕಿಕ ಕಾಮನೆಯ ಮೋಹಕ್ಕೆ ಒಳಗಾಗುವರು. — ಎಂಬುದನ್ನು ಬೃಹಸ್ಪತಿ ತನ್ನ ಉಪದೇಶಗಳಲ್ಲಿ ಸ್ಪಷ್ಟಪಡಿಸಿದ್ದಾನೆ.

ಮಹಾಭಾರತದಲ್ಲಿ ಈತನು ನೀಡಿದ ಉಪದೇಶಗಳು ಬಹಳ ಇವೆ. ಒಮ್ಮೆ ಧರ್ಮವಿಷಯದ ಬಗ್ಗೆ ಜಿಜ್ಞಾಸೆ ಮಾಡುತ್ತಾ ಈತನು ಯುಧಿಷ್ಠಿರನಿಗೆ ಅನೇಕ ವಿಷಯಗಳನ್ನು ಹೇಳುತ್ತಾನೆ.

ಧರ್ಮರಾಜ "ಭಗವನ್ ! ತಾವು ಎಲ್ಲ ಧರ್ಮಗಳ ಅಂತರ್ಗತವನ್ನು ತಿಳಿದುಕೊಂಡಿದ್ದೀರಿ. ತಾವು ಎಲ್ಲ ಶಾಸ್ತ್ರಗಳ ವಿದ್ವಾಂಸರೂ ಆಗಿದ್ದೀರಿ. ತಂದೆ, ತಾಯಿ, ಮಗ, ಗುರು, ಸಜಾತೀಯನು, ನೆಂಟರಿಷ್ಟರು, ಮಿತ್ರವರ್ಗ–ಇವರಲ್ಲಿ ವ್ಯಕ್ತಿಗೆ ಹೆಚ್ಚು ಸಹಾಯಕನಾಗಿರುವವನು ಯಾವನು ? ಮಾನವನು ಮರಣಿಸಿದ ನಂತರ ಅವನ ಜೀವದ ಜೊತೆಯಾಗಿ ಪರಲೋಕಕ್ಕೆ ಹೋಗುವವರು ಯಾರು ?" ಎಂದು ಕೇಳುತ್ತಾನೆ.

ಬೃಹಸ್ಪತಿಯು ಇದನ್ನು ಆಲಿಸಿ, ಹೀಗೆಂದು ಹೇಳುತ್ತಾನೆ,

"ರಾಜನ್ ! ಪ್ರತಿಯೊಂದು ಪ್ರಾಣಿಯೂ ಒಂಟಿಯಾಗಿಯೇ ಜನ್ಮವೆತ್ತುತ್ತದೆ. ಅಂತೆಯೇ ಅದು ಒಂಟಿಯಾಗಿಯೇ ಮರಣಿಸುತ್ತದೆ. ಅದು

ಒಂಟಿಯಾಗಿಯೇ ದುಃಖವನ್ನು ಅನುಭವಿಸುತ್ತದೆ; ಅಂತೆಯೇ ಒಂಟಿಯಾಗಿಯೇ ದುರ್ಗತಿಯನ್ನು ಅನುಭವಿಸುತ್ತದೆ. ತಂದೆ, ತಾಯಿ, ಸಹೋದರ, ಮಗ, ಗುರು, ಜಾತಿ, ನೆಂಟರು ಹಾಗೂ ಮಿತ್ರವರ್ಗ– ಇವರು ಯಾರೂ ಅವನ ಸಹಾಯಕ್ಕೆ ಬರಲಾರರು. ಜನರು ಮೃತ್ಯುವಶನಾದ ವ್ಯಕ್ತಿಯ ಶರೀರವನ್ನು ಮಣ್ಣು ಮಾಡಿಯೊ, ಸುಟ್ಟು ಬೂದಿಯನ್ನೋ ಮಾಡುವರು. ಅವನು ಸತ್ತದ್ದಕ್ಕಾಗಿ ಒಂದೆರಡು ದಿನ ಅಳುತ್ತಾರೆ. ನಂತರ ಆ ವ್ಯಕ್ತಿಯನ್ನು ಮರೆತ ರೆಂದೇ ತಿಳಿದು ನಡೆದುಕೊಳ್ಳುತ್ತಾರೆ. ಯಾರೂ ಆ ಜೀವಿಯನ್ನು ಹಿಂಬಾಲಿ ಸುವುದಿಲ್ಲ. ಕೇವಲ ಧರ್ಮವು ಮಾತ್ರ ಅವನನ್ನು ಅನುಸರಿಸುತ್ತದೆ. ಆದುದ ರಿಂದ ಧರ್ಮವೇ ನಿಜವಾದ ಸಹಾಯಕನಾಗಿರುತ್ತದೆ. ಈ ಕಾರಣ ಮಾನವನು ಸದಾ ಧರ್ಮದ ಸೇವನೆಯನ್ನೇ ಮಾಡಬೇಕಾಗಿದೆ. ಧಾರ್ಮಿಕ ಜೀವನ ನಡೆಸಿದ ವ್ಯಕ್ತಿಯ ಜೀವವಷ್ಟೇ ಸ್ವರ್ಗವನ್ನು ಪ್ರವೇಶಿಸುತ್ತದೆ. ಅಧರ್ಮ ಜೀವನ ನಡೆಸಿದ ವ್ಯಕ್ತಿಯ ಜೀವವು ನರಕದಲ್ಲಿ ತೊಳಲಾಡುತ್ತದೆ. ಆದುದರಿಂದ ವಿದ್ವಾಂಸನಾದವನು ನ್ಯಾಯ ರೀತಿಯಲ್ಲಿ ಸಂಪಾದಿಸಿದ ಧನದಿಂದಲೇ ಧರ್ಮದ ಅನುಷ್ಠಾನ ಮಾಡಬೇಕು. ಮಾನವನ ಏಕಮಾತ್ರ ಸಹಾಯಕ, ಜೊತೆಗಾರ ನೆಂದರೆ ಧರ್ಮವೇ ಆಗಿರುತ್ತದೆ.' (ಮಹಾಭಾರತ, ಅನುಶಾಸನ ಪರ್ವ.)

111ನೇ ಅಧ್ಯಾಯ –

ಏಕಃ ಪ್ರಸೂಯತೆ ರಾಜನ್ನೇಕ ಏವ ವಿನಶ್ಯತಿ || 11 ||
ಏಕಸ್ತರತಿ ದುರ್ಗಾಣಿ ಗಚ್ಛದ್ಯೇಕಸ್ತು ದುರ್ಗತಿಮ್ |
ಅಸಹಾಯಃ ಪಿತಾಮಾತಾ ತಥಾ ಭ್ರಾತಾ ಸುತೋ ಗುರುಃ || 12 ||
ಜ್ಞಾತಿ ಸಂಬಂಧವರ್ಗಶ್ಚ ಮಿತ್ರವರ್ಗಸ್ತಥೈವ ಚ |
ಮೃತಂ ಶರೀರ ಮುತ್ಸೃಜ್ಯ ಕಾಷ್ಠಲೋಷ್ಟಸಮಂ ಜನಾಃ || 13 ||
ಮುಹೂರ್ತಮಿವ ರೋದಿತ್ವಾ ತತೋ ಯಾಂತಿ ಪರಾಙ್ಮುಖಾಃ
ತೈಸ್ತಚ್ಛರೀರ ಮುತ್ಸೃಷ್ಟಂ ಧರ್ಮ ಏಕೋಽನುಗಚ್ಛತಿ || 14 ||
ತಸ್ಮಾದ್ ಧರ್ಮಃ ಸಹಾಯಶ್ಚ ಸೇವಿತವ್ಯಃ ಸದಾ ನೃಭಿಃ |
ಪ್ರಾಣೀ ಧರ್ಮ ಸಮಾಯುಕ್ತೋ ಗಚ್ಛೇತ್ ಸ್ವರ್ಗಗತಿಂ ಪರಾಂ ||15||
ತಥೈವ ಧರ್ಮ ಸಂಯುಕ್ತೋ ನರಕಂ ಚೋಪಪದ್ಯತೆ |
ತಸ್ಮಾ ನ್ಯಾಯಾಗತೈರಥೈರ್ಧಮಂ ಸೇವೇತ ಪಂಡಿತಃ || 16 ||

ಧರ್ಮ ಏಕೋ ಮನುಷ್ಯಾಣಾಂ ಸಹಾಯಃ ಪಾರಲೌಕಿಕಃ || 17 ||

ಒಮ್ಮೆ ಬೃಹಸ್ಪತಿಯು ಲೋಕಗಳನ್ನು ಕಾಪಾಡಲು ಅಗ್ನಿರೂಪವನ್ನು ಧರಿಸಿದನು ಎಂದು ಭಾರತದ ವನಪರ್ವ ತಿಳಿಸುತ್ತದೆ. ಈತನಿಗೆ ಬ್ರಹ್ಮವಾದಿನಿ ಎನ್ನುವ ಸಹೋದರಿಯೊಬ್ಬಳಿದ್ದಳು. ಈಕೆಯು ತನ್ನ ಅಣ್ಣನ ಪ್ರಭಾವದಿಂದ ವೇದವೇತ್ತಳಾಗಿ ಮುಂದಿನ ಬ್ರಹ್ಮವಾದಿನಿಯರಿಗೆ ಮಾದರಿಯಾದಳು. ಈಕೆಯು ಪ್ರಭಾಸನನ್ನು ವಿವಾಹವಾದಳು.

ತಾರೆ ಈತನ ಪತ್ನಿ. ಈಕೆಯನ್ನು ಸುಭೆ ಎಂದೂ ಕರೆಯಲಾಗುತ್ತದೆ. ಈಕೆಯೇ ಚಾಂದ್ರಮಸಿ ಎಂದೂ, ಚಾಂದ್ರಮಸಿ ಎನ್ನುವವಳು ಬೇರೆ ಪತ್ನಿಯೆಂದೂ ವಿದ್ವಾಂಸರಲ್ಲಿ ವಾದವಿವಾದವಿದೆ. ಈ ಚಾಂದ್ರಮಸಿಯಲ್ಲಿ ಬೃಹಸ್ಪತಿಗೆ ಶಂಯು, ವಿಶ್ವಜಿತ್, ವಿಶ್ವಭುಕ್, ಬಡಬಾಗ್ನಿ, ಸ್ವಿಷ್ಟಕೃತ, ನಿಶ್ಚ್ಯವನ ಎನ್ನುವ ಆರುಮಂದಿ ಪುತ್ರರೂ, ಸ್ವಾಹಾ ಎಂಬ ಪುತ್ರಿಯೂ ಜನಿಸಿದರು.

ಮತ್ತೊಂದು ಕಥಾನಕದಂತೆ ಕಚನು ಈತನ ಮಗ, ಇವನೇ ಕಚದೇವಯಾನಿ ಕಥಾನಕದ ಪಾತ್ರಧಾರಿ.

ಬೃಹಸ್ಪತಿಯು ತನ್ನ ಅಣ್ಣನಾದ ಉಚಥ್ಯ ಮುನಿಯ ಪತ್ನಿಯಾದ ಮಮತಾದೇವಿಯನ್ನು ಪರಿಗ್ರಹಿಸಿ, ಆಕೆಯಲ್ಲಿ ಭಾರದ್ವಾಜ ಎಂಬ ಪುತ್ರನನ್ನು ಪಡೆದ. ಆದರೆ ಈತನೇ ಪ್ರಖ್ಯಾತ ಮಹರ್ಷಿಯಾದ ಭಾರದ್ವಾಜ ಮುನಿಯೇ ಎಂಬುದು ಸ್ಪಷ್ಟವಾಗಿಲ್ಲ.

ನಹುಷನು ಇಂದ್ರನಾಗಿದ್ದಾಗ ಅವನು ಇಂದ್ರನ ಪತ್ನಿ ಶಚೀದೇವಿಯನ್ನು ಮದುವೆಯಾಗಲು ಪ್ರಯತ್ನಿಸಿದ. ಇದು ಅನರ್ಥಕಾರಿಯಾಗುತ್ತಿತ್ತು. ಆದುದರಿಂದ ಬುದ್ಧಿವಂತಿಕೆಯಿಂದ ಶಚೀದೇವಿಯ ಪಾತಿವ್ರತ್ಯವನ್ನು ಕಾಪಾಡಿ, ನಹುಷನು ಶಾಪಕ್ಕೆ ಒಳಗಾಗುವಂತೆ ಮಾಡಿದ. ಇದೇ ರೀತಿಯಲ್ಲಿ ಉಪರಿಚ ವಸುವಿನಿಂದ ಯಜ್ಞವನ್ನು ಮಾಡಿಸಿ, ಸನಾತನಧರ್ಮವನ್ನು ಕಾಪಾಡುವುದರಲ್ಲಿ ಸಹಾಯ ಮಾಡಿದ.

ಒಮ್ಮೆ ಶುಕ್ರಾಚಾರ್ಯನು ಧೂಮವ್ರತವೆಂಬ ತಪಸ್ಸನ್ನು ಮಾಡಿ, ಶಿವನನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದ. ಇದು ಸಫಲವಾದಲ್ಲಿ ಅನೇಕ ವರಗಳು ಶುಕ್ರಾಚಾರ್ಯನ ಮುಖಾಂತರ ರಾಕ್ಷಸರ ಪಾಲಾಗಿ, ಅದು ದುರ್ಬಲಕೆಯಾಗು

ವುದು ಸತ್ಯವೆಂದು ತಿಳಿದು, ಅದಕ್ಕೆ ಪರಿಹಾರವನ್ನು ಕಂಡುಹಿಡಿದ. ಅಂತೆಯೇ ತಾನು ಶುಕ್ರಾಚಾರ್ಯನ ರೂಪವನ್ನು ಪಡೆದು, ರಾಕ್ಷಸರ ಬಳಿಗೆ ಹೋದ. ಬೃಹಸ್ಪತಿಯು ರಾಕ್ಷಸರ ಬಳಿಗೆ ಹೋಗಿ, ತಾನೇ ಶುಕ್ರಾಚಾರ್ಯನೆಂದು ಹೇಳಿಕೊಂಡು, ಅವರಿಗೆ ನಾಸ್ತಿಕವಾದವನ್ನು ಬೋಧಿಸಿದ. ಇದರಿಂದ ಈತನ ವಶವಾದರು.

'ನಂತರ ಶುಕ್ರಾಚಾರ್ಯನು ತಪಸ್ಸನ್ನು ಮುಗಿಸಿ, ಸಿದ್ಧಿಯೊಂದಿಗೆ ರಾಕ್ಷಸರ ಬಳಿ ಬಂದ. ಆದರೆ ಅವರು ಈತನನ್ನು ಗುರ್ತಿಸದೆ, ಶುಕ್ರಾಚಾರ್ಯನ ರೂಪದಲ್ಲಿದ್ದ ಬೃಹಸ್ಪತಿಯನ್ನು ಗೌರವಿಸಿದರು. ಇದರಿಂದ ಕ್ರುದ್ಧನಾದ ಶುಕ್ರಾಚಾರ್ಯನು ರಾಕ್ಷಸರನ್ನು ಶಪಿಸಿದನು. ಇದರಿಂದ ಆತನ ತಪಸ್ಸು ವ್ಯರ್ಥವಾಯಿತು. ಈ ರೀತಿಯಲ್ಲಿ ಬೃಹಸ್ಪತಿ ತನ್ನ ಇಚ್ಛೆ ಕೈಗೂಡಿದುದಕ್ಕೆ ಸಂತೋಷಗೊಂಡನು.

ಕೋಸಲ ದೇಶದ ಅರಸನಾದ ವಸುಮನಸನೆಂಬ ರಾಜನಿಗೆ ರಾಜಧರ್ಮಗಳನ್ನು ಬೋಧಿಸಿದ, ಬೃಹಸ್ಪತಿಯು ಸವಿಸ್ತಾರವಾಗಿ ಈ ಎಲ್ಲ ವಿಷಯಗಳನ್ನು ಸಂವಾದದ ರೂಪದಲ್ಲಿ ವಿವರಿಸಿ, ರಾಜಧರ್ಮದ ಸೂತ್ರಗಳನ್ನು ರಚಿಸಿದನು. ಈ ಎಲ್ಲ ವಿವರಗಳು ಸೇರಿಯೇ 'ಬೃಹಸ್ಪತಿ ಸ್ಮೃತಿ' ರಚನೆಯಾಗಿರುವುದು. ಇದರಲ್ಲಿ 81 ಶ್ಲೋಕಗಳಿವೆ. ಮುಖ್ಯವಾಗಿ ಈ ಸ್ಮೃತಿಯಲ್ಲಿ ಭೂಮಿ-ದಾನ, ಗೋದಾನಗಳ ಮಹಿಮೆಯ ವಿವರಗಳಿವೆ. ಇಂದ್ರನು ಪ್ರಶ್ನಿಸುತ್ತಾನೆ, ಬೃಹಸ್ಪತಿ ಉತ್ತರಿಸುತ್ತಾನೆ. ಹೀಗೆ ಪ್ರಶ್ನೋತ್ತರ ರೂಪದಲ್ಲಿ ಈ ಸ್ಮೃತಿ ಪ್ರಸ್ತುತವಾಗಿದೆ.

ಏವ ಮಿಂದ್ರೇಣ ಪೃಷ್ಟೋऽಸಿ ದೇವದೇವ ಪುರೋಹಿತಃ |
ವಾಚಸ್ಪತಿರ್ಮಹಾಪ್ರಾಜ್ಞೋ ಬೃಹಸ್ಪತಿರುವಾಚ ಹ || 3 ||

ಭೂಮಿದಾನ : ಭೂಮಿದಾನವು ಸರ್ವಶ್ರೇಷ್ಠವಾದ ದಾನವೆಂದು ಬೃಹಸ್ಪತಿಯು ತಿಳಿಸುತ್ತಾನೆ. ಭೂದಾನದ ಮುಖಾಂತರ ನವರತ್ನಗಳನ್ನೆ ದಾನ ಮಾಡಿದಂತಾಗುತ್ತದೆ. ಇವೆಲ್ಲವೂ ಭೂಮಿಯಿಂದಲೇ ಪಡೆಯುತ್ತೇವೆ.

ಸುವರ್ಣಂ ರಜತಂ ವಸ್ತ್ರಂ ಮಣಿರತ್ನಂ ಚ ವಾಸವ |
ಸರ್ವಮೇವ ಭವೇದ್ದತ್ತಂ ವಸುಧಾಂ ಯಃ ಪ್ರಯಚ್ಛತಿ || 5 ||

ಉತ್ತು, ಬಿತ್ತಿ, ಬೆಳೆ ಬೆಳೆದ ಭೂಮಿಯನ್ನು ಯಾರು ದಾನ ಮಾಡು ವರೊ, ಅವನು ಜಗತ್ತಿನಲ್ಲಿ ಸೂರ್ಯನು ಬೆಳಗುತ್ತಿರುವವರೆಗೂ ಸ್ವರ್ಗಲೋಕ ದಲ್ಲಿ ಪ್ರತಿಷ್ಠಿತನಾಗಿರುವನು.

ಫಾಲಕೃಷ್ಟಾಂ ಮಹೀಂ ದತ್ತ್ವಾ ಸಬೀಜಾಂ ಸಸ್ಯಶಾಲಿನಾಮ್ |
ಯಾವತ್ ಸೂರ್ಯಕರಾ ಲೋಕಾಸ್ತಾವತ್ ಸ್ವರ್ಗೇ ಮಹೀಯತೆ ||6||

ತಾನು ಜೀವಿಸುವುದಕ್ಕೆ ಅನುವಾಗಲು ಮಾಡಿದ ಯಾವುದೇ ಪಾಪವು 'ಗೋಚರ್ಮ'ದಷ್ಟು ಭೂಮಿಯನ್ನು ದಾನ ಮಾಡುವುದರಿಂದ ಅದು ನಾಶವಾಗು ತ್ತದೆ. ಇದರಿಂದ ಅಂತಹ ವ್ಯಕ್ತಿ ಶುದ್ಧನಾಗುತ್ತಾನೆ.

ಅಪಿ ಗೋಚರ್ಮ ಮಾತ್ರೇಣ ಭೂಮಿದಾನೇನ ಶುಧ್ಯತಿ || 7 ||

## ಗೋಚರ್ಮ ಭೂಮಿಯ ಪರಿಮಾಣ

ಗೋಚರ್ಮ ಎನ್ನುವುದು ಒಂದು ಭೂಮಿಯ ಉದ್ದ ಅಗಲದ ಅಳತೆ. ಬೃಹಸ್ಪತಿಯು ಈ ಅಳತೆಯನ್ನು ಹೀಗೆಂದು ತಿಳಿಸುತ್ತಾನೆ–ಹತ್ತು ಹಸ್ತಗಳ ಒಂದು ಕೋಲಿನಿಂದ ಮೂವತ್ತು ಸಲ ಅಳೆದರೆ, ಅದು ಒಂದು ನಿವರ್ತನವಾಗು ತ್ತದೆ. ಹತ್ತು ನಿವರ್ತನಗಳ ವಿಸ್ತಾರವಾದ ಭೂಮಿಯನ್ನು 'ಗೋಚರ್ಮ' ಭೂಮಿ ಎಂದು ಕರೆಯಲಾಗುತ್ತದೆ.

| | | |
|---|---|---|
| 10 ಹಸ್ತಗಳು | — | ಒಂದು ದಂಡ |
| 30 ದಂಡ (300 ಹಸ್ತ) | — | 1 ನಿವರ್ತನ |
| 10 ನಿವರ್ತನ (300 ಹಸ್ತ) | — | $1\frac{1}{4}$ ಕಿ.ಮೀ. |

$1\frac{1}{4}$ ಕಿ.ಮೀ. ಉದ್ದ, $1\frac{1}{4}$ ಕಿ.ಮೀ. ಅಗಲದ ಭೂಮಿಯನ್ನು 'ಗೋ-ಚರ್ಮ ಭೂಮಿ' ಎಂದು ಕರೆಯಲಾಗುತ್ತದೆ. 'ಗೋಚರ್ಮ ಭೂಮಿ'ಯ ಮತ್ತೊಂದು ಅಳತೆಯೂ ಉಂಟು. ಹಸು–ಕರುವಿನಿಂದ ಕೂಡಿದ ಒಂದು ಸಾವಿರ ಹಸು–ಕರುಗಳು ಆರಾಮಾಗಿ ಅತ್ತ ಇತ್ತ ಓಡಾಡುತ್ತಾ, ಹುಲ್ಲು ಮೇಯುವಷ್ಟು ಉದ್ದಗಲದ ಸ್ಥಳವನ್ನು 'ಗೋಚರ್ಮ ಭೂಮಿ' ಎಂದು ಕರೆಯಲಾಗುತ್ತದೆ.

ದಶ ಹಸ್ತೇನ ದಂಡೇನ ತ್ರಿಂಶದ್‌ದಂಡಾ ನಿವರ್ತನಮ್ |
ಬಾಲವತ್ಸ ಪ್ರಸೂತಾನಾಂ ತದ್ಗೋಚರ್ಮ ಇತಿ ಸ್ಮೃತಂ || 8–9 ||

## ಮೂರು ಅತಿದಾನಗಳು

ಗೋದಾನ, ಭೂದಾನ, ವಿದ್ಯಾದಾನ—ಈ ಮೂರೂ ದಾನಗಳು ಮಹಾ ದಾನಕ್ಕಿಂತಲೂ ದೊಡ್ಡದಾದ, ಹಿರಿದಾದ 'ಅತಿದಾನ'ವೆಂದು ಕರೆಯಲಾಗುತ್ತದೆ. ಅತಿದಾನ ಮಾಡುವವನು ಎಲ್ಲ ರೀತಿಯ ಪಾಪಗಳಿಂದಲೂ ಮುಕ್ತನಾಗುವನು.

ತ್ರೀಣ್ಯಾಹುರತಿದಾನಾನಿ ಗಾವಃ ಪೃಥ್ವೀ ಸರಸ್ವತೀ || 18 ||
ತಾರಯಂತಿ ಹಿ ದಾತಾರೇ ಸರ್ವಾತ್ ಪಾಪಾದಸಂಶಯಮ್ || 19 ||

## ಭೂಹರಣದಿಂದ ಮಹಾಪಾಪ

ಭೂದಾನದಿಂದ ಪುಣ್ಯ ಪ್ರಾಪ್ತಿಯಾಗುವಂತೆ, ಭೂಹರಣದಿಂದ ಪಾಪವು ಲಭಿಸುತ್ತದೆ. ಭೂಮಿದೋ ಭೂಮಿಹರ್ತಾ ಚ ನಾಪರಂ ಪುಣ್ಯಪಾಪಯೋಃ || 30 ||

ಈ ರೀತಿ ಭೂಹರಣ ಮಾಡಿದವನು ಸಾವಿರಾರು ಗೋದಾನಗಳನ್ನು ಮಾಡಿದರೂ ಕೂಡ ಶುದ್ಧವಾಗಲಾರ — ಗವಾಂ ಸಹಸ್ರಪ್ರದಾನೇನ ಭೂಮಿ ಹರ್ತಾಂ ನ ಶುಧ್ಯತಿ || 39 ||

## ಪೂರ್ಣ ಧರ್ಮದ ಮಹಿಮೆ

ಸ್ವಾರ್ಥರಹಿತ ಭಾವನೆಯಿಂದ ಬಾವಿ, ಕೊಳ, ದೇವಾಲಯ, ಕೆರೆ, ಛತ್ರ (ಧರ್ಮ ಶಾಲೆ), ವಿದ್ಯಾಲಯ, ಅನಾಥಾಲಯ, ಚಿಕಿತ್ಸಾಲಯ, ದೇವಮಂದಿರ, ಅರವಟ್ಟಿಗೆ ಇತ್ಯಾದಿಗಳನ್ನು ನಿರ್ಮಿಸಿ ಕೊಡುವುದು ಅಥವಾ ಅಂತಹುಗಳ ಜೀರ್ಣೋದ್ಧಾರ ಮಾಡುವುದು; ನೆರಳು ನೀಡುವ ಮತ್ತು ಹಣ್ಣುಗಳನ್ನು ನೀಡುವ ಮರಗಳನ್ನು ನೆಡುವುದು, ರಸ್ತೆಗಳನ್ನು ನಿರ್ಮಿಸುವುದು – ಇತ್ಯಾದಿ ಲೋಕೋಪಕಾರಿ ಅಥವಾ ಜನಹಿತ ಕಾರ್ಯಗಳನ್ನು ಮಾಡುವುದು ಇಲ್ಲವೆ ಮಾಡಿಸುವುದನ್ನು 'ಪೂರ್ಣ ಧರ್ಮ'ವೆಂದು ಕರೆಯಲಾಗುತ್ತದೆ. ಬೃಹಸ್ಪತಿಯು ಈ ರೀತಿಯ ಧರ್ಮದ ವಿಶೇಷತೆಗಳನ್ನು ಬಹಳವಾಗಿ ಹೊಗಳಿದ್ದಾನೆ. ಅಂತೆಯೇ ಕೆಲವು ವಿಷಯಗಳನ್ನು ಒತ್ತಿ ಹೇಳಿದ್ದಾನೆ. ಹೊಸ ಬಾವಿಯನ್ನು ನಿರ್ಮಿಸುವುದು ಇಲ್ಲವೆ ಹಳೆ ಬಾವಿಯನ್ನು ಜೀರ್ಣೋದ್ಧಾರ ಮಾಡುವುದು–ಹೀಗೆ ಮಾಡಿದಾತನ ಕುಲವನ್ನೇ ಉದ್ಧಾರ ಮಾಡುತ್ತದೆ. ಹಳೆ ಕೊಳ, ಬಾವಿ, ಕೆರೆ, ತೋಟ, ಉದ್ಯಾನವನಗಳನ್ನು ಉದ್ಧಾರ ಮಾಡಿದಲ್ಲಿ ಹೊಸವನ್ನು ನಿರ್ಮಿಸಿದಷ್ಟೇ ಪುಣ್ಯವು ಪ್ರಾಪ್ತವಾಗುತ್ತದೆ.

ಯಸ್ತ್ವಡಾಗಂ ನವಂ ಕುರ್ಯಾತ್ ಪುರಾಣಂ ವಾಪಿ ಖಾನಯೇತ್ |
ಸ ಸರ್ವಂ ಕುಲಮುದ್ಧೃತ್ಯ ಸ್ವರ್ಗೇ ಲೋಕೇ ಮಹೀಯತೇ || 62 ||
ವಾಪೀ ಕೂಪ ತಡಾಗಾನಿ ಉದ್ಯಾನೋಪವನಾನಿ ಚ ।
ಪುನಃ ಸಂಸ್ಕಾರ ಕರ್ತಾ ಚ ಲಭತೇ ಮೌಲಿಕಂ ಫಲಮ್ || 63 ||
ನಿದಾಘಕಾಲೇ ಪಾನೀಯಂ ಯಸ್ಯ ತಿಷ್ಠತಿ ವಾಸವ ।
ನ ದುರ್ಗಂ ವಿಷಮಂ ಕೃತ್ಸ್ನಂ ನ ಕದಾಚಿದವಾಪ್ನುಯಾತ್ || 64 ||

ಎಂದು ಬೃಹಸ್ಪತಿಯು, 'ಹೇ ದೇವರಾಜ ಇಂದ್ರ ! ಪುಣ್ಯಾತ್ಮನು ನಿರ್ಮಿಸಿರುವ ಬಾವಿ ಇತ್ಯಾದಿಗಳಲ್ಲಿ ಬೇಸಿಗೆಯಲ್ಲಿಯೂ ನೀರು ತುಂಬಿರುವುದೊ, ಅಂತಹವರಿಗೆ ವಿಷಮ ದುಃಖವು ಎಂದಿಗೂ ಲಭಿಸುವುದಿಲ್ಲ. ಅಂತಹವರು ಸದಾ ಸುಖಿಗಳಾಗಿರುತ್ತಾರೆ.' ಹೇಳುತ್ತಾನೆ.

## 23. ಶಾತಾತಪ ಸ್ಮೃತಿ

ಪ್ರಾಚೀನ ಧರ್ಮಶಾಸ್ತ್ರಕಾರರಲ್ಲಿ ಮಹರ್ಷಿ ಶಾತಾಪನು ಒಂದು ವಿಶಿಷ್ಟ ಸ್ಥಾನವನ್ನು ಹೊಂದಿದ್ದಾನೆ. ಯಾಜ್ಞವಲ್ಕ್ಯನು ಈತನನ್ನು ಮಹಾನ್ ಧರ್ಮಶಾಸ್ತ್ರಕಾರರಲ್ಲಿ ಓರ್ವನನ್ನಾಗಿ ಪರಿಗಣಿಸಿದ್ದಾನೆ. ಈತನು ಶರಭಂಗ ಋಷಿಯ ಗುರುವೆಂದು ಶಾತಾತಪನ ಸ್ಮೃತಿಯಲ್ಲಿ ತಿಳಿಸಲಾಗಿದೆ.

ಇತಿ ಶಾತಾತಪ ಪ್ರೋಕ್ತೋ ವಿಪಾಕಃ ಕರ್ಮಣಾಮಯಮ್ |
ಶಿಷ್ಯಾಯ ಶರಭಂಗಾಯ ವಿನಯಾತ್ ಪರಿಪೃಚ್ಛತೇ ||

ಶರಭಂಗ ಮತ್ತಿತರ ಋಷಿಗಳು ಶಾತಾರಪನೊಂದಿಗೆ ಮಾಡಿದ ಜಿಜ್ಞಾಸೆಯ ಮುಖಾಂತರ ಅನೇಕ ಧರ್ಮಶಾಸ್ತ್ರೀಯ ಉಪದೇಶಗಳು ಶಾತಾತಪನಿಂದ ಹೊರಬಂದವು. ಈ ಉಪದೇಶಗಳು 'ಶಾತಾತಪೀಯ ಧರ್ಮಸಂಹಿತಾ', 'ಶಾತಾತಪೀಯ ಸ್ಮೃತಿ'. 'ಶಾತಾತಪೀಯ ಧರ್ಮಶಾಸ್ತ್ರ' ಹಾಗೂ 'ಶಾತಾ-ತಪೀಯ ಕರ್ಮವಿಪಾಕ' ಎನ್ನುವ ಗ್ರಂಥಗಳಲ್ಲಿ ಸಂಗ್ರಹಿತವಾಗಿದೆ. ಈ ಉಪದೇಶಗಳು ಶಾತಾತಪ ಮಹಾಮುನಿಯ ಅಪ್ರತಿಮ ತಪಸ್ಸಿನ ಫಲಿತವಾದ ಉಪದೇಶಾಮೃತವಾಗಿದೆ. ತಪಸ್ಸು ಮಾಡಿ, ಮಾಡಿ, ಈತನ ದೇಹವು ಕ್ಷೀಣಿಸಿ ಹೋಗಿತ್ತು. ಈತನ ಅನೇಕ ರೀತಿಯ ತಪೋ ವಿಧಾನಗಳನ್ನು ಅನುಷ್ಠಾನ ಮಾಡಿದ್ದನು. ಆದರಿಂದಲೇ ಈತನಿಗೆ 'ಶಾತಾತಪ' ಎನ್ನುವ ಹೆಸರು ಬಂದಿತು.

ಈ ಎಲ್ಲ ಗುಣಗಳ ಕಾರಣದಿಂದಲೇ ಈತನ ಹೆಸರು ಹೀಗಾಗಿರಬಹುದೆಂದು ಕಾಣುತ್ತದೆ. ಈತನಿಗೆ ಉಂಟಾದ ಧರ್ಮಕರ್ಮದ ಜ್ಞಾನವು ಇತರರಿಗೆ ಉಂಟಾಗಿರಲಿಲ್ಲ. ಆದುದರಿಂದಲೇ ಕರ್ಮವಿಪಾಕಕ್ಕಾಗಿ ಈತನನ್ನು ಎಲ್ಲರಿಗಿಂತ ಹೆಚ್ಚಿನ ಪ್ರಮಾಣವೆಂದು ಕಾಣಲಾಗುತ್ತದೆ.

ಎಲ್ಲ ನಿಬಂಧಕಾರರೂ, ಧರ್ಮಕೋಶ ರಚಯಿತರೂ ಈತನ ಸ್ಮೃತಿಯ ಆಧಾರದ ಮೇಲೆ ಕರ್ಮವಿಪಾಕ ಸಂಬಂಧಿತ ಪರಾಮರ್ಶೆಗಳನ್ನು ನೀಡಿದ್ದಾರೆ. ಈತನು ಯಾವ ಸ್ಥಳದಲ್ಲಿ ತನ್ನ ವಿಶೇಷ ಅಭಿಮತವನ್ನು ನೀಡಿದ್ದಾನೊ ಅಲ್ಲೆಲ್ಲ 'ಇತಿ ಶಾತಾತಪೋऽಬ್ರವೀತ್' ಅಥವಾ 'ಶಾತಾತಪವಚೋ ಯಥಾ' ಎನ್ನುವ ಪ್ರಯೋಗಗಳಿರುವುದನ್ನು ಕಾಣಬಹುದು.

## ಶಾತಾತಪನ ಕೃತಿಗಳು

ಮಹರ್ಷಿ ಶಾತಾತಪನ ಹೆಸರಿನಲ್ಲಿ ಮೂರು ಸ್ಮೃತಿಗಳು ದೊರೆತಿವೆ - 1. ಲಘುಶಾತಾತಪ ಸ್ಮೃತಿ, 2. ವೃದ್ಧಶಾತಾತಪ ಸ್ಮೃತಿ, 3. ಶಾತಾತಪ ಸ್ಮೃತಿ ಅಥವಾ ಶಾತಾತಪೀಯ ಕರ್ಮವಿಪಾಕ. ಇವುಗಳ ಪರಿಚಯ ಹೀಗಿದೆ-

### 1. ಲಘು ಶಾತಾತಪ ಸ್ಮೃತಿ

ಸಂಕ್ಷಿಪ್ತರೂಪದ ಈ ಸ್ಮೃತಿಯಲ್ಲಿ ಕೇವಲ 173 ಶ್ಲೋಕಗಳಿವೆ. ಪ್ರಾರಂಭದಲ್ಲಿ ಸೂತ್ರರೂಪದಲ್ಲಿ ಸ್ವಲ್ಪ ಗದ್ಯಭಾಗವೂ ಇದೆ. ಉಳಿದದ್ದು ಶ್ಲೋಕ ಬದ್ಧವಾಗಿದೆ. ಮುಖ್ಯವಾಗಿ ಇದರಲ್ಲಿ ಪ್ರಾಯಶ್ಚಿತ್ತ, ಶುದ್ಧಿ, ಅಭಕ್ಷ್ಯಭಕ್ಷಣ, ಶ್ರಾದ್ಧ ಹಾಗೂ ದಾನ ಇತ್ಯಾದಿ ವಿಷಯಗಳ ವರ್ಣನೆ ಇದೆ.

ಸ್ಮೃತಿಯ ಆರಂಭದಲ್ಲಿ ಮಹಾಪಾತಕ, ಉಪಪಾತಕ, ಗೋವಧೆ ಹಾಗೂ ಸಾಮಾನ್ಯ ಪಾಪಗಳ ಪ್ರಾಯಶ್ಚಿತ್ತದ ಬಗ್ಗೆ ತಿಳಿಸಲಾಗಿದೆ. ಆ ನಂತರದಲ್ಲಿ ಸಂಕ್ಷೇಪವಾಗಿ ವಿವಾಹದ ಪ್ರಕರಣವನ್ನು, ನಂತರದಲ್ಲಿ ವಿವಾಹ ಯೋಗ್ಯ ಕನ್ಯೆಯ ಲಕ್ಷಣಗಳನ್ನು ತಿಳಿಸಲಾಗಿದೆ. ಆ ನಂತರದಲ್ಲಿ ವೈಶ್ವೇದೇವಕರ್ಮ ಹಾಗೂ ಅತಿಥಿ ಸತ್ಕಾರದ ಮಹಿಮೆಯನ್ನು ನಿರೂಪಿಸಲಾಗಿದೆ.

ಅತಿಥಿಯ ಲಕ್ಷಣವನ್ನು ವಿವರಿಸುತ್ತಾ, ಶತಾತಪನು

ಅನಿಮಿತ್ತಮನಾಹೂತಂ ದೇಶಕಾಲಮುಪಸ್ಥಿತಮ್ ।
ಅತಿಥಿಂ ತಂ ವಿಜಾನೀಯಾನ್ನಾತಿಥಿಃ ಪೂರ್ವ ಸಂಗತಃ ॥ 55 ॥

ಯಾವುದೇ ಪ್ರಯೋಜನವನ್ನು ಪಡೆಯದ, ಕರೆಯದೆ ಬಂದ, ಯಾವುದೇ

ಸಮಯದಲ್ಲಿ ಯಾವುದೇ ಸ್ಥಾನದಲ್ಲಿ ಕಂಡುಬರುವ ಅತಿಥಿಯನ್ನು ದೇವರ ಸಮಾನ ಎಂದು ಭಾವಿಸಬೇಕು. ಪೂರ್ವ ಸೂಚನೆ ನೀಡಿ ಬರುವವನನ್ನು ಅತಿಥಿ ಎಂದು ಕರೆಯಲಾಗುವುದಿಲ್ಲ – ಎಂದು ತಿಳಿಸುತ್ತಾನೆ

## ಶ್ರಾದ್ಧದಲ್ಲಿನ ಪವಿತ್ರ ವಸ್ತು ಹಾಗೂ ಮಾತು

ಶ್ರಾದ್ಧ ಪ್ರಕರಣದಲ್ಲಿ ಶಾತಾತಪನು ಹೀಗೆಂದು ತಿಳಿಸುತ್ತಾನೆ– ಶ್ರಾದ್ಧ ದಲ್ಲಿ ಮೂರು ವಸ್ತುಗಳು ಅತ್ಯಂತ ಪವಿತ್ರವಾದವುಗಳು. ಅಂತಹವುಗಳನ್ನು ಮಾತ್ರವೇ ಉಪಯೋಗಿಸಬೇಕು. ಇದೇ ರೀತಿಯಲ್ಲಿ ಪ್ರಶಂಸನೀಯವಾದ ಮೂರು ಮಾತುಗಳೂ ಇವೆ. ಇವುಗಳನ್ನು ಶ್ರಾದ್ಧಕರ್ತನು ಹಾಗೂ ಬ್ರಾಹ್ಮಣ ಸ್ವಾಮಿಗಳು ತಪ್ಪದೆ ಪಾಲಿಸಬೇಕಾಗಿದೆ.

ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ |
ತ್ರೀಣಿ ಚಾತ್ರ ಪ್ರಶಂಸಂತಿ ಸತ್ಯಮಕ್ರೋಧಮಾರ್ಜವಮ್ ||107||

ಶ್ರಾದ್ಧದಲ್ಲಿ ದೌಹಿತ್ರ (ಮಗಳ ಮಗ), ಕುತಪ ಸಮಯ (ಮಧ್ಯಾಹ್ನದ 12–30 ಯಿಂದ 1 ಗಂಟೆಯ ಸಮಯ) ಹಾಗೂ ಎಳ್ಳು – ಈ ಮೂರು, ಅತ್ಯಂತ ಪವಿತ್ರವಾದವುಗಳಾಗಿವೆ. ಇದೇ ರೀತಿಯಲ್ಲಿ ಶ್ರಾದ್ಧಕರ್ತಾದಿಗಳು ನಿಜ ಹೇಳುವುದು, ಕ್ರೋಧವನ್ನು ಪ್ರದರ್ಶಿಸದೆ ಇರುವುದು, ಸರಳತೆಯಿಂದ ಇರುವುದು – ಇವು ಪಿತೃಗಳನ್ನು ಸಂತುಷ್ಟಗೊಳಿಸಿ, ಅವರಿಗೆ ಅಕ್ಷಯ ತೃಪ್ತಿಯನ್ನು ನೀಡುತ್ತದೆ. ಇದರಿಂದ ಶ್ರಾದ್ಧಕರ್ತನಿಗೂ ಕೂಡ ಪೂರ್ತಿಫಲ ದೊರೆಯುತ್ತದೆ.

## ಪಾದುಕೆಗಳನ್ನು ಎಲ್ಲಿ ಬಿಡಬೇಕು ?

ಅಗ್ನಿಶಾಲೆ, ಗೋಶಾಲೆ, ದೇವಸ್ಥಾನ, ದೇವರ ಪ್ರತಿಮೆಗಳ ಹತ್ತಿರ, ಊಟದ ಸಮಯ ಹಾಗೂ ಜಪ ಮಾಡುವ ಸಮಯಗಳಲ್ಲಿ ಪಾದುಕೆಗಳನ್ನು ಧರಿಸಿರಬಾರದು –

ಅಗ್ನ್ಯಗಾರೇ ಗವಾಂ ಗೋಷ್ಠೇ ದೇವತಾನಾಂ ಚ ಸನ್ನಿಧೌ |
ಆಹಾರೇ ಜಪಕಾಲೇ ಚ ಪಾದುಕಾಂ ಚ ವಿವರ್ಜಯೇತ್ ||126||

## ಯಾವುದನ್ನು ಮಾಡುವುದು, ಯಾವುದನ್ನು ಮಾಡದಿರುವುದು.

ಯಾವುದನ್ನು ಮಾಡುವುದರಿಂದ ಒಳ್ಳೆಯದಾಗುತ್ತದೆ, ಯಾವ ಕಾರ್ಯ ವನ್ನು ಮಾಡುವುದರಿಂದ ಒಳ್ಳೆಯದಾಗುವುದಿಲ್ಲ ಎಂಬುದರ ಬಗ್ಗೆ ಮಹರ್ಷಿ ಶಾತಾತಪನು ಹೀಗೆಂದು ತಿಳಿಸುತ್ತಾನೆ –

ಒಂದು ವಸ್ತ್ರವನ್ನು ಧರಿಸಿ ಊಟ ಮಾಡಬಾರದು, ನಗ್ನನಾಗಿ ಸ್ನಾನವನ್ನು ಮಾಡಬಾರದು, ದಾರಿಯಲ್ಲಿ, ಬೂದಿ ಹರಡಿರುವ ಕಡೆ, ಸಗಣಿ ಇರುವ ಕಡೆ ಮಲಮೂತ್ರಗಳ ವಿಸರ್ಜನೆ ಮಾಡಬಾರದು. ಅಶುದ್ಧ ವಿಚಾರಗಳನ್ನು ಹೇಳುವಾಗಲೂ 'ಶುಭವಾಗಲಿ', 'ಕಲ್ಯಾಣವಾಗಲಿ' ಎಂದೇ ಹೇಳಬೇಕು. ಕುಂಕುಮ, ಅರಶಿನ ಇತ್ಯಾದಿಗಳು ಮನೆಯಲ್ಲಿ ಕಡಿಮೆಯಾದಾಗ, 'ಕುಂಕುಮ ಹೆಚ್ಚಿದೆ, ಅರಶಿನ ಹೆಚ್ಚಿದೆ' ಎಂದೇ ಹೇಳಬೇಕು. ಸದಾ ಶುಭವಾಗುವ ವಿಚಾರಗಳನ್ನೇ ಹೇಳಬೇಕು. ಯಾವಾಗಲೂ ಬೇರೆಯವರ ಬಗ್ಗೆ ಹಿತಕರವಾದುದೂ, ಪ್ರಿಯ (ಮಧುರ)ವಾದ ಮಾತುಗಳನ್ನು ಹೇಳಬೇಕಾಗಿದೆ. ಅಶುಭ ಮಾತುಗಳನ್ನು ಯಾವುದೇ ಸಂದರ್ಭದಲ್ಲಿಯೂ ಹೇಳಬಾರದು. (ಅಸ್ತು ದೇವತೆಗಳಿದ್ದು, ಅಸ್ತು ಎಂದು ಹೇಳುತ್ತಾರೆ ಎಂಬ ನಂಬಿಕೆ. ಆದರಿಂದ ಅಶುಭವನ್ನು ಯಾವುದೇ ಕಾರಣಕ್ಕೂ ಹೇಳಬಾರದು.) ಯಾರೊಂದಿಗೂ ವ್ಯರ್ಥವಾದ ವಾದ, ಶುಷ್ಕವಾದ ಚರ್ಚೆ ಹಾಗೂ ಅನಗತ್ಯ ಶತ್ರುತ್ವವನ್ನು ಹೊಂದಿರಬಾರದು.

## 2. ವೃದ್ಧ ಶಾತಾತಪಸ್ಮೃತಿ

'ವೃದ್ಧಶಾತಾತಪ' ಎನ್ನುವ ಹೆಸರಿನ ಒಂದು ಸ್ಮೃತಿ ಇದೆ. ಇದರಲ್ಲಿ 68 ಶ್ಲೋಕಗಳಿವೆ. ಹಿಂದೆ ಇದು ತುಂಬಾ ದೊಡ್ಡದಾಗಿದ್ದು, ಕಾಲಕ್ರಮದಲ್ಲಿ ಬಹಳಷ್ಟು ನಷ್ಟವಾಗಿರಬೇಕು ಎಂದನ್ನಿಸುತ್ತದೆ. ಏಕೆಂದರೆ ನಿಬಂಧ ಗ್ರಂಥಗಳಲ್ಲಿ 'ವೃದ್ಧಶಾತಾತಪಸ್ಮೃತಿ'ಯ ಹೆಸರಿನಲ್ಲಿ ಯಾವ ಶ್ಲೋಕಗಳು ಉದಾಹರಿಸಲ್ಪಟ್ಟಿವೆಯೋ, ಅವು ಈಗ ದೊರೆತಿರುವ 'ವೃದ್ಧಶಾತಾತಪಸ್ಮೃತಿ'ಯಲ್ಲಿ ಕಂಡು ಬರುವುದಿಲ್ಲ.

ಈಗ ದೊರೆತಿರುವ 'ವೃದ್ಧಶಾತಾತಪಸ್ಮೃತಿ'ಯ ಪ್ರಾರಂಭದಲ್ಲಿ ಬ್ರಹ್ಮಕೂರ್ಚದ ಮಹಿಮೆ, ಭಕ್ಷ್ಯಾಭಕ್ಷ್ಯ, ಸ್ಪೃಶ್ಯಾಸ್ಪೃಶ್ಯ, ಮೀಮಾಂಸೆ ಹಾಗೂ ಅದಕ್ಕೆ ತಕ್ಕಂತಹ ಪ್ರಾಯಶ್ಚಿತ್ತಗಳನ್ನು ತಿಳಿಸಲಾಗಿದೆ.

### ಧರ್ಮಸಭೆಯು ಹೇಗಿರಬೇಕು ?

ಧರ್ಮಶಾಸ್ತ್ರದ ಮರ್ಯಾದೆಗಾಗಿ ಶಾಸ್ತ್ರಪ್ರಮಾಣವನ್ನು ಮುಖ್ಯವಾಗಿ ಪರಿಗಣಿಸಲಾಗಿದೆ. ಕರ್ತವ್ಯಾಕರ್ತವ್ಯ ನಿರ್ಣಯಕ್ಕಾಗಿ ಧರ್ಮಶಾಸ್ತ್ರದ

ಜ್ಞಾನವು ಅತ್ಯಂತ ಆವಶ್ಯಕ–ಎಂದು ಶಾತಾತಪನು ತಿಳಿಸುತ್ತಾನೆ. ಧರ್ಮಾಧರ್ಮ ನಿರ್ಣಯದ ಸಂದರ್ಭದಲ್ಲಿ, ಆ ತೀರ್ಮಾನವನ್ನು ನಿರ್ಣಯಿಸುವ ಸಂಬಂಧದಲ್ಲಿ ನಿಯಮಿತವಾಗುವ ಧರ್ಮಸಭೆ ಅಥವಾ ಪರಿಷತ್ತಿನಲ್ಲಿ ವಿದ್ವಾಂಸರು ಇರಬೇಕು ಎಂದು ಆತ ತಿಳಿಸುತ್ತಾನೆ. ಸರಿಯಾದ ನಿರ್ಣಯವನ್ನು ನೀಡಲು ಸಹಾಯಕವಾಗುವಂತೆ ಧರ್ಮಶಾಸ್ತ್ರದ ಸೂಕ್ಷ್ಮತತ್ವವನ್ನು ತಿಳಿದಿರುವ ವಿದ್ವಾಂಸರು ಅಲ್ಲಿರಬೇಕು. ಆಕಸ್ಮಾತ್ತಾಗಿ ಅವರು ಸರಿಯಾದ ತೀರ್ಪು ನೀಡದಿದ್ದಲ್ಲಿ ಅಥವಾ ಬೇಕೆಂದೇ ಯಾವುದಾದರೊಂದು ಕಾರಣದಿಂದ ಅಧರ್ಮದ ಪಕ್ಷವನ್ನು ವಹಿಸಿದಲ್ಲಿ, ಬೇರೆ ಯಾವುದಾದರೂ ಪ್ರಾಯಶ್ಚಿತ್ತವನ್ನು ನಿಗದಿ ಮಾಡಿದಲ್ಲಿ – ತಪ್ಪು ಮಾಡಿದವನು ಪ್ರಾಯಶ್ಚಿತ್ತವನ್ನು ಪಡೆದು ಪಾಪಮುಕ್ತನಾದರೂ ಧರ್ಮ ವಿರುದ್ಧ ನಿರ್ಣಯ ನೀಡಿದಂತಹ ಧರ್ಮ ಪರಿಷತ್ತಿನ ಸದಸ್ಯರು ಮಾಡಿದವನ ಪಾಪದ ಭಾಗಿಗಳಾಗಿರುತ್ತಾರೆ. ಆದುದರಿಂದ ಧರ್ಮಾಧರ್ಮ ನಿರ್ಣಯ ಮಾಡುವವರು ಶಾಸ್ತ್ರದ ಸರಿಯಾದ ಜ್ಞಾನವನ್ನು ಹೊಂದಿರಬೇಕಾದುದು ಆವಶ್ಯಕ. ಬಾಯಿಗೆ ಬಂದಂತೆ, ಬೇಕಾಬಿಟ್ಟಿಯಾಗಿ ತೀರ್ಪು ನೀಡಿದವರಿಗೆ ಪಾಪವು ತಟ್ಟುತ್ತದೆ –

ಅನಧೀತ್ಯ ಧರ್ಮಶಾಸ್ತ್ರಂ ಪ್ರಾಯಶ್ಚಿತ್ತಂ ದದಾತಿ ಯಃ ।
ಪ್ರಾಯಶ್ಚಿತ್ತೀ ಭವೇತ್ ಪೂತಸ್ತತ್ಪಾಪಂ ವರ್ಷದಂ ಪ್ರಜೇತ್ ॥ 30 ॥

### ಜಾತಕರ್ಮ ಸಂಸ್ಕಾರ–ಸೂತಕ

ಮಗುವಿನ ಜನನವಾದರೂ ನಳಚ್ಛೇದವಾಗದಿದ್ದಲ್ಲಿ ಸೂತಕ ದೋಷ ಪ್ರಾರಂಭವಾಗುವುದಿಲ್ಲ. ನಳಚ್ಛೇದವಾದ ಮೇಲೆಯೇ ಸೂತಕ ಹಾಗೂ ಪ್ರತಿಗ್ರಹ ದೋಷ ಪ್ರಾರಂಭವಾಗುವುದು. ಆದುದರಿಂದ ಜನನವಾದ ಕೂಡಲೇ ಜಾತಕರ್ಮ ಸಂಸ್ಕಾರ ಮಾಡಬೇಕು –

ಕುಮಾರಪ್ರಸವೇ ನಾಡ್ಯಾಮಚ್ಛಿನ್ನಾಯಾಂ ಗುಡಘೃತ ಹಿರಣ್ಯವಸ್ತ್ರ ಪ್ರವರಣ ಪ್ರತಿಗ್ರಹೇ ನ ದೋಷಃ ಸ್ಯಾತ್ । (59)

### ಪುಣ್ಯಕಾರ್ಯ – ಅನ್ಯಾಯೋಪಾರ್ಜಿತ

ಅನ್ಯಾಯ – ಅನೀತಿ – ಅಪ್ರಮಾಣಿಕತೆಯಿಂದ ಪಡೆದ ಹಣದಿಂದ ಯಾವುದೇ ಪುಣ್ಯಕಾರ್ಯವನ್ನು ಮಾಡಬಾರದು. ಇದರಿಂದ ಪುಣ್ಯವೂ ಪ್ರಾಪ್ತವಾಗುವುದಿಲ್ಲ. ಅಂತಹ ಕರ್ಮಾನುಷ್ಠಾನದಿಂದ ಯಾವುದೇ ಫಲವು

ಪ್ರಾಪ್ತವಾಗುವುದಿಲ್ಲ. ಏಕೆಂದರೆ ...

ದ್ರವ್ಯೇಣಾನ್ಯಾಯಲಬ್ಧೇನ ಯಃ ಕರೋತ್ಯೌರ್ಧ್ವ ದೈಹಿಕಮ್ ।
ನಾಸೌ ಫಲಮವಾಪ್ನೋತಿ ತಸ್ಯಾರ್ಥಸ್ಯ ದುರಾಗಮಾತ್ ॥ 62 ॥

ಉದ್ಬೋಧನ

ತನ್ನ ಸ್ಮೃತಿಯಲ್ಲಿ ಶಾತಾತಪನು ಮಾನವರ ಕಲ್ಯಾಣಕ್ಕಾಗಿ ಬಹಳ ಉಪಯುಕ್ತ ಉಪದೇಶಗಳನ್ನು ನೀಡಿದ್ದಾನೆ. ಮಾನವನ ಸ್ವರೂಪವು ಸಂಕಲ್ಪ ವಿಕಲ್ಪಾತ್ಮಕವಾಗಿರುತ್ತದೆ. ಮನಸ್ಸಿನಲ್ಲಿ ವಿಷಯಗಳ ಚಿಂತನ–ಮಂಥನದಿಂದ ಅನೇಕ ಸಂಕಲ್ಪಗಳು ಉತ್ಪನ್ನವಾಗುತ್ತವೆ. ಈ ಸಂಕಲ್ಪದಿಂದ ಕಾರ್ಯ ಮಾಡುವ ಮನಸ್ಸು ಉಂಟಾಗುತ್ತದೆ. ಇದೇ ರೀತಿಯಲ್ಲಿ ಸತ್ಕಾರ್ಯಗಳು ಉಂಟಾಗುತ್ತವೆ.

ಪ್ರತಿಯೊಬ್ಬ ವ್ಯಕ್ತಿಯೂ ಅರ್ಥಮಾಡಿಕೊಳ್ಳಬೇಕಾದ ವಿಷಯವೊಂದಿದೆ ಅದು ಜೀವನದ ಅನಿಶ್ಚಿತತೆ. 'ಈ ಜೀವನ' ಕ್ಷಣಿಕವಾದುದು. ಯಾವಾಗ ಬೇಕಾದರೂ ಮರಣವು ಧಾಳಿ ಮಾಡಬಹುದು. ಯಾವ ರೋಗ ಬಂದು, ಯಾವ ಸಮಯದಲ್ಲಿ ವ್ಯಕ್ತಿಯು ಮರಣ ಹೊಂದುವನೊ ಹೇಳಲಾಗುವುದಿಲ್ಲ'. ಹೀಗೆಂದು ತಿಳಿದು ಸದಾಕಾಲದಲ್ಲೂ ವ್ಯಕ್ತಿಯು ಧರ್ಮಾನುಷ್ಠಾನನಾಗಿಯೇ ಇರಬೇಕು. ಪರಮಾತ್ಮನ ಭಜನೆ, ಪೂಜನೆ, ಭಗವತ್ಸೇವೆ–ಇತ್ಯಾದಿ ಉತ್ತಮ ಕೆಲಸಗಳಿಂದಲೇ ತನ್ನೆಲ್ಲ ಸಮಯವನ್ನು ಕಳೆಯಬೇಕು. ನಾವು ಕಾಲನ ಹಿಡಿತದಲ್ಲಿದ್ದೇವೆ ಎಂಬ ಸತ್ಯವನ್ನು ಅರಿಯಬೇಕು. ಆದುದರಿಂದ ಸದಾ ಕಾಲವೂ ಒಳ್ಳೆಯ ಕೆಲಸ ಕಾರ್ಯಗಳನ್ನು ಮಾಡುವುದರಲ್ಲಿ ಪ್ರತಿಯೊಬ್ಬನೂ ತಲ್ಲೀನನಾಗಿರಬೇಕು. ಒಳ್ಳೆಯ ಕೆಲಸ ಮಾಡುವುದನ್ನು ನಾಳೆಗಾಗಿ ಮುಂದೂಡಬಾರದು. ಒಳ್ಳೆಯ ಕೆಲಸ, ಸತ್ಕರ್ಮ, ಧರ್ಮಾಚರಣೆಯನ್ನು ಆಗಿಂದಾಗಲೇ ಮುಗಿಸಿಬಿಡಬೇಕು. ಮೃತ್ಯುವು ಯಾರಿಗಾಗಿಯೂ ಕಾಯುವುದಿಲ್ಲ. ತನಗೆ ಯಾವ ಸಮಯ ನಿಯಮಿತವಾಗಿದೆಯೊ ಆಗ ಬಂದೇ ಬರುತ್ತದೆ. ವ್ಯಕ್ತಿಯು ಯಾವುದಾದರೊಂದು ಕಾರ್ಯವನ್ನು ಮಾಡಿರುವನೊ, ಮಾಡುತ್ತಿರುವನೊ ಇಲ್ಲವೊ ಎಂಬುದನ್ನು ಮೃತ್ಯುವು ನೋಡುವುದೇ ಇಲ್ಲ. ತನ್ನಿಷ್ಟಕ್ಕೆ ತಾನು ಎರಗುತ್ತದೆ. ಆದುದರಿಂದ ಇರುವ ಸಮಯದಲ್ಲೆ ಮಾನವನು ಆತ್ಮಕಲ್ಯಾಣಕ್ಕಾಗಿ, ಪರೋಪ ಕಾರ್ಯಗಳನ್ನು ಮಾಡುತ್ತಲೇ ಇರಬೇಕು.

# 3. ಶಾತಾತಪಸ್ಮೃತಿ

ಮಹರ್ಷಿ ಶಾತಾತಪ ಪ್ರಣೀತ ಶಾತಾತಪಸ್ಮೃತಿಯು ಸ್ಮೃತಿ ವಾಙ್ಮಯ ದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ವಿಶ್ವರೂಪ, ಹರದತ್ತ ಹಾಗೂ ಅಪರಾರ್ಕರುಗಳು ಶಾತಾತಪಸ್ಮೃತಿಯ ಪ್ರಾಯಶ್ಚಿತ್ತ ಪ್ರಕರಣವನ್ನು ಅಲ್ಲಲ್ಲಿ ಉದಾಹರಿಸಿದ್ದಾರೆ. 'ಸ್ಮೃತಿ ಚಂದ್ರಿಕಾ', 'ಮಿತಾಕ್ಷರಾ' ಹಾಗೂ ಇತರೇ ನಿಬಂಧ ಗ್ರಂಥಗಳಲ್ಲಿ ಈ ಸ್ಮೃತಿಯ ಅನೇಕ ಶ್ಲೋಕಗಳನ್ನು ಉದಾಹರಿಸ ಲಾಗಿದೆ.

ನಿಬಂಧ ಗ್ರಂಥಗಳಲ್ಲಿ ಉದಾಹರಿಸಿರುವ ಶಾತಾತಪ ಸ್ಮೃತಿಯ ಶ್ಲೋಕ ಗಳೆಲ್ಲವೂ ಇಂದು ದೊರೆತಿರುವ ಶಾತಾತಪಸ್ಮೃತಿಯಲ್ಲಿ ಕಂಡು ಬರುವುದಿಲ್ಲ. ಇದರಿಂದ ತಿಳಿದು ಬರುವ ಅಂಶವೇನೆಂದರೆ ಹಿಂದೊಮ್ಮೆ ಶಾತಾತಪಸ್ಮೃತಿಯು ಬೃಹತ್ತಾಗಿದ್ದು, ಕಾಲನ ಧಾಳಿಯಲ್ಲಿ ಬಹಳಷ್ಟು ಭಾಗ ನಷ್ಟವಾಗಿಹೋಗಿದೆ. ಪ್ರಸ್ತುತ ಪ್ರಕಟಗೊಂಡಿರುವ ಶಾತಾತಪಸ್ಮೃತಿಯಲ್ಲಿ ಆರು ಅಧ್ಯಾಯಗಳು, ಸುಮಾರು 240 ಶ್ಲೋಕಗಳು ಇವೆ.

ಮುಖ್ಯವಾಗಿ ಈ ಸ್ಮೃತಿಯಲ್ಲಿ ಕರ್ಮವಿಪಾಕದ ವರ್ಣನೆ ಇದೆ – ಶುಭಾ ಶುಭ – ಕರ್ಮದ ಫಲ – ಒಳ್ಳೆಯ ಹಾಗೂ ಕೆಟ್ಟ ಕೆಲಸಗಳ ಪರಿಣಾಮ ಇತ್ಯಾದಿ. ಅಂದ ಹಾಗೆ ಕರ್ಮ ವಿಪಾಕ ಸಂಬಂಧದ ವಿವರಣೆಗಳು ಪುರಾಣಗಳು ಹಾಗೂ ಇತರೇ ಧರ್ಮ ಶಾಸ್ತ್ರಗಳಲ್ಲಿಯೂ ಕೂಡ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತವೆ. ಅಲ್ಲದೆ ಇದಕ್ಕೆ, ಸಂಬಂಧಪಟ್ಟಹಾಗೆ 'ಸೂರ್ಯಾರುಣಕರ್ಮವಿಪಾಕ ಸಂಹಿತಾ' ಎನ್ನುವ ಹೆಸರಿನ ಒಂದು ಸ್ವತಂತ್ರ ಗ್ರಂಥವೂ ಇದೆ. ಆದಾಗ್ಯೂ ಕರ್ಮವಿಪಾಕದ ಬಗ್ಗೆ ಮಹರ್ಷಿ ಶಾತಾತಪನ ವಿಷಯ ನಿರೂಪಣೆಯನ್ನು ವಿಶೇಷವಾಗಿ ಮಾನ್ಯ ಮಾಡಲಾಗುತ್ತದೆ. ಆದುದರಿಂದಲೇ ಈ ಸ್ಮೃತಿಯನ್ನು 'ಶಾತಾತಪೀಯ ಕರ್ಮವಿಪಾಕ ಸಂಹಿತಾ' ಎಂಬ ಹೆಸರಿನಿಂದ ಕರೆಯ ಲಾಗುತ್ತದೆ.

ಕರ್ತವ್ಯ–ಅಕರ್ತವ್ಯದ ವಿಷಯಗಳ ಬಗ್ಗೆ ಧರ್ಮಶಾಸ್ತ್ರದಲ್ಲಿ ಒಂದು ಗೌರವದ ಸ್ಥಾನವಿದೆ. ಇದನ್ನು ಉಲ್ಲಂಘಿಸಿದಲ್ಲಿ ಅಥವಾ ಬೇಕಾಬಿಟ್ಟಿ ಆಚರಿಸಿ ದಲ್ಲಿ ಅಂತಹ ವ್ಯಕ್ತಿಯು ಮಹಾಪಾಪಕ್ಕೆ ಗುರಿಯಾಗುತ್ತಾನೆ. ಈ ಪಾಪದಿಂದ

ಮುಕ್ತಿ ಪಡೆಯಲು ಧರ್ಮಶಾಸ್ತ್ರದಲ್ಲಿ ಪ್ರಾಯಶ್ಚಿತ್ತದ ವಿಧಾನವನ್ನು ನಿಗದಿ ಪಡಿಸಲಾಗಿದೆ. ಇವನ್ನು ವಿಧಿಪೂರ್ವಕವಾಗಿ ಅನುಷ್ಠಾನ ಮಾಡುವುದರಿಂದ ಆ ವ್ಯಕ್ತಿಯು ಆ ಪಾಪದಿಂದ ಮುಕ್ತನಾಗುತ್ತಾನೆ. ಅಂತೆಯೇ ಅವನು ಶುದ್ಧ ನಾಗುತ್ತಾನೆ.

ಇದರ ಬಗ್ಗೆ ಮಹರ್ಷಿ ಶಾತಾತಪನು ಬಹಳಷ್ಟು ಚರ್ಚೆಗಳನ್ನು ಮಾಡಿ, ಕೆಲವೊಂದು ನಿರ್ಣಯಗಳನ್ನು ತಿಳಿಸಿದ್ದಾನೆ - ಹಿಂದಿನ ಜನ್ಮದಲ್ಲಿ ಮಾಡಿದ ಕೆಲವೊಂದು ಪಾಪಗಳಿಗೆ ಅನುಸಾರ ಕೆಲವೊಂದು ರೋಗಗಳಿಗೆ ವ್ಯಕ್ತಿಯು ಈ ಜನ್ಮದಲ್ಲಿ ತುತ್ತಾಗುತ್ತಾನೆ. ಈಗ ವ್ಯಕ್ತಿಯು ಯಾವ ವ್ಯಾಧಿಯಿಂದ ನರಳು ತ್ತಿರುವನೊ ಅದಕ್ಕೆ ಮೂಲಕಾರಣ ಹಿಂದಿನ ಜನ್ಮಗಳಲ್ಲಿ ಯಾವುದೋ ಒಂದು ಗೊತ್ತಾದ ಪಾಪವನ್ನು ಅವನು ಮಾಡಿದ್ದಿರಬೇಕು. ಆದಕ್ಕೆ ತಕ್ಕ ಪ್ರಾಯಶ್ಚಿತ್ತ ರೂಪದಲ್ಲಿ ಆ ರೋಗವನ್ನು ಈ ಜನ್ಮದಲ್ಲಿ ವ್ಯಕ್ತಿಯು ಅನುಭವಿಸುತ್ತಿರಬೇಕು. ಆ ಜನ್ಮಾಂತರೀಯ ದುಷ್ಕರ್ಮದಿಂದ ವ್ಯಕ್ತಿಯು ನರಕಯಾತನೆಯನ್ನು ಅನುಭವಿಸುತ್ತಾನೆ. ಹೀಗೆ ಹಿಂದಿನ ಜನ್ಮದಲ್ಲಿ ಯಾವ ಪಾಪವನ್ನು ವ್ಯಕ್ತಿಯು ಮಾಡಿರುವನೊ ಅದಕ್ಕೆ ಸಂಬಂಧಪಟ್ಟ ಯಾವ ರೋಗವು ಅವನಿಗೆ ತಗಲುತ್ತದೆ ಎಂಬುದರ ಸವಿಸ್ತಾರ ವರ್ಣನೆಯನ್ನು ಶಾತಾತಪ ಮಹರ್ಷಿಯು ತನ್ನ ಈ ಸ್ಮೃತಿಯಲ್ಲಿ ನೀಡಿದ್ದಾನೆ.

ಪಾಪ ಮಾಡಿದ ವ್ಯಕ್ತಿಯು, ಆ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಹಾಗೆ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದಲ್ಲಿ ಮರಣದ ನಂತರ ನರಕದಲ್ಲಿ ಬೀಳುವುದೇ ಅಲ್ಲದೆ ಆ ನಂತರದ ಮುಂದಿನ ಜನ್ಮದಲ್ಲಿ ಪಾಪ ಸೂಚಕ ಚಿಹ್ನೆಗಳ ರೋಗದಿಂದ ಕೂಡಿರುವವನಾಗುತ್ತಾನೆ.

ಆದರೆ ಆ ಮರುಜನ್ಮದಲ್ಲಿ ಪಾಪಗಳಿಗೆ ತಕ್ಕ ಪ್ರಾಯಶ್ಚಿತ್ತ ಹಾಗೂ ಪಶ್ಚಾತ್ತಾಪವನ್ನು ಪಡೆದಿದ್ದೇ ಆದರೆ ಆ ಪಾಪಸೂಚಕ ಚಿಹ್ನೆಗಳಿಂದ ಮುಕ್ತ ನಾಗುತ್ತಾನೆ. ಇಂತಹ ಪಾತಕಗಳು ಅನೇಕ ರೀತಿಗಳದ್ದಾಗಿರುತ್ತವೆ - ಮಹಾ ಪಾತಕದ ಚಿಹ್ನೆಯು 7 ಜನ್ಮಗಳವರೆಗೂ, ಉಪಪಾತಕಗಳ ಚಿಹ್ನೆಯು 5 ಜನ್ಮ ಗಳವರೆಗೂ, ಸಾಧಾರಣ ಪಾಪಗಳು ಮೂರು ಜನ್ಮಗಳವರೆಗೂ ಪ್ರಕಟಗೊಳ್ಳು ತ್ತವೆ. ಇಂತಹ ರೋಗಗಳು ಜಪ, ದೇವರ ಪೂಜೆ, ಹೋಮ ಹಾಗೂ ದಾನ ಇತ್ಯಾದಿ ಧರ್ಮಾನುಷ್ಠಾನ ಶಾಂತ ಕಾರ್ಯಗಳಿಂದ ದೂರಾಗುವವು.

ಶಾತಾತಪನು ತನ್ನ ಸ್ಮೃತಿಗಳ ಮುಖಾಂತರ ಒಂದು ರೀತಿಯ ಧಾರ್ಮಿಕ ಶಿಕ್ಷಣವನ್ನೇ ನೀಡುತ್ತಾನೆಂದರೆ ತಪ್ಪಾಗಲಾರದು. ನಿಂದಿತವಾದ ಹಾಗೂ ಪಾಪ ಕರ್ಮಗಳನ್ನು ಮಾಡಲೇಬಾರದು. ಯಾವಾಗಲೂ ಧರ್ಮಾಚರಣೆಯಲ್ಲಿಯೇ ನಿರತರಾಗಿರಬೇಕು. ಯಾರು ಧರ್ಮಾಚರಣೆಯನ್ನು ಅನುಸರಿಸುವುದಿಲ್ಲವೊ, ಶಾಸ್ತ್ರಗಳಲ್ಲಿನ ಆಜ್ಞೆಯನ್ನು ಅನುಸರಿಸುವುದಿಲ್ಲವೊ ಅಂತಹವರು ತಪ್ಪದೆ ನರಕ ದಲ್ಲಿ ಬೀಳುವರು. ಮುಂದಿನ ಜನ್ಮಗಳಲ್ಲಿ ಅವರು ಭಯಂಕರ ರೋಗಗಳಿಗೆ ತುತ್ತಾಗುವರು. ಒಂದು ವೇಳೆ ಪಾಪಮಾಡಿದ ನಂತರ ತಮ್ಮ ತಪ್ಪನ್ನು ಅರಿತು, ಪ್ರಾಯಶ್ಚಿತ್ತಮಾಡಿಕೊಂಡಲ್ಲಿ, ಅಂತಹವರು ಪಾಪದಿಂದ ಉಂಟಾಗುವ ಕಷ್ಟ ಗಳಿಂದ ಮುಕ್ತಿಯನ್ನು ಪಡೆಯುವರು.

ಮಹಾಪಾಪದಿಂದ ಕುಷ್ಠ, ಕ್ಷಯ, ಪ್ರಮೇಹ, ಹೊಟ್ಟೆರೋಗ, ಮೂತ್ರಾಶಯದಲ್ಲಿ ಹರಳು, ಮೂಲವ್ಯಾಧಿ, ಗಂಡಮಾಲಾ, ಪಾರ್ಶ್ವವಾಯು, ನೇತ್ರನಾಶ (ಕುರುಡು) ದಂತಹ ಭಯಂಕರ ರೋಗಗಳು ಬರುತ್ತವೆ.

ಉಪಪಾತಕದಿಂದ ಜಲೋದರ, ಯಕೃತ್, ಪ್ಲೀಹಾಗಳ ರೋಗಗಳು, ಶೂಲರೋಗ, ಶ್ವಾಸಕೋಶಗಳ ತೊಂದರೆ, ಅಜೀರ್ಣ, ಜ್ವರ ಹಾಗೂ ಗಂಟಲು ರೋಗಗಳು ಬರುತ್ತವೆ.

ಶರೀರದಲ್ಲಿ ನರಗಳು ಎದ್ದು ಕಾಣುವಿಕೆ, ಶರೀರ ನಡುಗುವುದು, ಕಜ್ಜಿ, ಮೈಮೇಲೆ ಮಚ್ಚೆಗಳು ಏಳುವುದು, ಗಜಕರ್ಣ ಇತ್ಯಾದಿ ರೋಗಗಳು ಸಾಮಾನ್ಯ ಪಾಪಗಳಿಂದ ಬರುತ್ತವೆ.

ಇದೇ ರೀತಿಯಲ್ಲಿ ಮೂಲವ್ಯಾಧಿ ಇತ್ಯಾದಿ ರೋಗಗಳು ಅತಿಪಾಪ ಮಾಡುವುದರಿಂದ ಬರುತ್ತವೆ.

ಈ ಎಲ್ಲ ರೀತಿಯ ಪಾಪಗಳ ಬಗ್ಗೆ ಮಾನವನು ಯೋಚನೆಮಾಡಿ, ಇದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಈ ಪಾಪಗಳ ಶಮನಕ್ಕಾಗಿ ಗೋದಾನ, ವೃಷಭದಾನ, ಭೂದಾನ, ಧಾನ್ಯದಾನ, ವಸ್ತ್ರದಾನ, ತ್ರ್ಯಂಬಕ ಮಂತ್ರದ ಒಂದು ಲಕ್ಷ ಜಪ, ವಿಷ್ಣು ಸಹಸ್ರನಾಮದ ಪ್ರತಿದಿನ ಧ್ಯಾನ, ದೇವರ ಪೂಜೆ, ಹವನ, ಗ್ರಹಶಾಂತಿ, ಬ್ರಾಹ್ಮಣರ ಪೂಜೆ, ದೀನದಲಿತರ ಸೇವೆ, ಇತ್ಯಾದಿಗಳನ್ನೂ ಬೇರೆ ಪ್ರಾಯಶ್ಚಿತ್ತಗಳನ್ನೂ ಹಿರಿಯರನ್ನು ಕೇಳಿ, ಶಾಸ್ತ್ರಜ್ಞ ರೊಡನೆ ಚರ್ಚಿಸಿ ಮಾಡಿಕೊಳ್ಳಬೇಕು.

ಈ ಪಟ್ಟಿಯಲ್ಲಿ ಯಾವ ದುಷ್ಕರ್ಮ (ಪಾಪ)ಕ್ಕೆ ಯಾವ ರೋಗ ಬರುತ್ತದೆ ಎನ್ನುವ ವಿವರಗಳಿವೆ –

| ನಂ. | ಪಾಪ | ರೋಗ |
|---|---|---|
| 1 | ಬ್ರಹ್ಮಹತ್ಯೆ | .... ಪಾಂಡು, ಕುಷ್ಠರೋಗ |
| 2 | ಗೋವಿನ ವಧೆ | .... ಕುಷ್ಠ |
| 3 | ಪಿತೃವಧೆ | .... ಚೈತನ್ಯ ಹೀನತೆ |
| 4 | ಮಾತೃವಧೆ | .... ಅಂಧತ್ವ |
| 5 | ಸಹೋದರಿಯರ ಹತ್ಯೆ | .... ಕಿವುಡು |
| 6 | ಸಹೋದರರ ವಧೆ | .... ಮೂಕ |
| 7 | ಬಾಲಕ(ಕಿ) ವಧೆ | .... ಸತ್ತಂತೆ ಬಿದ್ದುಕೊಂಡಿರುವುದು |
| 8 | ಸಗೋತ್ರನ ವಧೆ | .... ಕುಷ್ಠ, ನಿರ್ವಂಶ |
| 9 | ಸ್ತ್ರೀ ಹತ್ಯೆ | .... ಅತಿಸಾರ |
| 10 | ರಾಜನ ಹತ್ಯೆ | .... ಕ್ಷಯ |
| 11 | ಉಷ್ಟ್ರ ಹತ್ಯೆ | .... ವಿಕಾರ ಸ್ವರ |
| 12 | ಅಶ್ವ ಹತ್ಯೆ | .... ವಕ್ರತುಂಡ |
| 13 | ಹರಿಣ ಹತ್ಯೆ | .... ಕುಂಟ |
| 14 | ಮಾರ್ಜಾಲ ಹತ್ಯೆ | .... ಹಸಿರು ಹರಡುವ ರೋಗ |
| 15 | ಶುಕ–ಸಾರಿಕೆಗಳ ವಧೆ | .... ಬಿಕ್ಕಲು |
| 16 | ಕಾಗೆಯ ವಧೆ | .... ಕಿವಿ ಇಲ್ಲದೆ ಹೋಗುವಿಕೆ |
| 17 | ಬಕ ಹತ್ಯೆ | .... ಉದ್ದನೆ ಮೂಗು |
| 18 | ಕುಡಿತ | .... ಕಪ್ಪು-ಹಸಿರು ಹಲ್ಲು |
| 19 | ಮದ್ಯ ಇತ್ಯಾದಿಗಳ ಸೇವನೆ | .... ರಕ್ತಪಿತ್ತ |
| 20 | ತಿನ್ನದೇ ಇರುವುದನ್ನು ತಿನ್ನುವುದು | ... ಹೊಟ್ಟೆಯಲ್ಲಿ ಹುಳುಗಳು |
| 21 | ವಿಷ ನೀಡುವಂತಹವು | .... ವಾಂತೀ, ಭೇದಿ |
| 22 | ದಾರಿಗಳನ್ನು ನಾಶ ಮಾಡುವಿಕೆ | .... ಕಾಲುಗಳ ರೋಗ |
| 23 | ಧೂರ್ತತೆ | .... ಅಪಸ್ಮಾರ ರೋಗ |

| ನಂ. | ಪಾಪ | ರೋಗ |
|---|---|---|
| 24 | ಇತರರಿಗೆ ಕಷ್ಟ ಕೊಡುವಿಕೆ | .... ಶೂಲ ರೋಗ |
| 25 | ದಾವಾಗ್ನಿ ನೀಡಿಕೆ | ... ಅತಿ ರಕ್ತಸಾರ |
| 26 | ದೇವಸ್ಥಾನ ಅಥವಾ ಹರಿವ ನೀರಿನಲ್ಲಿ ಮೂತ್ರ ವಿಸರ್ಜನೆ | .... ಭಯಂಕರ ಗುದ ರೋಗ |
| 27 | ಗರ್ಭಪಾತ | .... ಯಕೃತ್, ಪ್ಲೀಹಸಂಬಂಧದ ರೋಗ ಮತ್ತು ಜಲೋದರ |
| 28 | ವಿಗ್ರಹ ಒಡೆಯುವುದು | .... ಸ್ಥಿರತೆ ಇಲ್ಲದ ಬುದ್ಧಿ |
| 29 | ಕೆಟ್ಟ ಮಾತುಗಳನ್ನು ಆಡುವುದು | .... ಭಗ್ನ ಆರೋಗ್ಯ |
| 30 | ಇತರರನ್ನು ನಿಂದಿಸುವುದು | .... ಗಾಂಜಾ ಸೇವನೆ |
| 31 | ಇತರರನ್ನು ಅಪಹಾಸ್ಯಮಾಡುವುದು | .... ವಕ್ರ ಅಥವಾ ಒಕ್ಕಣ್ಣು |
| 32 | ಸಭೆಯಲ್ಲಿ ಪಕ್ಷಪಾತ ಮಾಡುವುದು | .... ಪಾರ್ಶ್ವ ವಾಯು |
| 33 | ಚಿನ್ನ ಕದಿಯುವಿಕೆ | .... ಕುಲಘ್ನನಾಗುವಿಕೆ |
| 34 | ಇತರರ ಭಿಕ್ಷಾಪಾತ್ರೆ (ಹುಲ್ಲನ್ನು) ಕದಿಯುವವನು | .... ಪಾಂಡು ರೋಗ |
| 35 | ತಾಮ್ರವನ್ನು ಕದಿಯುವವನು | .... ಔದುಂಬರ ರೋಗ |
| 36 | ಹಿತ್ತಾಳೆ ಕದಿಯುವವ | .... ಪಿಂಗಳಾಕ್ಷ (ಮೆಲುಗಣ್ಣು) |
| 37 | ಮುತ್ತಿನ ಕಳ್ಳತನ | .... ಬಾಲವಿರುವ ರೋಗ |
| 38 | ಸೀಸದ ಕಳ್ಳತನ | .... ಕಣ್ಣಿನ ರೋಗ |
| 39 | ಹಾಲು ಕದಿಯುವವ | .... ಬಹು ಮೂತ್ರೀ ರೋಗ |
| 40 | ಲೋಹವನ್ನು ಕಳ್ಳತನ ಮಾಡುವವನು | .... ಅಂಗವಿಕಲತೆ |
| 41 | ಎಣ್ಣೆ ಕಳ್ಳತನ | .... ತುರಿಕೆ ರೋಗ |
| 42 | ಅಕ್ಕಿ ಕದಿಯುವಿಕೆ | .... ಹಲ್ಲಿಲ್ಲದೆ ಇರುವುದು |
| 43 | ಅನ್ನ ಕದಿಯುವವನು | .... ನಾಲಿಗೆ (ಬಾಯಿ) ರೋಗ |
| 44 | ವಿದ್ಯೆ, ಪುಸ್ತಕ ಕದಿಯುವಿಕೆ | .... ಮೂಗ |

| ನಂ. | ಪಾಪ | ರೋಗ |
|---|---|---|
| 45 | ವಸ್ತ್ರ ಚೋರ | .... ಕುಷ್ಠ ರೋಗ |
| 46 | ಔಷಧಿ ಕದಿಯುವಿಕೆ | .... ಅಧಿಕ ಕಪಾಲ ಇರುವವನು |
| 47 | ಬ್ರಾಹ್ಮಣನ ರತ್ನಗಳನ್ನು ಕದಿಯುವವನು | .... ಅನ ಪತ್ಯತೆ ರೋಗ |
| 48 | ದೇವತಾ ವಿಗ್ರಹಗಳನ್ನು ಕದಿಯುವವ | .... ಅನೇಕ ರೀತಿಯ ಜ್ವರಗಳು |
| 49 | ಅಗಮ್ಯಾಗಮನ (ಸೇರದವರನ್ನು ಸೇರುವುದು) | .... ಅನೇಕ ರೋಗಗಳು |

ಈ ರೀತಿಯಲ್ಲಿ ಶುಭಾಶುಭ ಕರ್ಮಗಳ ಫಲವನ್ನು ಈ ಸ್ಮೃತಿಯಲ್ಲಿ ತಿಳಿಸಲಾಗಿದೆ. ಎಲ್ಲ ಪಾಪಗಳ ಪ್ರಾಯಶ್ಚಿತ್ತವನ್ನು ಕೂಡ ವಿವರಿಸಲಾಗಿದೆ. ವಿಷಾನಿಲ ಹರಡುವಿಕೆ, ಭೂಕಂಪ, ಅಗ್ನಿ, ಶಿಲೆ ಹಾಗೂ ವಿದ್ಯುತ್ ಇತ್ಯಾದಿ ಪ್ರಾಕೃತಿಕ ಅಪಘಾತಗಳಲ್ಲಿ ಮೃತ ಹೊಂದಿದವರಿಗೆ ಸದ್ಗತಿಯು ಪ್ರಾಪ್ತವಾಗುವುದಿಲ್ಲ. ಅಂತಹವರಿಗೆ ಪ್ರೇತತ್ವವು ಲಭಿಸುವುದು. ಇಂತಹವರುಗಳೂ ಹೇಗೆ ಸದ್ಗತಿಯನ್ನು ಪಡೆಯುವರು, ಅಂತಹುದಕ್ಕೆ ಅನುಸರಿಸಬೇಕಾದ ವಿಧಾನಗಳು ಯಾವುವು ಎಂಬವುಗಳನ್ನು ಈ ಸ್ಮೃತಿಯ ಕೊನೆಯಲ್ಲಿ ನೀಡಲಾಗಿದೆ.

ಈ ರೀತಿಯಲ್ಲಿ ಪಾಪಗಳಿಂದ ಬಿಡುಗಡೆ ಪಡೆಯಲು ಪ್ರಾಯಶ್ಚಿತ್ತ ವಿಧಾನವನ್ನು ರೂಪಿಸಲಾಗಿದೆ. ಎಲ್ಲ ಧರ್ಮಶಾಸ್ತ್ರಗಳಲ್ಲಿಯೂ ಇದರ ಬಗ್ಗೆ ಒತ್ತು ನೀಡಲಾಗಿದೆ. ಇದಕ್ಕೆ ಕಾರಣವೂ ಇದೆ. ಪ್ರಾಯಶ್ಚಿತ್ತ ಮಾಡಿಕೊಳ್ಳುವ ಸ್ವಲ್ಪ ಕಷ್ಟದಿಂದ ಪಾಪಗಳಿಂದ ಬಿಡುಗಡೆ ಪಡೆಯಬಹುದು. ಇಲ್ಲದಿದ್ದಲ್ಲಿ ನರಕ ಇತ್ಯಾದಿಗಳಲ್ಲಿ ಬಹಳ ದಿನಗಳವರೆಗೆ ಹಿಂಸೆಯನ್ನು ಅನುಭವಿಸಬೇಕಾಗುತ್ತದೆ. ನರಕದಿಂದ ಬಿಡುಗಡೆಯಾದ ನಂತರವೂ ಕೂಡ ಪಾಪಗಳ ಬೇರೆ ಬೇರೆ ರೀತಿಯ ಕುರುಹುಗಳಿಂದ ಮಾನವನು ಮತ್ತೆ ಮತ್ತೆ ಜನಿಸಬೇಕಾಗುತ್ತದೆ. ಮಹಾಪಾತಕಗಳಂತೂ ಏಳೇಳು ಜನ್ಮಗಳವರೆಗೂ ಇರುತ್ತದೆ–

ಪ್ರಾಯಶ್ಚಿತ್ತ ವಿಹೀನಾನಾಂ ಮಹಾಪಾತಕಿನಾಂ ನೃಣಾಂ |
ನರಕಾಂತೇ ಭವೇಜನ್ಮ ಚಿಹ್ನಾಂತಿತ ಶರೀರಿಣಾಂ ||
ಮಹಾಪಾತಕಜಂ ಚಿಹ್ನಂ ಸಪ್ತಜನ್ಮನಿ ಜಾಯತೇ ||
(ಶಾತಾತಪ 1/1, 2)

ಇವನ್ನೆಲ್ಲ ತಿಳಿದ ಜನರು ತಮ್ಮ ಪಾಪಗಳಿಗೆ ತಪ್ಪದೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾರೆ. ಮಹಾಪಂಡಿತ ಕುಮಾರಿಲಭಟ್ಟನು ತಿಳಿದೇ ಒಂದು ಪಾಪವನ್ನು ಮಾಡುತ್ತಾನೆ. ತನ್ನ ಗುರುಗಳೊಂದಿಗೆ ಶಾಸ್ತ್ರಾರ್ಥ ಚರ್ಚೆ ಮಾಡಿ ಅವರನ್ನು ಸೋಲಿಸುತ್ತಾನೆ. ವೈದಿಕ ಧರ್ಮದ ಉದ್ಧಾರಕ್ಕಾಗಿ ಇದನ್ನು ಮಾಡಿದರೂ ಅವನಿಗೆ ಪಾಪ ಸುತ್ತಿಕೊಂಡು, ಪ್ರಾಯಶ್ಚಿತ್ತದ ಮುಖಾಂತರ ಆ ಪಾಪವನ್ನು ತೊಳೆದುಕೊಳ್ಳಲು ಪ್ರಯತ್ನಿಸುವನು.

## 24. ಯಮಸ್ಮೃತಿ

ಯಮನನ್ನು ಧರ್ಮರಾಜ ಯಮನೆಂದೂ ಕರೆಯಲಾಗುತ್ತದೆ. ಈತನು ಭಗವಾನ್ ಸೂರ್ಯನ ಮಗ. ಭಗವಾನ್ ಸೂರ್ಯನ ಮತ್ತೊಂದು ಹೆಸರು 'ವಿವಸ್ವಾನ್' ಎಂಬುದು. ಆದರಿಂದ ವಿವಸ್ವಾನ್ (ಸೂರ್ಯ)ನ ಪುತ್ರನಾದ ಕಾರಣ ಈತನನ್ನು ವೈವಸ್ವತ ಯಮನೆಂದೂ ಕರೆಯಲಾಗುತ್ತದೆ.

ಈತನು ಜೀವಿಗಳ ನಿಯಮನ ಮಾಡುವವನಾದುದರಿಂದ ಯಮನೆಂದು ಈತನನ್ನು ಕರೆಯಲಾಗುತ್ತದೆ. ಈತನು ಧರ್ಮಸ್ವರೂಪನಾದ ಕಾರಣ ಧರ್ಮ ರಾಜ ಎಂದೂ ಕರೆಯಲಾಗುತ್ತದೆ. ಈ ದೇವತೆಯು ಜಗತ್ತಿನ ಎಲ್ಲ ಜೀವಿಗಳ ಶುಭ ಹಾಗೂ ಅಶುಭ – ಈ ರೀತಿ ಎಲ್ಲ ಕರ್ಮಗಳನ್ನು ತಿಳಿದವನಾಗಿರುತ್ತಾನೆ. ಈತನಿಂದ ಏನನ್ನೂ ಬಚ್ಚಿಡಲಾಗುವುದಿಲ್ಲ. ಈತನು ಜೀವಿಗಳ ಭೂತ – ಭವಿಷ್ಯತ್, ಪ್ರತ್ಯಕ್ಷ–ಅಪ್ರತ್ಯಕ್ಷದಲ್ಲಿ ಮಾಡುವ ಎಲ್ಲ ರೀತಿಯ ಶುಭಾ ಅಶುಭ ಕರ್ಮಗಳಿಗೆ ಪ್ರತ್ಯಕ್ಷ ಸಾಕ್ಷಿಯಾಗಿರುವನು. ಈತನು ಪರಿಪೂರ್ಣ ಜ್ಞಾನಿಯೂ ಆಗಿರುವನು. ಈತನಲ್ಲಿ ಯಾವುದೇ ಲೋಪವೂ ಇರುವುದಿಲ್ಲ. ತನ್ನ ಹೆಸರಿನ ವ್ಯಾಖ್ಯಾನವನ್ನು ಮಾಡುತ್ತಾ, ತನ್ನ ದೂತರಿಗೆ ಹೀಗೆಂದು ಹೇಳುವನು –

"ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮನ ಮುಖಾಂತರ ನಾನು ಸೃಷ್ಟಿಸ ಲ್ಪಟ್ಟನು ಲೋಕಗಳೆಲ್ಲವುಗಳ ಸಮಸ್ತ ಜೀವಿಗಳ ಧರ್ಮಾಧರ್ಮ ಆಚರಣೆ

ಯನ್ನು ಲೆಕ್ಕಹಾಕಿ, ಅವರ ಪಾಪ-ಪುಣ್ಯಗಳ ಲೆಕ್ಕ ನೀಡುವುದಕ್ಕಾಗಿ ನಿಯುಕ್ತನಾದ ಶಾಸಕನಾಗಿದ್ದೇನೆ. ನಿಯಾಮಕನಾಗಿರುವುದರಿಂದ ನನ್ನ ಹೆಸರು 'ಯಮ' ಎಂದಾಯಿತು. ಆದರೆ ನನಗೆ ನಾನೇ ಸರ್ವತಂತ್ರ ಸ್ವತಂತ್ರನಲ್ಲ. ಏನಾದರೂ ಸ್ವಲ್ಪ ಹೆಚ್ಚು ಕಡಿಮೆಯಾದರೂ ಪರಮಾತ್ಮನು ಕೂಡಲೇ ನನ್ನನ್ನು ನಿಯಂತ್ರಿಸುವನು.

ಅಹಮಮರವರಾರ್ಚಿತೇನ ಧಾತ್ರಾ ಯಮ ಇತಿ
ಲೋಕ ಹಿತಾಹಿತೆ ನಿಯುಕ್ತಃ |
ಹರಿಗುರುವಶಗೋऽಸ್ಮಿ ನ ಸ್ವತಂತ್ರಃ
ಪ್ರಭವತಿ ಸಂಯಮನೇ ಮಮಾಪಿ ವಿಷ್ಣುಃ ||"

(ವಿಷ್ಣುಪುರಾಣ 3/7/15)

ಜೀವಿಗಳು ಮಾಡಿರುವ ಪಾಪ–ಪುಣ್ಯಗಳ ಪ್ರಕಾರ ಯಮನು ಪಾಪಿಗಳನ್ನು ಯಮಲೋಕವಾಗಿರುವ ನರಕಕ್ಕೂ, ಪುಣ್ಯಾತ್ಮರನ್ನು ಪುಣ್ಯಲೋಕಕ್ಕೂ ಕಳುಹಿಸುವನು. ಈತನು ಧರ್ಮ–ಅಧರ್ಮಗಳ ಸೂಕ್ಷ್ಮತೆಯನ್ನು ತಿಳಿದವನು. ಇದಕ್ಕೆ ಅನುಗುಣವಾಗಿ ಸರಿಯಾದ ಲೆಕ್ಕಾಚಾರ ಮಾಡುವನು. ಈತನು ಎಂದಿಗೂ ಪಕ್ಷಪಾತವನ್ನು ಮಾಡುವುದಿಲ್ಲ. ಅವರವರ ಕರ್ಮಾನುಸಾರ ಈ ಲೋಕದಿಂದ ಬೇರೆ ಲೋಕಕ್ಕೆ ಹೋಗಲು ಸಹಾಯಕವಾಗುವಂತಹ ಶರೀರವನ್ನು ನೀಡುವನು. ನರಕಕ್ಕೆ ಹೋಗುವವರಿಗೆ ಯಾತನೆಯ ಶರೀರವನ್ನು ನೀಡುವನು. ದಂಡ ವಿಧಾನದಿಂದ ಜೀವಿಗಳನ್ನು ಶುದ್ಧರನ್ನಾಗಿ ಮಾಡಿ, ಪವಿತ್ರಗೊಳಿಸುವನು.

ಈತನ ಲೋಕ 'ಯಮಲೋಕ'. ಇದನ್ನು 'ಸಂಯಮನ ಪುರೀ' ಎಂದೂ ಕರೆಯುವರು. ಈತನ ದೂತರು 'ಯಮದೂತ'ರು. ಈತನ ಮುಖ್ಯ ಆಯುಧ 'ಪಾಶ' ಇದನ್ನು 'ಯಮಪಾಶ' ವೆಂದು ಕರೆಯಲಾಗುತ್ತದೆ. ಯಮಲೋಕದಲ್ಲಿ ಜೀವಿಗಳ ಶುಭಾಶುಭ ಕರ್ಮಗಳ ಲೆಕ್ಕಾಚಾರವನ್ನು 'ಚಿತ್ರಗುಪ್ತ'ನು ಬರೆದಿಡುವನು. ಯಮನ ವಾಹನ 'ಮಹಿಷ' (ಎಮ್ಮೆ). ಆದುದರಿಂದಲೇ ಯಮನನ್ನು 'ಮಹಿಷ ವಾಹನ' ಎಂದೂ ಕರೆಯಲಾಗುತ್ತದೆ. ಪೂಜೆ–ಉಪಾಸನೆಗಳಲ್ಲಿ ಈತನ ಧ್ಯಾನ ರೂಪವು ಭಯಾನಕವಾಗಿರುವಂತೆ ಚಿತ್ರಿತವಾಗಿದ್ದರೂ, ಈ ಭಯಂಕರ ರೂಪವು ಕೇವಲ ನರಕಕ್ಕೆ ಹೋಗುವ ಜೀವಿಗಳಿಗೆ

ಮಾತ್ರ ಕಾಣುತ್ತದೆ, ಪುಣ್ಯ ಮೂರ್ತಿಗಳಿಗಲ್ಲ.

ನಿಂದಾಯುಕ್ತ ಕರ್ಮಗಳು, ಅಧರ್ಮಾಚರಣೆ ಮಾಡುವವರಿಗೆ ಯಮ ಧರ್ಮರಾಯನು ತನ್ನ ಭಯಾನಕ, ವಿಕರಾಳ ರೂಪವನ್ನು ತೋರಿಸುವನು. ಆದರೆ ಪುಣ್ಯಾತ್ಮರು, ಭಕ್ತ-ಸಂತರು, ಮಹಾತ್ಮರು, ಧರ್ಮಾತ್ಮರು, ಸನ್ಮಾರ್ಗಿಗಳು, ಸಾಧುಗಳು, ಪರೋಪಕಾರಿಗಳು, ದಾನಿಗಳು, ಪರರಿಗೆ ಸೇವೆ ಹಾಗೂ ಉಪಕಾರ ಮಾಡುವವರಿಗೆ-ಈತನು ತನ್ನ ಸೌಮ್ಯ ರೂಪವನ್ನು ತೋರುವನು. ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿರುವ ವಿಷ್ಣು ಭಗವಾನನ ರೂಪದಲ್ಲಿ ಅವರಿಗೆ ಕಾಣಿಸುವನು. ಅಂದರೆ ಈತನು ಪುಣ್ಯ-ಪಾಪಿಗಳೆಲ್ಲರಿಗೂ ಎಲ್ಲ ರೀತಿಯ ಒಳ್ಳೆಯದನ್ನು ಮಾಡುವವನಾಗಿರುತ್ತಾನೆ.

ಯಮಧರ್ಮನು ಪರಮ ಭಾಗವತನು. ದ್ವಾದಶ ಪರಮ ಭಾಗವತರಲ್ಲಿ ಈತನೂ ಒಬ್ಬನು.

ಸ್ವಯಂಭೂರ್ನಾರದಃ ಶಂಭುಃ ಕುಮಾರಃ ಕಪಿಲೋ ಮನುಃ |
ಪ್ರಹ್ಲಾದೋ ಜನಕೋ ಭೀಷ್ಮೋ ಬಲಿರ್ವೈಯಾಸ ಕಿ ರ್ವಯಂ ||
ದ್ವಾದಶೈತೆ ವಿಜಾನೀಮೋ ಧರ್ಮಂ ಭಾಗವತಂ ಭಟಾಃ ||

(ಶ್ರೀಮದ್ಭಾಗವತ 6-3-20-21)

ಅಂದರೆ-'ಭಾಗವತ ಧರ್ಮದ ರಹಸ್ಯವನ್ನು ಬ್ರಹ್ಮ, ದೇವರ್ಷಿ, ನಾರದ, ಭಗವಾನ್ ಶಂಕರ, ಸನತ್ಕುಮಾರ, ಕಪಿಲ, ಸ್ವಾಯಂಭುವ ಮನು, ಪ್ರಹ್ಲಾದ, ಜನಕ, ಭೀಷ್ಮ ಪಿತಾಮಹ, ಬಲಿ, ಶುಕದೇವ ಹಾಗೂ ನಾನು (ಯಮ) ಈ ಹನ್ನೆರಡು ಜನ ಮಾತ್ರವೇ ಅರಿಯಬಲ್ಲವರಾಗಿದ್ದೇವೆ' - ಎಂದು ಯಮನು ತಿಳಿಸುತ್ತಾನೆ.

ಇಂತಹ ಯಮನು ಭಗವನ್ನಾಮ ಮಹಿಮೆಯನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ. ಈತನು ಭಗವನ್ನಾಮ ಮಹಿಮೆಯನ್ನು ಪ್ರತಿಪಾದಿಸಿರುವ ವಿವರಗಳು ಭಾಗವತ - ಇತ್ಯಾದಿ ಪವಿತ್ರ ಗ್ರಂಥಗಳಲ್ಲಿ ವಿವರಿಸಲಾಗಿದೆ. ಇದರ ಬಗ್ಗೆ ಈತನು ತನ್ನ ದೂತರಿಗೆ, ಎಲೈ ಪ್ರಿಯ ದೂತರೆ! ಭಗವನ್ನಾಮದ ಮಹಿಮೆ ಎಷ್ಟು ವಿಚಿತ್ರವಾದುದೆಂಬುದನ್ನು ನೋಡಿ. ಅಜಾಮಿಳನಂತಹ ಪಾಪಿಯೂ ಕೂಡ ಒಮ್ಮೆ ಭಗವಂತನ ಹೆಸರನ್ನು ಸ್ಮರಿಸಿದ್ದರಿಂದ ಮೃತ್ಯುಪಾಶದಿಂದ ಬಿಡುಗಡೆ ಹೊಂದಿದ. ಪರಮಾತ್ಮನ ಗುಣ, ಲೀಲೆಗಳು ಹಾಗೂ

ನಾಮಾವಳಿಯನ್ನು ಕೀರ್ತನೆ ಮಾಡುವ ಮಾನವನಲ್ಲಿನ ಪಾಪಗಳು ಸಂಪೂರ್ಣ ವಾಗಿ ನಶಿಸಿ ಹೋಗುವುವು. ಅಜಾಮಿಳನು ತನ್ನ ಮಗನ ಹೆಸರನ್ನು ನಾರಾಯಣ ಎಂದು ಇರಿಸಿ, ಕೊನೆಗಾಲದಲ್ಲಿ ಮಗನನ್ನು ಕೂಗುವ ನೆಪದಲ್ಲಿ ಭಗವನ್ನಾಮ ಸ್ಮರಣೆ ಮಾಡಿದ ಪುಣ್ಯಕ್ಕೆ ಒಳಗಾಗಿ, ಮುಕ್ತಿಯನ್ನು ಪಡೆದ. ಆದುದರಿಂದ ಭಾಗವತೋತ್ತಮರ ತಂಟೆಗೆ ಹೋಗಬೇಡಿ.' ಎಂದು ಸದಾ ಎಚ್ಚರಿಸುತ್ತಿರುತ್ತಾನೆ.

ಏತಾವತಾಲಮಘನಿರ್ಹರಣಾಯ ಪುಂಸಾಂ
ಸಂಕೀರ್ತನಂ ಭಗವತೋ ಗುಣ ಕರ್ಮನಾಮ್ನಾಂ ।
ವಿಕ್ರುಶ್ಯ ಪುತ್ರ ಮಘವಾನ್ ಯದಜಾಮಿಳೋಽಪಿ
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ ॥
(ಶ್ರೀಮದ್ಭಾಗವತ 6-3-24)

ಯಮನು ದಕ್ಷಿಣ ದಿಕ್ಕಿಗೆ ಸ್ವಾಮಿಯಾಗಿದ್ದಾನೆ. ಇದರಿಂದ ದಶದಿಕ್ಪಾಲಕರಲ್ಲಿ ಈತನೂ ಒಬ್ಬನು. ಈತನು ಶನಿಗ್ರಹದ ಅಧಿದೇವತೆಯೂ ಹೌದು. ಶನಿಯು ನೀಡುವ ಅನಿಷ್ಟವನ್ನು ಈತನನ್ನು ಪೂಜಿಸುವ ಮುಖಾಂತರ ಪರಿಹರಿಸಿಕೊಳ್ಳಬಹುದು.

ಇದೇ ರೀತಿಯಲ್ಲಿ ದೀಪಾವಳಿಯ ಎರಡನೇ ದಿನವನ್ನು 'ಯಮದ್ವಿತೀಯ' ಎಂದು ಕರೆಯಲಾಗುತ್ತದೆ. ಅಂದು ಈತನಿಗೆ 'ಯಮದೀಪ'ವನ್ನು ಅರ್ಪಿಸಲಾಗುತ್ತದೆ. ಇದೇ ರೀತಿಯಲ್ಲಿ ಬೇರೆ ಪರ್ವ ದಿನಗಳಲ್ಲೂ ಈತನನ್ನು ಪೂಜಿಸಿ ಈತನ ಕೃಪೆಯನ್ನು ಪಡೆಯಲು ಮಾನವರು ಪ್ರಯತ್ನಿಸುವರು. ಅಂತಹವರ ಮೇಲೆ ಯಮನು ತನ್ನ ಅನುಗ್ರಹವನ್ನು ತೋರುವನು.

ಮೃತ್ಯುವಿಗೆ ಅಧಿಷ್ಠಾತನಾದ ಈತನು ಪಿತೃದೇವನೂ ಹೌದು. ಮುಖ್ಯವಾಗಿ ದಂಡನೆ ನೀಡುವುದರ ಮುಖಾಂತರ ಜೀವಿಗಳನ್ನು ಶುದ್ಧಿಮಾಡಿ, ಅವುಗಳನ್ನು ಭಗವತ್-ಪ್ರಾಪ್ತಿ ಯೋಗ್ಯವಾದವುಗಳನ್ನಾಗಿ ಮಾಡುವನು. ಹೀಗೆ ಮೃತ್ಯು ಹಾಗೂ ಕಾಲಗಳಿಗೆ ಮತ್ತೊಂದು ಹೆಸರಾದ ಧರ್ಮರಾಜ ಯಮನು ಜೀವಿಗಳ ಮೇಲೆ ಅನುಗ್ರಹವನ್ನು ತೋರುವನು.

ವೇದಗಳಲ್ಲಿನ ಯಮ-ಯಾಮೀಗಳ ಸಂವಾದ ಹಾಗೂ ಯಮ ಸೂಕ್ತವು ತುಂಬಾ ಪ್ರಸಿದ್ಧಿಯನ್ನು ಪಡೆದಿದೆ. ವಿಷ್ಣುಪುರಾಣ, ನರಸಿಂಹ ಪುರಾಣ ಹಾಗೂ ಅಗ್ನಿ ಪುರಾಣಗಳಲ್ಲಿ ಈತನು ನೀಡಿರುವ ಉಪದೇಶಗಳು 'ಯಮಗೀತಾ'

ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಭಾಗವತ ಇತ್ಯಾದಿಗಳಲ್ಲಿ ನಿರೂಪಿತವಾದ ಈತನ ಭಗವದ್ಭಕ್ತಿ-ಸಂಬಂಧದ ವಿವರಗಳು ಸಗುಣಾತ್ಮಕವಾಗಿದ್ದು, ಜ್ಞಾನ ವರ್ಧಕಗಳಾಗಿವೆ. ಇವುಗಳಲ್ಲಿ ಯೋಗ, ಜ್ಞಾನ, ವೇದಾಂತ, ಭಕ್ತಿ ಹಾಗೂ ಧರ್ಮದ ನಿಗೂಢತತ್ವಗಳು ಪ್ರತಿಪಾದಿತವಾಗಿವೆ. ಈತನು ರಚಿಸಿರುವ ಧರ್ಮ ಶಾಸ್ತ್ರವು 'ಯಮಸ್ಮೃತಿ' ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ.

ಸಾವಿತ್ರಿಯು ಯಮನನ್ನು ತನ್ನ ಪತಿವ್ರತೆಯ ಬಲದಿಂದ ಜಯಿಸಿ, ತನ್ನ ಪತಿ ಸತ್ಯವಾನನನ್ನು ಮೃತ್ಯುಪಾಶದಿಂದ ಬಿಡಿಸಿಕೊಂಡು ಬಂದಳು. ಈಕೆ ನೀಡಿರುವ 'ಯಮಸ್ತುತಿ'ಯು ಅತ್ಯಂತ ಫಲಪ್ರದವೂ, ಕಲ್ಯಾಣಕರವಾದುದೂ ಆಗಿ ಇದರ ಫಲಶ್ರುತಿಯಲ್ಲಿ 'ಯಾರು ಪ್ರತಿ ಪ್ರಾತಃಕಾಲ ಈ ಯಮಸ್ತುತಿ ಯನ್ನು ತಪ್ಪದೆ ಪಠಿಸುವರೋ, ಅಂತಹವರಿಗೆ ಯಮನ ಭಯ ಇರುವುದಿಲ್ಲ. ಪ್ರಾರ್ಥಿಸಿದವನ ಸಕಲ ಪಾಪಗಳೂ ದೂರವಾಗುತ್ತವೆ.' ಎಂದು ಬ್ರಹ್ಮವೈವರ್ತ ಪುರಾಣದಲ್ಲಿ (ಪ್ರಕೃತಿ 28/8-15) ತಿಳಿಸಿದೆ.

ಯಮ-ತರ್ಪಣ : ಯಮನು ಪಿತೃಗಳ ದೇವತೆಯೆಂದು ಈಗಾಗಲೇ ಹೇಳಿದೆ. ಆದುದರಿಂದ ತರ್ಪಣದಲ್ಲಿ ಈತನಿಗೂ ಜಲಾಂಜಲಿಯನ್ನು ನೀಡ ಲಾಗುತ್ತದೆ. ಇದರಿಂದ ಪಿತೃಗಳಿಗೆ ತೃಪ್ತಿ ಉಂಟಾಗುತ್ತದೆ. ಇದರಿಂದ ದಾತನು ಮಾಡಿರುವ ಪಾಪಗಳು ನಶಿಸಿಹೋಗುತ್ತವೆ ತರ್ಪಣದಲ್ಲಿ ದೇವ, ಋಷಿ, ದಿವ್ಯ ಮಾನವ ಹಾಗೂ ದಿವ್ಯ ಪಿತೃಗಳಿಗೆ ತರ್ಪಣ ನೀಡಿದ ನಂತರ ಯಮನನ್ನು ಚತುರ್ದಶ ನಾಮಗಳಿಂದ ಅಪಸವ್ಯ ಮಾಡಿ, ದಕ್ಷಿಣಾಭಿಮುಖ ನಾಗಿ ಪಿತೃತೀರ್ಥದಿಂದ ಮೂರು-ಮೂರು ಸಲ ಜಲಾಂಜಲಿಯನ್ನು ನೀಡ ಲಾಗುತ್ತದೆ. ಅದರ ಕ್ರಮ ಈ ರೀತಿ ಇರುತ್ತದೆ.

1. ಓಂ ಯಮಾಯ ನಮಃ, 2. ಓಂ ಯಮರಾಜಾಯ ನಮಃ, 3. ಓಂ ಮೃತ್ಯುವೇ ನಮಃ, 4. ಓಂ ಅಂತಕಾಯ ನಮಃ, 5. ಓಂ ವೈವಸ್ವತಾಯ ನಮಃ, 6. ಓಂ ಕಾಲಾಯ ನಮಃ, 7. ಓಂ ಸರ್ವಭೂತ ಕ್ಷಯಾಯ ನಮಃ, 8. ಓಂ ಔಡುಂಬರಾಯ ನಮಃ, 9. ಓಂ ದಧ್ನಾಯ ನಮಃ, 10. ಓಂ ನೀಲಾಯ ನಮಃ, 11. ಓಂ ಪರಮೇಷ್ಠಿನೇ ನಮಃ, 12. ಓಂ ವೃಕೋದರಾಯ ನಮಃ, 13. ಓಂ ಚಿತ್ರಾಯ ನಮಃ, 14. ಓಂ ಚಿತ್ರಗುಪ್ತಾಯ ನಮಃ.

ಇವೇ 14 ಹೆಸರುಗಳಿಂದ ಈತನ ಆರಾಧನೆಯನ್ನು ಮಾಡಬಹುದು. ಚತುರ್ದಶಿ ತಿಥಿಯ ದೇವತೆಯೂ ಕೂಡ ಯಮನೇ ಆಗಿದ್ದಾನೆ. ಕೃಷ್ಣ ಚತುರ್ದಶಿಯ ದಿನದಂದು ಯಮ ತರ್ಪಣ ನೀಡುವುದರಿಂದ ಎಲ್ಲ ಪಾಪಗಳೂ ದೂರವಾಗುತ್ತವೆ. ಇದೇ ರೀತಿಯಲ್ಲಿ ಯಮನ ತಂಗಿ ಯಮುನೆಯಲ್ಲಿ ಸ್ನಾನ ಮಾಡಿ, ತರ್ಪಣಾದಿಗಳನ್ನು ನೀಡುವುದರಿಂದ ವಿಶೇಷ ಪುಣ್ಯ ಫಲಗಳು ಲಭಿಸುತ್ತವೆ.

ಈ ರೀತಿಯಲ್ಲಿ ಯಮನ ಶಾಶ್ವತ ದಂಡ–ವಿಧಾನವು ಹೊರ ನೋಟಕ್ಕೆ ಭಯಂಕರವೂ, ಭಯ ಹುಟ್ಟಿಸುವಂತಹುದೂ ಆಗಿದ್ದರೂ ಮೂಲಭೂತವಾಗಿ ಸಮಸ್ತ ಜೀವಿಗಳ ಕಲ್ಯಾಣಕ್ಕಾಗಿಯೇ ಇದೆ. ಇಲ್ಲಿ ಗಮನಿಸಬೇಕಾದ ವಿಷಯ ವೊಂದಿದೆ. ಶಿಕ್ಷೆಯನ್ನು ಕೇವಲ ಪಾಪಿಗಳಿಗೆ ಮಾತ್ರ ನೀಡಲಾಗುತ್ತದೆ. ಪುಣ್ಯ ಜೀವಿಗಳನ್ನು ಆತನು ಸ್ಪರ್ಶಿಸುವುದೇ ಇಲ್ಲ. ಸ್ವತಃ ಯಮನೇ ತನ್ನ ದೂತರಿಗೆ,

"ಹೇ ದೂತರೇ ! ಮಹಾವಿಷ್ಣುವನ್ನು ಶರಣು ಹೋದವರನ್ನು ಮಾತ್ರ ಸ್ಪರ್ಶಿಸಬೇಡಿ. ಅವರನ್ನು ಬಿಟ್ಟು ಬಿಡಿ. ನನ್ನ ಪ್ರಭಾವವು ಕೇವಲ ವೈಷ್ಣವ ಭಕ್ತರಲ್ಲದವರ ಮೇಲೆ ಮಾತ್ರ ಉಂಟಾಗುತ್ತದೆ."

ಎಂದು ಹೇಳುತ್ತಾನೆ.

ಸ್ವಪುರುಷಮಭಿವೀಕ್ಷ್ಯ ಪಾಶಹಸ್ತಂ ವದತಿ
ಯಮಃ ಕಿಲ ತಸ್ಯ ಕರ್ಣಮೂಲೇ |
ಪರಿಹರ ಮಧುಸೂದನ ಪ್ರಪನ್ನಾನ್ ಪ್ರಭುರಹ
ಮನ್ಯ ನೃಣಾಂ ನ ವೈಷ್ಣವಾನಾಮ್ || ನೃಸಿಂಹ ಪು. 9.1.11

ಧರ್ಮ ಹಾಗೂ ಪರಮಾತ್ಮ–ಇವರಿಬ್ಬರೂ ಒಂದೇ ತತ್ವ. ಯಮನು ಜೀವಿಗಳ ಕಲ್ಯಾಣಕ್ಕಾಗಿ, ಅವರುಗಳ ಧರ್ಮ–ಕರ್ಮಗಳ ನಿಯಮನಕ್ಕಾಗಿ, ಜೀವಿಗಳು ಸನ್ಮಾರ್ಗದಲ್ಲಿ, ಸದಾಚಾರದಲ್ಲಿ, ಮುಂದುವರೆಯುವುದಕ್ಕಾಗಿ ಸಿದ್ಧ ಗೊಳಿಸಿರುವ ಧರ್ಮ ಸಂಹಿತೆಗಳು 'ಯಮಸ್ಮೃತಿ' (ಯಾಮ್ಯ ಸಂಹಿತಾ) ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿವೆ.

ಯಮನ ಹೆಸರಿನಲ್ಲಿ ಯಮಸ್ಮೃತಿ, ಲಘು ಯಮಸ್ಮೃತಿ, ಬೃಹತ್ ಯಮಸ್ಮೃತಿ—ಎನ್ನುವ ಮೂರು ಸ್ಮೃತಿಗಳಿವೆ.

ಸ್ವತಃ ಧರ್ಮ ಸ್ವರೂಪನಾದ ಯಮನೇ ಈ ನೀತಿಗಳನ್ನು ತಿಳಿಸಿರುವುದ ರಿಂದ ಇವು ಹೆಚ್ಚು ಪ್ರಾಮಾಣಿಕವಾದವುಗಳಾಗಿವೆ.

ಈ ಮೂರು ಸ್ಮೃತಿಗಳಲ್ಲಿ ಪ್ರಾಯಶ್ಚಿತ್ತಕ್ಕೆ ಸಂಬಂಧಪಟ್ಟ ವಿವರಣೆಗಳಿವೆ. ಇದರೊಂದಿಗೆ ಶುದ್ಧಿ ತತ್ತ್ವದ ವಿವರಗಳೂ ಇವೆ. ಇವುಗಳಲ್ಲಿ ಅತ್ರಿ, ಶಾತಾ ತಪ ಹಾಗೂ ಉದ್ಧಾಲಕರ ಶ್ಲೋಕಗಳನ್ನು ಇವುಗಳಲ್ಲಿ ಸೇರಿಸಲಾಗಿದೆ. ಈ ಸ್ಮೃತಿಗಳಲ್ಲಿ ವಿವರಗಳನ್ನು ನಿಬಂಧಕಾರರು ವಿಶೇಷವಾಗಿ ಪ್ರಾಯಶ್ಚಿತ್ತ ಪ್ರಕರಣಗಳನ್ನು ಶ್ಲಾಘಿಸಿದ್ದಾರೆ.

## 1. ಯಮಸ್ಮೃತಿ

ಈ ಸ್ಮೃತಿಯಲ್ಲಿ 78 ಶ್ಲೋಕಗಳಿವೆ. ಇದರ ಪ್ರಾರಂಭದಲ್ಲಿ ನಾಲ್ಕು ವರ್ಣಗಳ ಪ್ರಾಯಶ್ಚಿತ್ತ ಧರ್ಮವನ್ನು ರೂಪಿಸಲಾಗಿದೆ.

ಅಥಾತೋ ಹ್ಯಸ್ಯ ಧರ್ಮಸ್ಯ ಪ್ರಾಯಶ್ಚಿತ್ತಾಭಿದಾಯಕಮ್ |
ಚತುರ್ಣಾಮಪಿ ವರ್ಣಾನಾಂ ಧರ್ಮಶಾಸ್ತ್ರಂ ಪ್ರವರ್ತತೇ || 1 ||

ಇದೇ ರೀತಿಯ ಪ್ರತಿಜ್ಞೆಯು ಉಳಿದೆರಡು ಸ್ಮೃತಿಗಳ ಪ್ರಾರಂಭದಲ್ಲೂ ಇದೆ. ಇದರಿಂದ ಈ ಮೂರೂ ಸ್ಮೃತಿಗಳಲ್ಲಿ ಪ್ರಾಯಶ್ಚಿತ್ತ ಹಾಗೂ ಪಾಪ ಶುದ್ಧಿಯ ವಿಧಾನಗಳೇ ಮುಖ್ಯ ವಿಷಯವಾಗಿವೆ ಎಂಬುದು ಸ್ಪಷ್ಟ ವಾಗುತ್ತದೆ.

### ಬಾಲಕರಿಗೆ ಪ್ರಾಯಶ್ಚಿತ್ತ ಬೇಡ

ಒಂದು ವಿಶೇಷ ಪರಾಮರ್ಶೆಯನ್ನು ನೀಡುತ್ತಾ ಪ್ರಾಯಶ್ಚಿತ್ತ ವಿಷಯ ವನ್ನು ಯಮನು ಹೀಗೆಂದು ತಿಳಿಸುತ್ತಾನೆ—ಐದರಿಂದ ಹತ್ತು ವರ್ಷದೊಳಗಣ ಬಾಲಕ–ಬಾಲಕಿಯರಿಂದ ಯಾವುದಾದರೂ ಪಾಪ ಕಾರ್ಯ ಉಂಟಾದಲ್ಲಿ ಸಾಮಾನ್ಯ ರೀತಿಯಲ್ಲಿ ಅಂತಹವರಿಗೆ ಶಿಕ್ಷೆ ನೀಡಬೇಕಾದುದೂ ಅಗತ್ಯವಾದರೂ, ವಿಶೇಷ ನಿಯಮಾನುಸಾರ ಇಂತಹ ಸಣ್ಣ ವಯಸ್ಸಿನವರಿಗೆ ಪ್ರಾಯಶ್ಚಿತ್ತವನ್ನು ನೀಡಬಾರದು. ಆ ಪ್ರಾಯಶ್ಚಿತ್ತವನ್ನು ಅವರ ಸೋದರ, ತಂದೆ ಅಥವಾ ಇತರೇ ಬಂಧು–ಬಾಂಧವರಿಂದ ಕೊಡಿಸಬೇಕಾಗುತ್ತದೆ.

ಊನೈಕಾದಶವರ್ಷಸ್ಯ ಪಂಚವರ್ಷಾತ್ ಪರಸ್ಯ ಚ |
ಪ್ರಾಯಶ್ಚಿತ್ತಂ ಚರೇದ್ ಭ್ರಾತಾ, ಪಿತಾ ವಾನ್ಯೋಽಪಿ ಬಾಂಧವಃ || 15 ||

## ಸಣ್ಣ ವಯಸ್ಸಿನವರಿಗೆ ಪಾಪ ತಗಲದು

ಐದು ವರ್ಷಕ್ಕಿಂತ ಕಡಿಮೆ ವಯಸ್ಸಿನವರಿಗೆ ಯಾವುದಾದರೂ ಪಾಪ ಕರ್ಮವನ್ನು ಮಾಡಿದ್ದೇ ಆದರೆ ಅಂತಹವರಿಗೆ ಯಾವುದೇ ಪಾಪವೂ ಅಂಟುವುದಿಲ್ಲ. ಆದುದರಿಂದ ಅಂತಹವರಿಗೆ ಶಿಕ್ಷೆಯನ್ನು ನೀಡಲಾಗುವುದಿಲ್ಲ. ಅವರಿಗೆ ಪಾಪ-ಪುಣ್ಯ, ಒಳ್ಳೆಯದು-ಕೆಟ್ಟದ್ದು, ತಮ್ಮದು-ಬೇರೆಯವರದ್ದು ಎನ್ನುವ ಭೇದದ ಜ್ಞಾನವಿರುವುದಿಲ್ಲ. ಅವರಿಗೆ ವಯೋ ಸಹಜವಾಗಿ ಆಟವಾಡಿದಂತಿರುತ್ತದೆ. ಎಲ್ಲವೂ ಆಟವೇ ಅವರಿಗೆ. ಅದರಿಂದ ಅವರಿಗೆ ಯಾವುದೇ ಅಪವಾದವೂ ಬರುವುದಿಲ್ಲ. ಯಾವುದೇ ಕಾನೂನು ಅವರಿಗೆ ಶಿಕ್ಷೆ ವಿಧಿಸಲಾರದು. ಇದಕ್ಕಾಗಿ ಅವರು ಯಾವುದೇ ಪ್ರಾಯಶ್ಚಿತ್ತವನ್ನೂ ಪಡೆಯುವಂತಿಲ್ಲ.

ಅತೋ ಬಾಲತರ ಸ್ಯಾಪಿ ನಾಪರಾಧೋ ನ ಪಾತಕರ್ಮ |
ರಾಜದಂಡೋ ನ ತಸ್ಯಾಸ್ತಿ ಪ್ರಾಯಶ್ಚಿತ್ತಂ ನ ವಿದ್ಯತೇ || 16 ||

## ಅರ್ಧ ಪ್ರಾಯಶ್ಚಿತ್ತ

80 ವರ್ಷಕ್ಕಿಂತ ಹೆಚ್ಚಿನ ವಯಸ್ಸಿನ ವೃದ್ಧರಿಗೆ, 16 ವರ್ಷಕ್ಕಿಂತ ಕಡಿಮೆ ವಯಸ್ಸಿನವರಿಗೆ, ಸ್ತ್ರೀ ಹಾಗೂ ರೋಗಿಷ್ಟರಿಗೆ ಅರ್ಧ ಪ್ರಾಯಶ್ಚಿತ್ತವನ್ನು ನೀಡುವುದರಿಂದ ಅವರು ಶುದ್ಧರಾಗುವರು. ಇಂತಹವರಿಗೆ ಪೂರ್ಣ ಪ್ರಾಯಶ್ಚಿತ್ತವನ್ನು ನಿಗದಿ ಮಾಡಿಲ್ಲ—

ಅಶೀತಿರ್ಯಸ್ಯ ವರ್ಷಾಣಿ ಬಾಲೋ ವಾಪ್ಯೂನ ಷೋಡಶಃ|
ಪ್ರಾಯಶ್ಚಿತ್ತಾರ್ಧಮರ್ಹಂತಿ ಸ್ತ್ರಿಯೋ ರೋಗಿಣ ಏವ ಚ || 17 ||

ಇವೇ ಮಾತುಗಳನ್ನು ಬೃಹತ್ ಯಮಸ್ಮೃತಿ (3/2–3)ಯಲ್ಲಿಯೂ ಬೇರೆ ಶ್ಲೋಕಗಳಲ್ಲಿಯೂ ತಿಳಿಸಲಾಗಿದೆ.

ಪ್ರಾಯಶ್ಚಿತ್ತದ ವಿಷಯದಲ್ಲಿ ವಿಶೇಷ ವಿಷಯಗಳನ್ನು ತಿಳಿಸಿದ ನಂತರ ಈ ಸ್ಮೃತಿಯಲ್ಲಿ ಅನೇಕ ರೀತಿಯ ಪ್ರಾಯಶ್ಚಿತ್ತದ ವಿಷಯಗಳನ್ನು ತಿಳಿಸಲಾಗಿದೆ.

ಇದೇ ರೀತಿಯಲ್ಲಿ ಅಸ್ಪೃಶ್ಯದ ಸ್ಪರ್ಶ ಸಂಬಂಧ, ಭಕ್ಷ್ಯಾ ಭಕ್ಷ್ಯಗಳು ಹಾಗೂ ಅಗಮ್ಯಾಗಮನ ಸಂಬಂಧ ಇತ್ಯಾದಿಗಳ ಅನೇಕ ವಿಧವಾದ ಪಾಪಗಳಿಗೆ ತಕ್ಕ ಪ್ರಾಯಶ್ಚಿತ್ತದ ವಿಧಾನಗಳನ್ನು ಕೂಡ ವರ್ಣಿಸಲಾಗಿದೆ.

## ಸಾಯಂಕಾಲದ ನಾಲ್ಕು ಕರ್ಮಗಳು

ಸಾಯಂಕಾಲದ ಸಮಯದಲ್ಲಿ ಊಟ, ಸ್ತ್ರೀ-ಸಂಗ, ನಿದ್ದೆ ಹಾಗೂ ಸ್ವಾಧ್ಯಾಯಗಳು—ಈ ನಾಲ್ಕು ಕರ್ಮಗಳನ್ನು ಮಾಡಬಾರದು. ಏಕೆಂದರೆ ಈ ಸಮಯದಲ್ಲಿ ಊಟ ಮಾಡುವುದರಿಂದ ಶರೀರದಲ್ಲಿ ರೋಗ ಉತ್ಪನ್ನವಾಗುತ್ತದೆ. ಸ್ತ್ರೀ-ಸಂಗ ಮಾಡುವುದರಿಂದ ಕ್ರೂರಿಗಳೂ, ರಾಕ್ಷಸ ಸಮಾನರೂ ಆದ ಸಂತಾನ ಉಂಟಾಗುವುದು. ಮಲಗುವುದರಿಂದ ಧನವು ಕ್ಷಯಿಸುವುದು. ಸ್ವಾಧ್ಯಾಯ ಮಾಡುವುದರಿಂದ ಸಾವು ಸಂಭವಿಸುತ್ತದೆ—

ಚತ್ವಾರಿ ಖಲು ಕರ್ಮಾಣಿ ಸಂಧ್ಯಾ ಕಾಲೇ ವಿವರ್ಜಯೇತ್ |
ಆಹಾರಂ ಮೈಥುನಂ ನಿದ್ರಾಂ ಸ್ವಾಧ್ಯಾಯಂ ಚ ಚತುರ್ಥಕಮ್
|| 76 ||

ಆಹಾ ರಾಜ್ಜಾಯತೇ ವ್ಯಾಧಿಃ ಕ್ರೂರಗರ್ಭಶ್ಚ ಮೈಥುನೆ |
ನಿದ್ರಾಶ್ರಿಯೋ ನಿವರ್ತಂತೇ ಸ್ವಾಧ್ಯಾಯೇ ಮರಣಮ್ ಧ್ರುವಮ್
|| 77 ||

## 2. ಲಘು ಯಮಸ್ಮೃತಿ

ಈ ಸ್ಮೃತಿಯಲ್ಲಿ 99 ಶ್ಲೋಕಗಳಿವೆ. ಇದರಲ್ಲಿಯೂ ಕೂಡ ಅನೇಕ ರೀತಿಯ ಪ್ರಾಯಶ್ಚಿತ್ತಗಳ ವರ್ಣನೆಗಳಿವೆ. ಇದರಲ್ಲಿ ಮುಖ್ಯವಾಗಿ ರಜಸ್ವಲೆಯ ಸ್ಪರ್ಶಾಸ್ಪರ್ಶ ವಿವೇಕ, ಅಭಕ್ಷ್ಯ ಭಕ್ಷ್ಯಣದ ಪ್ರಾಯಶ್ಚಿತ್ತ, ಅಗಮ್ಯಾಗಮನದ ಪ್ರಾಯಶ್ಚಿತ್ತ, ಗೋಹತ್ಯೆಯ ಪ್ರಾಯಶ್ಚಿತ್ತ. ಇಷ್ಟಾಪೂರ್ತಿಯ ಮಹಿಮೆ, ಪಂಚಗವ್ಯ ನಿರ್ಮಾಣದ ವಿಧಿ ಹಾಗೂ ಆಶೌಚ ಜನ್ಯದ ಅಶುದ್ಧಿ, ಶ್ರಾದ್ಧ ಹಾಗೂ ತರ್ಪಣದ ಮಹಿಮೆ, ಪಿಂಡ ದಾನದ ವಿಧಿ, ಹಾಗೂ ನಿತ್ಯ, ನೈಮಿತ್ತಿಕ, ಕಾಮ್ಯ, ವೃದ್ಧಿ ಹಾಗೂ ಪಾರ್ವಣ—

ಈ ಐದೂ ವಿಧಗಳ ಶ್ರಾದ್ಧಗಳ ವರ್ಣನೆ, ಅಸ್ಥಿ ಸಂಚಯನದ ವಿಧಿ, ಗಂಗೆಯಲ್ಲಿ ಅಸ್ಥಿ ವಿಸರ್ಜನೆಯ ಮಹಿಮೆ, ವೃಷೋತ್ಸಗಟ ಮಹಿಮೆ ಜಲಾಂಜಲಿ ನೀಡುವ ವಿಧಿಗಳನ್ನು ವರ್ಣಿಸಲಾಗಿದೆ. ಸಂಸ್ಕಾರ ಮಾಡದೆ ನೀರಿನಲ್ಲಿ ಅಥವಾ ಬೇರೆಡೆಗಳಲ್ಲಿ ಮರಣ ಹೊಂದಿದವರಿಗೆ, ಪಿತೃಗಳಿಗೆ ಜಲಾಂಜಲಿಯನ್ನು ನೀಡುವುದು ಅಗತ್ಯ ಎಂದು ಹೇಳಲಾಗುತ್ತದೆ. ಶ್ರಾದ್ಧಗಳಲ್ಲಿ ಹಾಗೂ ಹವನಗಳಲ್ಲಿ ಒಂದು ಕೈನಿಂದ ಹಾಗೂ ತರ್ಪಣದಲ್ಲಿ ಎರಡೂ ಕೈಗಳಿಂದ ಜಲಾಂಜಲಿ

ನೀಡಬೇಕು. ಇದೇ ಧರ್ಮ.

ದೇವತಾನಾಂ ಪಿತೃಣಾಂ ಚ ಜಲೇ ದದ್ಯಾಜ್ಜಲಾಂಜಲೀನ್ |
ಅಸಂಸ್ಕೃತ ಪ್ರಮೀತಾನಾಂ ಸ್ಥಲೇ ದದ್ಯಾಜ್ಜಲಾಂಜಲೀನ್ || 98 ||
ಶ್ರಾದ್ಧೇ ಹವನ ಕಾಲೇ ಚ ದದ್ಯಾದೇಕೇನ ಪಾಣಿನಾ |
ಉಭಾ ಭ್ಯಾಂ ತರ್ಪಣೇ ದದ್ಯಾದಿತಿ ಧರ್ಮೋ ವ್ಯವಸ್ಥಿತಃ || 99 ||

## ಇಷ್ಟಾ ಪೂರ್ತದ ಮಹಿಮೆ

ಯಜ್ಞ ಯಾಗಾದಿ ಕರ್ಮಗಳು 'ಇಷ್ಟ' ಎಂದು ಕರೆಯಲ್ಪಡುತ್ತದೆ. ಬಾವಿ ನಿರ್ಮಾಣ, ದೇವಾಲಯ ನಿರ್ಮಾಣ, ಔಷಧಾಲಯ ನಿರ್ಮಿಸುವುದು, ಅರವಟ್ಟಿಗೆಗಳ ಸ್ಥಾಪನೆ, ಉದ್ಯಾನವನಗಳ ನಿರ್ಮಾಣ ಹಾಗೂ ನೆರಳು ನೀಡುವ ವೃಕ್ಷಗಳು ಹಾಗೂ ಸಾಲು ಮರಗಳನ್ನು ನೆಡುವಿಕೆ—ಇತ್ಯಾದಿ ಪರೋಪಕಾರ ಕಾರ್ಯಗಳನ್ನು 'ಪೂರ್ತ' ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಇಷ್ಟ ಕರ್ಮಗಳಿಂದ ಸ್ವರ್ಗ ಹಾಗೂ ಪೂರ್ತ ಕರ್ಮಗಳಿಂದ ಮೋಕ್ಷವು ಪ್ರಾಪ್ತ ವಾಗುತ್ತದೆ.

ಇಷ್ಟೇನ ಲಭತೇ ಸ್ವರ್ಗಂ ಪೂರ್ತೇ ಮೋಕ್ಷಂ ಸಮಶ್ನೀತೆ || 68 ||

## ಮದುವೆ ನಂತರ ಹುಡುಗಿಯ ಗೋತ್ರ ಬದಲು

ಮದುವೆಗೆ ಮುಂಚೆ ಹುಡುಗಿಯು ತಂದೆಯ ಮನೆಯ ಗೋತ್ರವನ್ನು ಹೊಂದಿರುವಳು. ಹಾಗೆಯೇ ಅವಳು ಮಾಡುವ ಕರ್ಮಗಳೆಲ್ಲವೂ ತಂದೆಗೆ ಸಂಬಂಧಪಟ್ಟದ್ದಾಗಿರುತ್ತವೆ. ಆದರೆ ಮದುವೆ ಸಮಯದಲ್ಲಿ ಸಪ್ತಪದಿ ಆಚರಣೆಯ ನಂತರ ಆ ಹುಡುಗಿಯು ತನ್ನ ತಂದೆಯ ಗೋತ್ರದಿಂದ ದೂರ ವಾಗುವಳು. ನಂತರದಲ್ಲಿ ಅವಳ ಪತಿಯ ಗೋತ್ರವನ್ನು ಹೊಂದುವಳು. ಪಿಂಡ, ಗೋತ್ರ ಹಾಗೂ ಸೂತಕಗಳಲ್ಲಿ ಗಂಡನೊಂದಿಗೆ ಸಮಾನ ಸ್ಥಾನವನ್ನು ಹೊಂದಿರುತ್ತಾಳೆ.

ಸ್ವಗೋತ್ರಾದ್ ಭ್ರಶ್ಯತೇ ನಾರೀ ವಿವಾಹಾತ್ ಸಪ್ತಮೇ ಪದೇ |
ಸ್ವಾಮಿ ಗೋತ್ರೇಣ ಕರ್ತವ್ಯಾಸ್ತಸ್ಯಾಃ ಪಿಂಡೋದಕ ಕ್ರಿಯಾಃ ||98||
ವಿವಾಹೇ ಚೈವ ಸಂವೃತ್ತೇ ಚತುರ್ಥೇऽಹನಿ ರಾತ್ರಿಷು |
ಏಕತ್ವಂ ಸಾ ವ್ರಜೇದ್ ಭರ್ತುಃ ಪಿಂಡೇ ಗೋತ್ರೇ ಚ ಸೂತಕೇ ||99||

### ಗಂಗೆಯಲ್ಲಿ ಅಸ್ಥಿ ವಿಸರ್ಜನೆಯ ಮಹಿಮೆ

ಮೃತ ವ್ಯಕ್ತಿಯ ದಹನ ಸಂಸ್ಕಾರದ ನಂತರ ಯಥಾವಿಧಿ ಅಸ್ಥಿಗಳ ಸಂಚಯನ ಮಾಡಬೇಕಾಗಿದೆ. ಅವುಗಳನ್ನು ಯಥೋಚಿತ ರೀತಿಯಲ್ಲಿ ಗಂಗಾ ಇತ್ಯಾದಿ ಪವಿತ್ರ ನದಿಗಳಲ್ಲಿ ಹರಿಯಿಸಿಬಿಡಬೇಕೆಂದು ಶಾಸ್ತ್ರಗಳು ತಿಳಿಸುತ್ತವೆ. ಹೀಗೆ ಮಾಡುವುದರಿಂದ, ಎದುವರೆವಿಗೂ ಅಸ್ಥಿಗಳು ಗಂಗಾ ನದಿಯಲ್ಲಿ ಇರುತ್ತವೆಯೋ, ಅಷ್ಟು ವರ್ಷಗಳವರೆಗೆ ಆ ವ್ಯಕ್ತಿಯು ಸ್ವರ್ಗಲೋಕದಲ್ಲಿ ನಿರ್ವಸಿಸಿರುತಾನೆ. ಅವನು ದುಃಖಭರಿತ ಈ ನಶ್ವರ ಲೋಕಕ್ಕೆ ಹಿಂತಿರುಗಿ ಬರುವುದಿಲ್ಲ. ಅವನು ಮುಕ್ತನಾಗುವನು—

ಗಂಗಾ ತೋಯೇಷು ಯಸ್ಯಾಸ್ಥಿ ಪ್ಲವತೇ ಶುಭಕರ್ಮಣಃ |
ನ ತಸ್ಯ ಪುನರಾವೃತ್ತಿ ರ್ಬ್ರಹ್ಮಲೋಕಾತ್ ಕಥಂಚನ || 90 ||
ಯಾವದಸ್ಥಿ ಮನುಷ್ಯಾಣಾಂ ಗಂಗಾತೋಯೇಷು ತಿಷ್ಠತಿ |
ತಾವದ್ವರ್ಷ ಸಹಸ್ರಾಣಿ ಸ್ವರ್ಗ ಲೋಕೇ ಮಹೀಯತೇ || 91 ||

### 3. ಬೃಹದ್ ಯಮಸ್ಮೃತಿ

ಇದರಲ್ಲಿ 182 ಶ್ಲೋಕಗಳಿವೆ. ಹಿಂದಿನ ಎರಡು ಸ್ಮೃತಿಗಳಂತೆ ಇದರಲ್ಲೂ ನಾಲ್ಕೂ ವರ್ಣಗಳ ಪ್ರಾಯಶ್ಚಿತ್ತದ ವರ್ಣನೆಗಳಿವೆ.

### ಆತ್ಮಹತ್ಯೆ ಮಹಾಪಾಪ

ಆತ್ಮಹತ್ಯೆ ಮಹಾಪಾಪವೆಂದು ಈ ಸ್ಮೃತಿಯೇ ಅಲ್ಲದೆ ಯಮಸ್ಮೃತಿ (ಶ್ಲೋಕ 2–3) ಮತ್ತು ಲಘು ಯಮಸ್ಮೃತಿ (ಶ್ಲೋಕ 22–23)ಗಳೂ ತಿಳಿಸುತ್ತವೆ. ಇದರಿಂದ ನರಕ ಪ್ರಾಪ್ತಿಯಾಗುತ್ತದೆ. ಆತ್ಮಹತ್ಯೆ ಮಾಡಿಕೊಳ್ಳುವವರು ಅಕಸ್ಮಾತ್ತಾಗಿ ಬದುಕಿ ಉಳಿದರೆ ಅಂತಹವರನ್ನು 'ಪ್ರತ್ಯವಸಿತ' ಎಂದು ಕರೆಯಲಾಗುತ್ತದೆ. ಅಂತಹವರು ಬಹಿಸ್ಕೃತರಾಗಲು ಯೋಗ್ಯರು. ಇಂತಹವರನ್ನು ಚಾಂದ್ರಾಯಣ ವ್ರತ ಹಾಗೂ ತಪ್ತಕೃಚ್ಛ ವ್ರತಗಳಿಂದ ಶುದ್ಧೀಕರಿಸಬಹುದು. (ಬೃಹದ್ ಯಮ 1/3–4).

### ಧರ್ಮಶಾಸ್ತ್ರವರಿಯದೆ ಪ್ರಾಯಶ್ಚಿತ್ತ ಸರಿಯಲ್ಲ

ಧರ್ಮದ ಸರಿಯಾದ ಅರ್ಥವನ್ನು ತಿಳಿದುಕೊಂಡ ನಂತರವೇ ವಿದ್ವಾಂಸರು ಧರ್ಮಾಧರ್ಮ ಹಾಗೂ ಕರ್ತವ್ಯಾಕರ್ತವ್ಯದ ತೀರ್ಮಾನಗಳನ್ನು ಮಾಡಬೇಕು. ಧರ್ಮಶಾಸ್ತ್ರ ಜ್ಞಾನವಿಲ್ಲದೆ ತನಗೆ ಇಷ್ಟಬಂದ ಹಾಗೆ ಪ್ರಾಯಶ್ಚಿತ್ತ

ವಿಧಿಗಳನ್ನು ತಿಳಿಸುವುದು ತಪ್ಪು. ಪ್ರಾಯಶ್ಚಿತ್ತ ಪಡೆದವನು ಹೇಗೋ ಶುದ್ಧನಾಗಬಹುದು. ಆದರೆ ಇದರಿಂದ ಉಂಟಾಗುವ ಪಾಪವು ವಿಧಿಗಳನ್ನು ತಿಳಿಸಿದ ಅಜ್ಞಾನಿಗೆ ಸುತ್ತಿಕೊಳ್ಳುತ್ತದೆ. ಅಥವಾ ತೀರ್ಪು ನೀಡಿದ ಧರ್ಮ ಸಭೆಗೆ ಅಂಟಿಕೊಳ್ಳುತ್ತದೆ. ಆದುದರಿಂದ ಶಾಸ್ತ್ರಗಳಲ್ಲಿ ತಿಳಿಸಿರುವ ನಿಯಮಗಳ ಅನುಸಾರ ಪ್ರಾಯಶ್ಚಿತ್ತ ವಿಧಾನಗಳನ್ನು ತೀರ್ಮಾನಿಸಬೇಕು—

ಅಜ್ಞಾತ್ವಾ ಧರ್ಮ ಶಾಸ್ತ್ರಾಣಿ ಪ್ರಾಯಶ್ಚಿತ್ತಂ ದದಾತಿ ಯಃ |
ಪ್ರಾಯಶ್ಚಿತ್ತೀ ಭವೇತ್ ಪೂತಸ್ತತ್ಪಾಪಂ ಪರ್ಷದಂ ವ್ರಜೇತ್ ||29||
ತಸ್ಮಾಚ್ಛಾಸ್ತ್ರಾನುಸಾರೇಣ ಪ್ರಾಯಶ್ಚಿತ್ತಂ ವಿಧೀಯತೇ || 30 ||

## ಸಂಧ್ಯಾವಂದನದಿಂದ ಮೂರು ಪಾಪಗಳ ಶುದ್ಧಿ

ಪಾಪಗಳಲ್ಲಿ ಕಾಯಿಕ (ಶರೀರ), ವಾಚಿಕ (ಮಾತು) ಹಾಗೂ ಮಾನಸಿಕ (ಮನಸ್ಸು) ಎನ್ನುವ ಮೂರು ರೀತಿಯ ಪಾಪಗಳಿವೆ. ಶ್ರದ್ಧಾಪೂರ್ವಕ ತ್ರಿಕಾಲ ಸಂಧ್ಯಾವಂದನೆ ಹಾಗೂ ಗಾಯಿತ್ರೀ ಉಪಾಸನೆಯಿಂದ ಈ ಮೂರು ಪಾಪಗಳು ನಷ್ಟವಾಗುತ್ತವೆ ಎಂದು ಯಮಧರ್ಮನು ಹೇಳುತ್ತಾನೆ. ಆದುದರಿಂದ ಈ ತ್ರಿವಿಧಾ ಪಾಪಗಳ ಶುದ್ಧಿಗಾಗಿ ತ್ರಿಕಾಲ ಸಂಧ್ಯಾವಂದನೆಯನ್ನು ಮಾಡಬೇಕಾದುದು ಅಗತ್ಯ—

ಮಾನಸಂ ವಾಚಿಕಂ ಚೈವ ಕಾಯಿಕಂ ಪಾತಕಂ ಸ್ಮೃತಮ್ |
ತಸ್ಮಾತ್ ಪಾಪಾದ್ವಿಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ದಿನೇ ದಿನೇ ||
ತ್ರಿವಿಧಂ ಪಾಪಶುದ್ಧ್ಯರ್ಥಂ ಸಂಧ್ಯೋಪಾಸನ ಮೇವ ಚ |
(ಬೃಹದ್ ಯಮ 4/49, 51)

## ಸಫಲ, ನಿಷ್ಫಲ ದಾನಗಳು

ವಿದ್ಯೆ ಹಾಗೂ ತಪಸ್ಸಿನಿಂದ ಸಂಪನ್ನನಾಗಿ ಪವಿತ್ರನಾಗಿರುವ ವಿಷಯ ಲೋಲುಪನಲ್ಲದ, ಲೋಭಿಯಲ್ಲದ, ಪಾಪವರಿಯದ, ಸದಾ ಪ್ರಸನ್ನನಾಗಿರುವ ಬ್ರಾಹ್ಮಣನು ನಿಸ್ಸಂಶಯವಾಗಿ ಸಾಕ್ಷಾತ್ ದೇವತೆಯಾಗಿರುವನು. ಇಂತಹವನು ಸತ್ಪಾತ್ರನಾಗಿದ್ದು, ಯೋಗ್ಯ ಅಧಿಕಾರಿಯಾಗಿದ್ದು, ಇಂತಹವನಿಗೆ ನೀಡುವ ದಾನವು ಅನಂತವೂ, ಅಕ್ಷಯವಾದುದೂ, ಸಫಲವಾದುದೂ ಆಗಿರುತ್ತದೆ—

ತೇಭ್ಯೋ ದತ್ತಮನಂತಂ ಹಿ ಇತ್ಯಾಹ ಭಗವಾನ್ ಯಮಃ |
(ಬೃಹದ್ ಯಮ 4/55)

ಇದಕ್ಕೆ ವ್ಯತಿರೇಕವಾದುದೂ ಇದೆ. ಈ ಕರ್ಮಗಳಲ್ಲಿ ನಿರತನಾಗಿರುವವನು, ಲೋಭಿಯೂ, ವೇದ ಜ್ಞಾನವಿಲ್ಲದವನು, ಸಂಧ್ಯಾವಂದನಾದಿಗಳನ್ನು ಮಾಡದಿರುವವನು, ವ್ರತಭ್ರಷ್ಟನೂ, ವಿಷಯಲೋಲಪನೂ ಆದ ಬ್ರಾಹ್ಮಣನು ಹೆಸರಿಗೆ ಮಾತ್ರ ಬ್ರಾಹ್ಮಣನಾಗಿರುವನು. ಇಂತಹವನು ದಾನ ಸ್ವೀಕರಿಸಲು ಅಯೋಗ್ಯನು, ಅಯೋಗ್ಯನು ಹಾಗೂ ಅಧಿಕಾರವಿಲ್ಲದವನೂ ಆಗಿರುವನು. ಇಂತಹವನಿಗೆ ದಾನವನ್ನೇ ಕೊಡಬಾರದು. ಇಂತಹವನಿಗೆ ನೀಡುವ ದಾನವು ನಿಷ್ಫಲವಾದುದು. ಇದರಲ್ಲಿ ಅನುಮಾನವೇ ಇಲ್ಲ—

ತೇಭ್ಯೋ ದತ್ತಂ ನಿಷ್ಫಲಂ ಸ್ಯಾತ್ತಾತ್ರ ಕಾರ್ಯಾ ವಿಚಾರಣ ||

(ಬೃಹದ್ ಯಮ 4/56)

## ಅಜ್ಞಾನದಿಂದಾದ ಕಾರ್ಯದ ಅಶೌಚತೆ

ಜನನಾ ಶೌಚ ಅಥವಾ ಮರಣಾ ಶೌಚಗಳ ಕರ್ತೃವು ಮನೆಯಿಂದ ದೂರ ವಿದೇಶದಲ್ಲಿದ್ದಲ್ಲಿ, ಅಶೌಚದ ವಿಚಾರ ಆವನಿಗೆ ತಿಳಿಯದೆ ಇದ್ದಲ್ಲಿ ಇವುಗಳ ಅರಿವಿಲ್ಲದ ಆ ವ್ಯಕ್ತಿಯು ಮಾಡುವ ದೇವಕಾರ್ಯ, ಪಿತೃ-ಕಾರ್ಯಗಳು ಸಫಲವಾದ ಕಾರ್ಯವಾಗಿರುತ್ತವೆ. ಅದಕ್ಕೆ ಅಶೌಚದ ದೋಷ ತಗಲುವುದಿಲ್ಲ. ಕಾರಣ ಅಂತಹವನಿಗೆ ಅಶೌಚದ ವಿಷಯ ತಿಳಿದಿರುವುದಿಲ್ಲ—

ಅಜ್ಞಾನಾಚ್ಚ ಕೃತಂ ಸರ್ವಂ ದೈವಿಕಂ ಪೈತೃಕಂ ಚ ಯತ್ |
ಜಾತಕೆ ಮೃತಕೆ ವಾಪಿ ತತ್ಸರ್ವಂ ಸಫಲಂ ಭವೇತ್ ||

(ಬೃಹದ್ ಯಮ 5/12)

## ಅನೇಕ ಪುತ್ರರಿದ್ದಾಗ ಶ್ರಾದ್ಧದ ವ್ಯವಸ್ಥೆ

ಓರ್ವ ವ್ಯಕ್ತಿಗೆ ಅನೇಕ ಮಕ್ಕಳಿದ್ದರೆ ದೇವ–ಪಿತೃ ಕಾರ್ಯಗಳನ್ನು ಹೇಗೆ ಮಾಡಬೇಕೆಂಬುದರ ಬಗ್ಗೆ ಯಮನು ಸೂಚನೆ ನೀಡುತ್ತಾನೆ. ತಂದೆಯು ಅನೇಕ ಮಕ್ಕಳು ಆಸ್ತಿ ವಿಭಾಗ ಮಾಡಿಕೊಳ್ಳದೆ ಸಮಿಷ್ಟಿ ಕುಟುಂಬದಲ್ಲಿದ್ದಾಗ ತಂದೆಯು ಶ್ರಾದ್ಧಾದಿ ಪಿತೃ ಕಾರ್ಯಗಳನ್ನು ಅಗ್ನಿಹೋತ್ರಾದಿ ವೈದಿಕ ಕಾರ್ಯಗಳನ್ನು ಜ್ಯೇಷ್ಠ ಪುತ್ರನೇ ಮಾಡುವುದು ಸೂಕ್ತ. ಅದು ಸಫಲವಾದುದಾಗುತ್ತದೆ. ಒಂದೇ ಸೂರಿನಡಿಯಲ್ಲಿದ್ದಾಗ ಬೇರೆ ಬೇರೆಯಾದ ಪಿಂಡದಾನ, ಶ್ರಾದ್ಧ ಹಾಗೂ ವೈಶ್ಯೇ ದೇವ ಕರ್ಮಗಳನ್ನು ಮಾಡಬಾರದು—

ಭ್ರಾತರಶ್ಚ ಪೃಥಕ್ ಕುರ್ಯುರ್ನಾ ವಿಭಕ್ತಾಃ ಕದಾಚನ ||

(ಬೃಹದ್ ಯಮ 5/19)

ಈ ಅಣ್ಣ ತಮ್ಮಂದಿರ ಪಿತ್ರಾರ್ಜಿತ ಆಸ್ತಿಯನ್ನು ವಿಭಾಗ ಮಾಡಿಕೊಂಡು, ಬೇರೆ ಬೇರೆಯಾಗಿ (ಬೇರೆ ಬೇರೆ ಊರುಗಳಲ್ಲಿದ್ದಾಗ) ಅವರುಗಳು ಬೇರೆ ಬೇರೆಯಾಗಿಯೇ ಶ್ರಾದ್ಧ ಕರ್ಮಗಳನ್ನು ಮಾಡಿಕೊಳ್ಳಬಹುದು.

ಯಾವತೋ ಗ್ರಸತೆ ಗ್ರಾಸಾಗ್ ಹವ್ಯಕವ್ಯೇಷು ಮಂತ್ರವಿತ್ |

ತಾವತೋ ಗ್ರಸತೇ ಪಿಂಡಾನ್ ಶರೀರ ಬ್ರಾಹ್ಮಣಃ ಪಿತಾ || 40 ||

ಯಮಸ್ಮೃತಿಯಲ್ಲಿ ತಿಳಿಸಿರುವ ಈ ಶ್ಲೋಕವು ಪಿತೃಗಳ ಹವ್ಯ-ಕವ್ಯಗಳ ವಿತರಣೆಯು ಯಮನಿಗೆ ಸೇರಿದ್ದೆಂದು ತಿಳಿಸುತ್ತದೆ. ಶ್ರಾದ್ಧದ ದಿನ ಬ್ರಾಹ್ಮಣಾರ್ಥಕ್ಕಾಗಿ ಇರುವ ಬ್ರಾಹ್ಮಣನಲ್ಲಿ ಪಿತೃ ದೇವತೆಗಳು ಆವಾಹಿತರಾಗುವರು. ಆದರಿಂದ ಅವರುಗಳು ಎಷ್ಟು ಊಟ ಮಾಡುವರೊ ಅಷ್ಟೂನೂ ಆ ಪಿತೃಗಳಿಗೆ ಸೇರುತ್ತದೆ. ಈ ಕಾರ್ಯದ ನಿರ್ವಹಣೆಯು ಯಮಧರ್ಮರಾಜನದ್ದು.

## 25. ದೇವಲಸ್ಮೃತಿ

ಮಹರ್ಷಿ ದೇವಲನು ಪ್ರಾಚೀನ ಧರ್ಮಶಾಸ್ತ್ರಕಾರರಲ್ಲಿ ಒಬ್ಬನು. ಪುರಾಣಗಳಲ್ಲಿ ಈತನ ವಿಚಾರ ಸಂಕ್ಷಿಪ್ತವಾಗಿ ಕಾಣಿಸಿಕೊಂಡಿದೆ. ಇದು ಈತನ ಉದಾತ್ತ ಚರಿತ್ರೆಯನ್ನು ಸೃಷ್ಟಿಸುತ್ತದೆ. ಈತನು ಋಗ್ವೇದದ ಮಂತ್ರದ್ರಷ್ಟಾರನೂ ಹೌದು. ಋಗ್ವೇದದ 9ನೇ ಪವಮಾನ-ಮಂಡಲದಲ್ಲಿ ಈತನು ರಚಿಸಿರುವ ಸೂಕ್ತಿಗಳು ಕಂಡು ಬಂದಿವೆ. ಈತನು ಮಹಾನ್ ತಪಸ್ವಿ ಹಾಗೂ ಯೋಗಾಚಾರ್ಯನೆಂದು ಕರೆಯಲಾಗಿದೆ.

ನಾಮ್ನಾ ಮೈ ದೇವಲಃ ಪುತ್ರೋ ಯೋಗಾಚಾರ್ಯೋ ಮಹಾತಪಾಃ ||

(ಕೂರ್ಮ ಪುರಾಣ 19/5)

ಈತನು ಭಗವಾನ್ ಶಂಕರನನ್ನು ಪೂಜಿಸಿ ಸಿದ್ಧಿಯನ್ನು ಪಡೆದಿದ್ದನು. ಈತನನ್ನು ವೇದ ವ್ಯಾಸನ ಶಿಷ್ಯನೆಂದೂ ಹೇಳಲಾಗುತ್ತದೆ.

ಬ್ರಹ್ಮಾಂಡ ಪುರಾಣದಲ್ಲಿ ಹೇಳಿರುವಂತೆ ಹಿಮವಂತನ ಪತ್ನಿ ಮೇನಾಗೆ ಅಪರ್ಣಾ, ಏಕಪರ್ಣಾ ಮತ್ತು ಏಕಪಾಟಲಾ ಎನ್ನುವ ಮೂವರು ಹೆಣ್ಣು ಮಕ್ಕಳು ಇದ್ದರು. ಇವರಲ್ಲಿ ಅಪರ್ಣಾಳೆ ಜಗಜ್ಜನನಿ ಪಾರ್ವತಿ (ಉಮಾ).

ಈ ಮೂವರೂ ಮಹಾನ್ ತಪಸ್ವಿಗಳು, ಬ್ರಹ್ಮವಾದಿನಿಯರು, ಯೋಗಶಕ್ತಿಯನ್ನು ಹೊಂದಿರುವವರೂ ಆಗಿದ್ದರು. ಇವರಲ್ಲಿ ಏಕಪರ್ಣಾ (ಏಕ ಪಾಟಲ) ಗಳನ್ನು ಕಶ್ಯಪ ಪುತ್ರನಾದ ಅಸಿತನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಇವರಿಬ್ಬರ ಮಗನೇ ದೇವಲನು. ಈ ಪುತ್ರನು ಬ್ರಹ್ಮಿಷ್ಠನೂ, ದಿವ್ಯ–ಯೋಗ–ಜ್ಞಾನಗಳನ್ನು ಹೊಂದಿರುವವನೂ ಆಗಿದ್ದನು. ಈತನು ಶಾಂಡಿಲ್ಯರಲ್ಲಿ ಅತ್ಯಂತ ಶ್ರೇಷ್ಠನೆಂದು ಹೇಳಲಾಗುತ್ತದೆ.

ಅಸಿತಸ್ಯೈಕಪರ್ಣಾತು ಪತ್ನಿ ಸಾಧ್ವೀ ಪತಿವ್ರತಾ ||
ದತ್ತಾ ಹಿಮವತಾ ತಸ್ಮೈ ಯೋಗಾಚಾರ್ಯಾಯ ಧೀಮತೇ |
ದೇವಲಂ ಸುಷುವೇ ಸಾ ತು ಬ್ರಹ್ಮಿಷ್ಠಂ ಜ್ಞಾನ ಸಂಯುತಾ ||
(ಬ್ರಹ್ಮಾಂಡ ಪು. 3–10–18–19)

ಅಸಿತಸ್ಯೈಕಪರ್ಣಾಯಾಂ ಬ್ರಹ್ಮಿಷ್ಠಃ ಸಮಪದ್ಯತ |
ಶಾಂಡಿಲ್ಯಾನಾಂ ವರಃ ಶ್ರೀಮಾನ್ ದೇವಲಃ ಸುಮಹಾಯಶಾಃ ||
(ಬ್ರಹ್ಮಾಂಡ ಪು. 3–8–32)

ಭಗವತ್ ತತ್ತ್ವವನ್ನು ಅರಿತ ಮಹರ್ಷಿಯರಲ್ಲಿ ಅಸಿತ ಹಾಗೂ ದೇವಲರನ್ನು ತುಂಬಾ ಗೌರವದಿಂದ ಭಗವದ್ಗೀತೆಯಲ್ಲಿ ಕಾಣಲಾಗಿದೆ. (10–13)

ಈ ದೇವಲನು ಬರೆದಿರುವ ಒಂದು ಚಿಕ್ಕ ಸ್ಮೃತಿಯು ದೊರೆತಿದೆ. ಯಾಜ್ಞವಲ್ಕ್ಯ ಸ್ಮೃತಿಯ ಟೀಕೆಗಳಾದ ಮಿತಾಕ್ಷರ, ಅಪರಾರ್ಕ ಹಾಗೂ ಸ್ಮೃತಿ ಚಂದ್ರಿಕಾ-ನಿಬಂಧ ಗ್ರಂಥಗಳಲ್ಲಿ ದೊರೆಯುವ ದೇವಲರದ್ದು ಎನ್ನುವ ಗದ್ಯ ಪದ್ಯಾಂಶಗಳು ಮೇಲೆ ತಿಳಿಸಿರುವ ಗ್ರಂಥದಲ್ಲಿ ದೊರೆಯುವುದಿಲ್ಲ.

ಆಚಾರ, ವ್ಯವಹಾರ, ಶ್ರಾದ್ಧ, ಪ್ರಾಯಶ್ಚಿತ್ತ, ಆಸ್ತಿ–ವಿಭಜನೆ ಉಯಿಲು, ಸ್ತ್ರೀಧನ ಇತ್ಯಾದಿ ವಿಷಯಗಳ ಬಗ್ಗೆ ಈತನದ್ದೆಂದು ಹೇಳಲಾಗುವ ಕೆಲವೊಂದು ವಚನಗಳು ದೊರೆತಿವೆ. ಮಹಾಭಾರತದಲ್ಲಿಯೂ ಕೂಡ ದೇವಲನದೆಂದು ಹೇಳಲಾಗುವ ಕೆಲವು ಧರ್ಮಶಾಸ್ತ್ರ ವಿಷಯಗಳು ಕಂಡುಬರುತ್ತವೆ. ಇದರಿಂದ ಹಿಂದೊಮ್ಮೆ 'ದೇವಲಸ್ಮೃತಿ' ಎನ್ನುವ ಹೆಸರಿನ ಒಂದು ಬೃಹತ್ ಗ್ರಂಥ ವಿದ್ದಿರಬಹುದೆಂದೂ, ಕಾಲಾನುಕ್ರಮದಲ್ಲಿ ಇದರ ಅನೇಕ ಭಾಗಗಳು ಕಾಣದಾಗಿ, ಈಗಿನ ಅಲ್ಪ ಪ್ರಮಾಣದ ಗ್ರಂಥ ಉಳಿದಿರಬಹುದೆಂದೂ

ಊಹಿಸಲಾಗಿದೆ.

ಈಗ ದೊರತಿರುವ ದೇವಲನದ್ದೆಂದು ಹೇಳಲಾಗುವ ಸ್ಮೃತಿಯಲ್ಲಿ ಸುಮಾರು 90 ಶ್ಲೋಕಗಳಿವೆ. ಇದರಲ್ಲಿ ಮುಖ್ಯವಾಗಿ ಜಾತಿ ಶುದ್ಧಿ, ದೇಹ ಶುದ್ಧಿ ಪ್ರಕರಣಗಳ ಬಗ್ಗೆ ವಿಶೇಷ ರೂಪದ ಚರ್ಚೆಗಳಿವೆ. ಚಾಂದ್ರಾಯಣಾದಿ ಪ್ರಾಯಶ್ಚಿತ್ತ ವ್ರತಗಳ ವರ್ಣನೆಯೂ ಇದರಲ್ಲಿದೆ. ಇವುಗಳಲ್ಲಿ ಮುಖ್ಯತಃ ಪಂಚಗವ್ಯದ ವಿಶೇಷತೆಯನ್ನು ಮುಖ್ಯವಾಗಿ ವಿವರಿಸಲಾಗಿದೆ. ಗೋಮೂತ್ರ ದಲ್ಲಿ ವರುಣ ದೇವತೆ, ಸಗಣಿಯಲ್ಲಿ ಅಗ್ನಿದೇವ, ಹಾಲಿನಲ್ಲಿ ಸೋಮದೇವತೆ, ಮೊಸರಿನಲ್ಲಿ ವಾಯುದೇವ, ತುಪ್ಪದಲ್ಲಿ ಸೂರ್ಯದೇವನಿದ್ದಾನೆ. ಪಂಚಗವ್ಯ ದಲ್ಲಿ ಯಾವ ಯಾವ ಬಣ್ಣದ ಹಸುವಿನ ಹಾಲನ್ನು ಮಿಶ್ರ ಮಾಡಬೇಕು ಎಂಬುದರ ನಿರ್ದೇಶವಿದೆ. ತಾಮ್ರ ವರ್ಣದ ಗೋಮೂತ್ರ, ಬಿಳಿಪು ಬಣ್ಣದ ಹಸುವಿನ ಸಗಣಿ. ಚಿನ್ನದ ಬಣ್ಣದ ಹಸುವಿನ ಹಾಲು, ಸ್ವಲ್ಪ ನೀಲವರ್ಣ ದ್ದಾಗಿರುವ ಹಸುವಿನ ಮೊಸರು ಹಾಗೂ ಕಪ್ಪು ಬಣ್ಣದ ಹಸುವಿನ ತುಪ್ಪವನ್ನು ಪಂಚಗವ್ಯಕ್ಕೆ ಉಪಯೋಗಿಸಬೇಕು—

ವರುಣೋ ದೇವತಾ ಮೂತ್ರೇ ಗೋಮಯೇ ಹವ್ಯವಾಹನಃ।
ಸೋಮಃ ಕ್ಷೀರೇ ದಧ್ನಿ ವಾಯುರ್ಘೃತೇ ರವಿರುದಾಹೃತಃ ॥ 62 ॥
ಗೋಮೂತ್ರಂ ತಾಮ್ರ ವರ್ಣಾಯಾಃ ಶ್ವೇತಾಯಾಶ್ಚೈವ ಗೋಮಯಂ ।
ಪಯಃ ಕಾಂಚನ ವರ್ಣಾಯಾಃ ನೀಲಾಯಾಶ್ಚಾಪಿ ಗೋರ್ದಧಿ ॥ 63 ॥
ಘೃತಂ ವೈ ಕೃಷ್ಣವರ್ಣಾಯಾಃ ॥ 64 ॥

ಯಥೋಕ್ತ ವಿಧಿಯಲ್ಲಿ, ಯಥೋಕ್ತ ರೀತಿಯಲ್ಲಿ ಪಂಚಗವ್ಯದ ನಿರ್ಮಾಣ ಮಾಡಿ, ಅದನ್ನು ಕುಡಿಯುವುದರಿಂದ, ವ್ಯಕ್ತಿಯಲ್ಲಿರುವ ಅಲ್ಪ ಸ್ವಲ್ಪ ದುಷ್ಕೃತ ಕರ್ಮಗಳು, ಪಾಪ ಕರ್ಮಗಳು ನಾಶವಾಗುತ್ತವೆ ಎಂದು ದೇವಲನು ತಿಳಿಸುತ್ತಾನೆ. ಇದರ ಮುಖಾಂತರ ಮಾನವನು ಶುದ್ಧಗೊಳ್ಳುತ್ತಾನೆ ಎಂದೆನುತ್ತಾನೆ—

ಉದರಂ ಪ್ರವಿಶೇದ್ಯಸ್ಯ ಪಂಚಗವ್ಯಂ ವಿಧಾನತಃ ॥ 79 ॥
ಯತ್ಕಿಂಚಿದ್ದುಷ್ಕೃತಂ ತಸ್ಯ ಸರ್ವಂ ನಶ್ಯತಿ ದೇಹಿನಃ ॥ 80 ॥

ಪಾಪಿಗಳಾದವರ ಸಂಗ, ಸ್ನೇಹಗಳನ್ನು ಮಾಡಬಾರದು ಎಂದು ದೇವಲನು ಎಚ್ಚರಿಸುತ್ತಾನೆ. ಹೀಗೆ ಮಾಡುವುದರಿಂದ ಆ ಪಾಪಿಯ ಪಾಪದ ಸ್ವಲ್ಪ ಭಾಗ ಈ ವ್ಯಕ್ತಿಯನ್ನು ಆಕ್ರಮಿಸುತ್ತದೆ. ಯಾವ ರೀತಿಯೆಂದರೆ-ಪಾಪಿಯೊಂದಿಗೆ ಮಾತುಕತೆಯಾಡುವುದರಿಂದ, ಅವನನ್ನು ಸ್ಪರ್ಶಿಸುವುದರಿಂದ, ಅವನ ಉಸಿರಾಟ ತಗಲುವುದರಿಂದ ಅವನೊಂದಿಗೆ ನಡೆದಾಡುವುದರಿಂದ, ಕುಳಿತುಕೊಳ್ಳುವುದರಿಂದ, ಅವನೊಂದಿಗೆ ಊಟ ಮಾಡುವುದರಿಂದ, ಅಂತಹವನಿಗೆ ವಿದ್ಯೆ ಕಲಿಸುವುದರಿಂದ, ಅಂತಹರೊಂದಿಗೆ ಶಾರೀರಿಕ ಸಂಬಂಧವನ್ನು ಹೊಂದುವುದರಿಂದ ಆ ಪಾಪಿಯ ಪಾಪವನ್ನು ಅವನೊಂದಿಗೆ ಕಲೆತ ನಾವೂ ಪಡೆದಂತಾಗುತ್ತದೆ.

ಸಂಲಾಪ ಸ್ಪರ್ಶನಿಃ ಶ್ವಾಸ ಸಹಯಾನಾಸನಾ ಶನಾತ್ |
ಯಾಜನಾಧ್ಯಾಪನಾದ್ಯೌನಾತ್ ಪಾಪಂ ಸಂಕ್ರಮತೆ ನೃಣಾಮ್ ||
|| 33 ||

# 26. ವಿಶ್ವಾಮಿತ್ರ ಸ್ಮೃತಿ

ಮಹರ್ಷಿ ವಿಶ್ವಾಮಿತ್ರನು ಅತ್ಯಂತ ಜನಪ್ರಿಯನಾದ ಮಹಾ ಮಹಿಮನು. ರಾಮಾಯಣ, ಪುರಾಣಗಳಲ್ಲಿ ಈತನನ್ನು ಕುರಿತಾದ ಅನೇಕ ಕಥಾನಕಗಳಿವೆ. ವಶಿಷ್ಟ-ವಿಶ್ವಾಮಿತ್ರರ ಘರ್ಷಣಾ ಪ್ರಸಂಗ, ಸತ್ಯ ಹರಿಶ್ಚಂದ್ರನ ಜೀವನದಲ್ಲಿ ಪ್ರವೇಶ ಪಡೆದ ಕೋಪಿಷ್ಠ-ಹಠವಾದಿ ವಿಶ್ವಾಮಿತ್ರ, ರಾಮ-ಲಕ್ಷ್ಮಣರನ್ನು ಕರೆದೊಯ್ದು ಅವರಿಗೆ ಶಸ್ತ್ರಾಸ್ತ್ರಗಳ ಶಿಕ್ಷಣ ನೀಡಿ, ಸೀತಾ-ರಾಮರ ವಿವಾಹ ಮಾಡಿ ಪವಿತ್ರತಮನಾದ ಮಹರ್ಷಿ—ಇತ್ಯಾದಿ ಕಥಾನಕಗಳಿಂದ ಈತನ ಜೀವನ ಚಿತ್ರಣವು ರೋಮಾಂಚಕವಾಗಿದೆ. ಇವೆಲ್ಲದಕ್ಕೂ ಶಿಖರವಿಟ್ಟಂತೆ ವಿಶ್ವಾಮಿತ್ರ-ಮೇನಕೆಯರ ಪ್ರೇಮ ಪ್ರಸಂಗ ವರ್ಣರಂಜಿತವಾಗಿದೆ. ಇಂತಹ ವೈವಿಧ್ಯಮಯ ಮಹನೀಯನಿಂದಲೇ ಗಾಯಿತ್ರಿ ಮಂತ್ರ, ದೇವಿ ಸೃಷ್ಟಿಯಾದುದು ವಿಧಿಯ ವೈಚಿತ್ರ್ಯವೇ ಸರಿ.

ವಿಶ್ವಾಮಿತ್ರನಂತಹ ಶ್ರದ್ಧಾವಂತ ಪುರುಷಾರ್ಥಿ ಮತ್ತೊಬ್ಬನಿಲ್ಲವೆಂದರೆ ಉತ್ಪ್ರೇಕ್ಷೆಯಾದೀತು. ತನ್ನ ಪುರುಷಾರ್ಥದಿಂದ, ಕ್ಷತ್ರಿಯತ್ವದಿಂದ ಬ್ರಹ್ಮತ್ವವನ್ನು ಪಡೆದು, ರಾಜರ್ಷಿಯಿಂದ ಬ್ರಹ್ಮರ್ಷಿಯ ಸ್ಥಾನವನ್ನು ಪಡೆದ ಮಹನೀಯನು.

ಪ್ರಜಾಪತಿಯ ಮಗ ಕುಶನು. ಈ ವಂಶದಲ್ಲಿ ಮಹಾರಾಜ ಗಾಧಿಯು

ಜನಿಸಿದನು. ಈ ಗಾಧಿಯ ಮಗನೇ ವಿಶ್ವಾಮಿತ್ರ. ಕುಶ ವಂಶದಲ್ಲಿ ಜನಿಸಿದ್ದರಿಂದ ಕೌಶಿಕನೆಂದೂ, ಗಾಧಿಯ ಮಗನಾದ್ದರಿಂದ ಗಾಧಿಜ ಅಥವಾ ಗಾಧಿನಂದನನೆಂದೂ ಈತನನ್ನು ಕರೆಯುತ್ತಾರೆ.

ಈತನು ಮಹಾ ತಪಸ್ವಿ. ಆದುದರಿಂದಲೇ ಈತನು ಜಗತ್ಪೂಜ್ಯನಾದನು. ಈತನ ತ್ಯಾಗ, ಸದಾಚಾರ ಸಂಪನ್ನತೆಗಳು ಈತನ ಜೀವನದ ಗುರಿಯಾಗಿತ್ತು. ಈತನು ಬ್ರಹ್ಮ ಗಾಯಿತ್ರಿಯ ದ್ರಷ್ಟಾರನು. ಲೋಕಕ್ಕೆ ಇದರ ಮೂಲಕ ವೇದ ಮಾತಾ ಗಾಯಿತ್ರಿಯ ಪ್ರಥಮ ದರ್ಶನ ಮಾಡಿಸಿದನು. ವೇದಗಳು, ಸಂಹಿತೆಗಳು, ಆರಣ್ಯಕಗಳು ಈ ಗಾಯಿತ್ರಿ ಮಂತ್ರದ ಹಿರಿಮೆಯನ್ನು ಸಾರಿವೆ. ಮೂಲ ಬ್ರಹ್ಮ ಗಾಯಿತ್ರಿ ಮಂತ್ರದಿಂದ ಇತರೇ ಗಾಯಿತ್ರೀ ಮಂತ್ರಗಳು ಪ್ರಸ್ಫುಟಿತಗೊಂಡವು. ಈತನ ಸಾಹಿತ್ಯ ಸೃಷ್ಟಿಯು ಅಮೂಲ್ಯವೂ, ಅನುಪಮವೂ, ಆದುದು. ಮೇಲಿನ ಕಥಾ ಪ್ರಸಂಗಗಳ ದಟ್ಟಣೆಯಲ್ಲಿ ಈತನ ಸಾಹಿತ್ಯ ಸೃಷ್ಟಿಯು ಮುಳುಗಿ ಹೋಗಿ, ಅನೇಕರಿಗೆ ಗೊತ್ತಿಲ್ಲದಾಗಿದೆ. ಈತನು ಗೋತ್ರ ಪ್ರವರ್ತಕನೂ ಹೌದು.

ವಿಶ್ವಾಮಿತ್ರನು ಋಗ್ವೇದದ ತೃತೀಯ ಮಂಡಲದ ಮಂತ್ರದ್ರಷ್ಟಾರನು. ಈ ಮಂಡಲವನ್ನು 'ವೈಶ್ವಾಮಿತ್ರ ಮಂಡಲ' ಎಂದು ಕರೆಯಲಾಗುತ್ತದೆ. ಇದರಲ್ಲಿ ಗಾಯಿತ್ರಿ ಮಂತ್ರವನ್ನು ವಿವರಿಸಲಾಗಿದೆ.

ಈತನು ಅನೇಕ ಧರ್ಮ ಗ್ರಂಥಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಮುಖ್ಯವಾದುವು—'ವಿಶ್ವಾಮಿತ್ರ ಕಲ್ಪ', 'ವಿಶ್ವಾಮಿತ್ರ ಸಂಹಿತಾ' ಹಾಗೂ 'ವಿಶ್ವಾಮಿತ್ರ ಸ್ಮೃತಿ'. ಈ ಎಲ್ಲ ಗ್ರಂಥಗಳೂ ಗಾಯಿತ್ರಿಯ ಉಪಾಸನೆ ಹಾಗೂ ಸಂಧ್ಯೋಪಾಸನೆಯ ವಿಧಾನಗಳನ್ನು ವಿವರಿಸಿವೆ. ಗಾಯಿತ್ರಿ ಮಂತ್ರದಲ್ಲಿ ಅಪಾರ ಶಕ್ತಿ ಇದೆ. ವಿಶ್ವಾಮಿತ್ರನು ಈ ಮಂತ್ರದ ಮೂಲ ಆಚಾರ್ಯನಾದುದರಿಂದ, ಗಾಯಿತ್ರಿ ಉಪಾಸನೆಯಲ್ಲಿ ಈತನ ಆಚಾರ್ಯನ ಕೃಪೆಯನ್ನು ಪಡೆಯುವುದು ಅವಶ್ಯಕವಾಗಿದೆ.

ಈತನು ತನ್ನ ಜೀವನಚರ್ಯೆಯಲ್ಲಿ ಧರ್ಮ ಪರಾಯಣತೆಯಿಂದ ನಡೆದುಕೊಂಡನು. ಗಾಯಿತ್ರಿ ಸಾಧನೆಯಿಂದ ಕಾಮ, ಕ್ರೋಧ, ಲೋಭ, ಮೋಹ ಇತ್ಯಾದಿ ಶತ್ರುಗಳನ್ನು ಜಯಿಸಿದ್ದ. ತಪಸ್ಸು ಮಾಡುವುದರಲ್ಲಿ ಈತನು ಇತರರಿಗೆ ಆದರ್ಶನಾಗಿದ್ದ. ಸಪ್ತರ್ಷಿಗಳಲ್ಲಿ ಇದ್ದು, ಇಂದಿಗೂ ಜಗತ್ತಿನ ಜೀವಿಗಳ

ಕಲ್ಯಾಣಚಿಂತನೆಯಲ್ಲಿ ಮಗ್ನನಾಗಿದ್ದಾನೆ. 'ಭೋಗಲಾಲಸೆಯು ಎಂದಿಗೂ ಕಡಿಮೆಯಾಗುವುದಿಲ್ಲ. ಅದು ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಗುತ್ತದೆ'. ಈ ನಿಟ್ಟಿನಲ್ಲಿ ಈತನು ನೀಡಿರುವ ಒಂದು ಉಪದೇಶವು ತುಂಬಾ ಮಾರ್ಮಿಕವಾದುದು. ಅದು ಈ ರೀತಿ ಇದೆ—

ಕಾಮಂ ಕಾಮಯ ಮಾನಸ್ಯ ಯದಿ ಕಾಮಃ ಸಮೃಧ್ಯತಿ |
ಅಥೈನಮಪರಃ ಕಾಮೋ ಭೂಯೋ ವಿಧ್ಯತಿ ಬಾಣವತ್ ||

ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ |
ಕಾಮಾನಭಿಲಷನ್ ಮೋಹಾನ್ನ ನರಃ ಸುಖ ಮೇಧತೇ ||

(ಪದ್ಮ, ಸೃ 19/121-263)

'ಮಾನವನ ಒಂದು ಭೋಗಲಾಲಸೆಯು, ಕಾಮನೆಯು ಪೂರ್ತಿಯಾದಲ್ಲಿ, ಅವನಲ್ಲಿ ಎರಡನೇ ಹೊಸ ಕಾಮನೆಯು ಹುಟ್ಟಿ ಅವನನ್ನು ಬಂಧಿಸುತ್ತದೆ. ಭೋಗಗಳ ಇಚ್ಛೆಯು ಉಪ ಭೋಗದ ಮುಖಾಂತರ ಎಂದಿಗೂ ಶಮನಗೊಳ್ಳುವುದಿಲ್ಲ. ಬದಲಾಗಿ ತುಪ್ಪ ಸೇರಿದ ಅಗ್ನಿಯಂತೆ ಅದು ಹೆಚ್ಚು ಪ್ರಜ್ವಲಿತಗೊಳ್ಳುತ್ತದೆ. ಭೋಗಗಳ ಅಭಿಲಾಷೆ ಇರುವ ವ್ಯಕ್ತಿಯು ಮೋಹವಶನಾಗಿ ಸುಖವನ್ನು ಎಂದಿಗೂ ಕಾಣಲಾರದವನಾಗುತ್ತಾನೆ. ಆದುದರಿಂದ ಅವನು ತನ್ನಲ್ಲಿನ ಭೋಗಲಾಲಸೆಯನ್ನು ಸಂಪೂರ್ಣವಾಗಿ ತ್ಯಜಿಸಿ, ಆತ್ಮ ಚಿಂತನದಲ್ಲಿ ತಲ್ಲೀನನಾಗುವುದು ಒಳ್ಳೆಯದು.'

ಈ ರೀತಿಯ ಅನೇಕ ಜೀವನೋಪಯೋಗಿ ಹಾಗೂ ಪಾರಮಾರ್ಥಿಕ ಉಪದೇಶಗಳು ವಿಶ್ವಾಮಿತ್ರನ ವಾಣಿಯಿಂದ ಪ್ರಸ್ಫುಟಿತಗೊಂಡು, ಈತನ ಗ್ರಂಥಗಳಲ್ಲಿ ಹಾಗೂ ಪುರಾಣೇತಿಹಾಸಗಳಲ್ಲಿ ತುಂಬಿ ಹೋಗಿವೆ.

## ವಿಶ್ವಾಮಿತ್ರ ಸ್ಮೃತಿ

ಈ ಗ್ರಂಥದಲ್ಲಿನ ಮುಖ್ಯ ಪ್ರತಿಪಾದಿತ ವಿಷಯವೆಂದರೆ 'ಸಂಧ್ಯೋಪಾಸನೆ ಹಾಗೂ ಗಾಯಿತ್ರೀ ಆರಾಧನೆ' ಕಣ್ವ, ಭಾರದ್ವಾಜ, ಮನು, ಯಾಜ್ಞವಲ್ಕ್ಯ ಹಾಗೂ ವ್ಯಾಸರ ಸ್ಮೃತಿಗಳಲ್ಲಿ ಸಂಧ್ಯೋಪಾಸನೆಯ ಮಹಿಮೆಯು ವಿಶೇಷ ರೀತಿಯಲ್ಲಿ ನಿರೂಪಿಸಲ್ಪಟ್ಟಿದೆ. ಇವರೆಲ್ಲರೂ 'ವಿಶ್ವಾಮಿತ್ರ ಸ್ಮೃತಿ'ಯನ್ನು ವಿಶೇಷವಾಗಿ ಪ್ರಶಂಸಿಸಿದ್ದಾರೆ.

ಈ ಸ್ಮೃತಿಯಲ್ಲಿ 475 ಶ್ಲೋಕಗಳಿದ್ದು, ಏಳು ಅಧ್ಯಾಯಗಳಿವೆ. ಪೂರ್ತಿ ಗ್ರಂಥವು ಶ್ಲೋಕಗಳಿಂದ ಕೂಡಿದ್ದರೂ, ಮಂತ್ರಗಳ ವಿನಿಯೋಗ ಹಾಗೂ ಋಷಿ, ಛಂದ, ದೇವತೆಗಳ ವರ್ಣನೆ ಬಂದಾಗ ಗದ್ಯವನ್ನು ಪ್ರಯೋಗಿಸ ಲಾಗಿದೆ.

ಮುಖ್ಯವಾಗಿ ಇದರಲ್ಲಿ ಬ್ರಾಹ್ಮಮುಹೂರ್ತ, ಉಷಃಕಾಲ, ಅರುಣೋ ದಯ ಹಾಗೂ ಪ್ರಾತಃಕಾಲದ ಸಮಯದ ವರ್ಣನೆ, ನಿತ್ಯ ನೈಮಿತ್ತಿಕ ಕರ್ಮ ಗಳನ್ನು ಕಾಲ ಕಾಲದಲ್ಲಿ ಮಾಡುವುದರಿಂದ ಅವು ಫಲಪ್ರದವಾಗುತ್ತವೆ ಎಂದು ತಿಳಿಸಲಾಗಿದೆ. ಇದರೊಂದಿಗೆ ನಿಯತ ಕಾಲದ ಮಹಿಮೆ, ಸಂಧ್ಯಾ ಹಾಗೂ ಜಪಗಳು ಆವಶ್ಯಕ ನಿತ್ಯ ಕರ್ಮಗಳು ಎಂಬುದು ಪ್ರತಿಪಾದಿತವಾಗಿದೆ. ಅಲ್ಲದೆ ಜಾಗರಣ, ಭೂಮಿವಂದನೆ, ಮಂಗಳ ದರ್ಶನ, ಪ್ರಾತಃ ಸ್ಮರಣೀಯ ಮಂಗಳ ಪಠನ, ಇತ್ಯಾದಿ ಪ್ರಾತಃ ಕಾಲೀನ ಕೃತ್ಯಗಳು, ಪ್ರಾತಃ ಸ್ನಾನದ ಮಹಿಮೆ, ಆಚಮನ ವಿಧಿ, ಶ್ರೌತ, ಸ್ಮಾರ್ತ, ಆಗಮ, ಪೌರಾಣ ಹಾಗೂ ಮಾನಸ–ಈ ಐದು ವಿಧ ಆಚಮನಗಳ ವಿಧಿ ವಿಧಾನಗಳು, ಸ್ನಾನದ ವಿಧಾನ, ಮಾರ್ಜನ ಮಂತ್ರ, ಪ್ರಾಣಾಯಾಮ ವಿಧಿ, ಅದನ್ನು ಆಚರಿಸುವುದರಿಂದ ಉಂಟಾಗುವ ಲಾಭ, ವಿಲೋಮ ಗಾಯಿತ್ರಿ ಮಂತ್ರ ಜಪ ವಿಧಾನ ಹಾಗೂ ಅದರ ಅನಂತ ಫಲ, ಮಾನಸ ಪೂಜೆ, ಸಂಧ್ಯಾವಂದನೆದಲ್ಲಿ ತ್ರೈಕಾಲಿಕ ಸೂರ್ಯಾರ್ಘ್ಯ ದಾನದ ವಿಧಾನ, ಪ್ರಾಯಶ್ಚಿತ್ತಾರ್ಘ್ಯದಾನ, ನೈಮಿತ್ತಿಕ ಹಾಗೂ ಕಾಮ ಹೆಸರಿನ ಜಪದ ಎರಡು ಭೇದಗಳು, ಜಪ ಮಾಡುವುದಕ್ಕೆ ಪ್ರಶಸ್ತವಾದ ಪ್ರದೇಶ, ಭೂತಶುದ್ಧಿ, ದಿಗ್ಬಂಧನೆ, ಕರಾಂಗನ್ಯಾಸ, ಹೃದಯಾದಿನ್ಯಾಸ ಗಾಯಿತ್ರಿಯ 24 ಮುದ್ರೆಗಳು ಹಾಗೂ ಆವಾಹನಾದಿ 10 ಮುದ್ರೆಗಳು, ಸಂಧ್ಯೆಯಲ್ಲಿ ಸೂರ್ಯೋಪಸ್ಥಾನದ ಮಹಿಮೆ ಹಾಗೂ ಅದರ ವಿಧಿ, ಅದರ ಮಂತ್ರ, ದೇವಯಜ್ಞ, ವೈಶ್ವದೇವ ಹಾಗೂ ಪಂಚಬಲಿ ಹಾಗೂ ನಿತ್ಯ ಹೋಮದ ವಿಧಾನಗಳನ್ನು ತಿಳಿಸಲಾಗಿದೆ.

ಗಾಯಿತ್ರಿ ಉಪಾಸಕರು ಹಾಗೂ ಸಂಧ್ಯಾ ವಿಷಯದ ಜಿಜ್ಞಾಸುಗಳಿಗೆ ಈ ಸ್ಮೃತಿಯು ತುಂಬಾ ಉಪಯೋಗಕರವಾದುದು. ವಿಶ್ವಾಮಿತ್ರನ ತನ್ನ ದೀರ್ಘ ಕಾಲದ ತಪಸ್ಸಿನ ರಹಸ್ಯವು ನಿರಂತರ ಗಾಯಿತ್ರೀ ಸಾಧನೆಯೆ ಆಗಿದೆ. ಗಾಯಿತ್ರಿ ಮಾತೆಯ ಸಿದ್ಧಿಯು ಈತನಿಗಾಗಿತ್ತು. ಈತನ ನವೀನ ಸೃಷ್ಟಿ

ಹಾಗೂ ಸಶರೀರವಾಗಿ ತ್ರಿಶಂಕುವನ್ನು ಸ್ವರ್ಗ ಲೋಕಕ್ಕೆ ಕಳುಹಿಸುವ ಪ್ರಯತ್ನ–ಇಂತಹ ಅಸಂಭವ ಕಾರ್ಯಗಳನ್ನು ಸಾಧ್ಯಗೊಳಿಸಿದ್ದು, ಸಂಧ್ಯೋಪಾಸನೆಯ ಬಲದಿಂದಲೇನೇ !

'ವಿಶ್ವಾಮಿತ್ರ ಸ್ಮೃತಿ'ಯಲ್ಲಿ ಪ್ರತಿ ದಿನವೂ ಯಾವ ರೀತಿಯಲ್ಲಿ ಭಾವ–ಭಕ್ತಿಪೂರ್ವಕವಾಗಿ ಸಂಧ್ಯೋಪಾಸನೆಯನ್ನು ಹೇಗೆ ಮಾಡಬೇಕು, ಅದರ ಪೂರ್ಣ ವಿಧಿಯ ಜ್ಞಾನವನ್ನು ಹೇಗೆ ಪಡೆಯಬೇಕು–ಎಂಬುದನ್ನು ವಿವರಿಸಲಾಗಿದೆ.

## ಎಲ್ಲ ಕರ್ಮಗಳನ್ನು ನಿಯಮದಂತೆ ನಡೆಯಬೇಕು

ಸ್ನಾನ ಸಂಧ್ಯಾದಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಯಾವ ಯಾವ ಸಮಯದಲ್ಲಿ ಮಾಡಬೇಕೆಂದಿದೆಯೊ, ಅದೇ ಸಮಯದಲ್ಲಿ ಮಾಡಬೇಕು. ಹಾಗೆ ಮಾಡಿದಲ್ಲಿ ಅದು ಸಫಲವಾಗುತ್ತದೆ, ಇಲ್ಲದಿದ್ದಲ್ಲಿ ನಿಷ್ಫಲವಾಗುತ್ತದೆ.

ನಿತ್ಯ ನೈಮಿತ್ತಿಕೇ ಕಾಮ್ಯೇ ಕೃತೇ ಕಾಲೇ ತು ಸತ್ಫಲಮ್ ॥ 4 ॥
ಕಾಲಾತೀತಂ ನ ಕರ್ತವ್ಯಂ ಕರ್ತವ್ಯಂ ಕಾಲ ಸಂಯುತಮ್ ।
ತಸ್ಮಾತ್ ಸರ್ವ ಪ್ರಯತ್ನೇನ ಕಾಲೇ ಕರ್ಮ ಸಮಾಚರೇತ್ ॥ 7 ॥

ಮಳೆಯಾದ ಕೂಡಲೇ ಬೀಜ ಬಿತ್ತಿದಾಗ ಒಳ್ಳೆ ಫಸಲು ಬರುವಂತೆ ನಿಯುಕ್ತ ಕರ್ಮಗಳನ್ನು ಸೂಕ್ತ ಸಮಯದಲ್ಲಿ ಮಾಡುವುದರಿಂದ ಸುಖ ಹಾಗೂ ಸಿದ್ಧಿಗಳು ಲಭಿಸುತ್ತವೆ—

ನಿಯುಕ್ತ ಕರ್ಮಾಣಿ ನಿಯುಕ್ತ ಕಾಲೇ
ಕೃತಾನಿ ಸದ್ಯಃ ಸುಖ ಸಿದ್ಧಿದಾನಿ ।
ಯಥೋಪ್ತ ಬೀಜಾನಿ ಯಥಾ ಫಲಾನಿ
ಕಾಲೇ ಹಿ ವೃಷ್ಟಿರ್ಭುವಿ ಜೀವನಾನಿ ॥21 ॥

ಯಾವುದಾದರೊಂದು ಕಾರಣದಿಂದ ಸಮಯದ ಲೋಪವಾದಲ್ಲಿ ಪ್ರಾಯಶ್ಚಿತ್ತ ರೂಪದಲ್ಲಿ 3000 ಗಾಯಿತ್ರಿ ಜಪಗಳನ್ನು ಮಾಡಬೇಕು.

ತ್ರಿಸಹಸ್ರ ಜಪಂ ಕುರ್ಯಾತ್ ಪ್ರಾಯಶ್ಚಿತ್ತಂ ವಿಧೀಯತೇ ॥ 9 ॥

## ತ್ರಿಕಾಲ ಸಂಧ್ಯೆಯ ಸಮಯ

ಪ್ರಾತಃಕಾಲ, ಮಧ್ಯಾಹ್ನ ಹಾಗೂ ಸಾಯಂಕಾಲ ಈ ಮೂರು ಕಾಲಗಳಲ್ಲಿ ಸಂಧ್ಯಾವಂದನೆ ಮಾಡಬೇಕು. ಹೀಗೆ ಮಾಡುವ ಸಂಧ್ಯಾವಂದನೆಯು

ಉತ್ತಮ, ಮಧ್ಯಮ ಹಾಗೂ ಅಧಮ–ಎನ್ನುವ ಮೂರು ರೀತಿಗಳದ್ದಾಗಿರುತ್ತವೆ. ಸೂರ್ಯೋದಯಕ್ಕೆ ಮೊದಲು ಆಕಾಶದಲ್ಲಿ ನಕ್ಷತ್ರಗಳು ಕಾಣಿಸುತ್ತಿರುವಾಗ ಮಾಡುವ ಸಂಧ್ಯಾವಂದನೆಯು ಉತ್ತಮವಾದುದು. ಆ ತಾರೆಗಳು ಕಣ್ಮರೆಯಾದ ಸೂರ್ಯೋದಯದ ಸಮಯದ ಸಂಧ್ಯಾವಂದನೆಯು ಮಧ್ಯಮ ತರಹದ್ದಾಗಿದ್ದು, ಸೂರ್ಯೋದಯದ ನಂತರದ ಸಂಧ್ಯಾವಂದನೆಯು ಅಧಮವಾದುದಾಗಿರುತ್ತದೆ—

ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ ।
ಅಧಮಾ ಸೂರ್ಯಸಹಿತಾ ಪ್ರಾತಃ ಸಂಧ್ಯಾ ತ್ರಿಧಾ ಮತಾ ॥ 22 ॥

ಮಧ್ಯಾಹ್ನಕ್ಕೆ ಮೊದಲಿನಲ್ಲಿ ಮಾಡುವ ಮಧ್ಯಾಹ್ನ–ಸಂಧ್ಯೆಯು ಉತ್ತಮವಾದುದು. ಮಧ್ಯಾಹ್ನ ಸಮಯಕ್ಕೆ ಸರಿಯಾಗಿ ಮಾಡುವ ಸಂಧ್ಯೆಯು ಮಧ್ಯಮವಾದುದೂ, ನಂತರದಲ್ಲಿ ಮಾಡುವುದು ಅಧಮ ಸಂಧ್ಯೆಯೂ ಆಗಿರುತ್ತದೆ.

ಉತ್ತಮಾ ಪೂರ್ವ ಸೂರ್ಯಾ ಚ ಮಧ್ಯಮಾ ಮಧ್ಯ ಸೂರ್ಯಕಾ ।
ಅಧಮಾ ಪಶ್ಚಿಮಾದಿತ್ಯಾ ಮಧ್ಯ ಸಂಧ್ಯಾಂ ತ್ರಿಧಾ ಮತಾ ॥ 23 ॥

ಇದೇ ರೀತಿಯಲ್ಲಿ ಸಾಯಂಕಾಲದಲ್ಲಿ ಸೂರ್ಯನು ಮುಳುಗುವುದಕ್ಕೆ ಮುಂಚೆ ಸೂರ್ಯನ ಬೆಳಕು ಇರುವಾಗಲೇ ಮಾಡುವ ಸಂಧ್ಯಾವಂದನೆಯು ಉತ್ತಮವಾದುದು, ಸೂರ್ಯಾಸ್ತದ ನಂತರದಲ್ಲಿ ಮಾಡುವುದು ಮಧ್ಯಮ, ನಕ್ಷತ್ರಗಳು ಕಾಣಿಸಿದ ನಂತರ ಮಾಡುವುದು ಅಧಮ ಸಂಧ್ಯಾವಂದನೆಯಾಗುತ್ತದೆ—

ಉತ್ತಮಾ ಸೂರ್ಯ ಸಹಿತಾ ಮಧ್ಯಮಾ ಲುಪ್ತ ಭಾಸ್ಕರಾ ।
ಅಧಮಾ ತಾರಕೋಪೇತಾ ಸಾಯಂ ಸಂಧ್ಯಾ ತ್ರಿಧಾ ಮತಾ ॥ 24 ॥

### ಸಂಧ್ಯಾವಂದನೆಗೆ ಯಾವ ಕಡೆ ಮುಖ ಮಾಡುವುದು?

ತ್ರಿಕಾಲದ ಸಂಧ್ಯಾವಂದನೆ ಮಾಡುವಾಗ ಪೂರ್ವ ಅಥವಾ ಉತ್ತರದ ಕಡೆ ಮುಖ ಮಾಡಿ ಸಂಧ್ಯೆಯನ್ನು ಆಚರಿಸಬೇಕು ; ದಕ್ಷಿಣ, ಪಶ್ಚಿಮದ ಕಡೆ ಮುಖ ಮಾಡಲೇಬಾರದು—

ಸಂಧ್ಯಾತ್ರಯೇ ಪೂರ್ವ ಮುಖೋ ದ್ವಿಜನ್ಮಾ
ತ್ರಿಧೈವ ಶುದ್ಧಾಚಮನಂ ಪ್ರಕುರ್ಯಾತ್ ।

ಉದಙ್ಮುಖೋ ವಾಪಿ ಸಮಾಚರೇನ್ನ
ತದ್ ದಕ್ಷಿಣಾ ಪಶ್ಚಿಮ ಯೋಃ ಕದಾಪಿ || 26 ||

ಪ್ರಾತಃಕಾಲ ಭೂಮಿ ವಂದನೆ ಮಾಡುವುದು

ಸೂರ್ಯೋದಯಕ್ಕೆ ನಾಲ್ಕು ಘಳಿಗೆಗಳಿಗೆ ಮೊದಲು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು, ಹಸ್ತಗಳನ್ನು ನೋಡಿಕೊಂಡು, ನೆಲದ ಮೇಲೆ ಕಾಲೂರುವುದಕ್ಕೆ ಮುಂಚೆ ಭೂಮಾತೆಗೆ ಅಭಿವಾದನ ಮಾಡಬೇಕು. ಭೂಮಿ ಮೇಲೆ ಕಾಲೂರುವ ವಿವಶತೆಗಾಗಿ ಆಕೆಯಲ್ಲಿ ಕ್ಷಮೆ ಯಾಚಿಸಲು ಈ ರೀತಿ ಪ್ರಾರ್ಥನೆ ಮಾಡಬೇಕು—

ಸಮುದ್ರವಸನೇ ದೇವಿ ಪರ್ವತಸ್ತನ ಮಂಡಲೇ || 44 ||
ವಿಷ್ಣು ಪತ್ನಿ ನಮಸ್ತುಭ್ಯಂ ಪಾದ ಸ್ಪರ್ಶ ಕ್ಷಮಸ್ವ ಮೇ || 45 ||

'ಸಮುದ್ರ ರೂಪದ ವಸ್ತ್ರಗಳನ್ನು ಧರಿಸಿರುವ, ಪರ್ವತ ರೂಪದ ಸ್ತನ ಮಂಡಲವನ್ನು ಹೊಂದಿರುವ, ಭಗವಾನ್ ವಿಷ್ಣುವಿನ ಪತ್ನೀರೂಪಳಾದ ಹೇ ಭೂಮಾತೆ ! ನಾನು ನಿನ್ನನ್ನು ಪಾದದಿಂದ ಸ್ಪರ್ಶಿಸುತ್ತಿರುವುದಕ್ಕೆ ಕ್ಷಮಿಸು'.

ಇದೇ ರೀತಿಯಲ್ಲಿ ಭಗವಾನ್ ಶಂಕರನನ್ನು ದೈನಂದಿನ ಕೆಲಸ ಕಾರ್ಯಗಳ ಪ್ರಾರಂಭಕ್ಕಾಗಿ ಪ್ರಾರ್ಥಿಸಿ, ಆತನ ಅನುಮತಿ ಪಡೆಯಬೇಕು—

ಅತಿ ತೀಕ್ಷ್ಣ ಮಹಾಕಾಯ ಕಲ್ಪಾಂತದಹನೋಪಮಃ || 45 ||
ಭೈರವಾಯ ನಮಸ್ತುಭ್ಯ ಮನುಜ್ಞಾಂ ದಾತು ಮರ್ಹಸಿ || 46 ||

'ಸುತೀಕ್ಷ್ಣನೂ, ಮಹಾನ್ ಶರೀರವನ್ನು ಹೊಂದಿರುವವನೂ. ಕಲ್ಪಾಂತ ಪ್ರಳಯಾಗ್ನಿ ಸಮಾನನೂ, ತೇಜೋಮಯನೂ ಆದ ಭೈರವ ದೇವನೆ ! ನಿನಗೆ ನಮಸ್ಕಾರ ! ಆಜ್ಞೆ ನೀಡಲು ನೀನೇ ಸಮರ್ಥನು ! ಆದುದರಿಂದ ನಿತ್ಯ ನೈಮಿತ್ತಿಕ ಕಾರ್ಯಗಳನ್ನು ಮಾಡಿಕೊಳ್ಳಲು ನನಗೆ ಅನುಮತಿ ನೀಡು !'

ನಂತರದಲ್ಲಿ ಶೌಚ, ದಂತಧಾವನ, ಸ್ನಾನಾದಿ ಕರ್ಮಗಳನ್ನು ಮಾಡಬೇಕು. ಇದರ ವಿಧಿಗಳನ್ನು ಈ ಸ್ಮೃತಿಯಲ್ಲಿ ತಿಳಿಸಲಾಗಿದೆ.

ಸ್ನಾನದಿಂದ ಉಪಯೋಗ

ವಿಧಿಪೂರ್ವಕವಾಗಿ ಪ್ರತಿ ದಿನ ಪ್ರಾತಃಕಾಲ ಸ್ನಾನ ಮಾಡುವುದರಿಂದ ರೂಪ, ತೇಜಸ್ಸು, ಬಲ, ಪವಿತ್ರತೆ, ಆಯುಸ್ಸು, ಆರೋಗ್ಯ, ನಿರ್ಮಲತೆ, ತಪ,

ಹಾಗೂ ಬುದ್ಧಿವಂತಿಕೆಗಳು ಪ್ರಾಪ್ತವಾಗುತ್ತವೆ. ಇದು ದುಃಸ್ವಪ್ನಗಳನ್ನು ನಾಶ ಮಾಡುತ್ತದೆ.

ಗುಣಾ ದಶ ಸ್ನಾನ ಕೃತೋ ಹಿ ಪುಂಸೋ
ರೂಪಂ ಚ ತೇಜಶ್ಚ ಬಲಂ ಚ ಶೌಚಮ್ |
ಆಯುಷ್ಯ ಮಾರೋಗ್ಯ ಮಲೋಲುಪತ್ವಂ
ದುಃಸ್ವಪ್ನನಾಶಂ ಚ ತಪಶ್ಚ ಮೇಧಾ || 86 ||

ಸ್ನಾನಾದಿಗಳ ನಂತರ ಪ್ರಾಣಾಯಾಮ, ಅಘಮರ್ಷಣ ಹಾಗೂ ಸೂರ್ಯೋಪಸ್ಥಾನ–ಇತ್ಯಾದಿಗಳನ್ನು ಆಚರಿಸಿ, ಗಾಯಿತ್ರಿ ಮಾತೆಯ ಧ್ಯಾನ ಮಾಡಬೇಕು. ನಂತರದಲ್ಲಿ ಗಾಯಿತ್ರಿ ಮಂತ್ರವನ್ನು ಶ್ರದ್ಧಾಪೂರ್ವಕವಾಗಿ ಜಪ ಮಾಡಬೇಕು. ಈ ಸ್ಮೃತಿಯಲ್ಲಿ ಗಾಯಿತ್ರಿ ಮಾತೆಯ ಅನೇಕ ಧ್ಯಾನ ಸ್ವರೂಪಗಳನ್ನು ತಿಳಿಸಲಾಗಿದೆ. ಇದರಿಂದ ಆಕೆಯ ಮುಖ್ಯವಾದ ಧ್ಯಾನ ಸ್ವರೂಪವು ತಿಳಿದು ಬರುತ್ತದೆ.

### ಪಂಚಮುಖಿಯ ಗಾಯಿತ್ರಿ ಮಾತೆಯ ಧ್ಯಾನ

ಮುಕ್ತ ವಿದ್ರುಮ ಹೇಮನೀಲ ಧವಲಚ್ಛಾಯೈರ್ಮುಖೈ ಸ್ತ್ರೀಕ್ಷಣೈ–
ಯುರ್ಕ್ತಾಮಿಂದು ನಿಬದ್ಧ ರತ್ನ ಮುಕುಟಾಂ ತತ್ತ್ವಾತ್ಮ
ವರ್ಣಾತ್ಮಿಕಾಮ್ |
ಸಾವಿತ್ರೀಂ ವರದಾ ಭಯಾಂ ಕುಶಕಶಾಃ ಶುಭ್ರಂ ಕಪಾಲಂ ಗುಣಂ
ಶಂಖಂ ಚಕ್ರಮಧಾರ ವಿಂದಯುಗಲಂ ಹಸ್ತೈರ್ವಹಂತೀಂಭಜೇ ||65||

'ಮುತ್ತು, ಹವಳ, ಚಿನ್ನ, ನೀಲಮಣಿ ಹಾಗೂ ಉಜ್ವಲವಾಗಿರುವ ಪಂಚಮುಖಗಳಿಂದ ಕೂಡಿದ ಮಾತೆಯು ತ್ರಿನೇತ್ರಗಳಿಂದ ಸುಶೋಭಿತಳಾಗಿದ್ದಾಳೆ. ರತ್ನಮಯ ಕಿರೀಟವನ್ನು ಧರಿಸಿದ್ದಾಳೆ. 24 ವರ್ಣಗಳಿಂದ ಆಕೆ ಕೂಡಿದವಳಾಗಿದ್ದಾಳೆ. ಇಂತಹ ವರದಾಯಿನಿ ಗಾಯಿತ್ರೀ ದೇವಿಯು ತನ್ನ ಹತ್ತು ಕೈಗಳಿಂದ ಅಭಯ, ವರಮುದ್ರೆಗಳಿಂದ ಅಂಕುಶ, ಪಾಶ, ಶುಭ್ರ ಕಪಾಲ, ಹಗ್ಗ, ಶಂಖ, ಚಕ್ರ ಮತ್ತು ಎರಡು ಕಮಲಗಳನ್ನು ಧರಿಸಿರುವಳು. ಇಂತಹ ಮಾತೆಯನ್ನು ನಾವು ಧ್ಯಾನಿಸುವೆವು.'

ಇದು ಭಗವತೀ ಗಾಯಿತ್ರಿಯ ಮುಖ್ಯ ಧ್ಯಾನವಾಗಿದೆ. ಶಾರದಾ

ತಿಲಕ (21/15) ಇತ್ಯಾದಿ ಆಗಮಗಳಲ್ಲಿ ಹಾಗೂ ದೇವೀ ಭಾಗವತದ ಪ್ರಾರಂಭದಲ್ಲಿ ಈ ಧ್ಯಾನ ಶ್ಲೋಕವನ್ನು ಪ್ರಮುಖವಾಗಿ ಕೊಡಲಾಗಿದೆ.

ಈ ರೀತಿಯಲ್ಲಿ ಸಂಧ್ಯೋಪಾಸನೆಯು ಸಂಪೂರ್ಣ ಸಾಂಗೋಪಾಂಗ ವಿಧಿ ಹಾಗೂ ಗಾಯಿತ್ರಿಯ ಅನುಲೋಮ, ಪ್ರತಿಲೋಮಾದಿ ಜಪಗಳ ಫಲ ವನ್ನು ನೀಡಿ, ಕಡೆಯಲ್ಲಿ ಸಂಕ್ಷೇಪದಲ್ಲಿ ವೈಶ್ವೇದೇವ ಪ್ರಕರಣವನ್ನು ತಿಳಿಸ ಲಾಗಿದೆ. ಬಲಿವೈಶ್ವದೇವ ನಿತ್ಯಕರ್ಮವನ್ನು ಮಂತ್ರೋಚ್ಚಾರಣಪೂರ್ವಕ ವಾಗಿ, ಅಥವಾ ಮಂತ್ರರಹಿತವಾಗಿಯೂ ಧ್ಯಾನಿಸಬಹುದು ಮಂತ್ರಜ್ಞಾನ ವಿಲ್ಲವೆಂದು ಕರ್ಮದ ಲೋಪವನ್ನು ಮಾಡಬಾರದು. ವೈಶ್ವೇದೇವ ಮಾಡುವುದರಿಂದ ದೂಷಿತ ಅನ್ನವೂ ಕೂಡ ಪವಿತ್ರ ಹಾಗೂ ಸಾತ್ವಿಕ ವಾಗುತ್ತದೆ-

ಅಮಂತ್ರಂ ವಾ ಸುಮಂತ್ರಂ ವಾ ವೈಶ್ವೇದೇವಂ ನ ಸಂತ್ಯಜೇತ್ |
ವೈಶ್ವೇದೇವಸ್ಯ ಕರಣಾತ್ ಅನ್ನದೋಷೈರ್ನ ಲಿಪ್ಯತೆ || 8/21 ||

ಈ ಗಾಯಿತ್ರಿ ಮಂತ್ರ ಮಹಾತ್ಮ್ಯೆಯನ್ನು ಸಾಮಾನ್ಯವಾಗಿ ಎಲ್ಲ ಸ್ಮೃತಿಗಳು ವರ್ಣಿಸಿವೆ. ಪ್ರಣವ ಮತ್ತು ವ್ಯಾಹೃತಿಗಳೊಂದಿಗೆ ಸಾವಿತ್ರಿ, (ಗಾಯಿತ್ರೀ) ಮಂತ್ರದ ಜಪವನ್ನು ಮಾಡುವುದರಿಂದ ಎಲ್ಲ ಪಾಪಗಳೂ ದೂರ ವಾಗುತ್ತವೆ. (ಮನು 2/79) ಎಂದು ಮನುಸ್ಮೃತಿಯಲ್ಲಿ ತಿಳಿಸಲಾಗಿದೆ. ಜಪವನ್ನು ಮಾಡಿದಲ್ಲಿ ಸಿದ್ಧಿಯು ಪ್ರಾಪ್ತವಾಗುತ್ತದೆ. ಗಾಯಿತ್ರೀ........ ಮುಕ್ತದಾಯಿನಿ (5/12) ಎಂದು ಈ ವಿಷಯವನ್ನು ವಿಶ್ವಾಮಿತ್ರ ಸ್ಮೃತಿ ಯಲ್ಲಿ ತಿಳಿಸಲಾಗಿದೆ. ಗಾಯಿತ್ರಿ ಜಪವನ್ನು ಸತತವಾಗಿ ಮಾಡುವುದರಿಂದ ಮುಕ್ತಿಯು ಪ್ರಾಪ್ತವಾಗುತ್ತದೆ.

# 27. ದಕ್ಷ ಸ್ಮೃತಿ

ಪ್ರಾಚೀನ ಸ್ಮೃತಿಗಳಲ್ಲಿ 'ದಕ್ಷ ಸ್ಮೃತಿ'ಯು ಅತ್ಯಂತ ಮಹತ್ವಪೂರ್ಣ ವಾದುದು. ದಕ್ಷನು ಬ್ರಹ್ಮನ ಮಾನಸ ಪುತ್ರನು. ಸೃಷ್ಟಿಯ ವಿಸ್ತಾರಕ್ಕಾಗಿ ಸಂಕಲ್ಪ ಮಾಡಿದ ಬ್ರಹ್ಮನು ತನ್ನ ಸಮಾನರಾದ ಹತ್ತು ಮಾನಸ ಪುತ್ರರನ್ನು ಸೃಷ್ಟಿ ಮಾಡಿದನು. ಅವರು ಯಾರೆಂದರೆ–ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ, ದಕ್ಷ ಮತ್ತು ನಾರದ.

'ದಕ್ಷೋಽಗುಂಷ್ಠಾತ್ ಸ್ವಯಂಭುವಃ' ಎನ್ನುವಂತೆ ಬ್ರಹ್ಮನ ಎಡಗೈ ಹೆಬ್ಬೆರಳಿನಿಂದ ದಕ್ಷನು ಜನಿಸಿದನು.

ಮಾನಸಪುತ್ರರ ಸೃಷ್ಟಿಯಾದ ನಂತರ ಅವರೆಲ್ಲರೂ ಸೃಷ್ಟಿಯ ಕಾರ್ಯದಲ್ಲಿ ನಿರತರಾಗಿರುವಂತೆ ಬ್ರಹ್ಮನು ಅವರಿಗೆ ಆದೇಶ ನೀಡಿದನು. ಅಂತೆಯೇ ಅವರನ್ನೆಲ್ಲ ಪ್ರಜಾಪತಿಗಳನ್ನಾಗಿ ನಿಯಮಿಸಿದನು.

ದಕ್ಷನು ತನ್ನ ಕರ್ಮಗಳನ್ನು ಮಾಡುವುದರಲ್ಲಿ ಕುಶಲನಾಗಿದ್ದುದರಿಂದ ಅವನಿಗೆ ದಕ್ಷನೆಂಬ ಹೆಸರು ಬಂದಿತು. ಅವನು ತುಂಬಾ ತೇಜಸ್ವಿಯಾಗಿದ್ದನು. ಇವನು ಸೃಷ್ಟಿಯ ವಿಸ್ತಾರದಲ್ಲಿ ದಕ್ಷನಾಗಿದ್ದು, ವಿಶೇಷ ಕಾರ್ಯಾಚರಣೆ ನಡೆಸುತ್ತಿದ್ದುದರಿಂದ ಹಾಗೂ ಪ್ರಜಾ ಸಂಚಾಲನೆಯಲ್ಲಿ ಕುಶಲನಾಗಿದ್ದರಿಂದ ಇವನನ್ನು ಪ್ರಜಾಪತಿಗಳ ಅಧಿನಾಯಕನನ್ನಾಗಿ ಮಾಡಲಾಯಿತು. ಧರ್ಮದಲ್ಲಿ ಇವನಿಗೆ ವಿಶೇಷ ಅಭಿರುಚಿ ಇದ್ದಿತು. ಇತರೇ ಪ್ರಜಾಪತಿಗಳು ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿರುವಂತೆ ಮಾಡಿ, ಸ್ವತಃ ತಾನೂ ಸೃಷ್ಟಿಯ ಕಾರ್ಯದಲ್ಲಿ ಮಗ್ನನಾದನು.

ಆದರೆ ಮರೀಚಿ, ಮತ್ತಿತರರಿಂದ ನಿರೀಕ್ಷಿಸಿದ ಸೃಷ್ಟಿ ಕಾರ್ಯ ಆಗಲಿಲ್ಲ. ಬ್ರಹ್ಮನು ಇದರ ಬಗ್ಗೆ ಚಿಂತಿತನಾದ. ಆಗ ಅವನ ಶರೀರದಿಂದ ಸ್ವಾಯಂಭುವ ಮನು ಹಾಗೂ ಶತರೂಪಾರಾಣಿಯರುಗಳು ಜನಿಸಿದರು. ಇವರಿಗೆ ಐವರು ಮಕ್ಕಳು—ಪ್ರಿಯವ್ರತ, ಉತ್ತಾನಪಾದರಾಯ ಎನ್ನುವ ಇಬ್ಬರು ಗಂಡು ಮಕ್ಕಳು : ಆಕೂತಿ, ದೇವಹೂತಿ, ಪ್ರಸೂತಿ—ಎನ್ನುವ ಮೂವರು ಹೆಣ್ಣು ಮಕ್ಕಳೂ ಜನಿಸಿದರು. ಪ್ರಸೂತಿಯು ದಕ್ಷ ಪ್ರಜಾಪತಿಯನ್ನು ಮದುವೆಯಾದಳು.

ಶಂಕರ ಭಗವಾನನ ಪತ್ನೀ ಭಗವತೀ ಪಾರ್ವತಿಯು ಇವರಿಬ್ಬರ ಮಗಳು. ದಕ್ಷನ ಮಗಳಾದುದರಿಂದ 'ದಾಕ್ಷಾಯಿಣೀ', 'ದಾಕ್ಷೀ' ಎಂಬ ಹೆಸರು ಬಂದಿತು.

ದಕ್ಷನು ಮಹಾ ವಿಷ್ಣುವಿನ ಪರಮಭಕ್ತನಾಗಿದ್ದನು. ಆತನ ವರದಾನದಿಂದ ಇವನು ಸೃಷ್ಟಿ ಕಾರ್ಯದಲ್ಲಿ ಪೂರ್ಣವಾಗಿ ಸಫಲಗೊಂಡನು. ಇವನಿಗೆ ಅದಿತಿ, ದಿತಿ ಇತ್ಯಾದಿ ಪುತ್ರಿಯರಿಂದಲ್ಲದೆ, ಕಶ್ಯಪ, ಧರ್ಮ ಹಾಗೂ ಚಂದ್ರ ಮೂರ ಮುಖಾಂತರವೂ ಸೃಷ್ಟಿಯ ವಿಸ್ತಾರವಾಗ ತೊಡಗಿತು.

ಅದಿತಿಯಲ್ಲಿ ಈತನಿಗೆ ದೇವತೆಗಳು ಜನಿಸಿದ್ದರಿಂದ, ಸಮಸ್ತ ಚರಾಚರ ಪ್ರಾಣಿ ಜಗತ್ತಿನ ಪಿತೃ ಪುರುಷನಾದನು. ಈ ರೀತಿಯಲ್ಲಿ ದಕ್ಷನಿಂದ ಸೃಷ್ಟಿಯು ವೃದ್ಧಿಯಾಯಿತು.

ತನ್ನ ಸಂತತಿಯು ಯುಗಾಂತರ ಪ್ರಪಂಚಾದ್ಯಂತ ಧರ್ಮವು ಹರಡಲಿ, ಸರ್ವ ಪ್ರಜಾವರ್ಗ ಆಚಾರ–ವಿಚಾರದಿಂದ ಕೂಡಿರಲಿ, ಅವರು ತಮ್ಮ ನಿತ್ಯ ನೈಮಿತ್ತಿಕ ಕರ್ಮಗಳನ್ನು ಅನುಷ್ಠಾನ ಮಾಡುತ್ತಾ, ಸನ್ಮಾರ್ಗದಲ್ಲಿ ಮುಂದು ವರಿಯುತ್ತಿರಲಿ—ಎನ್ನುವ ದೃಷ್ಟಿಯಿಂದ ಈತನು ಒಂದು ಆಚಾರ ಸಂಹಿತೆ ಯನ್ನು ರಚಿಸಿದನು. ಇದೇ 'ದಕ್ಷಸ್ಮೃತಿ'.

ಪ್ರಜೆಗಳ ಸೃಷ್ಟಿಯಂತೂ ಆಗಿತ್ತು. ಆದರೆ ಅವರಿಗೆ ಸೂಕ್ತ ಜೀವನ ಪದ್ಧತಿಗಳ ಅವಶ್ಯಕತೆ ಇತ್ತು. ಇದಕ್ಕಾಗಿಯೇ ಮೇಲೆ ಹೇಳಿದ ಸ್ಮೃತಿ ನಿರ್ಮಾಣ.

ಈತನು ಎಲ್ಲ ಕರ್ಮಗಳ ಸ್ಥೂಲ, ಸೂಕ್ಷ್ಮ ಕರ್ಮಗಳ ತತ್ವ ರಹಸ್ಯ ಗಳನ್ನು ಬಲ್ಲವನಾಗಿದ್ದನು. ಎಲ್ಲ ವೇದಗಳನ್ನು ಅಭ್ಯಾಸ ಮಾಡಿದ್ದನು. ಇವನು ಮಹಾನ್ ಯೋಗಿ, ಸಕಲ ವಿದ್ಯೆಗಳ ನಿಷ್ಣಾತ, ತಪಸ್ವಿ ಹಾಗೂ ದಿವ್ಯ ಯೋಗಜ್ಞಾನವನ್ನು ಹೊಂದಿದ್ದನು. ಯೋಗಧಾರಣೆಯಿಂದ ಕೂಡಿದವನಾದ ಈತನು, ಧರ್ಮ ತತ್ತ್ವಗಳ ರಹಸ್ಯವನ್ನು ಅರಿತು ಗ್ರಂಥಸ್ಥ ಮಾಡಿದನು.

ಈತನ ಉಪದೇಶಗಳು ಸಂಕ್ಷೇಪವಾದುದಾದರೂ, ಉಪಯೋಗದಿಂದ ಕೂಡಿದವುಗಳು. ಈ ಸ್ಮೃತಿಯು ಏಳು ಅಧ್ಯಾಯಗಳಿಂದ ಕೂಡಿದ್ದು ಗೃಹಸ್ಥ ಧರ್ಮ, ಅದರ ಸದಾಚಾರ ಹಾಗೂ ಅಧ್ಯಾತ್ಮ ಜ್ಞಾನಗಳು ಅದರಲ್ಲಿ ನಿರೂಪಿತವಾಗಿದೆ.

ದಿನವನ್ನು ದಕ್ಷನು ಎಂಟು ಭಾಗಗಳಾಗಿ ವಿಭಾಗಿಸಿದ್ದನು. ಪ್ರತಿ ಯೊಂದು ಭಾಗದಲ್ಲೂ ಮಾಡಬೇಕಾದ ಕರ್ತವ್ಯಗಳನ್ನು ತುಂಬಾ ಚನ್ನಾಗಿ ನಿರೂಪಿಸಿದ್ದಾನೆ.

## ಗೃಹಸ್ಥಾಶ್ರಮದ ಮಹಿಮೆ

ಗೃಹಸ್ಥಾಶ್ರಮವು ಉಳಿದವುಗಳಿಗಿಂತ ಉತ್ತಮವಾದುದು ಎಂದು ದಕ್ಷನು ತಿಳಿಸುತ್ತಾನೆ. ಈ ಆಶ್ರಮದಲ್ಲೆ ವಂಶೋತ್ಪತ್ತಿಯಾಗುವುದು. ಇದು

ಪ್ರಪಂಚದ ಆಧಾರವಾಗಿದೆ, ಜಗತ್ತಿನ ಜನಜೀವನವು ಆಶ್ರಯವಾಗಿದೆ. ಆದುದರಿಂದ ಇದನ್ನು 'ಜ್ಯೇಷ್ಠಾಶ್ರಮ' ಎಂದು ಕರೆಯಲಾಗುತ್ತದೆ. ಸಮಸ್ತ ಜೀವಿ ಹಾಗೂ ಪ್ರಾಣಿ ಜಗತ್ತು ಈ ಆಶ್ರಮದ ಮುಖಾಂತರ ಪಾಲಿಸಿ–ಪೋಷಿಸಲ್ಪಡುತ್ತದೆ. ಪಂಚಯಜ್ಞಗಳ ಮುಖಾಂತರ ಗೃಹಸ್ಥನು ಎಲ್ಲರ ಧರ್ಮದ ರಕ್ಷಣೆ ಮಾಡುತ್ತಾನೆ, ಎಲ್ಲರ ಸೇವೆ ಮಾಡುತ್ತಾನೆ. ಆದಕಾರಣವೇ ಇದು ಶ್ರೇಷ್ಠ. ಇಲ್ಲಿ ಕಷ್ಟವಾದರೆ ಉಳಿದ ಮೂರು ಆಶ್ರಮಗಳು ಕಷ್ಟದಲ್ಲಿ ಬೀಳುತ್ತವೆ.

## ಶುದ್ಧ ಗೃಹಸ್ಥ ಯಾರು ?

ಶಾಸ್ತ್ರಾನುಸಾರ ಕರ್ಮಗಳ ಅನುಷ್ಠಾನ ಮಾಡುತ್ತಾ, ಸರ್ವರಿಗೂ ಹಿತವನ್ನುಂಟು ಮಾಡುತ್ತಾ, ಸೇವೆ ಮಾಡುತ್ತಿರುವವನು, ಸದಾಚಾರವನ್ನು ಪಾಲನೆ ಮಾಡುತ್ತಿರುವವನು ಉತ್ತಮ ಗೃಹಸ್ಥನು. ಪ್ರತಿನಿತ್ಯ ದೇವತೆ, ಪಿತೃ, ಹಿರಿಯರಿಗೆ ಗೌರವ ತೋರಿ, ಅವರ ಸೇವೆ ಮಾಡಿ, ಅತಿಥಿಗಳನ್ನು ಆದರಿಸಿ, ನಿತ್ಯ ಕರ್ತವ್ಯಗಳನ್ನು ಮಾಡುತ್ತಾ ಸಾಂಸಾರಿಕ ಜವಾಬ್ದಾರಿಯನ್ನು ನಿರ್ವಹಿಸುವವನು ಶುದ್ಧ ಗೃಹಸ್ಥನೆನಿಸುವನು. ಈತ ದಯೆ, ಕ್ಷಮೆ, ಶ್ರದ್ಧೆ, ಪ್ರಜ್ಞೆ, ಕೃತಜ್ಞತೆ ಇತ್ಯಾದಿ ಗುಣಗಳಿಂದ ಕೂಡಿದವನಾಗಿರಬೇಕು. ಇಂತಹವನು ಎಲ್ಲರಿಂದಲೂ, ರಾಜನಿಂದಲೂ ಕೂಡ ಗೌರವಿಸಲ್ಪಡುವವನು. ಉಳಿದ ಮೂರು ಆಶ್ರಮಗಳಿಂದಲೂ ಪೂಜಿಸಲ್ಪಡುವವನು. ಕೇವಲ ಮನೆಯಲ್ಲಿ ಇರುವವನು ಗೃಹಸ್ಥ ಎನ್ನಿಸಿಕೊಳ್ಳುವುದಿಲ್ಲ—

ವಿಭಾಗಶೀಲೋ ಯೋ ನಿತ್ಯಂ ಕ್ಷಮಾಯುಕ್ತೋ ದಯಾಪರಃ ||
ದೇವತಾತಿಥಿ ಭಕ್ತಶ್ಚ ಗೃಹಸ್ಥಃ ಸ ತು ಧಾರ್ಮಿಕಃ |
ದಯಾ ಲಜ್ಜಂ ಕ್ಷಮಾ ಶ್ರದ್ಧಾ ಪ್ರಜ್ಞಾ ಯೋಗಃ ಕೃತಜ್ಞತಾ ||
ಯೇತೇ ಯಸ್ಯ ಗುಣಾಃ ಸಂತಿ ಸ ಗೃಹೀ ಮುಖ್ಯ ಉಚ್ಯತೇ |
ಗೃಹಸ್ಥೋಽಪಿ ಕ್ರಿಯಾಯುಕ್ತೋ ನ ಗೃಹೇಣ ಗೃಹಾಶ್ರಮೀ ||
ರಾಜ್ಞಾ ಚಾನ್ಯೈಸ್ತ್ರಿಭಿಃ ಪೂಜ್ಯೋ ಮಾನನೀಯಶ್ಚ ಸರ್ವದಾ |
(ದಕ್ಷ ಸ್ಮೃತಿ 1/45, 48–50)

## ಪ್ರಾತಃಸ್ನಾನ, ಸಂಧ್ಯಾವಂದನೆಗಳು ಅಗತ್ಯ

ಶೌಚಾದಿ ಕಾರ್ಯಗಳ ನಂತರ, ದಂತಧಾವನ ಮಾಡಿಕೊಂಡು, ಸ್ನಾನ ಮಾಡುವವನು ಸದ್ಗೃಹಸ್ಥನೆನಿಸಿಕೊಳ್ಳುವನು. ಪ್ರತಿ ನಿತ್ಯ ಸ್ನಾನ ಅಗತ್ಯ.

ನವದ್ವಾರಗಳಿಂದ ದೇಹ ಮಲಿನವಾಗುತ್ತದೆ. ನವ ದ್ವಾರಗಳಿಂದ ಬರುವ ಮಾಲಿನ್ಯತೆಯು ಸ್ನಾನದಿಂದ ದೂರವಾಗುತ್ತದೆ, ದೇಹ ನಿರ್ಮಲವಾಗುತ್ತದೆ. ಸ್ನಾನಾದಿಗಳಿಂದ ಪವಿತ್ರನಾಗಿ ಜಪ, ಹೋಮ,ದೇವ ಪೂಜೆ ಇತ್ಯಾದಿ ಕರ್ಮಗಳನ್ನು ಮಾಡಬೇಕು. ಸ್ನಾನ ಮಾಡದೆ ಇವುಗಳನ್ನು ಮಾಡುವಂತಿಲ್ಲ.

ಸಂಧ್ಯಾವಂದನೆ ಮಾಡದ ವ್ಯಕ್ತಿ ಅಪವಿತ್ರನಾಗಿರುತ್ತಾನೆ ಅಂತಹವನು ಯಾವುದೇ ಶುಭಾಶುಭ ಕಾರ್ಯಗಳನ್ನು ಮಾಡಲು ಅಪವಿತ್ರನಾಗಿರುತ್ತಾನೆ. ಆದುದರಿಂದ ತಪ್ಪದೆ ತ್ರಿಕಾಲ ಸಂಧ್ಯಾವಂದನೆಯನ್ನು ಮಾಡಬೇಕು. ಗಾಯಿತ್ರಿ ಜಪ ಮಾಡದೆ ಇರುವವನು ಮಾಡುವ ಕಾರ್ಯ ನಿಷ್ಫಲವಾಗಿ, ಯಾವುದೇ ಅನುಗ್ರಹವನ್ನು ಪಡೆಯಲಾರ.

ಸಂಧ್ಯಾ ಹೀನೋಽ ಶುಚಿರ್ನಿತ್ಯ ಮನರ್ಹಃ ಸರ್ವ ಕರ್ಮಸು ||
ಯದನ್ಯತ್ ಕುರುತೇ ಕರ್ಮ ನ ತಸ್ಯ ಫಲಮಶ್ನುತೆ ||

(ದಕ್ಷ ಸ್ಮೃತಿ 2/19-20)

### ಐದು ರೀತಿಯ ವೇದಾಭ್ಯಾಸ

ಬ್ರಾಹ್ಮಣರು (ಹಾಗೂ ಅರ್ಹರು) ಷಡಂಗ ವೇದಾಭ್ಯಾಸವನ್ನು ಮಾಡಬೇಕು. ಇದು ಸ್ವಾಧ್ಯಾಯದ ಉತ್ತಮವಾದ ತಪಸ್ಸಾಗಿರುತ್ತದೆ. ಇದು ಬ್ರಹ್ಮಯಜ್ಞವೂ ಹೌದು.

ವೇದಸ್ವೀಕರಣಂ ಪೂರ್ವಂ ವಿಚಾರೋಽಭ್ಯಸನಂ ಜಪಃ ||
ತತೋ ದಾನಂ ಚ ಶಿಷ್ಯೇಭ್ಯೋ ವೇದಾಭ್ಯಾಸೋ ಪಂಚಧಾ ||

(ದಕ್ಷ ಸ್ಮೃತಿ 2/26-27)

ಎಂಬಂತೆ ವೇದಾಭ್ಯಾಸವನ್ನು ಐದು ರೀತಿಗಳಲ್ಲಿ ಮಾಡಬಹುದು. 1. ಸ್ವಯಂ ಗುರುಮುಖದಿಂದ ಅಧ್ಯಯನ ಮಾಡುವುದು, 2. ಅದರ ಅರ್ಥವನ್ನು ಚರ್ಚಿಸುವುದು, 3- ಅದನ್ನು ಮತ್ತೆ ಮತ್ತೆ ಹೇಳಿಕೊಳ್ಳುವುದು, 4. ಜಪ ಮಾಡುವುದು, 5. ಶಿಷ್ಯರಿಗೆ ಅದರ ಪಾಠ ಮಾಡಿಸಿ ಹೇಳಿಕೊಡುವುದು.

### ಗೃಹದ ಇತರೇ ಸದಸ್ಯರ ಪೋಷಣೆ

ಮನೆಯ ಇತರೇ ಸದಸ್ಯರನ್ನು ಗೃಹಸ್ಥನು ಪೋಷಿಸಬೇಕು. ಇದು ಅವನ ಧರ್ಮ. ಇದು ಲೌಕಿಕ ಹಾಗೂ ಪರಲೋಕದ ಧರ್ಮವಾಗಿದ್ದು,

ಇದು ಫಲವನ್ನು ಕೊಡುತ್ತದೆ. ಇದು ಪ್ರಶಂಸನೀಯವೂ ಹೌದು. ಇದರಿಂದ ಸ್ವರ್ಗ ಪ್ರಾಪ್ತಿಯಾಗುತ್ತದೆ.ಹೀಗೆ ಪೋಷಣೆ ಪಡೆಯುವವರು ಯೋಗ್ಯರಾಗಿದ್ದು ಅರ್ಹರಾಗಿರಬೇಕು. ಹೀಗೆ ಕಷ್ಟಪಟ್ಟು ಅವರ ಪಾಲನೆ ಪೋಷಣೆ ಮಾಡುವುದು ಗೃಹಸ್ಥನ ಮುಖ್ಯ ಕರ್ತವ್ಯ.

ಪೋಷಕ ವರ್ಗಕ್ಕೆ ಹಿಂಸೆ ಕೊಡಬಾರದು, ಅದನ್ನು ಉಪೇಕ್ಷಿಸಬಾರದು, ಕಷ್ಟ ಕೊಡಬಾರದು, ಅಪಶಬ್ದಗಳನ್ನು ನುಡಿಯಬಾರದು, ಸತಾಯಿಸಬಾರದು, ಅವರನ್ನು ಸಮ್ಮಾನದಿಂದ ನೋಡಬೇಕು, ಆದರಿಸಬೇಕು, ಅವರೊಂದಿಗೆ ಪ್ರೀತಿಯ ವಾರ್ತಾಲಾಪ ಮಾಡಬೇಕು, ಅನ್ನ, ವಸ್ತ್ರ, ಔಷಧಿಗಳಿಂದ ಉಪಚರಿಸಬೇಕು, ಸೇವೆ ಮಾಡಬೇಕು. ಹೀಗೆ ಮಾಡುವುದರಿಂದ ಒಳ್ಳೆಯ ಫಲ ಪ್ರಾಪ್ತವಾಗುತ್ತದೆ. ಇದಕ್ಕೆ ತಪ್ಪಿದಲ್ಲಿ ನರಕದಲ್ಲಿ ಬೀಳಬೇಕಾಗುತ್ತದೆ. ಆದುದರಿಂದ ಪ್ರಯತ್ನಪೂರ್ವಕ ಇವರನ್ನು ಪೋಷಿಸುವುದು ಉಚಿತ.

ಭರಣಂ ಪೋಷ್ಯ ವರ್ಗಸ್ಯ ಪ್ರಶಸ್ತಂ ಸ್ವರ್ಗ ಸಾಧನಮ್ ||
ನರಕಂ ಪೀಡನೇ ಚಾಸ್ಯ ತಸ್ಮಾ ತಸ್ಮಾದ್ಯತ್ನೇನ ತಂ ಭರೇತ್ ।
(ದಕ್ಷ 2/30-31)

ತಂದೆ, ತಾಯಿ, ಗುರು, ಹೆಂಡತಿ, ಪ್ರಜೆ, ದೀನ–ದುಃಖಿಗಳು, ಆಶ್ರಿತ ವ್ಯಕ್ತಿಗಳು, ಅತಿಥಿ, ವಯಸ್ಸಾದ ಜ್ಞಾತಿ ಜನ, ಬಂಧು ಬಾಂಧವರು, ವಿಕಲಾಂಗರು, ಅನಾಥರು, ಶರಣಾಗತಿ ಹೊಂದಿದವರು, ಧನ ಹೀನ ವ್ಯಕ್ತಿಗಳು ಇವರೆಲ್ಲರೂ ಪೋಷ್ಯವರ್ಗದವರಾಗಿರುತ್ತಾರೆ. ಅನೇಕ ಜೀವಿಗಳ ಜೀವನ ನಿರ್ವಹಣೆ ಮಾಡುವವನು ಸಫಲ ವ್ಯಕ್ತಿಯಾಗುವನು.

ಇತರೇ ಜನರು ಸ್ವಾರ್ಥದಿಂದ ತಮ್ಮ ಹೊಟ್ಟೆ ಮಾತ್ರ ಹೊರೆದುಕೊಳ್ಳುವರೊ ಅಂತಹವರು ಬದುಕಿದ್ದೂ ಸತ್ತಂತೆಯೇನೇ |

ಜೀವತ್ಯೇಕಃ ಸ ಲೋಕೇಷು ಬಹುಭಿರ್ಯೋಽನುಜೀವ್ಯತೇ ।
ಜೀವಂತೋಽಪಿ ಮೃತಾಶ್ಚನ್ಯೇ ಪುರುಷಾಃ ಸ್ವೋದರಂಭರಾಃ ||2-40||

## ಸ್ವಂತ ಧನದ ಸದುಪಯೋಗ

ಅಗತ್ಯವಿರುವ, ಯೋಗ್ಯ ಜನರಿಗೆ ಯಾರು ದಾನವನ್ನು ನೀಡುವರೊ ಅಥವಾ ಅಂತಹವರ ಸೇವೆಗಾಗಿ ತನ್ನ ಧನವನ್ನು ಉಪಯೋಗಿಸುವವನೊ,

ಶಿಕ್ಷಣ, ಧರ್ಮ, ನ್ಯಾಯಗಳಿಗೆ, ಯಜ್ಞ-ಯಾಗಾದಿಗಳಿಗೆ, ಪೂಜಾದಿ ಸತ್ಕರ್ಮಾನುಷ್ಠಾನಗಳಿಗೆ ಉಪಯೋಗಿಸುವನೊ ಅಂತಹ ವ್ಯಕ್ತಿಯ ಧನವು ಸದ್ವಿನಿಯೋಗದ ಧನವೆಂದು ಪರಿಗಣಿಸಲಾಗುವುದು. ಇದಕ್ಕೆ ಬೇರೆಯಾದ ದಕ್ಕೆ ಉಪಯೋಗಿಸಿದರೆ ಅದು ದುರ್ವಿನಿಯೋಗ ಎನಿಸಿಕೊಳ್ಳುವುದು. ಅಂತಹ ಧನವು ನಾಶವಾದಂತೆಯೇನೇ. ಇದಕ್ಕಲ್ಲದೆ ಬೇರೆಯದಕ್ಕೆ ಉಪ ಯೋಗಿಸಿದ ಧನವು ಅದು ಉಳಿಯುವುದಿಲ್ಲ, ಯಾವುದಾದರೊಂದು ರೀತಿ ಯಲ್ಲಿ ಖರ್ಚಾಗಿ ಬಿಡುವುದು-

ಯಹದತಿ ವಿಶಿಷ್ಟೇಭ್ಯೋ ಯಜ್ಜುಹೋತಿ ದಿನೇ ದಿನೇ ||
ತತ್ತು ವಿತ್ತಮಹಂ ಮನ್ಯೇ ಶೇಷಂ ಕಸ್ಯಾಪಿ ರಕ್ಷತಿ || 2/34-35 ||

## ಉತ್ತಮ ಅಧಮ ಸ್ತ್ರೀಯರ ಲಕ್ಷಣ

ಒಂದು ಮನೆ ಉತ್ತಮ ರೂಪದಲ್ಲಿರಲೂ ಅದರಲ್ಲಿ ಸ್ತ್ರೀಯೇ ಕಾರಣ. ಆ ಸ್ತ್ರೀಯು ಪತ್ನಿಯನ್ನು ಅನುವರ್ತಿಸಿಕೊಂಡು, ಅವನಿಗೆ ಅನುಕೂಲಳಾಗಿ ದ್ದರೆ ಗೃಹಸ್ಥಾಶ್ರಮದಂತಹ ಆಶ್ರಮ ಬೇರೊಂದಿಲ್ಲ. ಇಂತಹ ಸ್ತ್ರೀಯು ತನ್ನ ಪತಿಯ ಧರ್ಮ, ಅರ್ಥ, ಕಾಮ ಇವುಗಳ ಸಾಧನೆಯಲ್ಲಿ ಸಹಭಾಗಿನಿಯಾಗಿರು ತ್ತಾಳೆ. ಇವಳು ಪತಿಗೆ ಅನುಕೂಲಳಾಗಿರುವುದರಿಂದ ಆ ಗೃಹಸ್ವರ್ಗವಾಗಿರು ತ್ತದೆ. ಒಂದೂ ಅಪಶಬ್ದವನ್ನು ಹೇಳದವಳು ಪ್ರಿಯ ಮಾತುಗಳನ್ನೇ ಹೇಳುವವಳು, ಪ್ರತಿಯೊಂದು ಕೆಲಸದಲ್ಲೂ ಕುಶಲತೆ ತೋರುವವಳು, ಸಾಧು ಸ್ವಭಾವದವಳಾಗಿರುವವಳು, ಮನೆಯ ಗೌಪ್ಯವನ್ನು ಕಾಪಾಡುವವಳು, ಹಾಗೂ ಸ್ವಾಮಿಭಕ್ತ ಸ್ತ್ರೀಯಾಗಿರುವವಳು ಮಾನವ ಮಾತ್ರಳಾಗಿರುವುದಿಲ್ಲ. ಅವಳು ಸಾಕ್ಷಾತ್ ದೇವಿಯಾಗಿರುವಳು—

ಅನುಕೂಲಾ ನ ವಾಗ್ದುಷ್ಟಾ ದಕ್ಷಾ ಸಾಧ್ವೀ ಪ್ರಿಯಂವದಾ || 3 ||
ಆತ್ಮಗುಪ್ತಾ ಸ್ವಾಮಿ ಭಕ್ತ ದೇವತಾ ಸಾ ನ ಮಾನುಷೀ || 4 ||

ಅನುಕೂಲವತೀ ಸ್ತ್ರೀ ಇರುವ ಮನೆ ಸ್ವರ್ಗವಾಗಿರುತ್ತದೆ. ಅಂತೆಯೇ ಪ್ರತಿಕೂಲಳಾದ ಸ್ತ್ರೀ ಇರುವ ಮನೆ ನರಕವಾಗಿರುತ್ತದೆ. ಗಂಡನಿಗೆ ಎಲ್ಲ ರೀತಿ ಯಲ್ಲೂ ಅನುಕೂಲಳಾಗಿರುವವಳೇ ನಿಜವಾದ ಸ್ತ್ರೀ. ಇದಕ್ಕೆ ವಿರುದ್ಧರಾದವಳು ವ್ಯಕ್ತಿಗೆ ಹತ್ತಿದ ಜ್ವರವಿದ್ದವಳಂತೆ—

ಭರ್ತ್ರುಃ ಪ್ರೀತಿ ಕರೀ ನಿತ್ಯಂ ಸಾ ಭಾರ್ಯಾ ಹೀತರಾ ಜರಾ
|| 4/13 ||

ವಿನಯಶೀಲರಾದ ಶಿಷ್ಯ, ಪತ್ನಿ, ಸಹೋದರರು, ಮಕ್ಕಳು, ಸೇವಕರು ಮತ್ತು ಆಶ್ರಿತ ವ್ಯಕ್ತಿಗಳನ್ನು ಹೊಂದಿರುವವನನ್ನು ಪ್ರಪಂಚದಲ್ಲಿ ಎಲ್ಲರೂ ಗೌರವಿಸುವರು. ಹೀಗಿಲ್ಲದಿದ್ದಲ್ಲಿ ಅವನು ದುಃಖಿಯಾಗಿದ್ದು, ಎಲ್ಲರ ಅಪ ಹಾಸ್ಯಕ್ಕೆ ಗುರಿಯಾಗುವನು.

ಇತರರಿಗೆ ನೀಡುವ ಸುಖ ದುಃಖಗಳನ್ನು
ಸ್ವತಃ ಪಡೆಯುವನು

ತಾನು ಸುಖವಾಗಿರಬೇಕೆನ್ನುವ ವ್ಯಕ್ತಿ ಇತರರನ್ನು ಸುಖವಾಗಿರಿಸ ಬೇಕು. ಇತರರಿಗೆ ದುಃಖ ನೀಡಿದರೆ, ಅವನೇ ದುಃಖಿತನಾಗುವನು. ಇತರ ರಿಗೆ ಸುಖವನ್ನು ನೀಡಿದರೆ, ಮುಂದೆ ಅವನಿಗೂ ಸುಖ ದೊರೆಯುವುದು ; ದುಃಖ ನೀಡಿದರೆ ಅವನಿಗೂ ದುಃಖ ಪ್ರಾಪ್ತವಾಗುವುದು.

ಯಥೈವಾತ್ಮಾ ಪರಸ್ತದ್ವದ್ ದ್ರಷ್ಟವ್ಯಃ ಸುಖಮಿಚ್ಛತಾ |
ಸುಖದುಃಖಾನಿ ತುಲ್ಯಾನಿ ಯಥಾತ್ಮನಿ ತಥಾ ಪರೆ ||
ಸುಖಂ ವಾ ಯದಿ ವಾ ದುಃಖಂ ಯತ್ಕಿಂಚಿತ್ ಕ್ರಿಯತೇ ಪರೇ |
ತತಸ್ತತ್ತು ಪುನಃ ಪಶ್ಚಾತ್ ಸರ್ವಮಾತ್ಮನಿ ಜಾಯತೇ ||
(ದಕ್ಷ 3/20-21)

ಧರ್ಮಾಚರಣದಿಂದ ಸುಖ ಪ್ರಾಪ್ತಿ

ಧರ್ಮಕ್ಕೆ ಅನುಸಾರ ಕರ್ಮವನ್ನು ಮಾಡದವನು ಧರ್ಮಾಚರಣ ಹೀನ ನಾಗುತ್ತಾನೆ. ಅಂತಹವನಿಗೆ ಸುಖ ದೊರೆಯುವುದಿಲ್ಲ. ಸುಖದ ಅಭಿಲಾಷೆ ಎಲ್ಲರಿಗೂ ಇರುತ್ತದೆ. ಆದರೆ ಧರ್ಮಾಚರಣೆಯಿಂದಲೇ ಸುಖವು ಪ್ರಾಪ್ತ ವಾಗುವುದು. ಆದುದರಿಂದ ಚಾತುರ್ವರ್ಣ್ಯದವರೆಲ್ಲರೂ ಪ್ರತಿಯೊಬ್ಬರು ಧರ್ಮದ ಪಾಲನೆಯನ್ನು ಮಾಡಬೇಕು.

ಸುಖಂ ವಾಂಛಂತಿ ಸರ್ವೇ ಹಿ ತಚ್ಚ ಧರ್ಮ ಸಮುದ್ಭವಮ್ |
ತಸ್ಮಾದ್ಧರ್ಮಃ ಸದಾ ಕಾರ್ಯಃ ಸರ್ವವರ್ಣೈಃ ಪ್ರಯತ್ನತಃ ||
(ದಕ್ಷ 3-23)

## ನವ—ನವಕ

ಈ 'ನವ-ನವಕ' ಎನ್ನುವ ಪ್ರಯೋಗ ಸ್ಕಂದ ಪುರಾಣದ ಕಾಶೀ ಖಂಡದ ಪೂರ್ವಾರ್ಧದ 40ನೇ ಅಧ್ಯಾಯದಲ್ಲಿ ಇದೇ ಅರ್ಥದಲ್ಲಿ ನೀಡ ಲಾಗಿದೆ.

'ನವ-ನವಕ' ಎನ್ನುವುದು 9 ಅಂಶಗಳು, ಪ್ರತಿಯೊಂದು ಅಂಶದಲ್ಲೂ ಮತ್ತೆ 9 ಸೂಚನೆಗಳು ಇವೆ. ಒಟ್ಟು 9×9=81 ಸೂಚನೆಗಳು ಇದ ರಲ್ಲಿವೆ. ಈ ಸೂಚನೆಗಳನ್ನು ತಪ್ಪದೆ ಅನುಸರಿಸಬೇಕೆಂದು ಸ್ಮೃತಿಕಾರನು ತಿಳಿಸುತ್ತಾನೆ. ಇವು ವ್ಯಕ್ತಿಯ ಸದಾಚಾರ ಹಾಗೂ ವ್ಯವಹಾರ ಜ್ಞಾನಕ್ಕೆ ಸಂಬಂಧಪಟ್ಟದ್ದಾಗಿದ್ದು, ಅನುಕರಣೀಯವಾಗಿವೆ.

**1. ಒಂಭತ್ತು ಅನುಕರಣೀಯ ಮಂಗಳಕಾರಕ ಮಾತುಗಳು :**

ಅತಿಥಿ ಸೇವೆಯು ಮಾನವನ ಮುಖ್ಯ ಕರ್ತವ್ಯ. ಅತಿಥಿಯು ಮನೆಗೆ ಮೇಲೆ ಗೃಹಸ್ಥನು ಏನು ಮಾಡಬೇಕು, ಯಾವ ರೀತಿ ವರ್ತಿಸಬೇಕು—ಎಂಬು ದರ ಬಗ್ಗೆ ದಕ್ಷನು ಒಂಭತ್ತು ವಿಷಯಗಳನ್ನು ತಿಳಿಸುತ್ತಾನೆ.

1. ಸೌಮ್ಯ ಮನಸ್ಸನ್ನು ಹೊಂದಿರಬೇಕು. 2. ಅತಿಥಿಯನ್ನು ಸೌಮ್ಯ ದೃಷ್ಟಿಯಿಂದ ಕಾಣಬೇಕು. 3. ಸೌಮ್ಯಮುಖ ಭಾವನನ್ನು ಹೊಂದಿರಬೇಕು. 4. ಸೌಮ್ಯವಾಗಿ ಮಾತನಾಡಬೇಕು. 5. ಗೃಹಸ್ಥನು ಎದ್ದು ನಿಂತು ಅತಿಥಿ ಯನ್ನು ಬನ್ನಿ ಕುಳಿತುಕೊಳ್ಳಿ' ಎಂದು ಸ್ವಾಗತಿಸಬೇಕು. 6. ಅವರ ಕುಶಲ ವನ್ನು ಕೇಳಬೇಕು. 7. ಅತಿಥಿಗಳೊಂದಿಗೆ ಸ್ನೇಹಪೂರ್ವಕವಾಗಿ ಮಾತುಕತೆ ಯಾಡಬೇಕು. 8. ಬಂದಿರುವ ಅತಿಥಿಯ ಸಮೀಪದಲ್ಲಿ ಕುಳಿತುಕೊಂಡು, ಆತನ ಸೇವೆ ಮಾಡಬೇಕು. 9. ಅತಿಥಿಯು ಮನೆ ಬಿಟ್ಟು ಹೋಗುವಾಗ ಆತ ನೊಂದಿಗೆ ಸ್ವಲ್ಪ ದೂರ ಹೋಗಿ, ಬಿಟ್ಟು ಬರಬೇಕು.

ಮನಶ್ಚಕ್ಷುರ್ಮುಖಂ ವಾಚಂ ಸೌಮ್ಯಂ ದದ್ಯಾಚ್ಚ ಚತುಷ್ಟಯಮ್ ||
ಅಭ್ಯುತ್ಥಾನ ಮಿಹಾಗಚ್ಛ ಪೃಚ್ಛಾಲಾಪ ಪ್ರಿಯಾನ್ವಿತಃ |
ಉಪಾಸನಮನು ವ್ರಜ್ಯಾ ಕಾರ್ಯಾಣ್ಯೇತಾನಿ ಯತ್ನತಃ ||

(ದಕ್ಷ 3/4–5)

ಈ ಒಂಭತ್ತು ಮಾತುಗಳು ಅಮೃತ ಸಮಾನವಾಗಿದ್ದು ಮಂಗಳಕಾರಕ ವಾಗಿವೆ. ಇವು ಗೃಹಸ್ಥನ ಔನ್ನತ್ಯಕ್ಕೆ ಸಾಧನವಾಗಿವೆ. ಆದುದರಿಂದ

ಪ್ರಯತ್ನಪಟ್ಟು ಈ ವಿಷಯಗಳನ್ನು ಅನುಸರಿಸಲೇಬೇಕು.

ಈ ವಿಷಯ ಆಧುನಿಕ ಯುಗಕ್ಕೆ ಹೊಂದುವುದು ಕಷ್ಟಕರವಾದರೂ ಬೀದಿಯಲ್ಲಿ ಹೋಗುವವರೆಲ್ಲ ಬಂದು ಕೇಳಿದಾಗ ಸಹಾಯ ಮಾಡಬಾರದು. ಗುರ್ತು ಪರಿಚಯದವರು ಬಂದಾಗ ತಪ್ಪದೆ ಈ ಮಾತುಗಳನ್ನು ಅನುಸರಿಸುವುದು ಸೂಕ್ತ.

2. ಒಂಭತ್ತು ಇತರೇ ಯೋಗ್ಯ ಮಾತುಗಳು

ಮೇಲೆ ತಿಳಿಸಿರುವವುಗಳ ಜೊತೆಗೆ ಈ ಒಂಭತ್ತು ಮಾತುಗಳನ್ನು ಸೇರಿಸಿಕೊಳ್ಳಬೇಕು. ಇದು ಅಭ್ಯಾಗತರಿಗೆ ಸಂಬಂಧಪಟ್ಟ ವಿಷಯ.

1. ಅಭ್ಯಾಗತನಿಗೆ ಸ್ಥಾನ ನೀಡುವುದು, 2. ಕುಡಿಯಲು ನೀರು ನೀಡುವುದು, 3. ಆಸನ ಕೊಡುವುದು, 4. ಕಾಲು ತೊಳೆಯುವುದು, 5. ಸ್ನಾನಕ್ಕೆ ಮೊದಲು ಎಣ್ಣೆ ನೀಡುವುದು, 6. ವಿಶ್ರಾಂತಿಗೆ ಸ್ಥಳ ನೀಡುವುದು, 7. ಶಯನಕ್ಕೆ ಅನುಕೂಲ ಮಾಡಿಕೊಡುವುದು, 8. ಯಥಾಶಕ್ತಿ ಭೋಜನ ನೀಡುವುದು, 9. ಶುಭ್ರತೆಗೆ ಮಣ್ಣು ಮತ್ತು ನೀರು ನೀಡುವುದು. ಅಭ್ಯಾಗತನನ್ನು ಬರಿ ಹೊಟ್ಟೆಯಲ್ಲಿ ಎಂದಿಗೂ ಮಲಗಿಸಬಾರದು.

ಈಷದ್ದಾನಾನಿ ಚಾನ್ಯಾನಿ ಭೂಮಿರಾಪಸ್ತೃಣಾನಿ ಚ |
ಪಾದ ಶೌಚಂ ತಥಾಭ್ಯಂಗ ಮಾಶ್ರಯಃ ಶಯನಂ ತಥಾ ||
ಕಿಂಚಿಚ್ಚಾನ್ನಂ ಯಥಾ ಶಕ್ತಿ ನಾಸ್ಯಾನರ್ಶ್ಯನ್ ಗೃಹೇ ವಸೇತ್ |
ಮೃಜ್ಜಲಂ ಚಾರ್ಥಿನೇ ದೇಯ ಮೇತಾನ್ಯಪಿ ಸದಾ ಗೃಹೇ ||

(ದಕ್ಷ 3/6-7)

ಈ ಸಂಬಂಧದಲ್ಲಿಯೂ ಗೃಹಸ್ಥನು ಎಚ್ಚರಿಕೆಯಿಂದ ಇರಬೇಕು. ಈ ಆಧುನಿಕ ಯುಗದಲ್ಲಿ ಮೋಸದ ಸೋಗಿನಿಂದ ಬರುವವರು ಬಹಳ ಜನರಿರುತ್ತಾರೆ. ಮನೆಯಲ್ಲಿ ಒಂಟಿ ಹೆಂಗಸು ಇದ್ದಾಗ ನೀರು ಕೇಳಲು ಬಂದು ದರೋಡೆ ಮಾಡಿರುವ ಉದಾಹರಣೆಗಳು ಹಲವಿವೆ. ಆದುದರಿಂದ ವಿವೇಚನಾಯುತರಾಗಿ, ಬಂದಿರುವ ಅಭ್ಯಾಗತನ ಮುಖ ಲಕ್ಷಣಗಳಿಂದ ಅವನ ಸ್ವಭಾವನ್ನರಿತು, ಮನೆಯಲ್ಲಿ ಗಂಡಸರಿರುವಾಗ ಈ ಉಪಚಾರಗಳನ್ನು ಮಾಡುವುದು ಸೂಕ್ತ. ಮಾನವತ್ವವಿರಬೇಕು, ಆದರೆ ಸ್ವತಃ ಮೋಸ ಹೋಗಬಾರದು, ಹಾನಿಗೆ ಒಳಗಾಗಬಾರದು.

### 3. ಒಂಭತ್ತು ಆವಶ್ಯಕ ಕರ್ಮಗಳು

ಈ ಒಂಭತ್ತು ಕರ್ಮಗಳನ್ನು ದ್ವಿಜರು ತಪ್ಪದೆ ಮಾಡಬೇಕಾದುದು ಆವಶ್ಯಕ—

1. ಸ್ನಾನ, 2. ಸಂಧ್ಯಾವಂದನೆ, 3. ಜಪ, 4. ಹೋಮ, 5. ಸ್ವಾಧ್ಯಾಯ, 6. ದೇವಪೂಜನ, 7. ಬಲಿ ವೈಶ್ವದೇವ, 8. ಅತಿಥಿ ಸೇವೆ ಮತ್ತು 9. ಯಥಾ ಶಕ್ತಿ ದೇವ–ಪಿತೃ–ಮನುಷ್ಯ, ದೀನ, ಅನಾಥ, ತಪಸ್ವೀ, ಮಾತಾ–ಪಿತಾ–ಗುರು ಇತ್ಯಾದಿಯವರಿಗೆ ಯಥಾವಿಧಿ, ಯಥಾ ಯೋಗ್ಯ ಭೋಜನ ಹಾಗೂ ಜಲಾಂಜಲಿಯಿಂದ ಸಂತುಷ್ಟಗೊಳಿಸುವುದು.

ಸ್ನಾನಂ ಸಂಧ್ಯಾಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ |
ವೈಶ್ವದೇವಂ ತಥಾತಿಥ್ಯಮುಧೃತಂ ಚಾಪಿ ಶಕ್ತಿತಃ ||
ಪಿತೃದೇವ ಮನುಷ್ಯಾಣಾಂ ದೀನಾನಾಥ ತಪಸ್ವಿನಾಮ್ |
ಮಾತಾ ಪಿತೃ ಗುರುಣಾಂ ಚ ಸಂವಿಭಾಗೋ ಯಥಾರ್ಹತಃ ||

(ದಕ್ಷ 3/8–9)

ಸಮಯದ ತುಟ್ಟಿಯಿಂದ ಹೋಮ ಇತ್ಯಾದಿಗಳನ್ನು ಈಗಿನ ಕಾಲದಲ್ಲಿ ಪ್ರತಿ ದಿನ ಮಾಡುವುದು ಕಷ್ಟವಾದರೂ, ಮನೆಯಲ್ಲಿ ವಿಶೇಷ ಸಂದರ್ಭಗಳಲ್ಲಿ ಈ ಅಗ್ನಿಕಾರ್ಯವನ್ನು ಮಾಡಿಸಬಹುದು. ಉಳಿದವುಗಳನ್ನು ತಪ್ಪದೆ ನಿರ್ವಹಿಸಬೇಕು. ಅದಕ್ಕೆ ತಕ್ಕಂತೆ ಸಮಯವನ್ನು ಹೊಂದಿಸಿಕೊಳ್ಳಬೇಕು.

### 4. ಒಂಭತ್ತು ಮಾಡಬಾರದ ಕೆಲಸಗಳು

ಇವನ್ನು ವಿಕರ್ಮ ಅಥವಾ ನಿಂದಿತ ಕರ್ಮಗಳೆಂದು ಕರೆಯುತ್ತಾರೆ. ಇವು ತ್ಯಾಜ್ಯವಾದವುಗಳು. ಸದ್ಗೃಹಸ್ಥನು ಈ ನಿಂದಿತ ಕರ್ಮಗಳನ್ನು ಎಂದೆಂದಿಗೂ, ಮರೆತೂ ಆಚರಿಸಬಾರದು.

1. ಸುಳ್ಳು ಹೇಳುವುದು, 2. ಇತರೆ ಹೆಂಗಸರನ್ನು (ಪರ ಸ್ತ್ರೀಯನ್ನು) ಒಲಿಸಿಕೊಳ್ಳಲು ಪ್ರಯತ್ನಿಸುವುದು. 3. ತಿನ್ನಬಾರದುದನ್ನು ತಿನ್ನುವುದು (ಅಭಕ್ಷ್ಯ ಭಕ್ಷಣ), 4. ಅಗಮ್ಯಾಗಮನ (ಮಾಡಬಾರದುದನ್ನು ಮಾಡುವುದು), 5. ಅಪೇಯ–ಪಾನ, 6. ಹಿಂಸೆ ಕೊಡುವುದು, 7. ಕಳ್ಳತನ ಮಾಡುವುದು, 8. ವೇದ ಬಾಹ್ಯ ಕರ್ಮಗಳನ್ನು ಮಾಡುವುದು

ಮತ್ತು 9. ಮಿತ್ರ ಧರ್ಮದ ನಿರ್ವಹಣೆಯನ್ನು ಮಾಡದಿರುವುದು.

ಅನೃತಂ ಪಾರದರ್ಯಾ ಚ ತಥಾ ಭಕ್ಷ್ಯಸ್ಯ ಭಕ್ಷಣಮ್ ||
ಅಗಮ್ಯಾಗಮನಾ ಪೇಯಂ ಹಿಂಸಾ ಸ್ತೇಯಂ ತಥೈವ ಚ |
ಅಶ್ರೌತ ಕರ್ಮಾಚರಣಂ ಮಿತ್ರಧರ್ಮ ಬಹಿಷ್ಕೃತಮ್ ||
ನವೈತಾನಿ ವಿಕರ್ಮಾಣಿ ತಾನಿ ಸರ್ವಾಣಿ ವರ್ಜಯೇತ್ |

(ದಕ್ಷ 3/10–12)

ಇಂದಿನ ವೈಜ್ಞಾನಿಕ ಹಾಗೂ ವೇಗದ ಯುಗದಲ್ಲಿ ಇವನ್ನು ಅನುಸರಿಸು ವುದು ಕಷ್ಟವೇನಲ್ಲ. ಮನಸ್ಸು ಮಾಡಬೇಕಷ್ಟೆ. ಪ್ರತಿಯೊಬ್ಬ ಭಾರತೀಯನೂ ತಪ್ಪದೆ ಅನುಸರಿಸಿ, ಬೇರೆ ದೇಶಗಳಿಗೆ ಆದರ್ಶನಾಗಿರಬೇಕು.

## 5. ಒಂಭತ್ತು ಪ್ರಚ್ಛನ್ನ (ಗೋಪ್ಯ ಮಾಡಬೇಕಾದ) ವಿಷಯಗಳು

ಈ ಒಂಭತ್ತು ಮಾತುಗಳು ಪರಮ ಗೋಪನೀಯವಾದವುಗಳು. ಇವುಗಳನ್ನು ಇತರರಿಗೆ ತಿಳಿಯುವಂತೆ ಮಾಡಬಾರದು.

1, ತನ್ನ ವಯಸ್ಸು, 2. ಸ್ವಂತ ಇಟ್ಟುಕೊಂಡಿರುವ ಹಣ, 3. ಮನೆಯಲ್ಲಿನ ಒಡಕು, ಜಗಳ, ಮನಸ್ತಾಪಗಳು, 4. ಮಂತ್ರ, 5. ಸಂಭೋಗ, 6. ಔಷಧಿ, 7. ತಪಸ್ಸು, 8. ನೀಡಿದ ದಾನ ಮತ್ತು 9. ಹೊಂದಿದ ಅವಮಾನ—

ಆಯುರ್ವಿತ್ತಂ ಗೃಹಚ್ಛಿದ್ರಂ ಮಂತ್ರ ಮೈಥುನ ಭೇಷಜಮ್ ||
ತಪೋ ದಾನಾಪಮಾನೀ ಚ ನವ ಗೋಪಾನಿ ಯತ್ನತಃ |

(ದಕ್ಷ 3/12-13)

ಈ 'ನವಕ' ಎಷ್ಟೊಂದು ಸೊಗಸಾಗಿದೆ ನೋಡಿ, ಇಂದಿನ ವೈಜ್ಞಾನಿಕ ಯುಗಕ್ಕೆ ಎಷ್ಟೊಂದು ಅಚ್ಚುಕಟ್ಟಾಗಿ ಹೊಂದಿಕೊಳ್ಳುತ್ತದೆ ಎಂಬುದನ್ನು ಆಧುನಿಕಜ್ಞರು ಗಮನಿಸಬೇಕು.

## 6. ಒಂಭತ್ತು ಬೆಳಕಿಗೆ ಬರಬೇಕಾದ ವಿಷಯಗಳು

ಈ ಮಾತುಗಳು ಗೃಹಸ್ಥನು ತಪ್ಪದೆ ಪ್ರಕಟಿಸಬೇಕಾದ, ಹತ್ತು ಜನಕ್ಕೆ ತಿಳಿಯಪಡಿಸಬೇಕಾದ ವಿಚಾರಗಳಾಗಿವೆ. ಇವುಗಳನ್ನು ಬಚ್ಚಿಡಬಾರದು—

1. ಪ್ರಾಯೋಗ್ಯ (ಸಾಲ ತೆಗೆದುಕೊಳ್ಳುವ ವಿಚಾರ), 2. ಋಣ ಶುದ್ಧಿ (ಸಾಲ ತೀರಿಸುವ ವಿಚಾರ), 3. ದಾನದಲ್ಲಿ ಸೇರಿಸಿದ ವಸ್ತುಗಳು, ವಸ್ತುಗಳ ದಾನದ ವಿಚಾರ, 4. ಅಧ್ಯಯನ, 5. ವ್ಯಾಪಾರ ಮಾಡಿದ ವಸ್ತುಗಳು, 6. ಕನ್ಯಾದಾನ (ಮದುವೆ), 7. ವೃಷೋತ್ಸರ್ಗ, 8. ಏಕಾಂತದಲ್ಲಿ ಮಾಡಿದ ಪಾಪ ಹಾಗೂ 9. ನಿಂದನೀಯವಲ್ಲದ ಕೆಲಸ—

ಪ್ರಯೋಗ್ಯ ಮೃಣ ಶುದ್ಧಿಶ್ಚ ದಾನಧ್ಯಯನ ವಿಕ್ರಯಾಃ ||
ಕನ್ಯಾದಾನಂ ವೃಷೋತ್ಸರ್ಗೋ ರಹಃ ಪಾಪಮಕುತ್ಸಿತಮ್ |

(ದಕ್ಷ 3/13–14)

ಇದೂ ಕೂಡ ಐದನೆಯದರಷ್ಟೇ ಮಹತ್ವವಾದುದು. ಇಂದಿನ ನವೀನ ಯುಗಕ್ಕೂ ಎಷ್ಟು ಪ್ರಸ್ತುತ ಎಂಬುದು ಅರ್ಥ ಮಾಡಿಕೊಂಡು ಅದನ್ನು ಅನುಸರಿಸಬೇಕು.

### 7. ಒಂಭತ್ತು ಅಕ್ಷಯ ಸಫಲ ಮಾತುಗಳು

ಈ ಒಂಭತ್ತು ಜನರು ಸಮಾಜಕ್ಕೆ ಅಮೂಲ್ಯರಾದವರು—

1. ತಾಯಿ, 2. ತಂದೆ, 3. ಗುರು, 4. ಮಿತ್ರ, 5. ವಿನಯ ವಂತನು, 6. ಉಪಕಾರ ಮಾಡುವವನು, 7. ದೀನನು, 8. ಅನಾಥನು ಹಾಗೂ 9. ಸಜ್ಜನ ಸಾಧು ಮಹಾತ್ಮ ವ್ಯಕ್ತಿ—

ಮಾತಾ ಪಿತ್ರೋಗುರೌ ಮಿತ್ರೇ ವಿನೀತೇ ಚೋಪಕಾರಿಣಿ |
ದೀನನಾಥ ವಿಶಿಷ್ಟೇಭ್ಯೋ ದತ್ತಂ ತು ಸಫಲಂ ಭವೇತ್ ||

(ದಕ್ಷ3/15)

ಮೇಲೆ ತಿಳಿಸಿದವರು ಏನನ್ನೇ ನೀಡಲಿ, ಅದು ಅಕ್ಷಯವೂ, ಸಫಲವೂ ಆಗುವುದು. ಇಂದಿನ ಸಮಯದಲ್ಲೂ ಇದು ಸತ್ಯವಾಗಿರುವುದನ್ನು ಅನೇಕ ಮಹನೀಯರ ಜೀವನ ಚರಿತ್ರೆಗಳಿಂದ ತಿಳಿಯಬಹುದು.

### 8. ಒಂಭತ್ತು ನಿಷ್ಫಲ ಮಾತುಗಳು

ಈ ಕೆಳಗೆ ತಿಳಿಸಿರುವ ಒಂಭತ್ತು ರೀತಿಯ ವ್ಯಕ್ತಿಗಳಿಗೆ ಏನನ್ನು ನೀಡಿದರೂ ಅದು ನಿಷ್ಫಲವೇ ಆಗುತ್ತದೆ.

1. ಧೂರ್ತನು, 2. ಖೈದಿ, 3. ಮೂರ್ಖ, 4. ಅಯೋಗ್ಯ ವೈದ್ಯ, 5. ಜೂಜುಕೋರ, 6. ಠಕ್ಕ (ಮೋಸಗಾರ), 7. ಸುಳ್ಳು

(ಮುಃಖ) ಸ್ತುತಿ ಮಾಡುವವನು, 8. ಅನವಶ್ಯಕ ಪ್ರಶಂಸೆ ಮಾಡುವ ಭಟ್ಟಂಗಿ ಹಾಗೂ 9. ಕಳ್ಳ—

ಧೂರ್ತೇ ವಂದಿನಿ ಮಂದೇ ಚ ಕುವೈದ್ಯೆ ಕಿತವೇ ಶಠೇ |
ಚಾಟು ಚೋಽಚಾರಣ ರೇಭ್ಯೋ ದತ್ತಂ ಭವತಿ ನಿಷ್ಫಲಮ್ ||3–16||

ಈ ಮಾತು ಇಂದಿನ ಸಮಾಜದಲ್ಲೂ ನಿಜವಾಗಿದೆ. ಇಂತಹವರಿಗೆ ಏನನ್ನು ನೀಡಿದರೂ ವ್ಯರ್ಥವೇ !

**9. ಆಪತ್ತಿನಲ್ಲಿಯೂ ಇತರರಿಗೆ ನೀಡದ ವಸ್ತುಗಳು**

ಆಪತ್ತಿನ ಸಮಯದಲ್ಲಿಯೂ ಇತರರಿಗೆ ನೀಡದ ಕೆಲವು ವಸ್ತುಗಳಿವೆ. ಮೂಢನಾದವನು ಇವುಗಳನ್ನು ನೀಡಿದರೂ ಕೂಡ ಪ್ರಾಯಶ್ಚಿತ್ತದಿಂದಲೂ ಅವನು ಶುದ್ಧನಾಗುವುದಿಲ್ಲ. ಅವು ಯಾವುವೆಂದರೆ—

1. ಎಲ್ಲರಿಗೂ ಅನ್ವಯವಾಗುವಂತಹ ಸಾರ್ವಜನಿಕ ಸಂಪತ್ತು, 2. ಚಂದಾದಲ್ಲಿ ಪಡೆದ ಹಣ ಅಥವಾ ವಸ್ತುಗಳು, 3. ಇತರರಿಗೆ ನೀಡುವುದಕ್ಕಾಗಿ ಪಡೆದಿರುವ ವಸ್ತು (ಅಮಾನತ್ತಾಗಿ ನೀಡಿರುವ ಸಂಪತ್ತು), 4. ದೇವಾಲಯೇತ್ಯಾದಿಗಳಿಗೆ ದಾನವಾಗಿ ನೀಡಿರುವ ಕಟ್ಟಡ ನಿರ್ಮಾಣ ವಸ್ತುಗಳು, 5. ತನ್ನ ಹೆಂಡತಿ, 6. ಪತ್ನಿಯ ಧನ, 7. ಜಾಮೀನಿನ ಹಣ, 8. ಅಮಾನತ್ತಿನಲ್ಲಿರಿಸಿಕೊಂಡಿರುವ ವಸ್ತುಗಳು ಹಾಗೂ 9. ಪಿತ್ರಾರ್ಜಿತವಾಗಿ ಬಂದಿರುವ ಸಂಪತ್ತು—

ಸಾಮಾನ್ಯ ಯಾಚಿತಂ ನ್ಯಸ್ತಮಾಧಿರ್ದಾರಾಶ್ಚ ತದ್ಧನಮ್ |
ಅನ್ವಾಹಿತಂ ಚ ನಿಕ್ಷೇಪಃ ಸರ್ವಸ್ವಂ ಚಾನ್ವಯೆ ಸತಿ ||

(ದಕ್ಷ 3/17)

ಈ ರೀತಿಯಲ್ಲಿ ದಕ್ಷ ಸ್ಮೃತಿಯಲ್ಲಿ ತಿಳಿಸಿರುವ ವ್ಯವಹಾರ ಸಂಬಂಧದ ಈ ವ್ಯವಸ್ಥೆಯು ಅತ್ಯಂತ ಮಹತ್ವಪೂರ್ಣವಾದುದು. ಸಮಾಜದ ಭದ್ರತೆಗೆ ಈ ರೀತಿಯ ನೈತಿಕ ಕಟ್ಟುಪಾಡು ಎಷ್ಟು ಅವಶ್ಯಕ ಎನ್ನುವುದನ್ನು ಸಾವಿರಾರು ವರ್ಷಗಳ ಹಿಂದೆಯೇ ನಮ್ಮ ಪೂರ್ವಿಕರು ಹೇಗೆ ನಿಯಮನಗೊಳಿಸಿದ್ದರು ಎನ್ನುವುದನ್ನು ಈ ಸೂತ್ರಗಳು ತಿಳಿಸುತ್ತವೆ. ಭಾರತೀಯ ಜನ ಜೀವನದಲ್ಲಿ ಈ ಕಟ್ಟುಪಾಡು ಇಂದಿಗೂ ನಡೆದುಕೊಂಡು ಬರುತ್ತಿರುವುದನ್ನು ನಾವು ಕಾಣಬಹುದು.

## ಅಧ್ಯಾತ್ಮಯೋಗ ನಿರೂಪಣೆ

ದಕ್ಷನು ಮಹಾನ್ ಯೋಗಶಕ್ತಿ ಸಂಪನ್ನನು. ತನ್ನ ಸ್ಮೃತಿಯಲ್ಲಿ ನಾಲ್ಕೂ ಆಶ್ರಮಗಳ ಧರ್ಮ ನಿರೂಪಣೆ ಮಾಡಿದ ಮೇಲೆ ಅಧ್ಯಾತ್ಮ ಜ್ಞಾನ ರೂಪದ ಯೋಗ ಸಾಧನೆಯನ್ನು ಪ್ರಮುಖವಾದುದೆಂದು ತಿಳಿಸಿ, ಅದು ಆತ್ಮಕಲ್ಯಾಣದ ಪರಮ ಸಾಧನವೆಂದು ತಿಳಿಸಿದ್ದಾನೆ. ಈ ಸ್ಮೃತಿಯ ಕಡೆಯಲ್ಲಿ ಯೋಗತತ್ತ್ವದ ಸ್ಪಷ್ಟ ಸ್ವರೂಪದ ಮೇಲೆ ಬೆಳಕು ಚೆಲ್ಲಿದ್ದಾನೆ. ಅದರ ಎಲ್ಲ ಸ್ವರೂಪಗಳ ಬಗ್ಗೆಯೂ ಚರ್ಚಿಸಿದ್ದಾನೆ. ಇದು ಸಾಧಕರಿಗೆ ಕೈಪಿಡಿಯಂತಿದೆ. ಯೋಗ ನಿರೂಪಣೆಯ ಪ್ರಸ್ತಾವನೆಯಲ್ಲಿ

ಲೋಕೋ ವಶೀಕೃತೋ ಯೇನ ಯೇನ ಚಾತ್ಮಾ ವಶೀಕೃತಃ |
ಇಂದ್ರಿಯಾರ್ಥೋ ಜಿತೊ ಯೇನ ತಂ ಯೋಗಂ ಪ್ರಬ್ರವೀಮ್ಯಹಮ್ ||

ಎಂದು 7ನೇ ಅಧ್ಯಾಯದ ಒಂದನೇ ಶ್ಲೋಕದಲ್ಲಿ ತಿಳಿಸಿದ್ದಾನೆ.

ಅಂದರೆ, ಯೋಗದಿಂದ ಮಾನವನು ಎಲ್ಲ ಲೋಕಗಳನ್ನೂ ತನ್ನ ವಶ ಮಾಡಿಕೊಳ್ಳಬಲ್ಲನು. ಯೋಗಶಕ್ತಿ ಇಲ್ಲದೆ ಅವನು ಏನನ್ನು ವಶಪಡಿಸಿಕೊಳ್ಳಲಾರನು. ಯೋಗಶಕ್ತಿಯಿಂದ ವ್ಯವಹಾರ ಜ್ಞಾನವನ್ನೂ, ಲೋಕಜ್ಞಾನವನ್ನೂ ಪಡೆಯಬಹುದು. ಯೋಗದಿಂದ ಅವನು ಆತ್ಮವನ್ನು ತನ್ನ ವಶದಲ್ಲಿ ಇಟ್ಟುಕೊಳ್ಳಬಹುದು. ಇದರಿಂದ ಇಂದ್ರಿಯಗಳನ್ನು ನಿವೃತ್ತಿಗೊಳಿಸುವ ಕ್ಷಮತೆಯನ್ನೂ ಪಡೆಯಬಹುದು. ಬೇರೆ ಇನ್ನಾವ ರೀತಿಯಲ್ಲಿ ಪ್ರಮಾಥೀ ಸ್ವಭಾವದ ಇಂದ್ರಿಯಗಳು ಅವನ ವಶವಾಗಲಾರವು.

ದಕ್ಷನು ಪತಂಜಲಿ ಯೋಗದ—ಪ್ರಾಣಾಯಾಮ, ಧ್ಯಾನ, ಪ್ರತ್ಯಾಹಾರ, ಧಾರಣೆ, ತರ್ಕ ಹಾಗೂ ಸಮಾಧಿ–ಎನ್ನುವ ಷಡಂಗಯೋಗದ ಬಗ್ಗೆ ವಿವರಗಳನ್ನು ನೀಡಿದ್ದಾನೆ. ಇದು ಸಾಮಾನ್ಯವಾಗಿ ಎಲ್ಲ ಉಪನಿಷತ್ತುಗಳಲ್ಲೂ ಕಾಣಬಹುದು.

ನಂತರ ದಕ್ಷನು ಯೋಗದ ಸೂಕ್ಷ್ಮ ಹಾಗೂ ಸಾರ ಸ್ವರೂಪದ ಮೇಲೆ ಬೆಳಕು ಚೆಲ್ಲುವನು. ಅರಣ್ಯಗಳಲ್ಲಿ ಮಾಡುವ ತಪಸ್ಸು, ಅನೇಕ ಗ್ರಂಥಗಳ ಅಧ್ಯಯನ, ಶರೀರದ ದಂಡನೆ, ವಿವಿಧ ರೀತಿಯ ಯಜ್ಞಗಳು, ಬೇರೆ ಬೇರೆ ರೀತಿಯ ತಪಸ್ಸು, ನಾಸಿಕಾಗ್ರದೃಷ್ಟಿ, ವಿಶೇಷ ರೀತಿಯ ಶಾರೀರಿಕ ಶುದ್ಧಿಗಳು, ಮೌನಧಾರಣೆ, ಅನೇಕ ಮಂತ್ರಗಳ ಜಪ ಹಾಗೂ ಪುಣ್ಯಾನುಷ್ಠಾನಗಳಿಂದ

ಯೋಗ ಸಿದ್ಧಿಯಾಗುವುದಿಲ್ಲ. ಬದಲಾಗಿ ಯಾವುದಾದರೂ ಪವಿತ್ರ ಸಾತ್ವಿಕ ಪದಾರ್ಥದ ಅಥವಾ ಅಭೀಷ್ಟ ದೇವತೆಯ ಆಳವಾದ ಧ್ಯಾನದ ಅಭ್ಯಾಸ ಹಾಗೂ ಅದರ ಸಾಧನೆಯಲ್ಲಿ ಗುರುಗಳ ಉಪದೇಶದಲ್ಲಿ ದೃಢವಾದ ನಿಷ್ಠೆ, ಪ್ರಾಪಂಚಿಕ ವಿಷಯಗಳಲ್ಲಿ ಅನಾಸಕ್ತನಾಗಿ, ಅದರ ನಶ್ವರತೆಯನ್ನು ಮನಸ್ಸಿನಲ್ಲಿ ಇರಿಸಿಕೊಂಡು ತೀವ್ರ ವೈರಾಗ್ಯದ ಆಶಯವನ್ನು ಹೊಂದಿದಲ್ಲಿ ಪೂರ್ಣ ಯೋಗವು ಸಿದ್ಧಿಸುವುದು–

ಅಭಿಯೋಗಾತ್ ತಥಾಭ್ಯಾಸಾತ್ ತಸ್ಮಿನ್ನೇವ ತು ನಿಶ್ಚಯಾತ್ |
ಪುನಃ ಪುನಶ್ಚ ನಿರ್ವೇದಾದ್ಯೋಗಃ ಸಿದ್ಧ್ಯತಿ ನಾನ್ಯಥಾ || (ದಕ್ಷ 7/6)

ಯಾರಿಗೆ ಆತ್ಮ ಪರಮಾತ್ಮ ಚಿಂತನೆಯಲ್ಲಿ ಪರಮಪ್ರಾಪ್ತಿಯಾಗಿದೆಯೊ, ಬಾಹ್ಯಾಂತರ ಪವಿತ್ರತೆಯು ಆಟದ ವಸ್ತುವಾಗಿದೆಯೊ, ಪ್ರಪಂಚದ ಚಿಕ್ಕ, ದೊಡ್ಡ ಎಲ್ಲ ಪ್ರಾಣಿಗಳೂ, ಚರಾಚರ ಜಗತ್ತಿನಲ್ಲಿನ ಎಲ್ಲವನ್ನು ಪರಮಾತ್ಮನೆಂದು ಭಾವಿಸುವ ಸಮಬುದ್ಧಿಯನ್ನು ಹೊಂದಿರುವರೊ ಅಂತಹವರು ಯೋಗದ ಪರಮ ಸಿದ್ಧಿಯನ್ನು ಪಡೆಯುವರು. ಇತರರಿಗೆ ಈ ಸಿದ್ಧಿ ಲಭಿಸುವುದಿಲ್ಲ. ಆತ್ಮರೂಪೀ ಪರಮಾತ್ಮನಲ್ಲಿ ಯಾರು ಸದಾ ನೆಲೆಸಿರುವರೊ, ಪ್ರಾಪಂಚಿಕ ವಸ್ತುಗಳಲ್ಲಿ ಸ್ವಲ್ಪವೂ ಆಸಕ್ತಿ ಇಲ್ಲವೋ, ಜ್ಞಾನ ದೃಷ್ಟಿಯಿಂದ ನಿತ್ಯ ಸತ್–ತತ್ತ್ವ–ಆತ್ಮದಿಂದ ಮಾತ್ರ ಸಂತುಷ್ಟರಾಗಿ ಪೂರ್ಣವಾಗಿ ತೃಪ್ತರಾಗಿರುವರೊ ಅಂತಹವರಿಗೆ ಯೋಗವು ಪ್ರಾಪ್ತವಾಗುವುದು ; ಇತರರಿಗೆ ಇಲ್ಲ. ಎಚ್ಚರದಲ್ಲಿ-ನಿದ್ದೆಯಲ್ಲಿ ಯಾರು ಸದಾ ಭಗವದ್ಧ್ಯಾನದಲ್ಲಿ ನಿರತರಾಗಿರುವರೊ, ಅತ್ಯಂತ ಉನ್ನತ ಸ್ಥಿತಿಯನ್ನು ಪಡೆಯುವಲ್ಲಿ ಸದಾ ಪ್ರಯತ್ನಗಳನ್ನು ಮಾಡುತ್ತಿರುವರೊ ಅಂತಹ ವ್ಯಕ್ತಿ ಶ್ರೇಷ್ಠ ಯೋಗಿ ಎಂದೂ, ಬ್ರಹ್ಮವಾದಿಗಳಲ್ಲಿ ವರಿಷ್ಠರೆಂದೂ ಹೇಳಬಹುದು.

ಈ ಪ್ರಪಂಚದಲ್ಲಿ ಪರಮಾತ್ಮನ ವಿನಹ ಬೇರೆ ಯಾರನ್ನು ಯಾವುದನ್ನು ಯಾರು ಕಾಣುವುದಿಲ್ಲವೊ, ಆ ಯೋಗಿಯೇ ಬ್ರಹ್ಮೀಭೂತನಾಗಿ, ಕೃತಕೃತ್ಯನಾಗುವನು–ಎಂಬುದು ದಕ್ಷನ ಅಭಿಮತ.

ಯ ಆತ್ಮವ್ಯತಿರೇಕೇಣ ದ್ವಿತೀಯಂ ನೈವ ಪಶ್ಯತಿ |
ಬ್ರಹ್ಮಭೂತಃ ಸ ವಿಜ್ಞೇಯೋ ದಕ್ಷಪಕ್ಷ ಉದಾಹೃತಃ || 7/11 ||

ಸಾಧಕನು ಆಕಸ್ಮಾತ್ತಾಗಿ ಪ್ರಾಪಂಚಿಕ ವಿಷಯಗಳ ಕಡೆ ಆಕರ್ಷಿತ

ನಾದದ್ದೇ ಆದರೆ ಅಂತಹವನಿಗೆ ಯೋಗ ಪ್ರಾಪ್ತಿಯು ಇಲ್ಲ. ಅದರಿಂದ ವಿಷಯಸುಖಗಳ ಕಡೆ ಗಮನ ಕೊಡಬಾರದು. ಪ್ರಯತ್ನಪೂರ್ವಕವಾಗಿ ವಿಷಯಾಸಕ್ತ ಗುಣಗಳನ್ನು ದೂರ ಮಾಡಬೇಕು. ಮರೆತೂ ಅವುಗಳ ಬಗ್ಗೆ ಯೋಚಿಸಬಾರದು.

ಯೋಗ ಸಾಧನೆಯ ಮುಖ್ಯ ಸ್ವರೂಪವನ್ನು ತಿಳಿಸುತ್ತಾ—

ವೃತ್ತಿ ಹೀನಂ ಮನಃ ಕೃತ್ವಾ ಕ್ಷೇತ್ರಜ್ಞಂ ಪಶಮಾತ್ಮನಿ ।
ಏಕೀಕೃತ್ಯ ವಿಮುಚ್ಯೇತ ಯೋಗೋಽಯಂ ಮುಖ್ಯ ಉಚ್ಯತೇ ॥
ದಕ್ಷ 7-15)

ಎಂದು ದಕ್ಷನು ತಿಳಿಸುತ್ತಾನೆ.

ಪ್ರಪಂಚದ ಮಾನಸಿಕ ಸ್ಥಿತಿಯಿಂದ ಪೂರ್ತಿ ಮುಕ್ತವಾಗಿ, ವಿಶುದ್ಧ ಪರಮಾತ್ಮನಲ್ಲಿ ಕ್ಷೇತ್ರಜ್ಞ (ಜೀವಾತ್ಮ)ನು ಲೀನವಾಗಬೇಕು ಇವರಿಬ್ಬರೂ ಒಂದೇ ಭಾವದಿಂದ ಕೂಡಿದಾಗ ಸಾಧಕನು ಮುಕ್ತನಾಗುವನು. ಇದನ್ನೇ ಮುಖ್ಯವಾಗಿ ಯೋಗ ಎಂದು ಕರೆಯುವುದು.

ವಿಷಯ ಭೋಗಗಳಿಂದ ದೂರವಾಗಿ, ವಿರಕ್ತರಾಗಿ ಮಾನಸಿಕವಾಗಿ ಯಾರು ನಿಶ್ಚಲರಾಗಿ, ಸುಸ್ಥಿರರಾಗುವರೊ, ಕೇವಲ ಆತ್ಮ ಶಕ್ತಿಯಿಂದ ಸ್ವ-ಸ್ವರೂಪದಲ್ಲಿ ಪ್ರತಿಷ್ಠಿತರಾಗುವರೊ, ಅಂತಹ ಸ್ಥಿತಿಗೆ 'ಸಮಾಧಿ' ಎಂದು ಹೆಸರು.

ತ್ಯಕ್ತ್ವಾ ವಿಷಯ ಭೋಗಾಂಶ್ಚ ಮನೋ ನಿಶ್ಚಲತಾ ಗತಮ್ ।
ಆತ್ಮಶಕ್ತಿ ಸ್ವರೂಪೇಣ ಸಮಾಧಿಃ ಪರಿ ಕೀರ್ತಿತಃ ॥ 7-21 ॥

ತನ್ನತನ ಹಾಗೂ ಇತರರತನದ ಭಾವವಿಲ್ಲದವನು, ಪ್ರಪಂಚದ ಸಾಂಸಾರಿಕ ವಿಷಯಗಳಲ್ಲಿ ಲೇಶ ಮಾತ್ರವೂ ಆಸಕ್ತಿ ಇಲ್ಲದವನೂ, ಚಿರಕಾಲವೂ ಸರ್ವತ್ರ ಪರಮಾತ್ಮನೇ ಎಲ್ಲವೂ ಎನ್ನುವವನೂ ಆದ ವ್ಯಕ್ತಿಯು ಪರಮಪದ ಅಥವಾ ಕೈವಲ್ಯವನ್ನು (ನಿರ್ವಾಣವನ್ನು) ಪಡೆಯುವನು—

ನಾಹಂ ನೈವಾನ್ಯಸಂಬಂಧೋ ಬ್ರಹ್ಮ ಭಾವೇನ ಭಾವಿತಃ ।
ಈ ದೃಶಾಯಾಮವಸ್ಥಾಯಾಮ ವಾಪ್ಯಂ ಪರಮಂ ಪದಂ ॥ 7-49 ॥

ಇಂತಹ ಸಮಾಧಿಸ್ಥ ಯೋಗಿಯು ಯಾವ ದೇಶ ಅಥವಾ ಪ್ರದೇಶದಲ್ಲಿ

ಇರುವನೊ, ಅಂತಹ ಪ್ರದೇಶವು ಪವಿತ್ರವೂ, ಕ್ಷೇತ್ರವೂ ಆಗುತ್ತದೆ. ಆತನ ಸಮಸ್ತ ಕುಲ ಪರಿವಾರ ಹಾಗೂ ಬಂಧು ಬಾಂಧವರು ಸಂಪನ್ನರಾಗುವರಲ್ಲದೆ, ಚರಾಚರ ಜಗತ್ತಿನ ಕಲ್ಯಾಣವಾಗುವುದು—

ಯಸ್ಮಿನ್ ದೇಶೇ ವಸೇದ್ ಯೋಗೀ ಧ್ಯಾನಯೋಗ ವಿಚಕ್ಷಣಃ |
ಸೋಽಪಿ ದೇಶೋ ಭವೇತ್ ಪೂತಃ ಕಿಂ ಪುನಸ್ತಸ್ಯ ಬಂಧವಾಃ|| (ದಕ್ಷ 7/47)

## 28. ಆಪಸ್ತಂಭ ಸ್ಮೃತಿ

ಆಪಸ್ತಂಭ ಋಷಿಯು ಓರ್ವ ಪ್ರಾಚೀನ ವೈದಿಕ ಮಹರ್ಷಿ. ಈತನು ಮಹಾನ್ ಯೋಗಿಯೂ, ವೇದ-ವೇದಾಂಗ ಶಾಸ್ತ್ರಗಳ ಮರ್ಮಜ್ಞನೂ, ಪರಮ ದಯಾಳುವೂ ಆಗಿರುವ ಮರ್ಮಜ್ಞನು. ಯಾಜ್ಞವಲ್ಕ್ಯನು ತನ್ನ ಸ್ಮೃತಿಯಲ್ಲಿ ಈತನನ್ನು ವಿಶಿಷ್ಟ ಧರ್ಮಶಾಸ್ತ್ರಕಾರರಲ್ಲಿ ಓರ್ವನೆಂದು ತಿಳಿಸಿ, ಈತನನ್ನು ಸನ್ಮಾನಿಸಿದ್ದಾನೆ. ಈತನನ್ನು ಕೃಷ್ಣ ಯಜುರ್ವೇದದ ಆಚಾರ್ಯರಲ್ಲಿ ಮುಖ್ಯನಾದವನೆಂದು ಮಾನ್ಯ ಮಾಡಲಾಗಿದೆ. ಗೋತ್ರ ನಿರ್ದೇಶಕ ಪಾಣಿನಿಯ 'ವಿದಾದಿ' ಗಣಸೂತ್ರದಲ್ಲಿ (4/1/104) ಈತನ ಹೆಸರು ಸೇರಿಸಲಾಗಿವೆ. ನಮ್ಮಲ್ಲಿ ಅನೇಕರು ಹೇಳುವ ಪ್ರವರದಲ್ಲಿ 'ಆಪಸ್ತಂಭ ಸೂತ್ರಃ, ಯಜುಶ್ಶಾಖಾಧ್ಯಾಯಿ' ಎಂದಿದ್ದು ಈತನ ಹೆಸರನ್ನು ಪ್ರತಿ ದಿನ ನಾವು ಸ್ಮರಿಸುತ್ತಿದ್ದೇವೆ. ಈತನ ಗೋತ್ರದವರು ದಕ್ಷಿಣ ಭಾರತದಲ್ಲಿ ಬಹಳಷ್ಟು ಕಡೆ ಇದ್ದಾರೆ. ಇತರೇ ಮಹರ್ಷಿಗಳಂತೆ ಈತನು ಸರ್ವಜ್ಞನೂ, ದಿವ್ಯ ದೃಷ್ಟಿಯನ್ನು ಹೊಂದಿದ್ದವನೂ ಆಗಿದ್ದನು. ಕೃಪಾಳುವಾದ ಈತನು ಕಶ್ಯಪ ಪತ್ನಿ ದಿತಿಯು ನಡೆಸಿದ ಪುತ್ರಕಾಮೇಷ್ಠಿ ಯಾಗಕ್ಕೆ ಓರ್ವ ಮುಖ್ಯ ಆಚಾರ್ಯನಾಗಿದ್ದನು.

ರಾಜಾ ನಾಭಾಗನ ಸಮಯದಲ್ಲಿ ಈತನ ದೀರ್ಘ ಕಾಲದ ಜಲ ಸಮಾಧಿಯ ಬಗ್ಗೆ ಕಥೆಯೊಂದಿದ್ದು, ಇದು ಪುರಾಣಗಳಲ್ಲಿ ಕಂಡು ಬಂದಿದೆ. ಈತನು ಎಲ್ಲರ ಬಗ್ಗೆಯೂ ಪ್ರೀತ್ಯಾದರಗಳನ್ನು ತೋರುತ್ತಿದ್ದನು. ಈತನ ತ್ಯಾಗ, ತಪಸ್ಸು, ದೀನ ದುಃಖಿಗಳ ಬಗ್ಗೆ ಕರುಣೆ, ಧರ್ಮಾಚರಣೆ ಹಾಗೂ ಗೋಭಕ್ತಿಯನ್ನು ಕುರಿತಾದ ಕಥೆಯೊಂದು ಸ್ಕಂದ ಪುರಾಣದ ರೇವಾ ಖಂಡದಲ್ಲಿದೆ.

ಒಮ್ಮೆ ಈತನು ವಿಶಿಷ್ಟ ರೀತಿಯ ತಪಸ್ಸು ಮಾಡಲು ನರ್ಮದಾ ಮತ್ತು ಮತ್ಸ್ಯ ನದಿಗಳ ಸಂಗಮದಲ್ಲಿ ಜಲ ಸಮಾಧಿಯಲ್ಲಿದ್ದನು. ಮೀನುಗಾರರು ಮೀನುಗಳನ್ನು ಹಿಡಿಯಲು ಬಲೆಯನ್ನು ಬೀಸಿದರು. ಆಗ ಮೀನುಗಳ ಜೊತೆಯಲ್ಲಿ ಸಮಾಧಿಸ್ಥನಾದ ಆಪಸ್ತಂಭನನ್ನೂ ಹೊರಗೆಳೆದರು. ಬಲೆಯಲ್ಲಿದ್ದ ಋಷಿಯನ್ನು ನೋಡಿ, ಮೀನುಗಾರರು ಭಯಗೊಂಡು ತಮ್ಮಿಂದ ಅಪರಾಧವಾಗಿದೆ ಮನ್ನಿಸೆಂದು ಬೇಡಿಕೊಂಡರು.

ಆದರೆ ಋಷಿಯ ಕಣ್ಣಿಗೆ ಬಿದ್ದಿದ್ದು ನೀರಿನಿಂದ ಹೊರ ತೆಗೆದ ಮೀನುಗಳ ಒದ್ದಾಟ. ಆತನ ಹೃದಯದಲ್ಲಿ ಮೀನುಗಳ ಬಗ್ಗೆ ಕರುಣೆ ಉಕ್ಕಿತು. ಆಗ ಆತನು ಹೇಳಿದನು,

"ಹಯ್ಯೋ ! ಇದೆಂತಹ ಸ್ಥಿತಿ ! ಮಾನವನು ತನ್ನ ಸುಖಕ್ಕಾಗಿ ದುಃಖದಲ್ಲಿನ ಪ್ರಾಣಿಗಳ ಕಡೆ ಗಮನವೇ ನೀಡುವುದಿಲ್ಲವಲ್ಲ ! ಇದೆಂತಹ ಕ್ರೌರ್ಯತೆ! ಇದು ಪ್ರಾಣಿಗಳ ಮೇಲಿನ ನಿರ್ದಯತೆಯ ಅತ್ಯಾಚಾರವಲ್ಲವೆ ? ಮಾನವನ ತನ್ನ ಸ್ವಾರ್ಥಕ್ಕಾಗಿ ಈ ರೀತಿ ಪ್ರಾಣಿಗಳನ್ನು ಬಲಿ ಕೊಡುವುದೆ ? ಸ್ವಾರ್ಥಿಯಾದವನು ಜ್ಞಾನಿಯಾದರೂ, ತಪಸ್ಸು ಮಾಡಿದರೂ ದುಃಖದಿಂದಿರುವ ಪ್ರಾಣಿಗಳು ಎಲ್ಲಿ ಹೋದಾವು, ಯಾರಿಗೆ ಶರಣಾದವು ? ತಾನೋರ್ವನೆ ಸುಖವನ್ನು ಅನುಭವಿಸಬೇಕೆಂದುಕೊಳ್ಳುವ ವ್ಯಕ್ತಿಯು ಮಹಾಪಾಪಿಯಾಗುವನು. ಸಕಲ ಜೀವಿಗಳ ದುಃಖವನ್ನು ನಾನೊಬ್ಬನೇ ಅನುಭವಿಸುವುದಕ್ಕೆ ಮಾರ್ಗವೇನಾದರೂ ಇದೆಯೆ ? ನನ್ನಲ್ಲಿನ ಅಲ್ಪ ಸ್ವಲ್ಪ ಪುಣ್ಯವೂ ದೀನ ದುಃಖಿಗಳಿಗೆ ನೀಡುವ ಸದವಕಾಶಕೊಡು ದೇವ, ಅವರ ಪಾಪವನ್ನು ನಾನು ಅನುಭವಿಸುವಂತೆ ಮಾಡು ದೇವರೆ !

ಕೋ ನು ಮೇ ಸ್ಯಾದುಪಾಯೋ ಹಿ ಯೇನಾಹಂ ದುಃಖಿತಾತ್ಮನಾಂ |
ಅಂತಃ ಪ್ರವಿಶ್ಯ ಭೂತಾನಾಂ ಭವೇಯಂ ಸರ್ವದುಃಖ ಭೃತ್ ||
ಯನ್ಮಮಾಸ್ತಿ ಶುಭಂ ಕಿಂಚಿತ್ ತದ್ದೀನಾಗುಪಗಚ್ಛತು |
ಯತ್ಕೃತಂ ದುಷ್ಕೃತಂ ತೈಶ್ಚ ತದಶೇಷ ಮುಪೈತು ಮಾಮ್ ||

(ಸ್ಕಂದ. ರೇವಾ. 13/37-38)

ಭೂಮಿಯ ಮೇಲಿನ ದರಿದ್ರ, ವಿಕಲಾಂಗ, ರೋಗಿ ಜೀವಿ (ಪ್ರಾಣಿ) ಗಳನ್ನು ನೋಡಿ, ಹೃದಯ ಕರಗದವರು ಮನುಷ್ಯರೇ ಅಲ್ಲ. ಸಮರ್ಥ

ನಿದ್ದಾಗಿಗ್ಯೂ ಸ್ರಾಣ ಸಂಕಟದಲ್ಲಿರುವ, ಭಯವಿಹ್ವಲ ಜೀವಿ (ಪ್ರಾಣಿ)ಗಳನ್ನು ರಕ್ಷಿಸದವನು ಪಾಪವನ್ನು ಅನುಭವಿಸುವನು. ಆದುದರಿಂದ ಒದ್ದಾಡುತ್ತಿರುವ ಮೀನುಗಳ ದುಃಖವನ್ನು ದೂರ ಮಾಡುವ ಬಗ್ಗೆ ಚಿಂತಿಸುವೆ. ಇದನ್ನು ಮಾಡದೆ ಮುಕ್ತಿಯನ್ನು ಇಚ್ಛಿಸುವುದಿಲ್ಲ. ನನಗೆ ಸ್ವರ್ಗವೂ ಬೇಡ. ನಾನು ಮನಸ್ಸು, ಮಾತು, ಶರೀರ ಹಾಗೂ ಕ್ರಿಯೆಗಳ ಮುಖಾಂತರ ಏನಾದರೂ ಪುಣ್ಯ ಕಾರ್ಯ ಮಾಡಿದ್ದರೆ, ಅದರಿಂದ ಈ ಎಲ್ಲ ದುಃಖಾರ್ತ ಪ್ರಾಣಿಗಳು ಒಳ್ಳೆಯ ಗತಿಯನ್ನು ಪಡೆಯಲಿ ಪರಮಾತ್ಮ.

ನರಕಂ ಯದಿ ಪಶ್ಯಾಮಿ ವತ್ಸ್ಯಾಮಿ ಸ್ವರ್ಗಂ ಏವಂ ವಾ |
ಯನ್ಮಯಾ ಸುಕೃತಂ ಕಿಂಚಿನ್ಮನೋವಾಕ್ಕಾಯ ಕರ್ಮಭಿಃ |
ಕೃತಂ ತೇನಾಪಿ ದುಃಖಾರ್ತಾಃ ಸರ್ವೇ ಯಾಂತು ಶುಭಾಂಗತಿಮ್ ||"

(ಸ್ಕಂದ. ರೇವಾ, 13/77-78)

ಎಂದು ಹೃದಯಪೂರ್ವಕವಾಗಿ ಪರಮಾತ್ಮನನ್ನು ಪ್ರಾರ್ಥಿಸಿದನು.

ಎಷ್ಟೊಂದು ಮಾರ್ಮಿಕವಾದ ಹೃದಯದ ಪರಿಭಾಷೆ ಇದು. ಕರುಣಾ ಪೂರಿತ ಈ ಭಾವನೆಗಳು. ಸದ್ಭಾವಯುತವಾಗಿದ್ದು, ಇಂದಿಗೂ, ಎಂದೆಂದಿಗೂ ಹೇಗೆ ಅನ್ವಯವಾಗುತ್ತದೆ ! ಎಂಬುದನ್ನು ಗಮನಿಸಬೇಕು.

ಇಂತಹ ಮಹಾನ್ ಧರ್ಮದ ಮಾತುಗಳನ್ನಾಡಿರುವ ಆಪಸ್ತಂಭನು ದಯೆ, ಕರುಣೆಗಳ ಪ್ರತೀಕವಾಗಿದ್ದಾನೆ. ಈತನ ಭಾವನೆಗಳಲ್ಲಿ ಸ್ವಲ್ಪಾಂಶ ವನ್ನಾದರೂ ಜನರು ಅನುಸರಿಸಿದ್ದೇ ಆದರ ಪ್ರಪಂಚಾದ್ಯಂತ ಸುಖ-ಶಾಂತಿಗಳು ಹರಡುವುದರಲ್ಲಿ ಅನುಮಾನವಿಲ್ಲ.

ಈ ಮಾತುಗಳನ್ನಾಲಿಸಿ ಎಲ್ಲ ಮೀನ್ಗಾರರೂ ಗಡಿಬಿಡಿಕೊಂಡು, ರಾಜಾ ನಾಭಾಗನ ಬಳಿಗೆ ಹೋಗಿ ವಿಷಯವನ್ನೆಲ್ಲ ತಿಳಿಸಿದರು. ಕೂಡಲೇ ಮಂತ್ರಿ ಸಮೇತ ರಾಜನು ಬಂದು ಮುನಿಯ ದರ್ಶನ ಮಾಡಿ, ಆದರ ಸತ್ಕಾರಗಳನ್ನು ನೆರವೇರಿಸಿದನು.

"ರಾಜಾ ! ಮೀನುಗಳೊಂದಿಗೆ ನನ್ನನ್ನು ಇವರು ಹೊರಗೆಳೆದಿದ್ದಾರೆ. ಆದರಿಂದ ನನ್ನ ಬೆಲೆಯನ್ನು ಅವರಿಗೆ ನೀಡು !"

ಧನವನ್ನು, ಅರ್ಧ ರಾಜ್ಯವನ್ನು ಕೂಡ ರಾಜನು ನೀಡಲು ಸಿದ್ಧನಾಗು ತ್ತಾನೆ. ಆದಕ್ಕೆ 'ಅಷ್ಟು ನನ್ನ ಬೆಲೆ ಅಲ್ಲ !' ಎಂದು ಋಷಿಯು ಹೇಳಿದನು.

ಆಲಿಸಿ ರಾಜನು ಗಾಬರಿಗೊಂಡನು.

ಆಗ ಮಹರ್ಷಿ ಲೋಮಶನು ರಾಜನೊಂದಿಗೆ ಹೇಳಿದನು, "ಹೇ ರಾಜನ್ ! ಭಯಗೊಳ್ಳದಿರು! ಗೋವು ಅಮೂಲ್ಯವಾದುದು. ಆದುದರಿಂದ ಈ ಋಷಿಯ ಮೂಲ ಬೆಲೆಯನ್ನು ಒಂದು ಗೋವಿನ ರೂಪದಲ್ಲಿ ನೀಡು."

ರಾಜನು ಅಂತೆಯೇ ಮಾಡಿದನು. ಹಸುವನ್ನು ಪಡೆದು ಮೀನುಗಾರರು ಹೊರಟು ಹೋದರು. ಇದರಿಂದ ಮಹರ್ಷಿ ಆಪಸ್ತಂಭನು ಪ್ರಸನ್ನಗೊಂಡು,

"ರಾಜಾ ! ಉಚಿತ ಮೌಲ್ಯವನ್ನು ನೀಡಿ ನನ್ನನ್ನು ಕೊಂಡಿರುವೆ. ಗೋವು ಪರಮ ಪವಿತ್ರವೂ, ಪಾಪಗಳನ್ನು ನಾಶ ಮಾಡುವಂತಹುದೂ ಆಗಿದೆ. ಅದು ಪ್ರದಕ್ಷಿಣೆ ಮಾಡಲು ಯೋಗ್ಯವಾದ ಮಂಗಳಕರವಾದ ಪ್ರಾಣಿಯಾಗಿದೆ– ಗಾವಃ 'ಪ್ರದಕ್ಷಿಣೀ ಕಾರ್ಯಾ ವಂದನೀಯಾ ಹಿ ನಿತ್ಯಶಃ' ಎಂಬುದು ಇದಕ್ಕೆ ಸಾಕ್ಷಿ.

ಗಾವೋ ಮೇ ಜಾಗ್ರತೋ ನಿತ್ಯಂ ಗಾವಃ ಪೃಷ್ಠತ ಏವ ಚ ।
ಗಾವೋ ಮೇ ಹೃದಯೇ ಚೈವ ಗವಾಂ ಮಧ್ಯೇ ವಸಾಮ್ಯಹಮ್ ||

ಎನ್ನುವ ಮಂತ್ರವನ್ನು ಶ್ರದ್ಧಾಪೂರ್ವಕವಾಗಿ ಜಪಿಸಿದಲ್ಲಿ, ಅಂತಹವನು ಸರ್ವ ಪಾಪಗಳಿಂದ ಮುಕ್ತನಾಗುವನು.

ಬ್ರಾಹ್ಮಣರನ್ನು ರಕ್ಷಿಸುವುದು, ಗೋವುಗಳ ಪಾಲನೆ, ದೀನ ದುರ್ಬಲ ದುಃಖೀ ಪ್ರಾಣಿ (ಜೀವಿ)ಗಳನ್ನು ಪಾಲಿಸುವುದರಿಂದ ವ್ಯಕ್ತಿಯು ದಿವ್ಯಲೋಕವನ್ನು ಪಡೆಯುವನು."

ಎಂದು ಹೇಳಿದನು.

ಮಹರ್ಷಿಯ ಅನುಗ್ರಹದಿಂದ ಮೀನುಗಳು ಸದ್ಗತಿಯನ್ನು ಪಡೆದುವು. ಆ ನಂತರ ಮಹರ್ಷಿಯು ರಾಜಾ ನಾಭಾಗನಿಗೆ ಸ್ವಧರ್ಮದ ಮಹಿಮೆಯೊಂದಿಗೆ ರಾಜನ ಧರ್ಮದ ಬಗ್ಗೆ ಹಾಗೂ ಅವನ ಕರ್ತವ್ಯಗಳ ಬಗ್ಗೆ ವಿಸ್ತೃತವಾದ ಉಪದೇಶಗಳನ್ನು ನೀಡಿದನು.

ಸದಾಚಾರ ಸಂಪನ್ನ ಧರ್ಮಾಚರಣೆಯು ಜೀವನ ಪದ್ಧತಿಯ ಪರಿಪಾಲನೆಗಾಗಿ ಈತ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಮುಖ್ಯವಾದುವು—1. ಆಪಸ್ತಂಬ ಶ್ರೌತಸೂತ್ರ, 2. ಆಪಸ್ತಂಬ ಧರ್ಮಸೂತ್ರ,

3. ಆಪಸ್ತಂಬ ಗೃಹ್ಯಸೂತ್ರ, 4. ಆಪಸ್ತಂಬ ಶುಲ್ಬ ಸೂತ್ರ, 5. ಆಪಸ್ತಂಬ ಯಜ್ಞ ಪರಿಭಾಷಾ ಸೂತ್ರ, 6. ಆಪಸ್ತಂಬ ಸೂತ್ರ—ಇತ್ಯಾದಿ. ಇವೆಲ್ಲ ಗ್ರಂಥಗಳು ಅತ್ಯಂತ ಮಹತ್ವವೂ, ಆಚಾರ ಸಂಪನ್ನ ಸುಸಂಸ್ಕೃತ ಜೀವನ ಪದ್ಧತಿಗೆ ಸಹಾಯಕವಾಗುವಂತಹವುಗಳಾಗಿವೆ.

## 1 ಆಪಸ್ತಂಬ ಧರ್ಮಸೂತ್ರ

ಬಹಳ ಪ್ರಾಚೀನ ಕಾಲದಿಂದಲೂ ಪ್ರಮಾಣ ರೂಪದಲ್ಲಿ ಈ ಗ್ರಂಥವನ್ನು ಮಾನ್ಯ ಮಾಡಲಾಗಿದೆ. ಇತರೇ ಸ್ಮೃತಿಕಾರರು ಹಾಗೂ ನಿಬಂಧಕಾರರು 'ಆಪಸ್ತಂಬ ವಚೋ ಯಥಾ' ಎಂದು ಈತನ ಧರ್ಮಸೂತ್ರಗಳ ಭಾಗಗಳನ್ನು ಉದಾಹರಿಸಿದ್ದಾರೆ. ಇದರೊಂದಿಗೆ ಜೈಮಿನಿ ಸೂತ್ರಗಳಲ್ಲಿ ಆಚಾರ್ಯ ಶಬರನು, ಆದಿಶಂಕರರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ, ಯಾಜ್ಞವಲ್ಕ್ಯ ಸ್ಮೃತಿಯ ವ್ಯಾಖ್ಯಾನಕಾರರಾದ ಆಚಾರ್ಯ ವಿಶ್ವರೂಪ, ಮನುಸ್ಮೃತಿಯ ಮೇಧಾತಿಥಿ, ಮಿತಾಕ್ಷರದಲ್ಲಿ ಈ ಸ್ಮೃತಿಯು ಉಲ್ಲೇಖಗಳಿವೆ.

ಆಪಸ್ತಂಬ ಧರ್ಮ ಸೂತ್ರವು ಧರ್ಮಶಾಸ್ತ್ರದ ಒಂದು ಮುಖ್ಯ ಅಂಶವಾಗಿದೆ. ಆಚಾರ-ವಿಚಾರ ಹಾಗೂ ಕರ್ತವ್ಯಾ ಕರ್ತವ್ಯವನ್ನು ನಿರ್ದೇಶಿಸುವ ಶಾಸ್ತ್ರದ ರೂಪದಲ್ಲಿ ಇದನ್ನು ಉಪಯೋಗಿಸಿಕೊಳ್ಳಲಾಗಿದೆ. ಈ ಗ್ರಂಥವನ್ನು ಸೂತ್ರಗಳ ರೂಪದಲ್ಲಿ ಬರೆಯಲಾಗಿದೆ. ಇದರಲ್ಲಿ ಎರಡು ಭಾಗಗಳಿವೆ. ಇವನ್ನು 'ಪ್ರಶ್ನ'ಗಳು ಎಂಬ ಹೆಸರಿನಿಂದ ಕರೆಯಲಾಗಿದೆ—

1. ಮೊದಲನೆ ಪ್ರಶ್ನದಲ್ಲಿ 11 ಪಟಲ (ಕಾಂಡ)ಗಳು ಹಾಗೂ 32 ಕಂಡಿಕೆ (ಅಧ್ಯಾಯ)ಗಳು ಇವೆ.

2. ಎರಡನೇ ಪ್ರಶ್ನದಲ್ಲಿ 11 ಪಟಲಗಳು ಹಾಗೂ 29 ಕಂಡಿಕೆಗಳು ಇವೆ.

ಇದರ ಪ್ರಥಮ ಪ್ರಶ್ನದ ಎಂಟನೆಯ ಪಟಲವು 'ಅಧ್ಯಾತ್ಮಜ್ಞಾನ ಪಟಲ' ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ. ಇದಕ್ಕೆ ಆಚಾರ್ಯ ಶಂಕರ ಭಗವತ್ಪಾದರು 'ವಿವರಣ' ಎನ್ನುವ ಹೆಸರಿನ ಭಾಷ್ಯವನ್ನು ರಚಿಸಿರುವರು. ಈ ಧರ್ಮ ಸೂತ್ರದ ಬಗ್ಗೆ ಆಚಾರ್ಯ ಹರದತ್ತನ 'ಉಜ್ವಲಾವೃತ್ತಿ' ಎನ್ನುವ ಹೆಸರಿನ ಸಂಸ್ಕೃತ ವ್ಯಾಖ್ಯಾನವು ಅತ್ಯಂತ ಪ್ರಸಿದ್ಧವಾದುದಾಗಿದೆ.

ಆಪಸ್ತಂಬನು ತನ್ನ ಈ ಗ್ರಂಥವನ್ನು 'ಸಮಯಚಾರಮಯ ಧರ್ಮ

ಶಾಸ್ತ್ರ' ಎಂದು ತಿಳಿಸಿದ್ದಾನೆ. ಇದೇ ಮಾತನ್ನು ಗ್ರಂಥದ ಪ್ರಾರಂಭದಲ್ಲಿ ತಿಳಿಸಿದ್ದಾನೆ.

ಅಥಾತಃ ಸಮಯಾಚಾರಿಕಾನ್ ಧರ್ಮಾನ್ ವ್ಯಾಖ್ಯಾಸ್ಯಾಮಃ ||1||

ಧರ್ಮಜ್ಞಸಮಯಃ ಪ್ರಮಾಣಮ್ ||2||

ಆಪಸ್ತಂಬನು ವೇದಗಳೊಂದಿಗೆ ಸತ್ಪುರುಷರ ಆಚಾರ-ವಿಚಾರಗಳು, ಅವರ ಉಪದೇಶಗಳನ್ನು ಪರಮ ಪ್ರಮಾಣವನ್ನಾಗಿ ತಿಳಿದಿದ್ದಾನೆ. ಸಾಮಾನ್ಯ ವ್ಯಕ್ತಿಗೆ ವೇದಶಾಸ್ತ್ರಜ್ಞನೂ, ಜ್ಞಾನಿಯೂ ಆದ ಆಚಾರ್ಯನನ್ನು ಪರಮ ಪೂಜ್ಯನೆಂದು ತಿಳಿಯಬೇಕು-ಎಂದು ತಿಳಿಸಿದ್ದಾನೆ. ಇಂತಹ ವಿನಯ ಸಂಪನ್ನ, ಆತ್ಮಜ್ಞಾನಿ, ಜಿತೇಂದ್ರಿಯನ ಜೀವನ ನಿರ್ವಾಹದ ಸಾಧನೆಗಳನ್ನು ಕೂಡ ಪ್ರಮಾಣ ಸ್ವರೂಪವನ್ನಾಗಿ ತಿಳಿದು, ಆಚರಿಸಲು ಯೋಗ್ಯವಾದವುಗಳೆಂದು ಆಪಸ್ತಂಬನು ತಿಳಿಸಿ, ಧರ್ಮಾಧರ್ಮ ನಿರ್ಣಯದಲ್ಲಿ ಇವು ಸಹಾಯಕವಾಗುತ್ತವೆ ಎಂದು ಸೂಚಿಸಿದ್ದಾನೆ.

ಇಂತಹ ವ್ಯಕ್ತಿಯನ್ನು ಆರ್ಯ ಎಂದೂ ಕರೆಯಲಾಗುತ್ತದೆ. ಇಂತಹವರ ಆಚರಣೆಗಳನ್ನು ಆಚರಿಸಲು ಯೋಗ್ಯವಾಗಿದ್ದು, ಸರ್ವಜನಾದರಣೀಯವಾಗಿದ್ದು, ಪ್ರಶಂಸಾರ್ಹವಾಗಿರುತ್ತದೆ. ಇಂತಹವನ್ನು ಪರಾಮರ್ಶಿಸಲೂ ಬಹುದು ಎಂದು ಆಪಸ್ತಂಬನು ತಿಳಿಸುತ್ತಾನೆ. ಇದೇ ಇಂತಹ ಆಚಾರವನ್ನು ನಿಂದಿಸುವವರು, ಸ್ವತಃ ಆಚರಿಸದೆ ಇರುವವರು ಅಧರ್ಮೀಯರಾಗುತ್ತಾರೆ—

ಯಂ ತ್ವಾರ್ಯಾಃ ಕ್ರಿಯಮಾಣಂ ಪ್ರಶಂಸಂತಿ<br>
ಸ ಧರ್ಮೋ ಯಂ ಗರ್ಹಂತೇ ಸೋಽಧರ್ಮಃ || 7/7 ||

ಆಚಾರ್ಯ ಶಬ್ದದ ವ್ಯಾಖ್ಯಾನವನ್ನು ಈತ ವಿವರವಾಗಿ ನೀಡಿದ್ದಾನೆ. ಧರ್ಮದ ಬಗ್ಗೆ ಶಿಕ್ಷಣ ನೀಡುವವನು ಆಚಾರ್ಯನಾಗುತ್ತಾನೆ. ಇಂತಹ ಆಚಾರ್ಯನಿಗೆ ವ್ಯತಿರೇಕವಾಗಿ ಯಾವುದೇ ರೀತಿಯ ದ್ರೋಹವನ್ನು ಮಾಡಬಾರದು-'ತಸ್ಮೈನ ದ್ರುಹ್ಯೇತ್ ಕದಾಚನ ||' (1/15) ಪಶು ಸಮಾನ ಅಜ್ಞಾನೀ ಮಾನವನಿಗೆ ವಿದ್ಯೆ ಹಾಗೂ ಜ್ಞಾನಗಳನ್ನು ನೀಡುವುದರಿಂದ ಈತನ ದೇವತೆಗಳಿಂದಲೂ ಮೇಲ್ಪಟ್ಟದ ಮಹಾತ್ಮನಾಗುವನು. ಮಾತಾ-ಪಿತೃಗಳು ಕೇವಲ ದೇಹದ ಜನ್ಮದಾತರು. ಆದರೆ ಆಚಾರ್ಯನು ಜ್ಞಾನ ವಿಗ್ರಹವನ್ನು ಆ ವ್ಯಕ್ತಿಗೆ ಪ್ರದಾನ ಮಾಡುವವನಾಗಿರುತ್ತಾನೆ. ಹೀಗೆ ಮಾಡುವುದರಿಂದ ಆ

ವ್ಯಕ್ತಿಯು ಮರು ಜನ್ಮ ಪಡೆದು ದ್ವಿಜನಾಗುತ್ತಾನೆ–

'ಸ ಹಿ ವಿದ್ಯಾತಸ್ತಂ ಜನಯತಿ || ಚ್ಛ್ರೇಷ್ಠ ಜನ್ಮ ||

ಶರೀರ ಮೇವ ಮಾತಾ ಪಿತರಾ ಜನಯತಃ' || (1/160–18)

ತಪಸ್ಸು ಹಾಗೂ ಸ್ವಾಧ್ಯಾಯವನ್ನು ಆಪಸ್ತಂಬನು ಪರಮಧರ್ಮವೆಂದು ನಂಬುತ್ತಾನೆ. ಇವು ಬ್ರಾಹ್ಮಣನ ಮುಖ್ಯ ಧರ್ಮವೂ ಹೌದು. 'ತಪಃ ಸ್ವಾಧ್ಯಾಯ ಇತಿ ಬ್ರಾಹ್ಮಣಮ್ |' (4/1) ಸಾಧಾರಣವಾಗಿರುವ ಸ್ವಾಧ್ಯಾಯವು ಕೃಚ್ಛ್ರ–ಚಾಂದ್ರಾಯಣಾದಿ ತಪಸ್ಸಿಗೆ ಸಮಾನವಾದ ಫಲ ವನ್ನು ನೀಡುತ್ತದೆ.

ಯಾವುದಾದರೊಂದು ಕಾರ್ಯವನ್ನು ಮಾಡಿ ಸಫಲ ಹೊಂದಿ, ಸಿದ್ಧಿ ಪಡೆದಲ್ಲಿ ಆ ವ್ಯಕ್ತಿಯು ಹರ್ಷಾತಿರೇಕವನ್ನು ಪಡೆಯಬಹುದು. ಇದು ತುಂಬಾ ಅಪಾಯಕರವಾದುದು. ಕಾರಣ, ಇದು ಅಧಿಕವಾದಲ್ಲಿ ದರ್ಪ ಅಥವಾ ಅಹಂ ಕಾರಗಳು ಅವನಲ್ಲಿ ಉದ್ಭವವಾಗುತ್ತವೆ. ಇದರಿಂದ ಪೂಜ್ಯ–ಅಪೂಜ್ಯ ಹಾಗೂ ಕಾರ್ಯ–ಅಕಾರ್ಯಗಳ ಸರಿಯಾದ ತೀರ್ಮಾನ ತೆಗೆದುಕೊಳ್ಳಲಾಗುವುದಿಲ್ಲ. ಇದರಿಂದ ಅವನಿಗೆ ಅಪಾಯವೂ ಉಂಟಾಗಬಹುದು ಇಂತಹ ಪ್ರಮತ್ತ ವ್ಯಕ್ತಿ ಯಿಂದ ಧರ್ಮದ ಅತಿ ಕ್ರಮಣವಾಗುವುದು. ಇದು ಅವನ ನೈತಿಕ ಪತನ ವನ್ನು ಉಂಟುಮಾಡುವುದೇ ಅಲ್ಲದೆ ಪರಲೋಕದಲ್ಲಿ ನರಕ ಪ್ರಾಪ್ತಿಯೂ ಆಗು ತ್ತದೆ. ಆದುದರಿಂದ ನಿತ್ಯ ಸಮತ್ವ ಹಾಗೂ ಜ್ಞಾನದ ಸ್ಥಿತಿಯಲ್ಲಿ ಇರಬೇಕಾ ಗುತ್ತದೆ. ಇದಕ್ಕೆ ಸಂಬಂಧಪಟ್ಟ ಹಾಗೆ ಆಪಸ್ತಂಬನ ಮೂಲ ಸೂತ್ರ ಹೀಗಿದೆ–

ದೃಷ್ಟಾತ್ವ ದರ್ಪತಿ ದೃಪ್ತೋ ಧರ್ಮಮತಿ

ಕ್ರಮತಿ ಧರ್ಮಾತಿ ಕ್ರಮೆ ಖಲು ಪುನರ್ನರಕಃ ||4/4||

ಈ ಮಾತನ್ನು ಭಗವದ್ಗೀತೆಯ ಬಹಳಷ್ಟು ವ್ಯಾಖ್ಯಾನಕಾರರು ಹಾಗೂ ಆಚಾರ್ಯರು ತಮ್ಮ ತಮ್ಮ ಗೀತಾ ವ್ಯಾಖ್ಯಾನಗಳಲ್ಲಿ ಅಲ್ಲಲ್ಲಿ ಉದಾಹರಿ ಸಿರುವರು[1].

---

1. ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯಂ ನೋದ್ವಿಜೇತ್ ಪ್ರಾಪ್ಯಚಾಪ್ರಿಯಂ ||

ಸ್ಥಿರ ಬುದ್ಧಿ ರಸಮ್ಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ || ಗೀತಾ 5–20 |

ಸ್ಥಿರ ಬುದ್ಧಿಯುಳ್ಳವನಾಗಿ, ವಿಷಯಾನುಭವದಲ್ಲಿ ಮೋಹಗೊಳ್ಳದೆ, ಅಂತ ರಾತ್ಮನಲ್ಲಿಯೇ ನೆಟ್ಟ ಮನಸ್ಸುಳ್ಳವನಾವನೋ, ಅವನು ಇಷ್ಟ ವಸ್ತುವನ್ನು ಪಡೆದು ಹರ್ಷಿಸಲಾರನು. ಅಪ್ರಿಯವನ್ನು ಪಡೆದಾಗ ದುಃಖಿಸಲಾರನು.

ಧರ್ಮಾಚರಣೆಯ ಮಹಿಮೆಯನ್ನು ಬಹಳ ಮಹತ್ತ್ವದ್ದೆಂದು ಕರೆಯುತ್ತಾ ಆಪಸ್ತಂಬನು ಹೀಗೆಂದು ಹೇಳುತ್ತಾನೆ–

ಶುದ್ಧ ಧರ್ಮಾಚರಣೆಯಿಂದ ಅರ್ಥ, ಕಾಮ, ಯಶ ಇತ್ಯಾದಿಗಳು ಸ್ವತಃ ಪ್ರಾಪ್ತವಾಗುತ್ತವೆ. ಇದರಿಂದ ಎಲ್ಲರಿಗೂ ಪೂರ್ಣ ಸುಖವು ಲಭಿಸುವುದು. ಮಾವಿನ ಹಣ್ಣನ್ನು ಪಡೆಯಲು ಮಾವಿನ ಸಸಿಯನ್ನು ನೆಡಲಾಗುವುದು, ಆದರೆ ಮಾವಿನಹಣ್ಣಿನೊಂದಿಗೆ ಸಾಕಷ್ಟು ನೆರಳು, ಸೌದೆ, ಎಲೆ, ಸುಗಂಧ ಇತ್ಯಾದಿಗಳು ದೊರೆಯುತ್ತವೆ.

ಇದೇ ರೀತಿಯಲ್ಲಿ ಧರ್ಮದ ಅನುಷ್ಠಾನದಿಂದ ಅರ್ಥ ಇತ್ಯಾದಿಗಳು ಸ್ವತಃ ಲಭಿಸುತ್ತವೆ. ಒಮ್ಮೊಮ್ಮೆ ಇವು ಲಭಿಸದಿದ್ದರೂ ಧರ್ಮವೇ ಅಪಾರ ಸಂತುಷ್ಟಿಯನ್ನು ನೀಡುತ್ತದೆ. ಯಾರಿಗೂ, ಯಾವುದೇ ರೀತಿಯಾದ ಹಾನಿಯೂ ಉಂಟಾಗುವುದಿಲ್ಲ. ಆದುದರಿಂದ ಸದ್ಧರ್ಮವನ್ನು ಎಂದೆಂದಿಗೂ ದೂರ ಮಾಡಬಾರದು.

ಇದಕ್ಕೆ ಸಂಬಂಧಪಟ್ಟ ಮೂಲ ಶ್ಲೋಕ ಈ ರೀತಿ ಇದೆ—

ತದ್ಯದಾಮ್ರೇ ಫಲಾರ್ಥೇ ನಿಮಿತ್ತೇ ಛಾಯಾಗಂಧೆ ಇತ್ಯನೂತ್ಪದ್ಯೇತೆ ।
ಏವಂ ಧರ್ಮಂ ಚರ್ಯಮಾಣಮರ್ಥಾಂ ಅನೂತ್ಪದ್ಯಂತೇ ॥ 7/3 ॥

ಆಪಸ್ತಂಬ ಸೂತ್ರದ 'ಅಧ್ಯಾತ್ಮ ಪಟಲ'ವೆಂದು ಕರೆಯಲ್ಪಡುವ 8ನೇ ಪಟಲದಲ್ಲಿ ಒಟ್ಟು 14 ಸೂತ್ರಗಳಿವೆ. ಇದರಲ್ಲಿ 1. ಆತ್ಮಜ್ಞಾನ, 2. ಯೋಗಜ್ಞಾನ, 3. ಪರಮಾತ್ಮ ಜ್ಞಾನದ ಸಂಬಂಧಗಳಿಗೆ ಅನ್ವಯವಾಗುವಂತೆ ಅನೇಕ ಮಹತ್ವಪೂರ್ಣ ಮಾತುಗಳನ್ನು ಹೇಳಲಾಗಿದೆ.

ಅಧ್ಯಾತ್ಮ ಜ್ಞಾನವು ಎಲ್ಲದಕ್ಕಿಂತಲೂ ಹಿರಿದಾದುದು. ಕಾರಣ ಇದು ಮೋಕ್ಷ ಪಡೆಯುವಿಕೆಯಲ್ಲಿ ಹೆಚ್ಚು ಸಹಾಯ ಮಾಡುತ್ತದೆ. ಆತ್ಮಲಾಭ ಅಥವಾ ಪರಮಾತ್ಮ ಪ್ರಾಪ್ತಿಯು ಪ್ರಪಂಚದ ಅತ್ಯಧಿಕ ಸಹಾಯ ನೀಡುವ ಅಂಶವಾಗಿದೆ—'ಆತ್ಮಲಾಭಾನ್ನ ಪರಂ ವಿದ್ಯತೇ' (8/2)

ಎಲ್ಲ ಜೀವಿಗಳಲ್ಲೂ ತನ್ನ ಆತ್ಮವನ್ನು ಕಾಣುವ ವಿದ್ವಾಂಸರು ಮೋಹದಲ್ಲಿ ಎಂದಿಗೂ ಬೀಳುವುದಿಲ್ಲ, ರಾಗ–ದ್ವೇಷಗಳಲ್ಲಿ ಮುಳುಗುವುದಿಲ್ಲ, ಸ್ವತಃ ಅವರುಗಳು ಬ್ರಹ್ಮನೇ ಆಗುವರು. ಅಂತಹವರು ಸ್ವರ್ಗಲೋಕಕ್ಕಿಂತಲೂ

ಮೇಲಿನ ಲೋಕದಲ್ಲಿ ಪ್ರತಿಷ್ಠಿತರಾಗುವರು. ಅಂತಹವರು ತಮ್ಮದೇ ಮಹಿಮೆಯಲ್ಲಿ ವಿರಾಜಮಾನರಾಗಿ ಸ್ವಯಂ ಪ್ರಕಾಶಿತಗೊಳ್ಳುವರು-'ಆತ್ಮನ್ ಪಶ್ಯನ್ ಸರ್ವಭೂತಾನಿ ನ ಮುಹ್ಯೇಚ್ಚಿಂತಯನ್ ಕವಿಃ | ಆತ್ಮಾನಂ ಚೈವ ಸರ್ವತ್ರ ಯಃ ಪಶ್ಯೈತ್ಯ ವೈ ಬ್ರಹ್ಮಾನಾಕಪೃಷ್ಠೆ ವಿರಾಜತಿ |' (8–9)

ಇದೇ ವಿಷಯವನ್ನು ಉಪನಿಷಾದಾದಿ ಶಾಸ್ತ್ರಗಳು ಹಾಗೂ ಗೀತೆ ಇತ್ಯಾದಿಗಳಲ್ಲಿ ಇದೇ ವಿಚಾರವನ್ನು ತಿಳಿಸಲಾಗಿದೆ. ಈಶಾವಾಸ್ಯ ಶ್ರುತಿಯಲ್ಲಿ ಇದನ್ನು ಈ ರೀತಿ ವರ್ಣಿಸಲಾಗಿದೆ.

(ಅ) ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನು ಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋ ನ ವಿಜಗುಪ್ಸತೇ ‖ 6 ‖
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ‖ 7 ‖

(ಆ) ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ‖
(ಗೀತೆ 6/29, 20, 30–32 ಇತ್ಯಾದಿ ಶ್ಲೋಕಗಳು ಇದಕ್ಕೆ ಉದಾಹರಣೆಯಾಗಿವೆ)

'ಅಧ್ಯಾತ್ಮಪಟಲ'ದ ಕೊನೆಯಲ್ಲಿ 'ಅನಾತ್ಮ್ಯಯೋಗ'ದ ವರ್ಣನೆ ಇದೆ. ಬೇರೆ ಶಾಸ್ತ್ರಗಳಲ್ಲಿ ಅಧರ್ಮಾಚರಣೆ ಹಾಗೂ ಪಾಪ (ನಿಂದಿತ ಕರ್ಮ) ಎಂದು ಕರೆಯುವುದನ್ನು ಇಲ್ಲಿ 'ಅನಾತ್ಮ್ಯಯೋಗ' ಅಥವಾ 'ಭೂತದಾಹೀಯ ದೋಷ' ಎಂದು ಕರೆದು, ಅದನ್ನು ಪರಿತ್ಯಜಿಸಬೇಕೆಂದು ಇಲ್ಲಿ ತಿಳಿಸಲಾಗಿದೆ. ಇದು ಭಗವತ್ಪ್ರಾಪ್ತಿಯಲ್ಲಿ ಪ್ರಬಲವಾದ ಅಡ್ಡಿ ಎಂದು ತಿಳಿಸಲಾಗಿದೆ. ಅಡ್ಡಿ ಈ ರೀತಿಯಲ್ಲಾಗುತ್ತದೆ ಕ್ರೋಧ, ಈರ್ಷ್ಯಾತಿರೇಕ, ರೋಷ, ಲೋಭ, ಮೋಹ, ದಂಭ, ದ್ರೋಹ, ಮಿಥ್ಯಾಭಾಷಣ, ಬಹಳ ಸಲ ಊಟ ಮಾಡುವುದು, ಅತಿಯಾದ ಭೋಜನ, ಪರದೋಷ ದರ್ಶನ (ಪರರ ನಿಂದೆ), ಉತ್ತಮ ಗುಣಗಳನ್ನು ದ್ವೇಷಿಸುವುದು, ಸ್ತ್ರೀಯರನ್ನು ಆಕರ್ಷಿಸುವುದು, ಗೂಢವಾಗಿ ದ್ವೇಷಿಸುವುದು, ಅಜಿತೇಂದ್ರಿಯತ್ವ—ಇವುಗಳು ಭಗವತ್ಪ್ರಾಪ್ತಿಗೆ ಮುಖ್ಯವಾದ ಅಡ್ಡಿಗಳು.

ಇದಕ್ಕೆ ವಿರುದ್ಧವಾದ ಅಕ್ರೋಧ, ಅಹರ್ಷ, ಅರೋಷ, ಅಲೋಭ, ಅಮೋಹ, ಅದಂಭ, ಅದ್ರೋಹ, ಸತ್ಯವಚನ, ಅನಸೂಯು, ಆರ್ಜಯ,

ಮಾರ್ದವ, ಶಮದಮ, ಸರ್ವಭೂತಹಿತೈಷಿತಾ ಇತ್ಯಾದಿಗಳೆಲ್ಲ ಎಲ್ಲರಿಂದ ಆಚರಿಸಲ್ಪಡಲು ಯೋಗ್ಯವಾದವುಗಳು. ಭಗವತ್ಪ್ರಾಪ್ತಿಯಲ್ಲಿ ಇವು ತುಂಬಾ ಸಹಾಯಕ. ಎಲ್ಲ ವರ್ಣದವರೂ, ಎಲ್ಲ ಆಶ್ರಮಗಳವರೂ ಅನುಸರಿಸಬೇಕಾದ ಧಾರ್ಮಿಕ ನಿಯಮ ಹಾಗೂ ಧಾರ್ಮಿಕ ಕರ್ತವ್ಯಗಳಾಗಿವೆ.

ಇವುಗಳನ್ನು ಅನುಸರಿಸಿ, ಆಚರಿಸುವುದರಿಂದ ವ್ಯಕ್ತಿಯು ಸರ್ವಜ್ಞ, ಸರ್ವಗಾಮಿ ಆಗುವನು. ಪರಿಣಾಮವಾಗಿ ಅವನು ಜೀವನ್ಮುಕ್ತನಾಗುವನು- ಸರ್ವಾಶ್ರಮಾಣಾಂ ಸಮಯಪದಾನಿ ತಾನ್ಯನುತಿಷ್ಠನ್ ವಿಧಿನಾ ಸಾರ್ವಗಾಮೀ ಭವತಿ ||' (8/14) 'ನಿರ್ಹತ್ಯ ಭೂತದಾಹೀಯಾನ್ ಕ್ಷೇಮಂ ಗಚ್ಛತಿ ಪಂಡಿತಃ' (8/11).

9ನೇ ಪಟಲ ಹಾಗೂ 10ನೇ ಪಟಲಗಳಲ್ಲಿ ಬ್ರಹ್ಮಹತ್ಯೆ ಇತ್ಯಾದಿ ಪಾತಕ-ಮಹಾ ಪಾತಕಗಳ ಪ್ರಾಯಶ್ಚಿತ್ತಗಳ ವರ್ಣನೆ ಇದೆ. 11ನೇ ಪಟಲದಲ್ಲಿ ಸ್ನಾತಕ-ವ್ರತ, ಸ್ನಾತಕ-ಧರ್ಮಗಳ ವಿವರಣೆ ಇದೆ.

ದ್ವಿತೀಯ ಪ್ರಶ್ನದ 1ನೇ ಪಟಲದಿಂದ 4ನೇ ಪಟಲದವರೆವಿಗಿನ ಸೂತ್ರಗಳಲ್ಲಿ ಗೃಹಸ್ಥಧರ್ಮ, ವೈಶ್ವದೇವ ಕರ್ಮ, ಅತಿಥಿ ಸತ್ಕಾರ ಇತ್ಯಾದಿಗಳನ್ನು ಸಾಂಗೋಪಾಂಗವಾಗಿ ವಿವೇಚಿಸಲಾಗಿದೆ. ಇಲ್ಲಿಂದ ಮುಂದೆ ಬ್ರಾಹ್ಮಣಾದಿಗಳ ವೃತ್ತಿ, ವಿವಾಹ, ಸ್ತ್ರೀರಕ್ಷೆ, ಆಸ್ತಿ ವಿಭಾಗ, ಶ್ರಾದ್ಧ ಕಲ್ಪ, ನಾಲ್ಕು ಆಶ್ರಮಗಳ ಧರ್ಮ, ಗೃಹಸ್ಥಾಶ್ರಮ ಧರ್ಮದ ಶ್ರೇಷ್ಠತೆ ಹಾಗೂ ಕೊನೆಯಲ್ಲಿ ರಾಜಧರ್ಮವನ್ನು ವಿಸ್ತಾರವಾಗಿ ವರ್ಣಿಸಲಾಗಿದೆ.

ಈ ರೀತಿಯಲ್ಲಿ ಆಪಸ್ತಂಬ ಪ್ರಣೀತ ಧರ್ಮಸೂತ್ರಗಳಲ್ಲಿ ಧರ್ಮಶಾಸ್ತ್ರದ ಅತ್ಯಂತ ಪ್ರೌಢ ಹಾಗೂ ಕರ್ತವ್ಯಾ ಕರ್ತವ್ಯಗಳ ವಿಷಯಗಳನ್ನು ತಿಳಿಸಲಾಗಿದೆ.

## 2. ಆಪಸ್ತಂಬ ಸ್ಮೃತಿ

ಇದೊಂದು ಸಂಕ್ಷಿಪ್ತ ಸ್ಮೃತಿ. ಇದರಲ್ಲಿ 10 ಅಧ್ಯಾಯಗಳಿದ್ದು, 200 ಶ್ಲೋಕಗಳಿವೆ. ಇದರಲ್ಲಿ ಮುಖ್ಯವಾಗಿ ವಿವಿಧ ರೀತಿಯ ಪ್ರಾಯಶ್ಚಿತ್ತ ವಿಧಾನಗಳನ್ನು ವಿವರಿಸಲಾಗಿದೆ. ಕೊನೆಯ 10ನೇ ಅಧ್ಯಾಯದಲ್ಲಿ ಅಧ್ಯಾತ್ಮ ಜ್ಞಾನ ಹಾಗೂ ಮೋಕ್ಷ ಪ್ರಾಪ್ತಿಯ ಸಾಧನಗಳನ್ನು ವಿವರಿಸಲಾಗಿದೆ. ಇದು ಬಹಳ ಮಹತ್ವಪೂರ್ಣ ವರ್ಣನೆಯಾಗಿದೆ

ಆಪಸ್ತಂಭನು ತನ್ನ ಸ್ಮೃತಿಯ ಪ್ರಾರಂಭದಲ್ಲಿ ಸಂಸಾರಿಗಳಿಗೆ ಹಸು ಗಳನ್ನು ಸಾಕುವುದು ಉತ್ತಮ ಕಾರ್ಯ-ಎಂದು ತಿಳಿಸಿದ್ದಾನೆ. ಗೋಹತ್ಯೆಯು ಮಹಾ ಪಾಪವೆಂದೂ ತಿಳಿಸಿದ್ದಾನೆ. ರೋಗ ಬಂದಾಗ, ಅಂತಹ ಗೋವು ಗಳಿಗೆ ಚಿಕಿತ್ಸೆ ಮಾಡುವುದು, ಮಾಡಿಸುವುದು, ತನ್ಮೂಲಕ ಅವುಗಳ ರಕ್ಷಣೆ, ಶುಶ್ರೂಷೆಗಳನ್ನು ಮಾಡುವುದು ಮಹಾನ್ ಪುಣ್ಯಕಾರ್ಯವೆಂದು ತಿಳಿಸಿದ್ದಾನೆ. ಗೋವುಗಳಿಗೆ ಚಿಕಿತ್ಸೆ ನಡೆಸುವಾಗ, ಚಿಕಿತ್ಸೆ ಮಾಡಿಸುವವನಿಗೆ ಸ್ವಲ್ಪ ಹಾನಿ ಆಗಬಹುದು. ಆದರೂ ಚಿಕಿತ್ಸೆ ಮುಂದುವರಿಸಬೇಕು. ಅದು ಗೋವುಗಳ ಬಗೆಗೆ ಉತ್ತಮ ನಿಯತ್ತನ್ನು ತೋರಿಸುವುದು. ಇದು ಪುಣ್ಯ ಕಾರ್ಯವೇ ಆಗಿರುತ್ತದೆ. ಅನಾರೋಗ್ಯದ ಕಾರಣ ಹಸುವಿಗೆ ಶಸ್ತ್ರಚಿಕಿತ್ಸೆ, ಔಷಧದ ಪ್ರಯೋಗ ಮಾಡಿದ್ದೇ ಆದರೆ ಅದು ಪಾಪವಾಗುತ್ತದೆ ಎಂಬ ನಂಬಿಕೆ ಅನೇಕ ರಲ್ಲಿದೆ. ಹೀಗೆ ಔಷಧೋಪಚಾರಗಳು ಮಾಡುವಾಗ ಗೋವು ಮರಣಿಸಿದಲ್ಲಿ ಅದರ ಪಾಪವು (ಗೋಹತ್ಯಾ ದೋಷವು) ಪ್ರಾಪ್ತವಾಗುತ್ತದೆ ಎಂದು ನಂಬುವ ವರೂ ಕೆಲವರಿದ್ದಾರೆ. ಆದುದರಿಂದ ಕಾಯಿಲೆ ಬಿದ್ದ ಗೋವುಗಳನ್ನು ಪಶು ವೈದ್ಯ ಶಾಲೆಗೆ ತೋರಿಸುವುದೇ ಇಲ್ಲ.

ಇದು ತಪ್ಪು ಎನ್ನುತ್ತಾನೆ ಆಪಸ್ತಂಭನು.

ಯಂತ್ರೇಣ ಗೋಚಿಕಿತ್ಸಾರ್ಥೇ ಮೃತಗರ್ಭ ವಿಮೋಚನೆ |
ಯತ್ರೇ ಕೃತೆ ವಿಪನ್ನಿಶ್ಚೇತ್ ಪ್ರಾಯಶ್ಚಿತ್ತೇ ನ ವಿದ್ಯತೆ || 1-3 ||

ಗೋ-ಚಿಕಿತ್ಸೆ ಮಾಡುವಾಗ ಅಥವಾ ಅದರ ಗರ್ಭದಿಂದ ಸತ್ತ ಕರು ವನ್ನು ಹೊರ ತೆಗೆಯುವಾಗ ಏನಾದರೂ ಅಪಾಯ ಸಂಭವಿಸಿದರೆ, ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದ ಅವಶ್ಯಕತೆಯಿಲ್ಲ.

ಇದೇ ರೀತಿಯಲ್ಲಿ ಪ್ರಾಣಿಗಳಿಗೆ ಅವುಗಳಿಗೆ ರಕ್ಷಣೆ ಕೊಡುವ ದೃಷ್ಟಿ ಯಿಂದ ಔಷಧಿ, ಲವಣ, ಎಣ್ಣೆ ಇತ್ಯಾದಿ ಪದಾರ್ಥಗಳು ಹಾಗೂ ಮತ್ತು ಪುಷ್ಟಿಕಾರಕ ಮೇವು ಇತ್ಯಾದಿಗಳನ್ನು ನೀಡಿದ್ದಾಗ್ಯೂ ಕೂಡ ಆ ಪ್ರಾಣಿಯ ಮೇಲೆ ಏನಾದರೂ ವಿಪತ್ತು ಉಂಟಾದಲ್ಲಿ ಅದರಿಂದ ಯಾವುದೇ ಪಾಪ ಉಂಟಾಗುವುದಿಲ್ಲ—

ಔಷಧಂ ಲವಣಂ ಚೈವ ಸ್ನೇಹಂ ಪುಷ್ಟ್ಯರ್ಥ ಭೋಜನಮ್ |
ಪ್ರಾಣಿನಾಂ ಪ್ರಾಣ ವೃತ್ತ್ಯರ್ಥಂ ಪ್ರಾಯಶ್ಚಿತ್ತಂ ನ ವಿದ್ಯತೇ ||1-11||

ಅತಿಯಾಗಿ ಕೊಡದೆ ಮಿತವಾಗಿ, ಯಥೋಚಿತವಾಗಿ ಮೇವು, ಔಷಧದ ವಸ್ತುಗಳನ್ನು ನೀಡಿದ್ದೇ ಆದರೆ ಪಶು ಸಂಗೋಪನೆ ಉತ್ತಮವಾಗುತ್ತದೆ. ಅಸಮರ್ಪಕವಾಗಿ, ಅತಿಯಾಗಿ ನೀಡಿದರೆ ಪ್ರಾಣಿಗಳಿಗೆ ಮೃತ್ಯು ಸಂಭವಿಸ ಬಹುದು. ಆಕಸ್ಮಾತ್ತಾಗಿ ಹಾಗಾದಾಗ 'ಕೃಛ್ರವ್ರತ'ವನ್ನು ಆಚರಿಸ ಬೇಕು.

ಅತಿರಿಕ್ತ ವಿಪನ್ನಾನಾಂ ಕೃಛ್ರಮೇವ ವಿಧೀಯತೆ ॥

ಆಪಸ್ತಂಭನು ಕೃಷಿಯ ಬಗ್ಗೆಯೂ ಕೆಲವೊಂದು ನಿಯಮಗಳನ್ನು ತಿಳಿಸಿದ್ದಾನೆ. ಉಳುವ ಸಮಯದಲ್ಲಿ ನೇಗಿಲಿಗೆ ಎಷ್ಟು ಎತ್ತುಗಳನ್ನು ಕಟ್ಟು ವುದು ಧರ್ಮ ಸಮ್ಮತವಾದುದು ಎಂಬುದನ್ನು ತಿಳಿಸುತ್ತಾ ಅಧಾರ್ಮಿಕ ವಾದದ್ದು ಎಷ್ಟು ಎಂಬುದನ್ನು ತಿಳಿಸಿದ್ದಾನೆ. ಎಂಟು ಎತ್ತುಗಳನ್ನು ಕಟ್ಟು ವುದು ಅತಿ ಶ್ರೇಷ್ಠ, ಆರು ಎತ್ತುಗಳನ್ನು ಕಟ್ಟುವುದು ಶ್ರೇಷ್ಠವೆಂದೂ, ನಾಲ್ಕು ಎತ್ತುಗಳನ್ನು ನೇಗಿಲಿಗೆ ಕಟ್ಟುವುದು ನಿರ್ದಯಿತ್ವವೆಂದೂ, ಎರಡು ಎತ್ತು ಗಳನ್ನು ಕಟ್ಟುವುದು ನಿರ್ದಯತೆಯೆಂದೂ ಆತ ತಿಳಿಸಿದ್ದಾನೆ.

ಹಲಮಷ್ಟಗವಂ ಧರ್ಮ್ಯಂ ಷಡ್‌ಗವಂ ಜೀವಿತಾರ್ಥಿನಾಂ ।
ಚತುರ್ಗವಂ ನೃಶಂಸಾನಾಂ ದ್ವಿಗವಂ ಹಿ ಜಿಘಾಂಶಿನಾಮ್ ॥

(ಆಪ 1–23)

ಹಸುಗಳನ್ನು ಕಟ್ಟಿ ಹಾಕಬಾರದು. ಅದು ಅವುಗಳಿಗೆ ಬಂಧನದಂತಾಗು ತ್ತದೆ. ತೆಂಗಿನನಾರು, ದಾನ್ಯದ ಹೊಡೆ, ದರ್ಭೆಯ ತರಹದ ಹುಲ್ಲು ಅಥವಾ ಚರ್ಮದ ಹಗ್ಗಗಳಂತ ಕಠೋರವಾದವುಗಳಿಂದ ಕಟ್ಟಲೇಬಾರದು. ಇದರಿಂದ ಅವು ಪರಾಧೀನ ಅಥವಾ ಕಷ್ಟಕರವಾದ ಸನ್ನಿವೇಶವನ್ನು ಅನುಭವಿಸುತ್ತವೆ. ಆಗತ್ಯ ಕಂಡುಬಂದಲ್ಲಿ ಕುಶ (ಹುಲ್ಲು)ಯ ನುಣುಪಾದ ಮೃದುವಾದ ಹಗ್ಗ ಗಳಿಂದ ಅವನ್ನು ಬಂಧಿಸಬಹುದು—

ನ ನಾರಿಕೇಲ ಬಾಲಾಭ್ಯಾಂ ನ ಮುಂಜೇನ ನ ಚರ್ಮಣ ।
ಏಭಿರ್ಗಾಸ್ತು ನ ಬಧ್ನೀಯಾತ್ ಬದ್ಧವಾ ಪರವಶಾ ಭವೇತ್ ॥25॥
ಕುಶೈಃ ಕಾಶೈಶ್ಚ ಬುಧ್ನೀಯಾದ್ ॥ 1-26 ॥

ಈ ರೀತಿಯಲ್ಲಿ ಮೊದಲ ಅಧ್ಯಾಯದಲ್ಲಿ ಗೋಸೇವೆ, ಗೋಚಿಕಿತ್ಸೆ, ಗೋವಧದ ಪ್ರಾಯಶ್ಚಿತ್ತ ಇತ್ಯಾದಿ ವಿಷಯಗಳನ್ನು ಸಂಕ್ಷೇಪವಾಗಿ ನಿರೂಪಿಸ

ಲಾಗಿದೆ. ಇದರ ಮುಂದಿನ ಅಧ್ಯಾಯದಲ್ಲಿ ಶುದ್ಧಾಶುದ್ಧಿಯ ವಿವೇಚನೆ, ಸ್ಪರ್ಶಾಸ್ಪರ್ಶ-ಖಾದ್ಯಾಖಾದ್ಯ ವಿಮರ್ಶೆ, ಉಚ್ಛಿಷ್ಟ ಭೋಜನದ ಪ್ರಾಯಶ್ಚಿತ್ತ, ನೀಲಾವಸ್ತ್ರಧಾರಣೆಯ ನಿಷೇಧ, ರಜಸ್ವಲೆ ಇತ್ಯಾದಿಯವರುಗಳ ಸ್ಪರ್ಶಾಸ್ಪರ್ಶದ ಮೀಮಾಂಸೆ, ದೂಷಿತ ವಸ್ತುಗಳ ಶುದ್ಧಿಯ ವಿಧಾನ ಹಾಗೂ ಅಪೇಯ-ಪಾನ (ಕುಡಿಯಕೂಡದ ವಸ್ತುಗಳು) ಇತ್ಯಾದಿಗಳ ವರ್ಣನೆ ಇದೆ.

ಈ ಪ್ರಪಂಚದ ನಿಯಾಮಕನು ಯಮನಲ್ಲ ಎಂದು ಆಪಸ್ತಂಬನು ತಿಳಿಸುತ್ತಾನೆ. ಆತ್ಮವೇ ಯಮ, ಮನಸ್ಸು, ಬುದ್ಧಿ, ಇಂದ್ರಿಯಗಳ ಹತೋಟಿ ಇಟ್ಟುಕೊಂಡು ತನ್ನನ್ನು ತಾನು ಧರ್ಮಾಚರಣೆಗಳಲ್ಲಿ ತೊಡಗಿಸಿಕೊಳ್ಳುವವನನ್ನು ಯಮನು ತಾನೆ ಏನು ಮಾಡಿಯಾನು ? ಧರ್ಮಶಾಸ್ತ್ರಾನುಕೂಲ ಆಚರಣೆ ಮಾಡುವವನನ್ನು ಪ್ರಪಂಚದಲ್ಲಿನ ಯಾರೂ ಏನೂ ಮಾಡಲಾರರು, ಅವನ ಕೂದಲನ್ನೂ ಕೊಂಕಿಸಲಾರರು. -

ನ ಯಮಂ ಯಮಮಿತ್ಯಾಹುರಾತ್ಮಾ ವೈ ಯಮ ಉಚ್ಯತೆ |
ಆತ್ಮಾ ಸಂಯಿಮಿತೋ ಯೇನ ತಂ ಯಮಃ ಕಿಂ ಕರಿಷ್ಯತಿ ||10-3||

ಮಾನವನಲ್ಲಿನ ಕ್ರೋಧವು ಅವನನ್ನೇ ನಾಶ ಮಾಡುವಂತಹುದು. ಅದರಲ್ಲೂ ಸಾಧಕನಾದವನಿಗೆ ಇದು ವಿನಾಶಕರವಾದುದು. ಕ್ರೋಧವು ಸರ್ಪದ ವಿಷ ಅಥವಾ ಕತ್ತಿಯ ಅಲಗಿಗಿಂತಲೂ ಅಪಾಯಕಾರಿಯಾದದು. ಅಂತರ್ಯದಲ್ಲಿ ನೆಲೆಸಿರುವ ಕ್ರೋಧವು ಸಂಬಂಧಿತ ವ್ಯಕ್ತಿಯನ್ನು ಸಂಹಾರಕನನ್ನಾಗಿ ಪರಿವರ್ತಿಸುತ್ತದೆ. ಇದಕ್ಕೆ ವಿರುದ್ಧವಾಗಿ ಧರ್ಮಶೀಲನಿಗೆ ಯಾವುದೇ ಕಷ್ಟವಿರುವುದಿಲ್ಲ. ಕ್ಷಮಾರೂಪದ ಮಹಾನ್ ಗುಣವು ಈ ಲೋಕ ಹಾಗೂ ಪರಲೋಕಗಳಲ್ಲಿ ಸರ್ವತ್ರ ಸುಖದಾಯಿಯಾಗಿರುತ್ತದೆ. ಆದುದರಿಂದ ಸಾಧಕನು ಕ್ರೋಧವನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಅವನು ಸಹಿಷ್ಣುತೆ ಹಾಗೂ ದಯಾಗುಣಗಳನ್ನು ಹೊಂದಿರಬೇಕು. ಎಂತಹುದೇ ಜಪ, ಹೋಮ, ಯಜ್ಞ, ಪೂಜೆಗಳು ಇತ್ಯಾದಿ ಸತ್ಕರ್ಮಗಳನ್ನು, ಧರ್ಮಕಾರ್ಯಗಳನ್ನು ಮಾಡಿದಾಗ್ಯೂ, ಅಂತಹವನಲ್ಲಿ ಕ್ರೋಧವಿದ್ದಾಗ, ಆ ಕರ್ಮಗಳೆಲ್ಲ ನಿಷ್ಫಲವಾಗುತ್ತವೆ. ಹಸಿದಾರ ನೀರಿನಲ್ಲಿ ಇರಬಲ್ಲುದೆ ?

ಜೀವಿಗಳಲ್ಲೆಲ್ಲ ಇರಬೇಕಾದ ಅತ್ಯಂತ ದೊಡ್ಡ ಗುಣವೆಂದರೆ ಕ್ಷಮಾಗುಣ.

ಕ್ಷಮಾಗುಣೋ ಹಿ ಜಂತೂನಾಮಿಹಾಮುಂತ್ರ ಸುಖಪ್ರದಃ ||10-5||

ಈ ಕ್ಷಮಾಗುಣವೇ ಈ ಲೋಕ, ಪರಲೋಕಗಳೆರಡರಲ್ಲೂ ಸುಖ ಪ್ರಧಾನವಾದುದು.

ಭಾರತವು ಸಂತರಿಂದ ಕೂಡಿದ ದೇಶ. ಈ ಎಲ್ಲ ಸಂತರೂ ಕ್ಷಮಾಶೀಲರು. ವಸಿಷ್ಠರಂತಹವರು ಈ ಗುಂಪಿಗೆ ಸೇರಿದವರು.

ಕಡೆಯಲ್ಲಿ ಅತ್ಯಂತ ಮಹತ್ವಪೂರ್ಣವಾದ ಉಪದೇಶವನ್ನು ನೀಡಲಾಗಿದೆ. 10 ಮತ್ತು 11 ಅಧ್ಯಾಯಗಳಲ್ಲಿ ಆತ್ಮಜ್ಞಾನದ ಸೂಕ್ಷ್ಮ ವಿವೇಚನೆ ಇದೆ.

ಮಾತೃವತ್ ಪರದಾರಾಂಶ್ಚ ಪರದ್ರವ್ಯಾಣಿ ಲೋಷ್ಟವತ್ |
ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ ||10-11||

ಪರಸ್ತ್ರೀಯು ಮಾತೃ ಸಮಾನಳು. ಪರದ್ರವ್ಯವು ಮಣ್ಣಿಗೆ ಸಮ. ಎಲ್ಲ ಜೀವಿಗಳೂ ತನ್ನ ಸಮ – ಎಂದು ಯಾರು ತಿಳಿಯುವನೊ ಅಂತಹವನೇ ಆತ್ಮ ದ್ರಷ್ಟಾರನಾಗಿರುತ್ತಾನೆ.

ಪ್ರಾಪಂಚಿಕ ವಿಷಯಗಳಲ್ಲಿ, ಇಂದ್ರಿಯ ಭೋಗಗಳಲ್ಲಿ ಯಾರು ಅನಾಸಕ್ತರಾಗಿರುವರೊ, ಸದಾ ಅಹಿಂಸಾವ್ರತವನ್ನು ಅನುಸರಿಸುವರೊ ಅಂತಹವರು ನಿಜ ಅರ್ಥದ ಸಾಧಕರಾಗಿರುತ್ತಾರೆ –

ಮೋಕ್ಷೋಭವೇತ್ ಪ್ರೀತಿ ನಿವರ್ತಕಸ್ಯ
ಅಧ್ಯಾತ್ಮಯೋಗೈಕ ರತಸ್ಯ ಸಮ್ಯಕ್ |
ಮೋಕ್ಷೋ ಭವನಿತ್ಯಮಹಿಂಸಕಸ್ಯ
ಸ್ವಾಧ್ಯಾಯಯೋಗಾಗತಮಾನಸಸ್ಯ ||10-7||

## 29. ಪರಾಶರ ಸ್ಮೃತಿ

ತಪೋಮೂರ್ತಿ, ಮಹರ್ಷಿಯಾದ ಪರಾಶರನು ವಸಿಷ್ಠನ ಮೊಮ್ಮಗ ಹಾಗೂ ಶಕ್ತಿಯ ಮಗನು. ಅಂತೆಯೇ ಈತನ ಮಗನೇ ಸುಪ್ರಸಿದ್ಧ ವೇದ ವ್ಯಾಸ (ಕೃಷ್ಣದ್ವೈಪಾಯನ)ನು ಹಾಗೂ ಈತನ ಮೊಮ್ಮಗನೇ ಮಹಾಜ್ಞಾನಿಯಾದ ಶುಕದೇವನು.

ಪರಾಶರನ ಪಿತೃಪರಂಪರೆಯಲ್ಲಿ ವಸಿಷ್ಠನಂತಹ ಯೋಗಜ್ಞಾನ ಸಂಪನ್ನ ಮಹಾಪುರುಷನಿದ್ದಂತೆ, ಪುತ್ರ–ಪೌತ್ರ ಪರಂಪರೆಯಲ್ಲಿ ನಾರಾಯಣ ಸ್ವರೂಪನಾದ ಭಗವಾನ್ ವೇದವ್ಯಾಸನು ಹಾಗೂ ಪರಮಯೋಗಿಯಾದ ಶುಕದೇವನೂ

ಜನ್ಮವೆತ್ತಿದರು. ಇವರ ಸಮಾನ ಲೋಕೋಪಕಾರಿಗಳು ಹಾಗೂ ಧರ್ಮಾಚರಣರು ಬೇರೆ ಯಾರೂ ಇಲ್ಲ.

'ಪರಾಶರ' - ಈ ಶಬ್ದದ ಅರ್ಥ ಹೀಗಿದೆ. ಯಾರ ದರ್ಶನ, ಸ್ಮರಣೆ ಮಾತ್ರದಿಂದಲೇ ಸಮಸ್ತ ಪಾಪ - ತಾಪಗಳು ಚೂರು ಚೂರಾಗುವುದೋ, ಅಂತಹವರನ್ನು 'ಪರಾಶರ' ಎಂದು ಕರೆಯಲಾಗುವುದು. ಇವರ ಧರ್ಮಶಾಸ್ತ್ರೀಯ ಉಪದೇಶಗಳನ್ನು ಪಾಲಿಸಿದಲ್ಲಿ ಎಲ್ಲರಿಗೂ, ಎಲ್ಲ ರೀತಿಯಲ್ಲೂ ಶುಭವಾಗುವುದು. ಆಚಾರ್ಯ ಸಾಯಣ ಮಾಧವರು ತಮ್ಮ ಪ್ರಸಿದ್ಧ ಮಾಧವೀಯ ಧಾತು ವೃತ್ತಿಯ ಕ್ರಿಯಾದಿಗಣದ 16ನೇ ಸೂತ್ರಗಳಲ್ಲಿ ಪರಾಚ್ಛೃಣಾತಿ ಪಾಪನೀತಿ ಪರಾಶರಃ ಎಂದು ತಿಳಿಸಿದ್ದಾರೆ.

ಪರಾಶರ ವಿರಚಿತ ವಿಷ್ಣುಪುರಾಣವೂ ಕೂಡ ಧರ್ಮಶಾಸ್ತ್ರ ಸ್ವರೂಪವೇ ಆಗಿದೆ. ಇದರಲ್ಲಿನ ಈತನ ಉಪದೇಶಗಳು ಸುಂದರವೂ, ಸುಖ, ಶುಭಪ್ರದವೂ ಆಗಿದೆ. ಈ ಪುರಾಣವು ಶ್ರೀವೈಷ್ಣವ ಧರ್ಮದ ಹಾಗೂ ಭಕ್ತಿಯ ಉಪಾಸನೆಯ ಮೂಲಾಧಾರವಾಗಿದೆ.

ಇದೇ ರೀತಿಯಲ್ಲಿ ಮಹರ್ಷಿ ಪರಾಶರನು ವಿದೇಹರಾಜ ಜನಕನಿಗೆ ಉಪದೇಶ ಮಾಡಿದ ಒಂದು ಗೀತೆ ಇದೆ. ಇದು ಮಹಾಭಾರತದ ಶಾಂತಿಪರ್ವ (ಅ 290-298)ದಲ್ಲಿ ಗ್ರಂಥಸ್ಥವಾಗಿದೆ. ಇದನ್ನು 'ಪರಾಶರ ಗೀತೆ' ಎಂದು ಕರೆಯಲಾಗುತ್ತದೆ. 'ಶುಭ ಪ್ರಾಪ್ತಿಗಾಗಿ ಸರ್ವೋತ್ತಮ ಪ್ರಾಪ್ತಿ (ಮಾರ್ಗ) ಯಾವುದು ?' ಎಂಬ ಜಿಜ್ಞಾಸೆಯನ್ನು ಜನಕನು ಪರಾಶರನ ಮುಂದಿಡುವನು. 'ಸದಾಚಾರ ಹಾಗೂ ಧರ್ಮಾಚರಣೆಯೇ ಶುಭಪ್ರಾಪ್ತಿ (ಕಲ್ಯಾಣ ಪ್ರಾಪ್ತಿ) ಗಾಗಿನ ಸೂಕ್ತ ಮಾರ್ಗ' ಎಂದು ಆತ ತಿಳಿಸುತ್ತಾನೆ. 'ಪಾಪಾಚರಣೆಯಿಂದ ಸದಾ ದೂರವಾಗಿರಬೇಕು' ಎಂದು ಆತ ಉಪದೇಶಿಸುತ್ತಾನೆ.

ಧರ್ಮ ಏವ ಕೃತಃ ಶ್ರೇಯಾನಿಹಲೋಕೇ ಪರತ್ರ ಚ |
ತಸ್ಮಾದ್ಧಿ ಪರಮಂ ನಾಸ್ತಿ ಯಥಾ ಪ್ರಾಹುರ್ಮನೀಷಿಣಃ ||

ಧರ್ಮವನ್ನು ವಿಧಿಪೂರ್ವಕ – (ಮಹಾ. ಶಾಂತಿ 290/6) ವಾಗಿ ಅನುಷ್ಠಾನ ಮಾಡಿದ್ದೇ ಆದರೆ, ಅಂತಹವನು ಇಹಲೋಕ, ಪರಲೋಕಗಳಲ್ಲಿ ಕಲ್ಯಾಣ (ಶುಭ) ವನ್ನು ಪಡೆಯುವನು. ಇದಕ್ಕಿಂತ ಉತ್ತಮವಾದ ಶ್ರೇಯ ಬೇರೊಂದಿಲ್ಲ.

ಬೇರೆಯವರಲ್ಲಿನ ನಿಂದಿತ ಕರ್ಮಗಳನ್ನು ದೂಷಿಸುವ ವ್ಯಕ್ತಿಯು ಸ್ವತಃ ಅಂತಹ ಕೆಟ್ಟಕೆಲಸಗಳನ್ನು ಮಾಡದಿರಲಿ. ಇಂತಹ ನಿಂದಿತ ಕರ್ಮಗಳನ್ನು ಮಾಡುವವನು ಇತರರ ಅಪಹಾಸ್ಯಕ್ಕೆ ಈಡಾಗುವನು –

ಪರೇಷಾಂ ಯದ್ ಸೂಯೇತ ನ ತತ್ ಕುರ್ಯಾತ್ ಸ್ವಯಂನರಃ |
ಯೋ ಹ್ಯಸೂಯುಸ್ತಥಾಯುಕ್ತಃ ಸೋಽಪಹಾಸಂ ನಿಯಚ್ಛತಿ ||

(ಮಹಾ. ಶಾಂತಿ 290/24)

ಈ ರೀತಿಯಲ್ಲಿ ಧರ್ಮದ ಪಾಲನೆ ಮಾಡುತ್ತಾ ಸಂಪಾದಿಸುವ ಧನವೇ ನಿಜ ಅರ್ಥದಲ್ಲಿನ ಧನವಾಗಿರುತ್ತದೆ. ಅಧರ್ಮದಿಂದ ಸಂಪಾದಿಸಿದ ಹಣವು ತ್ಯಜಿಸಲು, ದೂರಮಾಡಲು ಯೋಗ್ಯವಾದುದು. ಧನದಾಸೆಯಿಂದ ಶಾಶ್ವತ ಧರ್ಮವನ್ನು ಎಂದಿಗೂ ತ್ಯಾಗ ಮಾಡಬಾರದು –

ಯೇಽರ್ಥಾ ಧರ್ಮೇಣ ತೇ ಸತ್ಯಾಯೇಽಧರ್ಮೇಣ ದಿಗಸ್ತು ತಾನ್ |
ಧರ್ಮಂ ವೈ ಶಾಶ್ವತಂ ಲೋಕೇ ನ ಜಹ್ಯಾತ್ ಧನಾಕಾಂಕ್ಷಯಾ ||

(ಮಹಾ. ಶಾಂತಿ. 292/19)

ಇದೇ ರೀತಿಯ ಮತ್ತೊಂದು ಉಪದೇಶದಲ್ಲಿ ನಿರ್ಧಾರದಲ್ಲಿ ತಮ್ಮ ಪರಾಮರ್ಶೆಯನ್ನು ವ್ಯಕ್ತಪಡಿಸುತ್ತಾ ಪರಾಶರನು ಹೀಗೆಂದು ತಿಳಿಸುತ್ತಾನೆ -

ಸದ್ಭಿಸ್ತು ಸಹ ಸಂಸರ್ಗಃ ಶೋಭತೇ ಧರ್ಮದರ್ಶಿಭಿಃ |
ನಿತ್ಯಂ ಸರ್ವಾಸ್ವವಸ್ಥಾಸು ನಾಸದ್ಭಿರಿತಿ ಮೇ ಮತಿಃ ||

(ಮಹಾ. ಶಾಂತಿ. 293/3)

ಅಂದರೆ ಧರ್ಮದ ಮೇಲೆ ದೃಷ್ಟಿ ಇಡುವ ಸತ್ಪುರುಷರ ಸ್ನೇಹ ಸಂಗದಲ್ಲಿ ಇರುವುದೇ ಶ್ರೇಷ್ಠ ನಡವಳಿಕೆಯಾಗಿರುತ್ತದೆ. ಆದರೆ ಎಂದಿಗೂ ದುಷ್ಟ ವ್ಯಕ್ತಿಗಳ ಸ್ನೇಹವನ್ನು ಮಾಡಬಾರದು. ಅದು ಒಳ್ಳೆಯದಲ್ಲ. ಇದು ನನ್ನ ದೃಢ ನಂಬಿಕೆ – ಎನ್ನುತ್ತಾನೆ ಪರಾಶರನು.

ಪರಾಶರನ ಈ ಉದಾತ್ತ ಉಪದೇಶಗಳು ಪ್ರಶಂಸನೀಯವಾದುವು. ಇಂತಹವರ ಜೀವನ ದರ್ಶನವೂ ಉಜ್ವಲವಾದುದು. ಈತನು ಯಾವಾಗಲೂ ಬೇರೆಯವರ ಹಿತಚಿಂತನೆಯಲ್ಲಿಯೇ ಮಗ್ನನಾಗಿರುತ್ತಿದ್ದ. ಮೋಕ್ಷಸಾಧನೆಗಾಗಿ, ತನ್ನ ಉದ್ಧಾರಕ್ಕಾಗಿ ಹೇಗೆ ಸೇವೆ ಮಾಡಬೇಕು, ಶ್ರಮಿಸಬೇಕು ಎಂಬುದನ್ನು ಮಾನವನಿಗೆ ಸೂಚನೆಗಳನ್ನು ಈತ ನೀಡಿದ್ದಾನೆ.

## 1. ಪರಾಶರ ಸ್ಮೃತಿ

ಧರ್ಮ ಸಂಹಿತೆಯಾದ ಈ ಸ್ಮೃತಿಯು ತುಂಬಾ ಪ್ರಸಿದ್ಧವಾದುದು. ಸ್ಮೃತಿಗಳಲ್ಲಿ ಇದಕ್ಕೆ ಪ್ರಮುಖ ಸ್ಥಾನವೂ ಇದೆ. ಪ್ರಸ್ತುತ ದೊರೆತಿರುವ ಸ್ಮೃತಿಯಲ್ಲಿ 12 ಅಧ್ಯಾಯಗಳು ಇವೆ.

ಈತನು ಯುಗದ್ರಷ್ಟಾ ಮಹಾತ್ಮನು. ಈತನು ಸತ್ಯಯುಗ, ತ್ರೇತಾ, ದ್ವಾಪರ ಹಾಗೂ ಕಲಿಯುಗದ ಧರ್ಮ ವ್ಯವಸ್ಥೆಯನ್ನು ಅರಿತು ಸಕಲ ಜೀವಿಗಳ ಸಹಜ ಸ್ವಾಸ್ಥ್ಯಕ್ಕಾಗಿ ಧಾರ್ಮಿಕ ಸ್ವರೂಪವನ್ನು ನಿರ್ಧರಿಸಿದ್ದಾನೆ. ಸತ್ಯ ಯುಗಾದಿಗಳ ಧರ್ಮಲಕ್ಷಣಗಳನ್ನು ಅನುಷ್ಠಾನ ಮಾಡುವುದು ಕಷ್ಟಕರವಾದುದು. ಆದುದರಿಂದ ಕಲಿಯುಗದಲ್ಲಿ ಜನರು ತಮ್ಮ ತಮ್ಮ ಶಕ್ತಿಗೆ ಅನುಸಾರವಾಗಿ ಧರ್ಮಾಚರಣೆಯನ್ನು ಪಾಲಿಸಬೇಕು. ಹಾಗೆ ಪಾಲಿಸಬೇಕಾದ ಧರ್ಮದ ವಿವರಗಳನ್ನು ಈ ಸ್ಮೃತಿಯಲ್ಲಿ ಪರಾಶರನು ತಿಳಿಸಿದ್ದಾನೆ. ಇದರಲ್ಲಿ ಯುಗಧರ್ಮಕ್ಕೆ ಅನುಸಾರವಾದ ವಿವರಗಳಿಗೆ ಹೆಚ್ಚು ಒತ್ತು ಕೊಡಲಾಗಿದೆ.

ಒಮ್ಮೆ ಹಿಮಾಲಯ ಪರ್ವತಗಳ ತಪ್ಪಲಿನಲ್ಲಿ ಕುಳಿತಿದ್ದ ವೇದವ್ಯಾಸನು ಸತ್ಸಂಗ ಚರ್ಚೆಯಲ್ಲಿ ತೊಡಗಿದ್ದನು. ಆಗ ಅಲ್ಲಿಗೆ ಬಂದ ಋಷಿಗಳು, "ಭಗವನ್ ! ಕಲಿಯುಗದಲ್ಲಿ ಸುಲಭವಾಗಿ ಅನುಸರಿಸಲು ಯೋಗ್ಯವಾದ ಧರ್ಮಸೂಕ್ಷ್ಮತೆಗಳನ್ನು ಅನುಗ್ರಹಿಸಬೇಕಾಗಿ ಬೇಡುತ್ತೇವೆ." ಎಂದು ಆತನನ್ನು ಕೇಳಿಕೊಂಡರು.

ಇದಕ್ಕೆ ವ್ಯಾಸಮುನಿಯು, ಈ ವಿಷಯದಲ್ಲಿ ನನ್ನ ತಂದೆ (ಪರಾಶರ) ಯನ್ನು ಕೇಳುವುದು ಒಳ್ಳೆಯದು ಎಂದನು.

ನಂತರ ಅವರೆಲ್ಲರೂ ವ್ಯಾಸಮುನಿಯ ಸಹಿತ ಬದರಿಕಾಶ್ರಮಕ್ಕೆ ಹೋದರು. ಆತನಿಗೆ ಪ್ರಣಾಮ ಮಾಡಿ, ತಾವು ಬಂದ ವಿಷಯವನ್ನು ಅರುಹಿದರು. ಇದಕ್ಕೆ ಉತ್ತರವಾಗಿ ಪರಾಶರನು,

'ಶೃಣು ಪುತ್ರ ಪ್ರವಕ್ಷ್ಯಾಮಿ ಶೃಣ್ವಂತು ಋಷಯ ಸ್ತಥಾ || 1–19||' ಎಂದು ಪ್ರಾರಂಭಿಸಿ, ವಿಷಯ ತಿಳಿಸತೊಡಗಿದನು.

ಪ್ರತ್ಯೇಕ ಕಲ್ಪದಲ್ಲಿ ಪ್ರಳಯವಾದ ಮೇಲೆ ಬ್ರಹ್ಮ, ವಿಷ್ಣು, ಮಹೇಶ್ವರರು ಕಾಣಿಸಿಕೊಳ್ಳುತ್ತಾರೆ. ಎಂದಿನಂತೆ ಇವರು ಶೃತಿ, ಸ್ಮೃತಿ ಹಾಗೂ ಸದಾಚಾರಗಳ ನಿರ್ಮಾಣ ಮಾಡುವರು. ವೇದವನ್ನು ರಚಿಸಿದವರು ಯಾರೂ ಇಲ್ಲ.

ನೂತನ ಕಲ್ಪದ ಆದಿಯಲ್ಲಿ ಹಿಂದಿನಂತೆಯೇ ಬ್ರಹ್ಮನು ವೇದಗಳನ್ನು ಸ್ಮರಿಸಿ ಕೊಂಡು, ತನ್ನ ನಾಲ್ಕು ಮುಖಗಳ ಮುಖಾಂತರ ಪ್ರಕಟಪಡಿಸುವನು. ಆ ನಂತರ ಪ್ರತಿಸಲದಂತೆ ಮನು, ಕಲ್ಪ ಹಾಗೂ ಮನ್ವಂತರಗಳಲ್ಲಿ ಏನೇನು ಸಂಭವಿಸುತ್ತದೆಯೊ ಅವು ಸಂಭವಿಸುತ್ತವೆ. ಧರ್ಮ ನಿಯಮಗಳ ಸ್ಮರಣೆ ಮಾಡಿ, ಧರ್ಮವನ್ನು ಸ್ಥಾಪಿಸಲು ಇವರು ಮೂವರೂ ಸೃಷ್ಟಿ, ಸ್ಥಿತಿ, ಲಯಾದಿ ಗಳ ಮುಖಾಂತರ ಧರ್ಮದ ಅನುವರ್ತನೆಯನ್ನು ಮಾಡುವರು. ಇದರ ಪ್ರಕಾರ ಯುಗಧರ್ಮಕ್ಕೆ ತಕ್ಕಂತೆ ಶಕ್ತಿ ವೃದ್ಧಿ ಹಾಗೂ ಹಾನಿಗಳು ಉಂಟಾಗುತ್ತವೆ.

ನ ಕಶ್ಚಿದ್ವೇದ ಕರ್ತಾ ಚ ವೇದ ಸ್ಮರ್ತಾ ಚತುರ್ಮುಖಃ |
ತಥೈವ ಧರ್ಮ ಸ್ಮರತಿ ಮನುಃ ಕಲ್ಪಾಂತರಾಂತರೇ ||1-21||

ಮಾನವ ಶಕ್ತಿಗೆ ಅನುಸಾರ ಧರ್ಮದ ವರ್ಣನೆ ಮಾಡಿರುವರು. ಸತ್ಯ ಯುಗದಲ್ಲಿ ಮಾನವನು ತುಂಬಾ ಶಕ್ತಿಸಂಪನ್ನನಾಗಿದ್ದನು. ಆದುದರಿಂದ ಆಗ ತಪಸ್ಯಾರೂಪ ಧರ್ಮವು ಪ್ರಧಾನವಾಗಿದ್ದಿತು. ತ್ರೇತಾಯುಗದಲ್ಲಿ ಜ್ಞಾನ ಧರ್ಮವು ಪ್ರಧಾನವಾಗಿದ್ದಿತು. ದ್ವಾಪರದಲ್ಲಿ ಯಜ್ಞ-ಯಾಗಾದಿ ಸಾಧನಗಳು ವಿಶೇಷವಾಗಿ ಅನುಷ್ಠಾನ ಮಾಡಲಾಗುತ್ತಿತ್ತು. ಆದರೆ ಕಲಿಯುಗದಲ್ಲಿ ಶಾರೀರಿಕ ಶಕ್ತಿಯು ಕಡಿಮೆ ಇದ್ದುದರಿಂದ ದೀರ್ಘ ತಪಸ್ಸು, ಜ್ಞಾನ ಸಂಪಾದನೆ ದೊಡ್ಡ ಯಜ್ಞಗಳನ್ನು ನಡೆಸುವಿಕೆ ಕಾಲ ಹಾಗೂ ವಿಧಿನಿಯಮಗಳ ಕೊರತೆಯ ಕಾರಣ ಸಾಧ್ಯವಾಗಲಾರದು. ಆದುದರಿಂದ ಕಲಿಯುಗದಲ್ಲಿ ದಾನರೂಪ ಧರ್ಮವು ವಿಶೇಷ ಸ್ಥಾನವನ್ನು ಪಡೆದು, ಮಹಿಮೆಯುಳ್ಳದ್ದಾಗಿದೆ-

ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೆ |
ದ್ವಾಪರೇ ಯಜ್ಞಮಿತ್ಯೂಚುರ್ದಾನಮೇಕಂ ಕಲೀಯುಗೇ ||1-23||

ಸತ್ಯಯುಗದಲ್ಲಿ ಮನು ನಿರ್ದೇಶನದ ಧರ್ಮ ಮುಖ್ಯವಾಗಿತ್ತು. ತ್ರೇತಾ ಯುಗದಲ್ಲಿ ಮಹರ್ಷಿ ಗೌತಮನ ಧರ್ಮಸಂಹಿತೆ ಮಾನ್ಯತೆಯನ್ನು ಪಡೆದಿತ್ತು. ದ್ವಾಪರದಲ್ಲಿ ಶಂಖ ಹಾಗೂ ಲಿಖಿತರ ಧರ್ಮಶಾಸ್ತ್ರವನ್ನು ಅನುಸರಿಸಲಾಗು ತ್ತಿತ್ತು ಮತ್ತು ಕಲಿಯುಗದಲ್ಲಿ ಪರಾಶರನು ತಿಳಿಸಿದ ಧರ್ಮಶಾಸ್ತ್ರದ ವಿಷಯ ವಿಶೇಷ ಮಾನ್ಯತೆಯನ್ನು ಪಡೆದಿವೆ.

ಕೃತೇ ತು ಮಾನವೋ ಧರ್ಮಸ್ತ್ರೇತಾಯಾಂ ಗೌತಮಃ ಸ್ಮೃತಃ |
ದ್ವಾಪರೇ ಶಂಖಲಿಖಿತಃ ಕಲೌ ಪರಾಶರಃ ಸ್ಮೃತಃ ||1-14||

ಈ ರೀತಿಯಲ್ಲಿ ಪರಾಶರನು ತನ್ನ ಸ್ಮೃತಿಯನ್ನು ಯುಗಾನುರೂಪ ವಾದುದೆಂದು ತಿಳಿಸಿದ್ದಾನೆ. ಪ್ರತಿಯೊಬ್ಬ ಮಾನವನೂ ತನ್ನ ಶಕ್ತಿ, ಸಾಮರ್ಥ್ಯಗಳಿಗೆ ಅನುಗುಣವಾಗಿ ಧರ್ಮದ ಸೇವೆ ಮಾಡಬೇಕೆಂದು, ಅಧರ್ಮ ವನ್ನು ತ್ಯಜಿಸಬೇಕೆಂದೂ ಈತನು ತಿಳಿಸಿ, ಅದನ್ನು ಅವರಿಂದ ನಿರೀಕ್ಷಿಸುತ್ತಾನೆ.

## ನಾಲ್ಕು ಯುಗಗಳಲ್ಲಿ ದಾನದ ಸ್ವರೂಪ

ಕೃತ (ಸತ್ಯ) ಯುಗದಲ್ಲಿ ಜನರಿಗೆ ಬ್ರಾಹ್ಮಣರ ಬಗ್ಗೆ ವಿಶೇಷ ಶ್ರದ್ಧೆ, ಆಸಕ್ತಿಗಳಿದ್ದುವು. ಇದರಿಂದ ಜನರು ಅವರ ಮನೆಗಳಿಗೆ ಹೋಗಿ ಶ್ರದ್ಧಾ-ಭಕ್ತಿಗಳಿಂದ ಅವರನ್ನು ಪೂಜಿಸಿ ದಾನ ಸಾಮಗ್ರಿಗಳನ್ನು ನೀಡುತ್ತಿದ್ದರು. ತ್ರೇತಾ ಯುಗದಲ್ಲಿ ಅಂತಹ ಬ್ರಾಹ್ಮಣರನ್ನು ಮನೆಗೆ ಕರೆಯಿಸಿ, ದಾನಿಗಳು ದಾನ ನೀಡುತ್ತಿದ್ದರು. ದ್ವಾಪರದಲ್ಲಿ ಯಾಚನೆ ಮಾಡಿದಾಗ ಮಾತ್ರ ದಾನ ನೀಡು ತ್ತಿದ್ದರು. ಆದರೆ ಕಲಿಯುಗದಲ್ಲಿ ಸೇವೆಯನ್ನು ಮಾಡಿಸಿಕೊಂಡು ದಾನವನ್ನು ನೀಡಲಾಗುತ್ತದೆ. ಇದರಲ್ಲಿ ಮೊದಲನೆಯದು ಉತ್ತಮವಾದುದು, ಎರಡನೆ ಯದು ಮಧ್ಯಮದ್ದು, ಮೂರನೆಯದ್ದು ಅಧಮದ್ದು ಹಾಗೂ ನಾಲ್ಕನೆಯದು ನಿಷ್ಫಲಗೊಳ್ಳುವಂತಹುದು ಆಗಿದೆ ಎಂದು ಪರಾಶರನು ಹೇಳುತ್ತಾನೆ –

ಅಭಿಗಮ್ಯ ಕೃತೆ ದಾನಂ ತ್ರೇತಾಸ್ವಾಹೂಯ ದೀಯತೇ |
ದ್ವಾಪರೇ ಯಾಚಮಾನಾಯ ಸೇವಯಾ ದೀಯತೇ ಕಲೌ ||1-28||
..........................ಸೇವಾದಾನಂ ಚ ನಿಷ್ಫಲಮ್ ||1-29||

ಸತ್ಯಯುಗದಲ್ಲಿ ಪ್ರಾಣವು ಅಸ್ಥಿಗಳಲ್ಲಿಯೂ, ತ್ರೇತಾಯುಗದಲ್ಲಿ ಮಾಂಸ ಖಂಡಗಳಲ್ಲಿಯೂ, ದ್ವಾಪರದಲ್ಲಿ ರಕ್ತದಲ್ಲಿಯೂ, ಕಲಿಯುಗದಲ್ಲಿ ಅನ್ನ (ಆಹಾರ) ದಲ್ಲಿಯೂ ನೆಲೆಸಿರುತ್ತದೆ. ಆದರಿಂದ ಊಟ ಅನ್ನ ದೊರೆಯದಿದ್ದಲ್ಲಿ ಮಾನವನ ಪ್ರಾಣವು ಹಾರಿಹೋಗುತ್ತದೆ.

ಕೃತೆ ಚಾಸ್ಥಿಗತಾಃ ಪ್ರಾಣಾಸ್ತ್ರೇತಾಯಾಂ ಮಾಂಸಸಂಸ್ಥಿತಾಃ |
ದ್ವಾಪರೇ ರುಧಿರಂ ಯಾವತ್ ಕಲಾವನ್ನಾದಿಸು ಸ್ಥಿತಾಃ ||1-30||

## ಆಚಾರದ ಪಾಲನೆಯೇ ಮುಖ್ಯ ಧರ್ಮ

ಧರ್ಮದ ಮೂಲ ಆಚಾರವೆಂದು ತಿಳಿಸುವ ಪರಾಶರನು ಆಚಾರ

ವಿಚಾರವೇ ಧರ್ಮಾಚರಣೆ ಮುಖ್ಯವಾದುದು ಎಂದು ತಿಳಿಸುತ್ತಾನೆ. ಈ ಆಚಾರವನ್ನು ನಾಲ್ಕು ವರ್ಣಗಳವರು ಆಚರಿಸಬೇಕು ಎಂದು ತಿಳಿಸುತ್ತಾನೆ. ಸದಾಚಾರ ಹಾಗೂ ಶೌಚಾಚಾರಗಳ ಪಾಲನೆ ಮಾಡುವುದು ಬಾಯಿ ಮಾತಿನ ಉಪದೇಶಕ್ಕಿಂತಲೂ, ವಿವರಿಸುವುದಕ್ಕಿಂತಲೂ ಉತ್ತಮವಾದುದು ಎಂದು ಆತ ತಿಳಿಸುತ್ತಾನೆ. ಆಚಾರವಿಲ್ಲದವನು ಭ್ರಷ್ಟನಾಗುತ್ತಾನೆ. ಅಂತಹವನು ಧರ್ಮ ವಿಮುಖನೆಂದು ತಿಳಿಯಬೇಕು –

ಚತುರ್ಣಾಮಪಿ ವರ್ಣಾನಾಮಾಚಾರೋ ಧರ್ಮಪಾಲಕಃ |
ಆಚಾರ ಭ್ರಷ್ಟದೇಹಾನಾಂ ಭವೇದ್ಧರ್ಮಃ ಪರಾಙ್ಮುಖಃ ||

(ಪರಾ-1-37)

### ಶಿಶು ಜನನ ಹಾಗೂ ಗರ್ಭಪಾತದಲ್ಲಿ ಅಶೌಚ

ಹಲ್ಲುಗಳು ಹುಟ್ಟದ ಶಿಶು, ಗರ್ಭದಲ್ಲಿ ಅಥವಾ ಜನಿಸಿದ ಕೂಡಲೇ ಸಾವಿಗೀಡಾದ ಮಗು - ಇತ್ಯಾದಿಗಳಿಗೆ ಅಗ್ನಿಸಂಸ್ಕಾರ, ಸೂತಕ ಹಾಗೂ ಜಲ ದಾನಗಳಿರುವುದಿಲ್ಲ –

ಅಜಾತದಂತಾ ಯೇ ಬಾಲಾ ಯೇ ಚ ಗರ್ಭಾದ್ವಿನಿಃಸೃತಾಃ |
ನ ತೇಷಾಮಗ್ನಿ ಸಂಸ್ಕಾರೊ ನಶೌಚಂ ನೋದಕಕ್ರಿಯಾಃ ||3–16||

ಗರ್ಭಸ್ರಾವ ಅಥವಾ ಗರ್ಭಪಾತವಾದಾಗ, ಗರ್ಭ ಎಷ್ಟು ತಿಂಗಳು ಇತ್ತೋ ಅಷ್ಟು ದಿನಗಳು ಮಾತ್ರ ಸೂತಕವಿರುತ್ತದೆ. ನಾಲ್ಕು ತಿಂಗಳ ನಂತರ ಗರ್ಭ ಬಿದ್ದು ಹೋದರೆ, ಅದನ್ನು ಗರ್ಭಸ್ರಾವ ಎಂದು ಕರೆಯುತ್ತೇವೆ. ಐದಾರು ತಿಂಗಳಲ್ಲಿ ಗರ್ಭ ಬಿದ್ದು ಹೋದರೆ ಅದನ್ನು ಗರ್ಭಪಾತ ಎಂದು ಕರೆಯುತ್ತಾರೆ. ಇದರ ನಂತರ ಹತ್ತು ತಿಂಗಳವರೆಗಿನ ಸಮಯವನ್ನು 'ಪ್ರಸವ ಕಾಲ' ಎಂದು ಕರೆಯುತ್ತಾರೆ. ಪ್ರಸವ ಕಾಲದಲ್ಲಿ ಹತ್ತು ದಿನಗಳ ಮೈಲಿಗೆ ಇರುತ್ತದೆ.

ಯಾವನ್ಮಾಸಂ ಸ್ಥಿತೋ ಗರ್ಭೋ ದಿನಂ ತಾವತ್ ಸೂತಕಃ ||
ಆಚತುರ್ಥಾತ್ ಭವೇ ಸ್ರಾವಃ ಪಾತಃ ಪಂಚಮಷಷ್ಠಯೋಃ |
ಅತ ಊರ್ಧ್ವ ಪ್ರಸೂತಿಃ ಸ್ಯಾದ್ದಶಾಹಂ ಸೂತಕಂ ಭವೇತ್ ||

(ಪರಾಶರ-3/17-18)

### ಹಲ್ಲು ಹುಟ್ಟುವುದರಿಂದ ಉಪನಯನದವರೆಗಿನ ಅಶೌಚ

ಮಗುವು ಹಲ್ಲಿನೊಂದಿಗೆ ಹುಟ್ಟಲಿ, ನಂತರದಲ್ಲಿ ಹಲ್ಲು ಹುಟ್ಟಲಿ ಅಥವಾ ಚೂಡಾಕರ್ಮ ಮುಗಿದ ನಂತರ ಮರಣಿಸಿದರೆ, ಅದಕ್ಕೆ ಅಗ್ನಿ ಸಂಸ್ಕಾರ ಮಾಡಬೇಕು. ಮೂರು ದಿನಗಳವರೆಗೆ ಸೂತಕವನ್ನು ಆಚರಿಸಬೇಕು. ಹಲ್ಲು ಹುಟ್ಟದ ಮಗುವು ಮರಣಿಸಿದಲ್ಲಿ ಕೇವಲ ಸ್ನಾನ ಮಾಡಿದಲ್ಲಿ ಸದ್ಯಃ ಶುದ್ಧಿಯಾಗುವುದು. ಚೂಡಾಕರ್ಮಕ್ಕೆ ಮುಂಚೆಯೇ ಮಗುವು ಮರಣಿಸಿದಲ್ಲಿ ಒಂದು ದಿನದಲ್ಲಿ ಶುದ್ಧಿಯಾಗುವರು. ಉಪನಯನವಿಲ್ಲದ (ಎಂಟು ವರ್ಷದೊಳಗಿನವರು) ಮರಣಿಸಿದಲ್ಲಿ ಮೂರು ದಿನ ಅಶೌಚವಿರುತ್ತದೆ. ಉಪನಯನವಾದ ನಂತರದಲ್ಲಿ ಮರಣಿಸಿದರೆ ಹತ್ತು ದಿನ ಸೂತಕ ಇರುತ್ತದೆ-

ದಂತಜಾತೇಽನುಜಾತೇ ಚ ಕೃತಚೂಡೇ ಚ ಸಂಸ್ಥಿತೇ |
ಅಗ್ನಿ ಸಂಸ್ಕರಣಂ ತೇಷಾಂ ತ್ರಿರಾತ್ರಂ ಸೂತಕಂ ಭವೇತ್ ||3-21||
ಆದಂತಜನನಾತ್ ಸದ್ಯ ಆಚೂಡಾ ನೈಶಿಕೀ ಸ್ಮೃತಾ |
ತ್ರಿರಾತ್ರಮಾವ್ರತಾತ್ ತೇಷಾಂ ದಶರಾತ್ರಮತೇಃ ಪರಂ ||3-22||

### ಗರ್ಭಪಾತ ಮಹಾನ್‌ಪಾಪ

ಗರ್ಭಪಾತದಿಂದ ಬ್ರಹ್ಮಹತ್ಯೆಯ ಎರಡರಷ್ಟು ಪಾಪ ಉಂಟಾಗುತ್ತದೆ. ಇದಕ್ಕೆ ಸೂಕ್ತ ಪ್ರಾಯಶ್ಚಿತ್ತವೂ ಇಲ್ಲ. ಗರ್ಭಪಾತ ಮಾಡಿಸಿಕೊಂಡ ಸ್ತ್ರೀಯನ್ನು ತ್ಯಜಿಸಬೇಕೆಂದು ಪರಾಶರನು ತಿಳಿಸುತ್ತಾನೆ.

ಯತ್ಪಾಪಂ ಬ್ರಹ್ಮಹತ್ಯಾಯಾ ದ್ವಿಗುಣಂ ಗರ್ಭಪಾತನೆ |
ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ತಸ್ಯಾಸ್ತ್ಯಾಗೋ ವಿಧೀಯತೇ ||4-20||

### ಪರಾಶರನ ಗೋಭಕ್ತಿ

ಪರಾಶರನು ಪ್ರಾಣಿಗಳ ಬಗ್ಗೆ ಅಪಾರ ಕರುಣೆಯನ್ನು ತೋರಿದ್ದಾನೆ. ತನ್ನ ಸ್ಮೃತಿಯ 8ನೇ ಅಧ್ಯಾಯದಲ್ಲಿ ಪ್ರಾಣಿಗಳ ಸಂಹಾರವನ್ನು ಯಾವುದೇ ಸನ್ನಿವೇಶದಲ್ಲಿಯೂ ಮಾಡಬಾರದೆಂದು ಈತ ತಿಳಿಸಿದ್ದಾನೆ. ಪಶು-ಪಕ್ಷಿ, ಜೀವ-ಜಂತು, ಕೀಟ-ಪತಂಗ, ಮನುಷ್ಯ - ಸ್ತ್ರೀ - ಪುರುಷ - ಬಾಲಕ - ವೃದ್ಧ ಇತ್ಯಾದಿಯವರ ಹಿಂಸೆ ಮಾಡುವುದರಿಂದ ಮಹಾನ್ ಪಾಪ ಉಂಟಾಗುತ್ತದೆಯೆಂದು ಸವಿಸ್ತಾರವಾಗಿ ತಿಳಿಸಿದ್ದಾನೆ. ಇಷ್ಟೇ ವಿಸ್ತಾರವಾಗಿ ಇದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ತಿಳಿಸಿದ್ದಾನೆ.

ಈ ಪಾಪದ ಪ್ರಾಯಶ್ಚಿತ್ತವನ್ನು ಗೋದಾನ, ಗೋವ್ರತ, ಉಪವಾಸ, ಪಂಚಗವ್ಯ ಸೇವನೆ, ಗೋ-ಸೇವೆ, ಬ್ರಾಹ್ಮಣ ಪೂಜೆ, ಗಾಯಿತ್ರಿ ಜಪ - ಇತ್ಯಾದಿಗಳ ಮುಖಾಂತರ ನೆರವೇರಿಸಬಹುದು.

ಬ್ರಾಹ್ಮಣ ಹಾಗೂ ಗೋವುಗಳ ರಕ್ಷಣೆ ಮಾಡುವುದು ಅಥವಾ ಅವರುಗಳಿಗಾಗಿ ತನ್ನ ಪ್ರಾಣತ್ಯಾಗ ಮಾಡುವುದರಿಂದ ಬ್ರಹ್ಮಹತ್ಯೆ ಇತ್ಯಾದಿ ಎಲ್ಲ ಪಾತಕಗಳಿಂದ ಬಿಡುಗಡೆ ಹೊಂದಿ, ಆ ವ್ಯಕ್ತಿಯು ಉತ್ತಮ ಲೋಕಗಳನ್ನು ಪಡೆಯುವನು –

ಬ್ರಾಹ್ಮಣಾರ್ಥೇ ಗವಾರ್ಥೇ ವಾ ಯಸ್ತು ಪ್ರಾಣಾನ್ ಪರಿತ್ಯಜೇತ್ |
ಮುಚ್ಯತೇ ಬ್ರಹ್ಮಹತ್ಯಾಧ್ಯೈರ್ಗೋಪ್ತಾ ಗೋಬ್ರಾಹ್ಮಣಸ್ಯ ||8/42||

ಗೋವು ಕೊಲ್ಲಲಾಗದಂತಹ ಪ್ರಾಣಿ. ಆದಕ್ಕಾಗಿ ಸೇವೆ ಮಾಡುವುದು ಅತ್ಯಂತ ಅವಶ್ಯ. ಗೋವನ್ನು ಕೊಲ್ಲುವುದು ಅಥವಾ ಯಾವುದಾದರೊಂದು ರೀತಿಯಲ್ಲಿ ಅದನ್ನು ಹಿಂಸಿಸುವುದು ಪಾಪ ಕಾರ್ಯವಾಗುತ್ತದೆ.

9ನೇ ಅಧ್ಯಾಯದಲ್ಲಿ ಗೋವಧೆ ಇತ್ಯಾದಿಗಳ ಪಾಪಕ್ಕೆ ಪ್ರಾಯಶ್ಚಿತ್ತವನ್ನು ತಿಳಿಸಲಾಗಿದೆ. ಕೃಚ್ಛ್ರ, ಪ್ರಾಜಾಪತ್ಯ, ಸಾಂತಪನ ಹಾಗೂ ಗೋವ್ರತ ಇತ್ಯಾದಿ ಪ್ರಾಯಶ್ಚಿತ್ತಗಳ ಪರಾಮರ್ಶೆಯನ್ನು ನೀಡಲಾಗಿದೆ. ಗೋವಧೆಯನ್ನು ಮಾಡಿ, ಅದನ್ನು ಮುಚ್ಚಿಟ್ಟಲ್ಲಿ, ಅಂತಹ ಕಳ್ಳರಿಗಾಗಿರುವ 'ಕಾಲಸೂತ್ರ' ಎನ್ನುವ ಹೆಸರಿನ ನರಕದಲ್ಲಿ ಬಹಳ ಕಾಲದವರೆಗೆ ಇದ್ದು, ನಂತರ ಮಾನವನಾಗಿ ಹುಟ್ಟಿ ಅನೇಕ ರೀತಿಯ ರೋಗಗಳಿಂದ ಬಾಧಿತನಾಗಿ ಏಳು ಜನ್ಮದವರೆಗೆ ಅನುಭವಿಸುತ್ತಾನೆ.

ಇಹ ಯೋ ಗೋವಧಂ ಕೃತ್ವಾ ಪ್ರಚ್ಛಾದಯಿತುಮಿಚ್ಛತಿ |
ಸ ಯಾತಿ ನರಕಂ ಘೋರಂ ಕಾಲ ಸೂತ್ರ ಮಸಂಶಯಂ ||9-60||
ವಿಮುಕ್ತೋ ನರಕಾನ್ ತಸ್ಮಾನ್ ಮರ್ತ್ಯಲೋಕೇ ಪ್ರಜಾಯತೇ |
ಕ್ಲೀಬೋ ದುಃಖೀ ಚ ಕುಷ್ಠೀ ಚ ಸಪ್ತಜನ್ಮಾನಿ ವೈನರಃ ||9-61||

ಆದುದರಿಂದ ಮಾಡಿದ ಇಂತಹ ಪಾಪವನ್ನು ಮುಚ್ಚಿಟ್ಟುಕೊಳ್ಳಬಾರದು ಧರ್ಮ ಪರಿಷದ್‌ನಲ್ಲಿ ಇದನ್ನು ತಿಳಿಸಿ ತಕ್ಕ ಪ್ರಾಯಶ್ಚಿತ್ತವನ್ನು ಪಡೆಯಬೇಕು. ಇಂತಹ ಪಾಪಗಳಿಂದ ದೂರವಿರುವುದಕ್ಕಾಗಿ ನಿರಂತರವಾಗಿ ಸ್ವಧರ್ಮರೂಪ ಪುಣ್ಯಾನುಷ್ಠಾನಗಳನ್ನು ಅನುಸರಿಸಬೇಕು. ಇದರೊಂದಿಗೆ ಸ್ತ್ರೀ, ಬಾಲಕ,

ಸೇವಕ, ರೋಗಿ ಹಾಗೂ ದುಃಖೀ ವ್ಯಕ್ತಿಗಳ ಮೇಲೆ ಹೆಚ್ಚಿನ ಕೋಪವನ್ನು ತೋರಿಸಬಾರದು –

ತಸ್ಮಾತ್ ಪ್ರಕಾಶಯೇತ್ ಪಾಪಂ ಸ್ವಧರ್ಮಂ ಸತತಂ ಚರೇತ್ ।
ಸ್ತ್ರೀಬಾಲ ಭೃತ್ಯಗೋವಿಪ್ರೇಷ್ವತಿಕೋಪಂ ವಿವರ್ಜಯೇತ್ ॥9–62॥

### ಗೋಚರ್ಮ ಭೂಮಿಯ ದಾನ

ನೂರು ಹಸುಗಳು ಮತ್ತು ಎತ್ತು – ಇದರ ಹತ್ತರಷ್ಟು ಅಥವಾ ಒಂದು ಸಾವಿರ ಗೋವುಗಳು ಮತ್ತು ಹತ್ತು ಎತ್ತು – ಇಷ್ಟು ಪ್ರಾಣಿಗಳು ಕುಳಿತಿರುವ, ಮಲಗಿರುವ ಜಾಗವನ್ನು 'ಗೋ–ಚರ್ಮ ಭೂಮಿ' ಎಂದು ಕರೆಯಲಾಗುತ್ತದೆ. ಇದಕ್ಕೆ ಸಮಾನವಾದ ಭೂಮಿಯನ್ನು ಸತ್ಪಾತ್ರನಿಗೆ ದಾನ ಮಾಡಿದ್ದೇ ಆದರೆ ಮನಸ್ಸು, ಮಾತು, ಶರೀರದ ಮುಖಾಂತರ ಮಾಡಿರುವ ಎಲ್ಲ ಪಾಪಗಳೂ, ಬ್ರಹ್ಮಹತ್ಯೆ ಹಾಗೂ ಇತರೇ ಮಹಾಪಾಪಗಳೂ ದೂರವಾಗುತ್ತವೆ.

ಗವಾಂ ಶತಂ ಸೈಕವೃಷಂ ಯತ್ರ ತಿಷ್ಠತ್ಯಯಂತ್ರಿಕಂ ।
ತತ್ಕ್ಷೇತ್ರಂ ದಶಗುಣಿತಂ ಗೋಚರ್ಮ ಪರಿಕೀರ್ತಿತಂ ॥12–43॥
ಬ್ರಹ್ಮಹತ್ಯಾದಿಭಿರ್ಮರ್ತ್ಯೋ ಮನೋವಾಕ್ಕಾಯ ಕರ್ಮಜೈಃ ।
ಯತ್ ಗೋಚರ್ಮ ದಾನೇನ ಮುಚ್ಯತೇ ಸರ್ವಕಿಲ್ಬಿಷೈಃ ॥12–44॥

### ಸಂಪರ್ಕದಿಂದ ಉಂಟಾದ ಪಾಪ

ಪಾಪಿಯೊಂದಿಗೆ ಸಂಪರ್ಕ ಪಡೆದವನಿಗೂ ಕೂಡ, ಆ ಪಾಪದವನ ಪಾಪ ಅಂಟಿಕೊಳ್ಳುತ್ತದೆ. ಆದುದರಿಂದ ಪಾಪಿಯ ಹಾಗೂ ಅವನ ಪಾಪಕರ್ಮದಿಂದ ಸದಾ ದೂರವಿರಬೇಕಾದುದು ಅವಶ್ಯಕ.

ಪಾಪಿಯೊಂದಿಗೆ ಒಂದೇ ಆಸನದಲ್ಲಿ ಕುಳಿತುಕೊಳ್ಳುವಿಕೆ, ಅವನೊಂದಿಗೆ ಮಲಗುವಿಕೆ, ಅವನೊಂದಿಗೆ ಓಡಾಡುವಿಕೆ, ಮಾತನಾಡುವಿಕೆ, ಅವನೊಂದಿಗೆ ಊಟಮಾಡುವಿಕೆ, ಸಂಭೋಗವನ್ನು ಹೊಂದುವಿಕೆ ಇತ್ಯಾದಿಗಳಿಂದ ಪಾಪಿಯ ಪಾಪವು ಸಂಪರ್ಕ ಹೊಂದಿದವನಿಗೆ ಬರುತ್ತದೆ. ಇದರ ನಿವೃತ್ತಿಗಾಗಿ ಗೋವ್ರತದ ಪಾಲನೆಯನ್ನು ಮಾಡಬೇಕು ಗೋವಿನ ಸೇವೆ, ಅದನ್ನು ಹಿಂಬಾಲಿಸುವುದು ಇತ್ಯಾದಿಗಳಿಂದ ಗೋವನ್ನು ಪ್ರಸನ್ನಗೊಳಿಸಿದಲ್ಲಿ ಎಲ್ಲ ರೀತಿಯ ಪಾಪಗಳೂ ನಷ್ಟವಾಗುತ್ತದೆ –

ಗವಾಂ ಚೈವಾನುಗಮನಂ ಸರ್ವಪಾಪಪ್ರಣಾಶನಂ ॥12–72॥

## 2. ಬೃಹತ್ ಪರಾಶರಸ್ಮೃತಿ

ಪರಾಶರನ ಹೆಸರಿನಲ್ಲಿ 'ಬೃಹತ್ ಪರಾಶರ ಸ್ಮೃತಿ' ಎಂಬ ಒಂದು ಗ್ರಂಥವೂ ದೊರೆತಿದೆ. ಇದರಲ್ಲಿ ಮೊದಲಿನ ಸ್ಮೃತಿಯಂತೆ 12 ಅಧ್ಯಾಯಗಳು ಇವೆ. ಆದರೆ ಇದರಲ್ಲಿನ ಶ್ಲೋಕ ಸಂಖ್ಯೆಗಳು ಹೆಚ್ಚಾಗಿವೆ. ಸುವ್ರತನು ಇದರ ವಕ್ತಾರನೆಂದು ಹೇಳಲಾಗುತ್ತದೆ.

ಪರಾಶರೋದಿತಂ ಧರ್ಮಶಾಸ್ತ್ರಂ ಪ್ರೋವಾಚ ಸುವ್ರತಃ ||12–377||

ಇದರಲ್ಲಿ ಮುಖ್ಯವಾಗಿ ವರ್ಣಾಶ್ರಮಧರ್ಮ, ಆಚಾರಧರ್ಮ, ಸ್ನಾನ, ಸಂಧ್ಯಾ, ಜಪ–ಇತ್ಯಾದಿ ಷಟ್‌ಕರ್ಮಗಳು, ಶ್ರಾದ್ಧ, ತರ್ಪಣ, ಪ್ರಣವದ ಮಹಿಮೆ ಹಾಗೂ ಅದರ ಸ್ವರೂಪ, ಗಾಯಿತ್ರಿ ಪುರಶ್ಚರಣ, ದೇವತಾರ್ಚನ ವಿಧಿ, ವೈಶ್ವದೇವ, ಅತಿಥಿ ಸತ್ಕಾರದ ವಿಧಿ. ಹಾಗೂ ವಿಸ್ತಾರದಲ್ಲಿ ಗೋ-ಮಹಿಮೆ, ವೃಷಭ ಮಹಿಮೆ ಹಾಗೂ ಕೃಷಿಕರ್ಮದ ವರ್ಣನೆ ಇದೆ. ನಂತರದಲ್ಲಿ ಗೃಹಸ್ಥ ಧರ್ಮದಲ್ಲಿ ಸ್ತ್ರೀ ಹಾಗೂ ಪುತ್ರನ ವಿಶೇಷ, ಶೌಚ, ದಾನ, ಭಕ್ಷ್ಯಾ-ಭಕ್ಷ್ಯ ವಿಚಾರ, ಶುದ್ಧಿ, ಅಶೌಚ, ಪ್ರಾಯಶ್ಚಿತ್ತ, ದಶ–ದಾನ, ಷೋಡಶದಾನ, ಗೋದಾನ, ಉಭಯ ಮುಖೀ ಧೇನುದಾನ, ದಶಧೇನುದಾನ, ವಿನಾಯಕ ಶಾಂತಿ, ಗ್ರಹಶಾಂತಿ ಮತ್ತು ಕೊನೆಯಲ್ಲಿ ಅಧ್ಯಾತ್ಮಜ್ಞಾನದ ವರ್ಣನೆಗಳಿವೆ.

ಈ ಸ್ಮೃತಿಯಲ್ಲಿ ಗೋಸೇವೆ, ಗೋಮಹಿಮೆ, ವೃಷಭ ಮಹಿಮೆ ಹಾಗೂ ಕೃಷಿಯ ಬಗ್ಗೆ ಅನೇಕ ಉಪಯೋಗಿ ವಿಷಯಗಳನ್ನು ವಿವರಿಸಲಾಗಿದೆ.

ತಸ್ಮಾತ್ ವೃಷಾತ್ ಪೂಜ್ಯತವೋಽಸ್ತಿ ನಾನ್ಯಃ || (ಪ. 5/53)

### ಗೋವಿನಲ್ಲಿ ಸಕಲ ದೇವತೆ, ತೀರ್ಥಗಳಿವೆ

ಈ ಸ್ಮೃತಿಯು 5/34–41 ರಲ್ಲಿ ಗೋವಿನಲ್ಲಿ ನೆಲೆಸಿರುವ ದೇವತೆಗಳು, ತೀರ್ಥಗಳನ್ನು ವಿವರಿಸಲಾಗಿದೆ. ಗೋವಿನ ಕೊಂಬುಗಳ ಮೂಲದಲ್ಲಿ ಬ್ರಹ್ಮ, ಎರಡೂ ಕೊಂಬುಗಳ ನಡುವೆ ಶ್ರೀಮನ್ನಾರಾಯಣನು ನಿವಸಿಸುತ್ತಾನೆ. ಕೊಂಬುಗಳ ಶಿರೋಭಾಗದಲ್ಲಿ ಪರಶಿವನಿದ್ದಾನೆ. ಇವೇ ಅಲ್ಲದೆ ಚರಾಚರಗಳು ಹಾಗೂ ಎಲ್ಲ ತೀರ್ಥಗಳೂ ನೆಲೆಸಿವೆ. ಲಲಾಟದಲ್ಲಿ ಪಾರ್ವತೀದೇವಿ, ಮೂಗಿನ ಮಧ್ಯದಲ್ಲಿ ಕುಮಾರ ಕಾರ್ತಿಕೇಯನು ನಿವಸಿಸುತ್ತಾನೆ. ಇದರ ಎರಡೂ ಕಿವಿಗಳಲ್ಲಿ ಕಂಬಳ ಮತ್ತು ಅಶ್ವತರ ಎಂಬ ಹೆಸರಿನ ಇಬ್ಬರು ನಾಗರು ನಿವಸಿಸುತ್ತಾರೆ. ಸುರಭಿ ಎನ್ನುವ ಹಸುವಿನ ಬಲಗಣ್ಣಿನಲ್ಲಿ ಸೂರ್ಯ, ಎಡಗಣ್ಣಿನಲ್ಲಿ ಚಂದ್ರರಿರು

ತ್ತಾರೆ. ಹಲ್ಲುಗಳಲ್ಲಿ ಎಂಟುವಸುಗಳು, ನಾಲಿಗೆಯ ಮೇಲೆ ವರುಣನು ಪ್ರತಿಷ್ಠಿತರಾಗಿರುವರು. ಹಸುವಿನ ಹೂಂಕಾರದಲ್ಲಿ ಸರಸ್ವತಿದೇವಿ ಇರುವಳು. ಗಂಡಸ್ಥಳದಲ್ಲಿ ಯಮ ಮತ್ತು ಯಕ್ಷರಿರುವರು. ಅದರ ಎಲ್ಲ ರೋಮಗಳಲ್ಲಿ ಎಲ್ಲ ಋಷಿಗಣಗಳು ಇರುತ್ತಾರೆ. ಗೋ-ಮೂತ್ರದಲ್ಲಿ ಗಂಗೆಯ ಪವಿತ್ರಜಲವಿದೆ. ಸಗಣಿಯಲ್ಲಿ ಯಮುನೂ, ಸಕಲ ದೇವತೆಗಳೂ ನೆಲೆಸಿರುವರು. 88 ಕೋಟಿ ದೇವತೆಗಳು ಅದರ ರೋಮ ಕೂಪದಲ್ಲಿರುವರು. ಹಸುವಿನ ಹೊಟ್ಟೆಯ ಪ್ರದೇಶದಲ್ಲಿ ಗಾರ್ಹ ಪ್ರತ್ಯಾಗ್ನಿಯೂ ಹೃದಯದಲ್ಲಿ ದಕ್ಷಿಣಾಗ್ನಿಯೂ ನೆಲೆಸಿರುತ್ತದೆ. ಮುಖದಲ್ಲಿ ಆಹವನೀಯ ಹೆಸರಿನ ಅಗ್ನಿ ಹಾಗೂ ಜಠರದಲ್ಲಿ ಸಭ್ಯ ಹಾಗೂ ಆವಸಥ್ಯ ಎನ್ನುವ ಅಗ್ನಿಗಳು ನಿವಸಿಸುತ್ತಾರೆ.

ಈ ರೀತಿಯಲ್ಲಿ ಹಸುವಿನ ಶರೀರದಲ್ಲಿ ಎಲ್ಲ ದೇವತೆಗಳೂ ನೆಲೆಸಿರುವುದರಿಂದ ಇದನ್ನು ' ಸರ್ವದೇವತಾಮಯಿ ' ಎಂದು ಕರೆಯಲಾಗುತ್ತದೆ. ಹೀಗೆಂದು ಭಾವಿಸಿ, ಅದರ ಮೇಲೆ ಕೋಪ ಮಾಡುವುದಾಗಲಿ, ಹೊಡೆಯುವುದಾಗಲಿ ಮಾಡಬಾರದು. ಈ ರೀತಿ ಗೋ-ಪೂಜೆ ಮಾಡುವುದರಿಂದ ಮಹಾನ್ ಐಶ್ವರ್ಯ ಹಾಗೂ ಸ್ವರ್ಗಲೋಕವು ಪ್ರಾಪ್ತವಾಗುತ್ತದೆ.

ಏವಂ ಯೋ ವರ್ತತೇ ಗೋಷು ತಾಡನಕ್ರೋಧವರ್ಜಿತಃ |
ಮಹತೀಂ ಶ್ರಿಯಮಾಪ್ನೋತಿ ಸ್ವರ್ಗಲೋಕೇ ಮಹೀಯತೇ ||5-41||

## ಗೋ-ಮಹಿಮೆ

ಗೋವಿನಲ್ಲಿ ಅನಂತ ಮಹಿಮೆ ಇದೆ. ಅದಕ್ಕೆ ಸೇವೆ ಮಾಡುವುದರಿಂದ ಅನಂತ ಮಹಿಮೆಯು ಲಭಿಸುತ್ತದೆ. ಆದುದರಿಂದ ಪ್ರತಿಯೊಬ್ಬರೂ ಗೋ-ಮಾತೆಯ ಸೇವೆ ಮಾಡುವುದರಿಂದ ಆತ್ಮೋದ್ಧಾರವನ್ನು ಪಡೆಯುವರು.

ಇದರ ಬಗ್ಗೆ ಪರಾಶರನು ಹೀಗೆಂದು ಹೇಳುತ್ತಾನೆ –

ಸ್ಪೃಷ್ಟಾಶ್ಚ ಗಾವಃ ಶಮಯಂತಿ ಪಾಪಂ
ಸಂಸೇವಿತಾಶ್ಚೋಪನಯಂತಿ ವಿತ್ತಂ |
ತಾ ಏವ ದತ್ತಾಸ್ತ್ರಿದಿವಂ ನಯಂತಿ
ಗೋಭಿರ್ಗ ತುಲ್ಯಂ ಧನಮಸ್ತಿ ಕಿಂಚಿತ್ ||

ಹಸುವನ್ನು ಮುಟ್ಟಿದ ಮಾತ್ರಕ್ಕೇ ಸಕಲ ಪಾಪಗಳೂ ನಾಶವಾಗುವುವು. ಇದರಿಂದ ಅಪಾರ ಸಂಪತ್ತು ಪ್ರಾಪ್ತವಾಗುತ್ತದೆ. ಇಂತಹ ಹಸುವನ್ನು ದಾನ

ಮಾಡಿದ್ದೇ ಆದರೆ ಸ್ವರ್ಗವು ಪ್ರಾಪ್ತವಾಗುತ್ತದೆ. ಆದುದರಿಂದ ಇದಕ್ಕೆ ಸಮಾನ ವಾದ ಧನ ಬೇರೊಂದಿಲ್ಲ.

ಸಂಸ್ಪೃಶಾನ್ ಗಾಂ ನಮಸ್ಕೃತ್ಯ ಕುರ್ಯಾತ್ ತಾಂ ಚ ಪ್ರದಕ್ಷಿಣಾಂ |
ಪ್ರದಕ್ಷಿಣೀಕೃತಾ ತೇನಾ ಸಪ್ತದ್ವೀಪಾ ವಸುಂಧರಾ ||

ಹಸುವನ್ನು ಮುಟ್ಟಿ, ಪ್ರದಕ್ಷಿಣೆ ಮಾಡಿದಲ್ಲಿ, ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನೇ ಸುತ್ತುಹಾಕಿದಂತಾಗುತ್ತದೆ.

## ಯೋಗಚರ್ಯೆಯ ನಿರೂಪಣೆ

ಎಲ್ಲ ಸಂಸ್ಕಾರಗಳು, ಸದಾಚಾರಗಳ ವರ್ಣನೆಯ ನಂತರ ಈ ಸ್ಮೃತಿ ಯಲ್ಲಿ ವಾನಪ್ರಸ್ಥ ಹಾಗೂ ಸನ್ಯಾಸಾಶ್ರಮದ ಕಾರ್ಯಗಳನ್ನು ವಿವರಿಸಲಾಗಿದೆ. ಇದರ ಕೊನೆಯಲ್ಲಿ ಸಾಂಗೋಪಾಂಗ ಯೋಗಚರ್ಯೆಯ ಬಗ್ಗೆ ಬೆಳಕು ಚೆಲ್ಲಲಾಗಿದೆ. ಮುಖ್ಯವಾಗಿ ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ ಇತ್ಯಾದಿಗಳ ಸಂಕ್ಷಿಪ್ತ ನಿದರ್ಶನಗಳನ್ನು ನೀಡಿ, ಧ್ಯಾನಯೋಗದ ಅಭ್ಯಾಸ ವನ್ನು ವಿಸ್ತಾರವಾಗಿ ಪ್ರತಿಪಾದಿಸಲಾಗಿದೆ.

ಇದರಲ್ಲಿ ಗೋಪ್ಯ ಭಾಷೆಯಲ್ಲಿ ಕುಂಡಲಿನೀ ಶಕ್ತಿಯ ಧ್ಯಾನದ ಸಂಕೇತ ಗಳನ್ನು ನಿರ್ದೇಶಿಸಲಾಗಿದೆ. ಇದರ ಮುಖಾಂತರ ಬ್ರಹ್ಮತತ್ವದ ವಿಚಾರವನ್ನು ತಿಳಿಸಲಾಗಿದೆ. ವೇದಾದಿಗಳ ಅಧ್ಯಯನದಿಂದಲೂ ಕೂಡ ಯೋಗಸಿದ್ಧಿಯಲ್ಲಿ ಸಾಕಷ್ಟು ಸಹಾಯ ಸಿಗುವುದಾದರೂ ಸಿದ್ಧಗುರುವಿನ ಉಪದೇಶದಿಂದ ಈಶ್ವರ ಭಕ್ತಿ ಹಾಗೂ ಸ್ವಲ್ಪ ಮಟ್ಟಿನ ಅಭ್ಯಾಸದಿಂದ ಸ್ಥಿರ ಹಾಗೂ ನಿಶ್ಚಿತ ಸಹಾಯ ವನ್ನು ಪಡೆಯಬಹುದು. ಇದರ ವಿನಹ ಬೇರೆ ಸಾಧನೆಯು ಸಾಧ್ಯವಿಲ್ಲ. ಪರಮಾತ್ಮನ ಧ್ಯಾನವನ್ನು ಸಾಧಕನು ಅಭ್ಯಾಸ ಮಾಡಬೇಕು, ಸೀಮಿತ ಪ್ರಾಪ್ತಿಯನ್ನು ಪಡೆಯಬಹುದು.

ಇಂತಹ ಪವಿತ್ರ, ನಿರ್ಮಲ ಹಾಗೂ ಆಕರ್ಷಕ ಭಗವತ್ ತತ್ತ್ವದಲ್ಲಿ ಯೋಗಿಯ ಚಿತ್ತವು ಕೇಂದ್ರೀಕೃತವಾದಾಗ, ಏಕಾಗ್ರ ಧ್ಯಾನದ ಮುಖಾಂತರ ಚಿಂತನೆ ಮಾಡುತ್ತಾ ಹೋದಲ್ಲಿ, ಅದರಿಂದ ಸಾಧಕನಿಗೆ ಸಮಸ್ತ ಸಿದ್ಧಿಗಳೂ, ಜ್ಞಾನ, ಶಾಂತಿ, ಮುಕ್ತಿಯು ಪ್ರಾಪ್ತವಾಗುತ್ತದೆ. ಆದುದರಿಂದ ಧ್ಯಾನವೇ ಯೋಗಶಾಸ್ತ್ರದ ಸಾರಸರ್ವಸ್ವವಾಗಿದೆ. ಇದರಿಂದ ಪರಮಾತ್ಮನು ಅಂತಹವನ ಹೃದಯದಲ್ಲಿ ಸದಾ ಕಾಲವಲ್ಲಿಯೂ ನಿವಸಿಸಿರುತ್ತಾನೆ—ಎಂದು ಪರಾಶರನು

ತಿಳಿಸುತ್ತಾನೆ.

ಏಕಮೇವಾಭ್ಯಸೇತ್ ತತ್ತ್ವಂ ಯೇನ ಚಿತ್ತೇ ವಸೇದ್ಧರಿಃ ||

(ಪರಾಶರ 12/349)

# 30. ಮಾರ್ಕಂಡೇಯ ಸ್ಮೃತಿ

ಭೃಗುಕುಲದಲ್ಲಿ ಜನಿಸಿದ ಮಹರ್ಷಿ ಮಾರ್ಕಂಡೇಯನು ಮೃಕಂಡ ಮುನಿಯ ಮಗ- ಮೃಕಂಡನ ಮಗನಾದುದರಿಂದ ಈತನಿಗೆ ಮಾರ್ಕಂಡೇಯ ಎಂಬ ಹೆಸರು ಬಂದಿತು. ಈತನು ಮಹಾನ್ ಜ್ಞಾನಿ, ಯೋಗಿ, ತಪಸ್ವೀ, ಉತ್ತಮ ಭಗವದ್ಭಕ್ತನಾಗಿದ್ದನು. ಈತನು ದಿವ್ಯ ಯೋಗಜ್ಞಾನವನ್ನು ಹೊಂದಿದ್ದು ಇಂದಿಗೂ ಬದುಕಿರುವನೆಂಬ ನಂಬಿಕೆ ಇದೆ. ಈತನು ಯುಗಗಳ ಕೊನೆಯಲ್ಲಿ ಆಗುವ ಅನೇಕ ಪ್ರಳಯಗಳನ್ನು ಕಂಡಿರುವನು. ಇಂತಹ ಸಮಯ ದಲ್ಲೂ ಈತನ ಭಗವದ್ಗುಣಾನುಭವದಲ್ಲಿ ತಲ್ಲೀನನಾಗಿರುವನು. ಶ್ರೀಮನ್ನಾ-ರಾಯಣನ ಸಮೀಪದಲ್ಲಿರುವ ಭಕ್ತರಲ್ಲೆಲ್ಲ ಅತ್ಯಂತ ಶ್ರೇಷ್ಠನಾದವನು. ಜರಾ, ಮೃತ್ಯುಗಳು ಈತನನ್ನು ಸ್ಪರ್ಶಿಸುವುದಿಲ್ಲ. ಸಹಸ್ರಾರು ವರ್ಷಗಳು ಕಳೆದರೂ ಈತನು 25 ವರ್ಷದವನಂತೆ ಕಾಣುತ್ತಾನೆ, ಕಾರಣ ಈತನು ಚಿರಂಜೀವಿ.

ಅಜರಶ್ಚಾಮರಶ್ಚೈವ ರೂಪೌದಾರ್ಯಗುಣಾನ್ವಿತಃ |
ವೃದ್ಧಶ್ಯತ ತಥಾ ಯುಕ್ತೋ ಯಥಾ ಸ್ಯಾತ್ ಪಂಚವಿಂಶಕಃ ||

ಈ ಕೆಳಗೆ ಕಾಣಿಸಿರುವ ಮಂತ್ರದಿಂದ ಈತನನ್ನು ಸ್ತೋತ್ರ ಮಾಡುವರು

ಮಾರ್ಕಂಡೇಯ ಮಹಾಭಾಗ ಸಪ್ತಕಲ್ಪಾಂತಜೀವನ |
ಆಯುರಾರೋಗ್ಯ ಸಿದ್ಧ್ಯರ್ಥ ಮಸ್ಮಾಕಂ ವರದೊ ಭವ ||
ಚಿರಂಜೀವಿ ಯಥಾ ತ್ವಂ ಭೋ ಭವಿಷ್ಯಾಮಿ ತಥಾ ಮುನೇ |
ರೂಪವಾನ್ ವಿತ್ತವಾಶ್ಚೈವ ಶ್ರಿಯಾಯುಕ್ತಶ್ಚ ಸರ್ವದಾ ||

ಈತನ ಜೀವನ ದರ್ಶನವು ಉದಾತ್ತವೂ, ಉಜ್ವಲವೂ, ಪರೋಪಕಾರ ದಿಂದ ಕೂಡಿದುದೂ ಆಗಿತ್ತು. ಈತನ ಧರ್ಮೋಪದೇಶಗಳು ಮಹಾನ್ ಕಲ್ಯಾಣಕರವಾದವುಗಳು. ಧರ್ಮದ ನಿಗೂಢ ತತ್ವಗಳು, ಭೂತ ಭವಿಷ್ಯದ್ ವಿಷಯಗಳು ಈತನಿಗೆ ಕರತಲಾಮಲಕವಾಗಿದ್ದುವು. ಪರಮಾತ್ಮನನ್ನು ಸದಾ ಧ್ಯಾನಿಸುತ್ತಾ ಎಲ್ಲೆಡೆ ಸಂಚಾರ ಮಾಡುತ್ತಾ, ಜೀವಿಗಳಿಗೆ ಶುಭವನ್ನು ಕೋರು ತ್ತಿದ್ದನು. ದೈವಜ್ಞ ಸತ್ಪುರುಷರಿಗೆ ಇಂದಿಗೂ ಈತನು ಕಾಣಿಸಿಕೊಳ್ಳುತ್ತಾ

ನೆಂಬ ನಂಬಿಕೆ. ಎಲ್ಲರಿಗೂ ಭಗವತ್ಪ್ರಾಪ್ತಿ ಉಂಟಾಗಲು ಈತನು ಸದಾ ಪ್ರಯತ್ನಿಸುತ್ತಿದ್ದ.

## ಚಿರಂಜೀವತ್ವದ ರಹಸ್ಯ

ಧರ್ಮಶಾಸ್ತ್ರಕಾರರು 'ಅಭಿವಾದನಶೀಲತೆ'ಯನ್ನು ಮಹಾನ್ ಧರ್ಮ ಮತ್ತು ಸದಾಚಾರದ ಮುಖ್ಯ ಲಕ್ಷಣವೆಂದು ತಿಳಿಸಿದ್ದಾರೆ. 'ಅಭಿವಾದನಶೀಲತೆ' ಎಂದರೆ ಎಲ್ಲರಿಗೂ ವಂದಿಸುವುದು. ಅಂದರೆ ಗೌರವ ತೋರಿಸುವುದು ಎಂದರ್ಥ. ಇದರಿಂದ ಮಾನವನಲ್ಲಿರುವ ಅರಿಷಡ್ವರ್ಗಗಳು ಕಣ್ಮರೆಯಾಗುತ್ತವೆ. ವಿನಯ, ವಿಧೇಯತೆಗಳು ಬರುತ್ತವೆ, ಸದ್ಗುಣಗಳು ತಂತಾನೆ ಉದಯಿಸುತ್ತವೆ ಎಂಬುದು. ಮನುವು ತನ್ನ ಸ್ಮೃತಿಯ ಪ್ರಾರಂಭದಲ್ಲಿ ಅಭಿವಾದನಶೀಲ ವ್ಯಕ್ತಿಗೆ ದೀರ್ಘಾಯು ಸದ್ವಿದ್ಯೆ, ಉತ್ತಮ ಯಶಸ್ಸು, ಮಹಾನ್ ಬಲಪರಾಕ್ರಮ ಸಹಜವಾಗಿಯೇ ಪ್ರಾಪ್ತವಾಗುತ್ತದೆ ಎಂದು ಹೇಳಿದ್ದಾನೆ.

ಅಭಿವಾದನ ಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ಸಂಪ್ರವರ್ಧಂತೇ ಆಯುರ್ವಿದ್ಯಾ ಯಶೋಬಲಮ್ ॥
ಮಾತಾಪಿತರಮುತ್ಥಾಯ ಪೂರ್ವಮೇವಾಭಿವಾದಯೇತ್ ।
ಆಚಾರ್ಯ ಮಥುವಾಪ್ಯನ್ಯಂ ತಥಾಯುರ್ವಿದಂತಿ ಮಹತ್ ॥

(ಮಹಾ-ಅನು 104/43-44)

ಸ್ವತಃ ಮಾರ್ಕಂಡೇಯನೇ ಅಭಿವಾದನಶೀಲತೆಗೆ ಉತ್ತಮ ಉದಾಹರಣೆ, ಆತನಲ್ಲಿ ಇದರಿಂದ ವಿನಯ, ನಮ್ರತೆ, ಶಿಷ್ಟಾಚಾರ, ಮರ್ಯಾದೆಯ ರಕ್ಷಣೆ, ಶ್ರೇಷ್ಠ ಜನರು, ವೃದ್ಧರು ಹಾಗೂ ಗುರುಗಳ ಬಗ್ಗೆ ಆದರ, ಸೇವಾಭಾವ ಇತ್ಯಾದಿ ಸದ್ಗುಣಗಳು ಸ್ವಾಭಾವಿಕವಾಗಿ ತುಂಬಿರುತ್ತವೆ. ನಿತ್ಯವೂ ಇದನ್ನು ಅನುಸರಿಸುವುದರಿಂದ ಹಿರಿಯರ ಆಶೀರ್ವಾದ ಲಭಿಸುತ್ತದೆ. ಇದರಿಂದಲೇ ಆತನು ಚಿರಂಜೀವಿಯಾಗಿ ಅಜರಾಮರತ್ವವನ್ನು ಹೊಂದಿದನು. ಅಭಿವಾದನಶೀಲತೆ ಯಿಂದ ದೀರ್ಘಾಯು ಪ್ರಾಪ್ತವಾಗುತ್ತದೆ. ಇದರಿಂದ ಜೀವನವು ಸಫಲ ವಾಗುತ್ತದೆ.

ಸ್ಕಂದ, ಪದ್ಮ ಇತ್ಯಾದಿ ಪುರಾಣಗಳಲ್ಲಿಯೂ ಈತನ ಕಥೆ ಇದೆ.

ಐದು ವರ್ಷದ ಮಾರ್ಕಂಡೇಯನು ಒಮ್ಮೆ ತನ್ನ ತಂದೆಯ ಮಡಿಲಿನಲ್ಲಿ ಕುಳಿತಿದ್ದ. ಆಗ ಮಹಾಜ್ಞಾನಿ ಸಪ್ತರ್ಷಿಗಳೊಬ್ಬರು ಅಲ್ಲಿಗೆ ಬಂದು ಬಾಲಕನಲ್ಲಿನ

ವಿಶಿಷ್ಟ ಲಕ್ಷಣಗಳನ್ನು ನೋಡಿ. "ನಿಮ್ಮ ಬಾಲಕನಲ್ಲಿ ದೈವಗುಣಗಳಿವೆ ಮಹರ್ಷಿ ಇದರಿಂದ ಜಗತ್ತಿಗೆ ಒಳ್ಳೆಯದಾಗುತ್ತದೆ. ಈತನಲ್ಲಿ ಅಜರಾಮರತ್ವವಿದ್ದರೂ, ಬರುವ ಆರುತಿಂಗಳೊಳಗೆ ಈತನಿಗೆ ಮೃತ್ಯುಗಂಡಾಂತರವಿದೆ. ಅದರ ನಿವಾರಣೆಗೆ ಪ್ರಯತ್ನಿಸಿ" ಎಂದು ಹೇಳಿ ಹೊರಟು ಹೋದರು.

ಇದರಿಂದ ಚಿಂತಿತನಾದ ಮೃಕಂಡ ಮುನಿ, ಸೂಕ್ತ ಪರಿಹಾರೋಪಾಯ ಗಳನ್ನು ಹುಡುಕತೊಡಗಿದನು. ಕೂಡಲೇ ಆತ ತನ್ನ ಮಗನಿಗೆ ಉಪನಯನ ಮಾಡಿ, ಧರ್ಮದ ಕರ್ತವ್ಯಗಳನ್ನು ತಿಳಿಸುತ್ತಾ, "ಮಗು, ನೀನು ಯಾವ ಹಿರಿಯರನ್ನೆ ಕಂಡರೂ, ವಿನಯಪೂರ್ವಕ ಪ್ರಣಾಮಗಳನ್ನು ಅವರಿಗೆ ಸಲ್ಲಿಸು; ಸದ್ಬ್ರಾಹ್ಮಣರಿಗೆ ತಪ್ಪದೆ ವಂದಿಸು."

ಯಂ ಕಂಚಿದ್ವೀಕ್ಷಸಿ ಪುತ್ರ ಭಮಮಾಣಂ ದ್ವಿಜೋತ್ತಮಮ್ |
ತಸ್ಯಾವಸ್ಯಂ ತ್ವಯಾ ಕಾರ್ಯಂ ವಿನಯಾದಭಿವಾದನಮ್ ||
(ಸ್ಕಂದ. ನಾ.ಗ. 22/17)

ಎಂದು ಬೋಧಿಸಿದನು.

ಬ್ರಾಹ್ಮಣರ, ಹಿರಿಯರ, ತಪಸ್ವಿಗಳ ಆಶೀರ್ವಾದದ ಶಕ್ತಿ ಆತನಿಗೆ ಗೊತ್ತಿತ್ತು. ಅಂತಹುದರಿಂದ ಸಕಲವೂ ಪ್ರಾಪ್ತವಾಗುತ್ತದೆ ಎಂಬ ನಂಬಿಕೆ ಆತನಿಗೆ ಇತ್ತು.

ಇದರಂತೆ ಮಾರ್ಕಂಡೇಯನು ಅಭಿವಾದನ ವ್ರತದಲ್ಲಿ ತಲ್ಲೀನನಾದ. ಎಲ್ಲರಿಗೂ ಅಭಿವಾದನ ಮಾಡಲು ಪ್ರಾರಂಭಿಸಿದ. ಆರು ತಿಂಗಳು ಕಳೆಯುವು ದಕ್ಕೆ ಮೂರು ದಿನ ಉಳಿದಿದೆ. ಆಗ ತೀರ್ಥಯಾತ್ರೆಗೆಂದು ಹೊರಟಿದ್ದ ಸಪ್ತರ್ಷಿಗಳು ಆ ಕಡೆ ಬಂದರು. ಮಾರ್ಕಂಡೇಯನು ಅವರುಗಳನ್ನು ಸತ್ಕರಿಸಿ, ಪೂಜಾದಿಗಳನ್ನು ಸಲ್ಲಿಸಿ, ಶ್ರದ್ಧಾಭಕ್ತಿಗಳಿಂದ, ವಿನೀತ ಭಾವದಿಂದ ಅವರಿಗೆ ನಮಸ್ಕಾರ ಮಾಡಿದನು. ಪ್ರತಿಯಾಗಿ ಅವರು 'ದೀರ್ಘಾಯುಷ್ಮಾನ್ ಭವ!' ಎಂದು ಆಶೀರ್ವದಿಸಿದರು.

ವಸಿಷ್ಠರು ಸೂಕ್ಷ್ಮವಾಗಿ ಬಾಲಕನನ್ನು ಪರೀಕ್ಷಿಸಿದರು. ನಂತರ ತಮ್ಮ ಸಹಚರರೊಂದಿಗೆ,

"ತುಂಬಾ ಆಶ್ಚರ್ಯವಾಗಿದೆಯಲ್ಲ! ಈ ಬಾಲಕನಿಗೆ ಉಳಿದಿರುವುದೇ ಮೂರು ದಿನದ ಆಯುಸ್ಸು. ನಾವು ಇವನಿಗೆ ದೀರ್ಘಾಯುವಾಗು ಎಂದು

ಆಶೀರ್ವದಿಸಿದ್ದೇವೆ. ಆದುದರಿಂದ ನಾವು ಇದಕ್ಕೆ ಏನಾದರೊಂದು ದಾರಿ ಹುಡುಕಬೇಕು. ನಮ್ಮ ಮಾತು ಸುಳ್ಳಾಗಬಾರದು. ನಮ್ಮ ಆಶೀರ್ವಾದ ಹುಸಿಯಾಗಬಾರದು. ವಿಧಾತನ ತೀರ್ಮಾನವೂ ಸುಳ್ಳಾಗಬಾರದು. ಇವನಿಗೆ ಚಿರಂಜೀವತ್ವ ಲಭ್ಯವಾಗಬೇಕು."

ಕಡಗೆ ಬ್ರಹ್ಮನ ಅನುಗ್ರಹದಿಂದ ಚಿರಂಜೀವತ್ವ ಕೊಡಿಸಲು ಅವರು ತೀರ್ಮಾನಿಸಿ, ಅವನನ್ನು ಕರೆದುಕೊಂಡು ಅವರು ಬ್ರಹ್ಮನ ಬಳಿಗೆ ಹೋದರು. ಸಪ್ತರ್ಷಿಗಳು ಆತನಿಗೆ ವಂದಿಸಿದರು. ನಂತರ ಮಾರ್ಕಂಡೇಯನೂ ವಂದಿಸಿದನು. ಆಗ ಬ್ರಹ್ಮನು 'ದೀರ್ಘಾಯುವಾಗು' ಎಂದು ಆಶೀರ್ವದಿಸಿದನು.

ನಂತರ ಸಪ್ತರ್ಷಿಗಳು ಮಾರ್ಕಂಡೇಯನ ಅಲ್ಪಾಯುಷ್ಯದ ವಿಷಯವನ್ನು ತಿಳಿಸಿ, "ಪ್ರಭೋ ! ನಿಮ್ಮ, ನಮ್ಮ ಮಾತುಗಳು ಸುಳ್ಳಾಗದಂತೆ, ನಾವು ಸತ್ಯವಾದಿಗಳಾಗುವ ಉಪಾಯವನ್ನು ತಿಳಿಸಿ."

ಬ್ರಹ್ಮನು, "ಮುನಿಗಳೆ ! ನಿಮ್ಮ ಈ ಬಾಲಕನು ತನ್ನ ಅಭಿವಾದನದ ಬಲದ ಮೇಲೆ ಕಾಲನನ್ನೂ ಗೆದ್ದಿದ್ದಾನೆ. ಅವನಿಗೆ ಅಮರನಾಗುವ ವರವನ್ನು ನೀಡುತ್ತಿದ್ದೇನೆ. ಅವನನ್ನು ಅವನ ಆಶ್ರಮಕ್ಕೆ ಕರೆದೊಯ್ಯಿರಿ." ಎಂದನು.

ಎಲ್ಲರೂ ಭೂಲೋಕಕ್ಕೆ ಹಿಂತಿರುಗಿದರು. ಮಾರ್ಕಂಡೇಯನ ತಂದೆ ತಾಯಿಯರಿಗೆ ಇದನ್ನು ಆಲಿಸಿ ಸಂತೋಷವಾಯಿತು.

ಮಾರ್ಕಂಡೇಯನು ತಪಸ್ಸು, ಸ್ವಾಧ್ಯಾಯಗಳಲ್ಲಿ ನಿರತನಾದನು. ಹಿಮಾಲಯದ ಮಡಿಲಿನಲ್ಲಿ, ಪುಷ್ಪಭದ್ರಾ ನದಿಯ ದಡದಲ್ಲಿ ನರ-ನಾರಾಯಣರ ಧ್ಯಾನದಲ್ಲಿ ಆತ ನಿರತನಾದ. ಆತನ ಮನಸ್ಸು ಭಗವಂತನಲ್ಲಿ ಲೀನವಾಯಿತು. ಈ ರೀತಿಯ ಭಗವದಾರಧನೆಯಲ್ಲಿ ಆರು ಮನ್ವಂತರಗಳು ಕಳೆದು ಹೋದುವು. ಇಂದ್ರನು ಈತನ ತಪಸ್ಸಿನಿಂದ, ತನ್ನ ಇಂದ್ರಪದವಿಗೆ ಎಲ್ಲಿ ವಿಘ್ನ ಬರುವುದೊ ಎಂದು ವಿಚಲಿತನಾದ. ಈತನ ತಪಸ್ಸಿನಿಂದ ಸುಪ್ರೀತನಾದ ಶ್ರೀಮನ್ನಾರಾಯಣನು ಪ್ರತ್ಯಕ್ಷನಾಗಿ ವರ ಕೇಳಿಕೊಳ್ಳುವಂತೆ ಹೇಳಿದ.

ಆಗ ಮಾರ್ಕಂಡೇಯನು ನಾರಾಯಣನನ್ನು ಸ್ತುತಿಸಿ, "ಭಗವಂತ ! ನನ್ನ ದೇವರೇ ! ನಿನ್ನ ಚರಣಾರವಿಂದಗಳ ದರ್ಶನವೇ ನನ್ನ ಪರಮಪುರುಷಾರ್ಥವು. ನಿನ್ನ ಲೋಕಮಾಯೆಯ ದರ್ಶನವನ್ನು ನನಗೆ ಮಾಡಿಸು !" ಎಂದು ವಿನಂತಿಸಿದ.

ಕೂಡಲೇ ಭಗವಂತನು ಕಣ್ಮರೆಯಾದ. ಆ ಸ್ಥಳದಲ್ಲಿ ಇದ್ದಕ್ಕಿದ್ದಂತೆ ಮಹಾ ಪ್ರಳಯದ ದೃಶ್ಯವೊಂದು ಕಾಣಿಸಿತು. ಸಮಸ್ತ ಪೃಥ್ವಿಯು ಜಲದಲ್ಲಿ ಮುಳುಗಿತು. ಸೂರ್ಯ, ಚಂದ್ರ, ನಕ್ಷತ್ರಗಳು ಯಾವುವೂ ಇರಲಿಲ್ಲ. ಸಂಪೂರ್ಣ ಅಂಧಕಾರ ಎಲ್ಲೆಲ್ಲು ಹರಡಿತು. ಕೇವಲ ಮಾರ್ಕಂಡೇಯ ಮಾತ್ರ ಉಳಿದಿದ್ದ. ಇದ್ದಕ್ಕಿದ್ದಂತೆ ಸಮುದ್ರದಲ್ಲಿ ಒಂದು ವಿಶಾಲ ವಟವೃಕ್ಷ ಕಾಣಿಸಿತು. ಅದರ ಬಳಿಗೆ ಹೋಗಿ ಮುನಿ ನೋಡಿದ. ವೃಕ್ಷದ ಶಾಖೆಯೊಂದರ ಎಲೆಯೊಂದರ ದೊನ್ನೆಯಲ್ಲಿ ಒಂದು ತೇಜಸ್ವೀ ಶಿಶು ಮಲಗಿರುವುದನ್ನು ಕಂಡ. ಪ್ರಕಾಶದ ಮಡುವಿನಲ್ಲಿತ್ತು ಅದು. ಅಲ್ಲಿಂದ ಹೊರಟ ಪ್ರಕಾಶವು ಎಲ್ಲ ದಿಕ್ಕುಗಳಿಗೂ ಪಸರಿಸಿತ್ತು. ಆ ಶಿಶುವಿನ ಪಾದ, ಹಸ್ತಗಳು ಸುಕುಮಾರವಾಗಿದ್ದು, ಕೆಂಪಾಗಿದ್ದುವು. ಶ್ಯಾಮವರ್ಣದ ಮುಖ ಮಂಡಲವು ಮಂದಸ್ಮಿತವನ್ನು ಬೀರುತ್ತಿತ್ತು. ತನ್ನ ಬೆರಳುಗಳಿಂದ ಎಡಗಾಲನ್ನು ಹಿಡಿದು, ಹೆಬ್ಬೆಟ್ಟನ್ನು ಬಾಯಿಲಿಟ್ಟುಕೊಂಡು ಚೀಪತೊಡಗಿತು. ಆ ಶಿಶುವಿನ ಮನೋಹರ ದರ್ಶನ ಮಾತ್ರದಿಂದ ರೋಮಾಂಚನಗೊಂಡ ಮಾರ್ಕಂಡೇಯ ಮುನಿಯು ಕೈಜೋಡಿಸಿ, ಸ್ತುತಿಸತೊಡಗಿದ –

ಕರಾರವಿಂದೇನ ಪದಾರವಿಂದ ಮುಖಾರವಿಂದೇ ವಿನಿವೇಶಯಂತಂ |
ವಟಸ್ಯ ಪತ್ರಸ್ಯ ಪುಟೆ ಶಯಾನಂ ಬಾಲಂ ಮುಕುಂದಂ ಶಿರಸಾನಮಾಮಿ||

ಆ ಶಿಶುವೇ ಜಗದ್ವೀಶ್ವರನೆಂಬ ಅನುಭವವಾಯಿತು.

ಆ ಶಿಶುವಿನ ಉದರದಲ್ಲಿ ಅನಂತ ಬ್ರಹ್ಮಾಂಡಗಳು ಕಾಣಿಸಿದುವು. ಆತನ ವಿರಾಟ್ ಸ್ವರೂಪವೂ ಕಾಣಿಸಿತು.

ಅದ್ಭುತ ಸೌಂದರ್ಯದ ಆ ಶಿಶುವನ್ನು ಆಲಂಗಿಸಿಕೊಳ್ಳಲು ಮುಂದಾದ.

ಆಷ್ಟೆ, ಭಗವಂತನೂ, ಆತನೊಂದಿಗೆ ವಟವೃಕ್ಷ, ಪ್ರಳಯ, ಸಮುದ್ರ, ಆ ಸಮಸ್ತ ದೃಶ್ಯವೂ ಕಣ್ಮರೆಯಾಯಿತು.

ತಾನು ತನ್ನ ಆಶ್ರಮದಲ್ಲಿರುವ ಭಾವವು ಉದಯಿಸಿತು. ಅದೇ ಪುಷ್ಪ ಭದ್ರಾ ನದಿಯ ತೀರ, ಅದೇ ಆಶ್ರಮ. ತಾನು ಅಲ್ಲಿಯೆ ಕುಳಿತಿದ್ದಾನೆ.

ಭಗವಂತನ ಈ ಮಾಯೆಯನ್ನು ಕಂಡು, ಮಾರ್ಕಂಡೇಯನು ತುಂಬಾ ಸಂತೋಷಗೊಂಡ. ತಾನು ಧನ್ಯನಾದೆನೆನ್ನಿಸಿತು. ಸರ್ವೇಶ್ವರನ ಸೃಷ್ಟಿ ವೈಚಿತ್ರ್ಯ ಅದರ ಅನುಪಮ ಅನುಭವದಿಂದ ಉದ್ವೇಗಗೊಂಡು, ತನ್ನ

ತಪಸ್ಸನ್ನು ಮುಂದುವರಿಸಿದ.

ಇದೇ ರೀತಿಯಲ್ಲಿ ಶಂಕರನನ್ನು ಕುರಿತು ತಪಸ್ಸು ಮಾಡಿ, ಆತನ ಅನುಗ್ರಹ ವನ್ನು ಮಾರ್ಕಂಡೇಯನು ಪಡೆದ. ಆತನಿಂದಲೂ ಅಮರತ್ವದ ವರವನ್ನು ಪಡೆದು, ತ್ರಿಕಾಲ ವಿಷಯದ ಜ್ಞಾನ, ವಿಜ್ಞಾನ, ವೈರಾಗ್ಯ ಹಾಗೂ ಬ್ರಹ್ಮ ಚರ್ಯತ್ವದಲ್ಲಿ ಪರಿಣತಿಯನ್ನು ಪಡೆದ. ಅಂತೆಯೇ ಈತನು ಪುರಾಣಗಳ ಆಚಾರ್ಯನಾಗಿಯೂ ವರ ಪಡೆದ.

ಇದಕ್ಕೆ ಮುಂಚೆಯಿಂದಲೂ ಮಾರ್ಕಂಡೇಯನ ಮೇಲೆ ಭಗವಾನ್ ಶಂಕರನ ಕೃಪೆ ಇತ್ತು. ಪದ್ಮಪುರಾಣದ ಉತ್ತರಾಖಂಡದಲ್ಲಿ ಬಂದಿರುವ ಕಥೆಯ ಪ್ರಕಾರ ಅಲ್ಪಾಯುಷಿ ಮಾರ್ಕಂಡೇಯನನ್ನು ಯಮನು ತನ್ನ ಪಾಶದಿಂದ ಸೆಳೆದೊಯ್ಯಲು ಪ್ರಯತ್ನಿಸಿದ್ದ. ಆಗ ಮಾರ್ಕಂಡೇಯನು ಮೃತ್ಯುಂಜಯ ಮಂತ್ರವನ್ನು ರಚಿಸಿ, ಶ್ರೀಶಂಕರನನ್ನು ಸ್ತೋತ್ರಮಾಡಿ, ಅವನಿಂದ ಅಮರತ್ವ ವನ್ನು ಹೊಂದಿದುದು–ತುಂಬಾ ಜನಪ್ರಿಯವಾದ ಕಥೆ.

ಮಾರ್ಕಂಡೇಯ ಮುನಿ ವಿರಚಿತ 'ಮೃತ್ಯುಂಜಯ ಸ್ತೋತ್ರ'ವು ಅಮೋಘ ಫಲಪ್ರದವಾದುದು. ಇದನ್ನು ಭಕ್ತಿಭಾವ ಪೂರ್ವಕವಾಗಿ ಆರಾಧನೆ ಮಾಡಿದ್ದೇ ಆದರೆ ಶಂಕರನ ಕೃಪೆಯಿಂದ ಕಾಲನನ್ನು ಕೂಡ ಜಯಿಸಬಹುದು. ಆ ಸ್ತುತಿಯ ಒಂದು ಶ್ಲೋಕ ಹೀಗಿದೆ –

ರತ್ನಸಾನುಶರಾಸನಂ ರಜತಾದ್ರಿಶೃಂಗ ನಿಕೇತನಂ
ಶಿಂಜಿನೀಕೃತ ಪನ್ನಗೇಶ್ವರ ಮಚ್ಯುತಾನಲ ಸಾಯಕಂ ।
ಕ್ಷಿಪ್ರದಗ್ಧಪುರತ್ರಯಂ ತ್ರಿದಶಾಲಯೈರಭಿವಂದಿತಂ
ಚಂದ್ರಶೇಖರ ಮಾಶ್ರಯೆ ಮಮ ಕಿಂ ಕರಿಷ್ಯಾಮಿ ವೈಯಮಃ ||

ಈ ರೀತಿಯಲ್ಲಿ ಮಾರ್ಕಂಡೇಯನ ಈ ಸ್ತುತಿ ಮಾಧುರ್ಯಕ್ಕೆ ಶಂಕರನೂ ತಲೆದೂಗಿ, ವರವನ್ನು ಅನುಗ್ರಹಿಸಿದನು.

## ಮಾರ್ಕಂಡೇಯನ ಕೃತಿಗಳು

ಮಾರ್ಕಂಡೇಯನು ತನ್ನ ಕೃತಿಗಳಲ್ಲಿ ಧರ್ಮದ ತತ್ತ್ವರಹಸ್ಯವನ್ನು ಉತ್ತಮವಾಗಿ ನಿರೂಪಿಸಿದ್ದಾನೆ.

### 1. ಮಾರ್ಕಂಡೇಯ ಪುರಾಣ :

ಅಷ್ಟಾದಶ ಪುರಾಣಗಳಲ್ಲಿ ಮಕರಾದಿ ಎರಡು ಪುರಾಣಗಳಲ್ಲಿ ಇದೂ

ಒಂದು. ಇದೊಂದು ರಾಜಸ ಪುರಾಣ. ಇದರಲ್ಲಿ 6900 ಶ್ಲೋಕಗಳು ಇವೆ. ಬಹಳ ಹಿಂದಿನ ಕಾಲದಿಂದಲೂ ರೂಢಿಗೆ ಬಂದಿರುವ ಪುರಾಣವಿದು. ವ್ಯಾಸನ ಶಿಷ್ಯನಾದ ಜೈಮಿನಿಗೆ ಮಹಾಭಾರತ ಓದಿದಾಗ ಕೆಲವೊಂದು ಅನುಮಾನಗಳು ಬಂದುವು. ಅವುಗಳನ್ನು ಪರಿಹರಿಸಿಕೊಳ್ಳಲು ಅವನು ಮಾರ್ಕಂಡೇಯನ ಬಳಿಗೆ ಬರುವನು. ಮಾರ್ಕಂಡೇಯನು ನೇರವಾಗಿ ಉತ್ತರಿಸದೆ ವಿಂಧ್ಯಪರ್ವತ ದಲ್ಲಿನ ನಾಲ್ಕು ಪ್ರಾಜ್ಞ ಪಕ್ಷಿಗಳ ಬಳಿಗೆ ಹೋಗುವಂತೆ ನಿರ್ದೇಶಿಸುತ್ತಾನೆ. ಅಂತೆಯೇ ಆ ಪಕ್ಷಿಗಳು ಮಾರ್ಕಂಡೇಯನ ಸೂಚನೆಯಂತೆ ಜೈಮಿನಿಯ ಸಮಸ್ಯೆಗಳಿಗೆ ಉತ್ತರವನ್ನು ಹೇಳುತ್ತವೆ. 'ಇದೇ ಮಾರ್ಕಂಡೇಯ ಪುರಾಣ' ಎಂದು ಹೇಳಲಾಗುತ್ತದೆ. ಮಾರ್ಕಂಡೇಯನೇ ಪಕ್ಷಿಗಳ ರೂಪದಲ್ಲಿ ಸಮಸ್ಯಾ ಪರಿಹಾರ ನೀಡಿದನೆಂಬ ಪ್ರತೀತಿ.

ಈ ಪುರಾಣದಲ್ಲಿನ ಕೆಲವು ಅಧ್ಯಾಯಗಳಲ್ಲಿ 'ದೇವೀ ಮಾಹಾತ್ಮ್ಯೆ' ಭಾಗವಿದೆ. ಇದನ್ನೇ ಬೇರೆಯಾದ ಭಾಗವೆಂದೂ ತಿಳಿಯಲಾಗಿದೆ. ದುರ್ಗೆಯ ವಿವಿಧ ರೂಪಗಳು, ಅವುಗಳ ವೈಭವವನ್ನು ಇಲ್ಲಿ ವಿವರಿಸಲಾಗಿದೆ. ಇದರ ಬಗ್ಗೆ ಬಹಳಷ್ಟು ವ್ಯಾಖ್ಯಾನಗಳಿರುವುದರಿಂದ ಹೆಚ್ಚು ಜನಪ್ರಿಯವಾಗಿದೆ.

ಇದರ ವಕ್ತಾರನಾದ ಮಾರ್ಕಂಡೇಯನು ಇದರಲ್ಲಿ ವಿಷ್ಣುವಿಗಾಗಲಿ, ಶಿವನಿಗಾಗಲಿ ಪ್ರಾಮುಖ್ಯತೆ ಕೊಟ್ಟಿಲ್ಲ. ಅಗ್ನಿ ಹಾಗೂ ಸೂರ್ಯನು ಕೆಲವು ಅಧ್ಯಾಯಗಳಲ್ಲಿ ಸ್ತುತಿಸಲ್ಪಟ್ಟಿದ್ದಾರೆ. ಸೂರ್ಯನ ಬಗ್ಗೆ ಬಹಳಷ್ಟು ಕಥೆಗಳಿವೆ.

### 2. ಮೃತ್ಯುಂಜಯ ಸ್ತೋತ್ರ :

ಪರಶಿವನನ್ನು ಕುರಿತಾದ ಒಂದು ಸುಂದರ ಸ್ತೋತ್ರ. ತಪಸ್ಸಿದ್ಧಿಗಾಗಿ ನಿರ್ದೇಶಿಸಲ್ಪಟ್ಟ ಸ್ತೋತ್ರವಾದುದರಿಂದ ಶಿವನ ಸಾಧಕರು ಇದನ್ನು ಬಹಳ ಇಷ್ಟಪಡುತ್ತಾರೆ.

### 3. ಮಾರ್ಕಂಡೇಯನ ಉಪದೇಶಗಳು :

ಜೀವಿಗಳು ಯಾವ ಕರ್ಮವನ್ನು ಮಾಡಬೇಕು, ಯಾವ ಆಚರಣೆ ಯನ್ನು ಮಾಡುವುದರಿಂದ ಪರಮ ಕಲ್ಯಾಣ ಪ್ರಾಪ್ತವಾಗುತ್ತದೆ, ಶ್ರೇಯಸ್ಸಿನ ಮಾರ್ಗ ಯಾವುದು, ಅನುಕರಣೀಯವಾದುದ್ದು, ಅನುಕರಣೀಯವಲ್ಲದ್ದು ಯಾವುಯಾವುವು – ಇವೆಲ್ಲವುಗಳ ಬಗ್ಗೆ ಬಹಳ ಸುಂದರವಾದ ಉಪದೇಶ

ಗಳನ್ನು ಮಾರ್ಕಂಡೇಯನು ನೀಡಿದ್ದಾನೆ. ಮಹತ್ವಪೂರ್ಣವಾದ ಈ ಉಪದೇಶಗಳನ್ನು ಅನುಸರಿಸಿದವರಿಗೆ ಪರಮ ಕಲ್ಯಾಣವು ಪ್ರಾಪ್ತವಾಗುತ್ತದೆ. ಇಂತಹ ಉಪದೇಶಗಳನ್ನು ಸ್ಕಂದ ಪುರಾಣದ ರೇವಾ ಖಂಡದಲ್ಲಿ ಸಂಗ್ರಹಿಸಿಡಲಾಗಿದೆ.

### 4. ಮಾರ್ಕಂಡೇಯ ಸಮಸ್ಯಾಪರ್ವ :

ಮಹಾಭಾರತದ ವನಪರ್ವದಲ್ಲಿ ಯುಧಿಷ್ಠಿರನಿಗೆ ಮಾರ್ಕಂಡೇಯನು ಧರ್ಮಶಿಕ್ಷಣವನ್ನು ನೀಡುತ್ತಾನೆ. ಇದು ತುಂಬಾ ಉಪಯೋಗಕರವಾದುದು. ಈ ಭಾಗವು ಮಾರ್ಕಂಡೇಯನ ಕಾಣಿಕೆಯಾದುದರಿಂದ ಇದನ್ನು 'ಮಾರ್ಕಂಡೇಯ ಸಮಸ್ಯಾಪರ್ವ' ಎಂದೇ ಕರೆಯಲಾಗುತ್ತದೆ.

### 5. ಮಾರ್ಕಂಡೇಯ ಸ್ಮೃತಿ :

ಮಾರ್ಕಂಡೇಯನು ರಚಿಸಿದ ಧರ್ಮಶಾಸ್ತ್ರವಿದು. ಶೌನಕಾದಿ ಋಷಿ ಮುನಿಗಳೊಂದಿಗೆ ಧರ್ಮಾಚರಣೆಗಾಗಿ ಈತನು ನಡೆಸಿದ ತತ್ತ್ವ ರಹಸ್ಯಗಳ ಜಿಜ್ಞಾಸೆಯೇ ಈ ಸ್ಮೃತಿ.

### ಅಕ್ಷಯ ಲೋಕಗಳ ಪ್ರಾಪ್ತಿ

ವ್ಯಕ್ತಿಯು ಜೀವನ ಪೂರ್ತಿ ಸುಖಮಯ ಜೀವನ ನಡೆಸಿ, ಅಕ್ಷಯ ಲೋಕವನ್ನು ಪಡೆಯಬೇಕಾದರೆ ಹೇಗಿರಬೇಕು, ಹೇಗೆ ವರ್ತಿಸಬೇಕು ಎಂಬುದನ್ನು ಮಾರ್ಕಂಡೇಯನು ಹೀಗೆ ವಿವರಿಸುತ್ತಾನೆ.

ಮನಸ್ಸು, ಮಾತು, ಶರೀರದ ಮುಖಾಂತರ ಹಿಂಸೆಯನ್ನು ದೂರಮಾಡಿ, ಅಹಿಂಸಾ ವ್ರತಪಾರಾಯಣವನ್ನು ಯಾರು ಮಾಡುವರೊ, ಅಂತಹವರು ಸುಖ-ದುಃಖ, ಚಳಿ-ಶಿಖೆ-ಇಂತಹ ದ್ವಂದ್ವಗಳನ್ನು ಸಹಿಸುವುದಕ್ಕೆ ಯೋಗ್ಯರಾಗುತ್ತಾರೆ. ಕಷ್ಟ ಸುಖಗಳಲ್ಲಿ ಸಮಭಾವ ಇರುವವರು ಸ್ವರ್ಗಲೋಕವನ್ನು ಪಡೆಯುವರು.

ಸದಾ ಸತ್ಕ್ರಿಯೆಗಳಲ್ಲಿ ನಿರತರಾಗಿ, ಧರ್ಮಾಚರಣೆಯನ್ನು ಅನುಸರಿಸುವವರು, ಇಂದ್ರಿಯಗಳನ್ನು ಗೆದ್ದವರು-ನಿಜ ಅರ್ಥದಲ್ಲಿ ಧೀರ ಪುರುಷರಾಗಿದ್ದು ಸ್ವರ್ಗಗಾಮಿಗಳಾಗುವರು. ಸ್ವಧರ್ಮವನ್ನು ಪಾಲಿಸುವ ದ್ವಿಜೋತ್ತಮರು, ರಾಜಧರ್ಮವನ್ನು ಪಾಲಿಸಿಕೊಂಡು ವಿದ್ವಾನ್ ಪುರೋಹಿತರು ಹಾಗೂ ಅಮಾತ್ಯರ ಸಲಹೆಗಳಂತೆ ನೀತಿ-ಧರ್ಮದ ಮಾರ್ಗದಲ್ಲಿ ಮುನ್ನಡೆಯುತ್ತಾ

ಪ್ರಜೆಗಳ ಸುಖದುಃಖಗಳನ್ನು ತನ್ನ ಸುಖದುಃಖಗಳೆಂದು ತಿಳಿಯುವ ರಾಜನು ಸ್ವರ್ಗವನ್ನು ಸೇರುವನು.

ಗೋವಮಾತೆ, ಬ್ರಾಹ್ಮಣರು, ದೀನದಲಿತರಿಗೆ ಹಿತಕರವಾದ ಕಾರ್ಯಗಳನ್ನು ಮಾಡುವವನು ಸ್ವರ್ಗವನ್ನು ಪಡೆಯುತ್ತಾನೆ. ತಂದೆ-ತಾಯಿ ಹಾಗೂ ಗುರುಗಳ ಭಕ್ತನಾಗಿರುವವನು; ಅವರುಗಳ ಸೇವೆಯಲ್ಲಿ ನಿರತನಾಗಿರುವವನು; ಅವರುಗಳನ್ನು ಆದರಿಸುವವನು; ಸಾಧುತ್ವವನ್ನು ಹೊಂದಿ ಸತ್ಯವನ್ನು ನುಡಿಯುವವನು; ಛಲ, ಕಪಟವಿಲ್ಲದೆ ಸರಳವೂ, ನಿಶ್ಚಲವೂ ಆದ ವ್ಯವಹಾರವನ್ನು ನಡೆಸುವವನು; ನಿರ್ಮಲಾಂತಃಕರಣವಿರುವವನು ಸ್ವರ್ಗವನ್ನು ಪಡೆಯುವನು.

ಸದಾ ಪರೋಪಕಾರ್ಯದಲ್ಲಿ ನಿರತನಾಗಿರುವವನು; ಪರನಾರಿಯನ್ನು ತಾಯಿಯ ಸಮಾನ ಕಾಣುವವನು, ಶ್ರೇಷ್ಠರನ್ನು ಹಾಗೂ ಪೂಜ್ಯರನ್ನು ಸದಾ ಪೂಜೆ ಮಾಡುವವನು ಸ್ವರ್ಗವನ್ನು ಹೊಂದುವನು.

ಸೇವಾ ಮನೋಭಾವದಿಂದ ತೋಟ-ಉದ್ಯಾನವನ, ಕೊಳ-ಸಿಹಿ ನೀರಿನ ಬಾವಿ, ಅರವಟ್ಟಿಗೆ, ಕೃತಕ ಝರಿ, ಧರ್ಮಶಾಲೆ, ದೇವ ಮಂದಿರ, ರಸ್ತೆಗಳು, ವಿದ್ಯಾಮಂದಿರಗಳನ್ನು ನಿರ್ಮಿಸುವವನು; ಗೋವುಗಳಿಗೆ ಹುಲ್ಲನ್ನು ಒದಗಿಸುವವನು, ದೇವರ ನಿಜವಾದ ಉಪಾಸಕನು – ಇಂತಹವರು ಸ್ವರ್ಗವಾಸವನ್ನು ಅನುಭವಿಸುವರು.

ಅನಾಥ ಕನ್ಯೆಯರ ವಿವಾಹವನ್ನು ನೆರವೇರಿಸುವವನು, ದೀನ ದುಃಖಿಗಳ ಸೇವೆ ಮಾಡುವವನು, ಎಲ್ಲ ಜೀವಿಗಳ ಬಗ್ಗೆ ದಯೆ ತೋರುವವನು, ಸಕಲ ಜೀವಿಗಳ ವಿಶ್ವಾಸ ಪಾತ್ರನು, ಅವುಗಳನ್ನು ತನ್ನ ಸ್ನೇಹಿತನಂತೆ ಕಾಣುವವನು, ಹಿಂಸೆ ಮಾಡುವುದರಿಂದ ದೂರವಿರುವವನು, ಸದಾಚಾರ ಪರಾಯಣನು, ತಾನು ಸಂಪಾದಿಸಿದ ಧನದಿಂದ ತೃಪ್ತಿಪಡುವವನು, ಭಗವಂತನ ಅನುಗ್ರಹವನ್ನು ಬೇಡುವವನು, ನ್ಯಾಯಯುತವಾಗಿ ಸಂಪಾದಿಸಿದುದನ್ನು ನ್ಯಾಯವಾಗಿ ಖರ್ಚು ಮಾಡುವವನು ಸ್ವರ್ಗವನ್ನು ಪಡೆಯುವನು.

ಪರನಾರಿಯನ್ನು ತನ್ನ ತಾಯಿ, ಸಹೋದರಿ ಹಾಗೂ ಪುತ್ರಿಯನ್ನಾಗಿ ಭಾವಿಸುವವನು, ಸುಳ್ಳು ಹೇಳದವನು, ಕಟುವಾಗಿ ಮಾತನಾಡದವನು, ಯಾವಾಗಲೂ ಹಸನ್ಮುಖನಾಗಿ ಮಧುರ ಮಾತುಗಳಿಂದ ಇತರರೊಂದಿಗೆ ಮಾತನಾಡುವವನು ದೇವಲೋಕವನ್ನು ಪಡೆಯುವನು.

ಶತ್ರು-ಮಿತ್ರರನ್ನು ಸಮಾನ ದೃಷ್ಟಿಯಿಂದ ನೋಡುವವನು, ಎಲ್ಲ

ರೊಂದಿಗೆ ಮೈತ್ರೀ ಭಾವವನ್ನು ಹೊಂದಿರುವವನು, ಶ್ರದ್ಧಾವಂತನು, ದಯಾವಂತನು, ಶಿಷ್ಟನು, ಶಿಷ್ಟ ಜನರಿಗೆ ಪ್ರಿಯನಾದವನು, ಧರ್ಮಾ-ಧರ್ಮ, ಸತ್ಯಾಸತ್ಯತೆಗಳ ವಿವೇಕ ಬುದ್ಧಿಯನ್ನು ಹೊಂದಿರುವವನು ಅಮರಲೋಕವನ್ನು ಹೊಂದುವನು.

ಸರ್ವಹಿಂಸಾನಿವೃತ್ತಾ ಯೇ ನರಾಃ ಸರ್ವಸಹಾಶ್ಚ ಯೆ ।
ಸರ್ವಸ್ಯಾಶ್ರಯ ಭೂತಾ ಯೆ ತೇ ನರಾಃ ಸ್ವರ್ಗಗಾಮಿನಃ ||
ಯೇ ನಿರ್ಜಿತೇಂದ್ರಿಯಾ ಧೀರಾಸ್ತೆ ನರಾಃ ಸ್ವರ್ಗಗಾಮಿನಃ ||

### ಮಕ್ಕಳ ಲಾಲನೆ - ಪಾಲನೆ

ಮಹರ್ಷಿ ಮಾರ್ಕಂಡೇಯನು ಕರುಣಾಪೂರಿತನಾಗಿದ್ದು, ಸಕಲ ಜೀವಿಗಳನ್ನು ಪ್ರೀತಿಸುತ್ತಿದ್ದನು. ಆದರೆ ಈತನ ವಿಶೇಷ ಗಮನ ಮಕ್ಕಳ ಮೇಲಿತ್ತು. ಅವರನ್ನು ಹೇಗೆ ನಿಭಾಯಿಸಬೇಕು, ಅವರೊಂದಿಗೆ ಹೇಗೆ ವ್ಯವಹರಿಸಬೇಕು, ಅವರನ್ನು ಯಾವ ರೀತಿ ನಡೆಯಿಸಿಕೊಂಡರೆ ಭವಿಷ್ಯದಲ್ಲಿ ಅವರು ಸುಸಂಸ್ಕೃತರೂ, ಸದಾಚಾರ ಸಂಪನ್ನರಾಗುತ್ತಾರೆ ಎನ್ನುವುದನ್ನು ಈತ ವಿವರಿಸಿದ್ದಾನೆ. ಮಕ್ಕಳ ಲಾಲನೆ-ಪಾಲನೆಯ ಬಗ್ಗೆ ನಿರ್ದಿಷ್ಟ ಸಲಹೆಗಳನ್ನು ನೀಡಿದ್ದಾನೆ. ಈ ವಿವರಗಳು ಬೇರೆ ಯಾವ ಧರ್ಮಶಾಸ್ತ್ರದಲ್ಲಿಯೂ ದೊರೆಯುವುದಿಲ್ಲ. ಇದರಿಂದ ಈ ಸ್ಮೃತಿಯು ಇತರೇ ಸ್ಮೃತಿಗಳಿಗಿಂತ ವಿಶಿಷ್ಟವಾದುದೆಂದು ತಿಳಿದು ಬಂದಿದೆ. ಉಪನಯನದ ನಂತರದ ಶಿಕ್ಷಣ, ಸದಾಚಾರಗಳ ಬಗ್ಗೆ ಎಲ್ಲ ಧರ್ಮಶಾಸ್ತ್ರಗಳೂ ತಿಳಿಸಿವೆ. ಆದರೆ ಉಪನಯನಕ್ಕೆ ಮುಂಚೆ ಮಕ್ಕಳಿಗೆ ಯಾವ ರೀತಿಯ ಶಿಕ್ಷಣ ಕೊಡಬೇಕೆಂಬುದು ಯಾವ ಶಾಸ್ತ್ರದಲ್ಲಿಯೂ ದೊರೆಯುವುದಿಲ್ಲ. ಇದೇ ಮಾರ್ಕಂಡೇಯ ಋಷಿಯ ವಿಶಿಷ್ಟ ಕಾಣಿಕೆಯಾಗಿದೆ. ಉತ್ತಮ ರೀತಿಯಲ್ಲಿ ಬೀಜ ನೆಡುವಿಕೆಯಿಂದ ಉತ್ತಮ ಫಲ ಸಿಗುವಂತೆ, ಉತ್ತಮ ರೀತಿಯಲ್ಲಿ ಮಕ್ಕಳನ್ನು ಪಾಲಿಸಿದರೆ ತಪ್ಪದೆ ಅವರು ಉತ್ತಮ ನಾಗರೀಕರಾಗುತ್ತಾರೆಂದು ಮಾರ್ಕಂಡೇಯನು ತಿಳಿಸುತ್ತಾನೆ.

ಉಪನಯನ ಸಂಸ್ಕಾರದ ಮುಖ್ಯ ಉದ್ದೇಶ್ಯ ಬಾಲಕನು ಅರಿಷಡ್ವರ್ಗಗಳನ್ನು ತ್ಯಜಿಸಿ, ಬ್ರಹ್ಮಬಲ, ಕ್ಷಾತ್ರಬಲಗಳನ್ನು ಪಡೆಯಲಿ ಎಂಬುದೇ ಆಗಿದೆ. ಉಪನಯನಕ್ಕೆ ಮೊದಲು ರೂಢಿಯಲ್ಲಿದ್ದ ಅನೇಕ ಕರ್ಮಾಚಾರಗಳನ್ನು ದೂರ ಮಾಡಲು ಶಿಕ್ಷಕನು ಶಾಸ್ತ್ರಗಳ ಆಧಾರದಿಂದ ಆಜ್ಞೆಗಳನ್ನು ನೀಡುತ್ತಾನೆ.

ಉಪನಯನ ಪೂರ್ವದ ವಯಸ್ಸನ್ನು ಮುಗ್ಧ ಎಂದು ಹೇಳಲಾಗಿದೆ. ಈ ಮುಗ್ಧ ರೂಪವೇ ಭಗವದ್ದರ್ಶನ ಎಂದು ಹಿರಿಯರು ಹೇಳುತ್ತಾರೆ; ಭಗವಾನ್ ಸ್ವರೂಪ ಎಂದು ತಿಳಿಸುತ್ತಾರೆ. ಇಂತಹ ಭಗವತ್ ಸ್ವರೂಪವನ್ನು ತಂದೆ-ತಾಯಿಯರು ಹೊಡೆದು-ಬಡಿದು ಮಾಡುವುದರ ಮುಖಾಂತರ ಕ್ರೂರವಾಗಿ ಮಕ್ಕಳನ್ನು ಶಿಕ್ಷಿಸುವುದು ತಪ್ಪು ಎಂದು ಮಾರ್ಕಂಡೇಯನು ಹೇಳುತ್ತಾನೆ. ಅವರನ್ನು ಬಂಧಿಸುವುದು, ಕಟ್ಟಿ ಹಾಕುವುದು, ಊಟ ತಿಂಡಿಯಿಲ್ಲದೆ ಶಿಕ್ಷಿಸುವುದು ಮಹಾಪಾಪ. ಅವರನ್ನು ಯಾವಾಗಲೂ ಸಂತೋಷ ಚಿತ್ತದಿಂದಿರುವಂತೆ ಮಾಡಬೇಕು. ಅವರುಗಳು ಚೇಷ್ಟೆ ಮಾಡುವುದಕ್ಕೆ ಅವಕಾಶ ನೀಡದಂತೆ ಬೊಂಬೆ ಇತ್ಯಾದಿಗಳನ್ನು ನೀಡಿ, ಅವರನ್ನು ಸಂತುಷ್ಟಗೊಳಿಸಬೇಕು. ಅವರುಗಳು ಉದಾಸೀನರೂ, ನಿರ್ಲಕ್ಷ್ಯ ತೋರುವವರೂ ಆಗಿರಬಾರದು.

ಅಜ್ಞಾನಿಗಳು ಮಕ್ಕಳ ಮನಸ್ಸಿಗೆ ನೋವನ್ನು ಉಂಟುಮಾಡುವರು. ಹೀಗೆ ಮಾಡುವುದರಿಂದ ಅವರ ಸಂಪತ್ತು, ಯಶಸ್ಸು, ಕೀರ್ತಿ, ತೇಜಸ್ಸು, ಬಲ, ಬುದ್ಧಿ - ಇತ್ಯಾದಿಗಳು ನಿಧಾನವಾಗಿ ನಾಶಗೊಳ್ಳುತ್ತವೆ. ಕೆಲವೊಮ್ಮೆ ಅಂತಹವರ ವಂಶವೂ ಮುಂದುವರಿಯುವುದಿಲ್ಲ. ಮನೆಯ ಯಜಮಾನಿ ಕಠಿಣ ಹೃದಯಿಯಾಗಿದ್ದರೆ ಮಕ್ಕಳ ಸರಳ ಸ್ವಭಾವವನ್ನು ಅರಿಯಲಾರದೆ ಅವರನ್ನು ಹೊಡೆಯುವುದು, ಅಳಿಸುವುದು, ಕೆಟ್ಟ ಮಾತುಗಳಿಂದ ಬಯ್ಯುವುದು ಮಾಡಿದ್ದೇ ಆದರೆ ಅಂತಹವರು ಪತಿ, ಪುತ್ರ, ಸಂಪತ್ತಿನಿಂದ ವಂಚಿತರಾಗುವರು. ಹೀಗೆ ಮಕ್ಕಳನ್ನು ಅಳಿಸಿದಾಗ, ಅವರ ಅಳು ಪಿತೃಲೋಕವನ್ನು ತಲುಪಿ, ದುಃಖಗೊಂಡ ಪಿತೃಗಳು ಶಾಪ ಹಾಕುವರು. ಆ ಶಾಪ ಇಲ್ಲಿನವರನ್ನು ಆವರಿಸುತ್ತದೆ.

ಮಕ್ಕಳೊಂದಿಗೆ ಕಠೋರವಾಗಿ ವರ್ತಿಸಿದಲ್ಲಿ, ಅವರೂ ಮುಂದೆ ಕಠೋರ ಹೃದಯಿಗಳಾಗುತ್ತಾರೆ. ಸದಾ ಭಯದಿಂದ ಕೂಡಿದವರಾಗಿರುತ್ತಾರೆ. ಅವರ ಆತ್ಮಬಲವು ಕುಸಿಯುತ್ತದೆ. ಅವರ ಭವಿಷ್ಯವು ಕುಸಿಯುತ್ತದೆ. ಅವರು ಯಾವುದೇ ಕ್ಷೇತ್ರದಲ್ಲಿ ಸಫಲರಾಗದೆ, ದುಷ್ಟ ಪ್ರವೃತ್ತಿಯವರಾಗುತ್ತಾರೆ, ಸ್ವಧರ್ಮಾಚರಣೆಯಲ್ಲಿ ವಿಫಲರಾಗುತ್ತಾರೆ. ಅಂತಹ ಮಕ್ಕಳು ಜ್ಞಾನಶೂನ್ಯರಾಗಿ, ಸಮಾಜಕ್ಕೆ ಬೇಡದವರಾಗುತ್ತಾರೆ. ಆದುದರಿಂದ ಮಕ್ಕಳ ಜೊತೆಯಲ್ಲಿ ಕಾರುಣ್ಯದಿಂದ ವರ್ತಿಸಬೇಕು, ಅನುನಯದಿಂದ ಒಳ್ಳೆಯ ಮಾತುಗಳಿಂದ

ಅವರಿಗೆ ಬುದ್ಧಿ ಹೇಳಬೇಕು, ಅವರ ಮನಸ್ಸನ್ನು ಗೆದ್ದು, ಅವರಂತೆ ನಡೆಯುತ್ತಾ ನಂತರ ತಮ್ಮ (ಒಳ್ಳೆ) ದಾರಿಗೆ ಅವರನ್ನು ತಿರುಗಿಸಿಕೊಳ್ಳಬೇಕು. ಹೀಗೆ ಮಾಡಿದಲ್ಲಿ ಮಕ್ಕಳು ಉತ್ತಮ ಗುಣವುಳ್ಳವರಾಗಿ ಬದಲಾಗುತ್ತಾರೆ, ಸತ್ಪ್ರಜೆಗಳಾಗುತ್ತಾರೆ.

ಮಕ್ಕಳನ್ನು ಮೃದುವಾದ, ಸಿಹಿ ಮಾತುಗಳಿಂದ ಒಲಿಸಿಕೊಂಡು ಸರಿದಾರಿಗೆ ಬರುವಂತೆ ಮಾಡಬೇಕು. ಮಧುರವಾಗಿ, ಪ್ರೇಮಮಯ, ವಾತ್ಸಲ್ಯಪೂರ್ಣ ನಡವಳಿಕೆಯಿಂದ ಅವರನ್ನು ಸಂತುಷ್ಟಗೊಳಿಸಬೇಕು. ಅವರಿಗೆ ಆಶಾಭಂಗ ಉಂಟು ಮಾಡಬಾರದು. ಅವರ ಮೇಲೆ ಕೋಪ, ಆಕ್ರೋಶ, ಭಯ–ಇತ್ಯಾದಿಗಳನ್ನು ತೋರಿಸಬಾರದು.

ಹೀಗೆ ಮಾಡಿದಲ್ಲಿ ಹಿರಿಯರು ಋಷಿಮುನಿಗಳ, ಯೋಗಿಗಳ, ಬ್ರಾಹ್ಮಣರ ಕೃಪಾಪಾತ್ರರಾಗುತ್ತಾರೆ.

### ಸಮಸ್ತ ವಿಶ್ವದ ಬಗ್ಗೆ ಸದ್ಭಾವನೆ

ಮಾರ್ಕಂಡೇಯ ಪುರಾಣದಲ್ಲಿ ಈತನು ನೀಡಿರುವ ಅನೇಕ ಉಪದೇಶಗಳಲ್ಲಿ ಸದ್ಭಾವನೆಯನ್ನು ಮಾನವರಲ್ಲಿ ಹರಡುವುದರ ಬಗೆಗಿನ ಬೋಧನೆಗಳು ಗಮನಾರ್ಹವಾದವುಗಳು. ಎಲ್ಲ ಜೀವಿಗಳ ಒಳತಿಗಾಗಿ ಆತನು ಸದಾ ಚಿಂತಿಸುತ್ತಿದ್ದನು. ಆದರಿಂದಲೇ ಆತನು –

ಸಮಸ್ತ ಜೀವಿಗಳೂ ಸದಾ ಪ್ರಸನ್ನಚಿತ್ತರಾಗಿರಲಿ. ಇತರರೊಂದಿಗೆ ಸದಾ ಸ್ನೇಹದಿಂದ ಇರಬೇಕು. ಎಲ್ಲ ಜೀವಿಗಳಿಗೂ ಶುಭವನ್ನುಂಟು ಮಾಡಬೇಕು. ಎಲ್ಲರೂ ನಿರ್ಭಯದಿಂದ ಓಡಾಡುವಂತಿರಬೇಕು. ಯಾರಿಗೇ ಆಗಲಿ ಯಾವುದೇ ರೀತಿಯ ವ್ಯಾಧಿ, ಮಾನಸಿಕ ಹಿಂಸೆ ನೀಡಬಾರದು. ಎಲ್ಲರೂ ಇತರರೊಂದಿಗೆ ಮಿತ್ರ ಭಾವವನ್ನು ಹೊಂದಿರಬೇಕು. ಎಲ್ಲರಲ್ಲಿಯೂ ಪರಸ್ಪರ ಪ್ರೀತಿ ಇರಬೇಕು. ಎಲ್ಲ ವರ್ಣಗಳವರೂ ಉನ್ನತಿಯನ್ನು ಪಡೆಯಬೇಕು. ಎಲ್ಲ ಕರ್ಮಗಳಲ್ಲೂ ಸಿದ್ಧಿಯನ್ನು ಪಡೆಯಬೇಕು.

'ಎಲೌ ಪ್ರಜೆಗಳೆ ! ಎಲ್ಲರ ಬಗ್ಗೆಯೂ ನೀವು ಶುಭವನ್ನು ಉಂಟು ಮಾಡಬೇಕು. ನೀವು ಸದಾ ನಿಮ್ಮ ಹಾಗೂ ನಿಮ್ಮ ಮಕ್ಕಳ ಹಿತವನ್ನು ಇಚ್ಛಿಸುವಿರೊ, ಅದೇ ರೀತಿಯಲ್ಲಿ ಎಲ್ಲ ಜೀವಿಗಳ ಬಗ್ಗೆಯೂ ಹಿತವನ್ನು ತೋರಬೇಕು. ಯಾರು ಯಾರ ಬಗ್ಗೆಯೂ ಅಪರಾಧವನ್ನು ಮಾಡಬಾರದು.

ಮೂರ್ಖನು ಬೇರೆಯವರಿಗೆ ಅಹಿತವನ್ನು ಉಂಟುಮಾಡಿದರೆ ಅವನು ಅದರ ಫಲವನ್ನು ಭೋಗಿಸುವನು. ಏಕೆಂದರೆ ಅವನು ಮಾಡಿದ ಕಾರ್ಯಗಳಿಗೆ ಫಲ ಅವನಿಗೆ ದೊರತೇ ದೊರೆಯುತ್ತದೆ.'

'ಈ ದೃಷ್ಟಿಯಿಂದಲೇ ಎಲ್ಲರೂ ಯೋಚಿಸಬೇಕು. ಎಲ್ಲರೊಂದಿಗೂ ಪವಿತ್ರ ಭಾವವನ್ನು ಹೊಂದಿರಬೇಕು. ಇದರಿಂದ ಯಾರೂ ಪಾಪಕರ್ಮಗಳನ್ನು ಮಾಡುವುದಿಲ್ಲ. ಹೀಗೆ ಮಾಡಿದಲ್ಲಿ ನೀವುಗಳು ಉತ್ತಮ ಲೋಕವನ್ನು ಪಡೆಯುವಿರಿ'.

'ಎಲೌ ಬುದ್ಧಿವಂತರೆ ! ನಿಮ್ಮೊಂದಿಗೆ ಸ್ನೇಹ ಭಾವವನ್ನು ಹೊಂದಿರುವವರೆಲ್ಲರನ್ನು ಪ್ರೀತಿಯಿಂದ ಕಾಣಿ. ಅವರಿಗೆ ಒಳ್ಳೆಯ (ಕಲ್ಯಾಣ) ದಾಗಲೆಂದು ದೇವರನ್ನು ಪ್ರಾರ್ಥಿಸಿ. ನಿಮ್ಮನ್ನು ದ್ವೇಷಿಸುವವರರನ್ನೂ ಇದೇ ರೀತಿ ನೋಡಿಕೊಳ್ಳಿ'.

ನಂದಂತು ಸರ್ವಭೂತಾನಿ ಸ್ನಿಹ್ಯಂತು ವಿಜನೇಷ್ವಪಿ |
ಸ್ವಸ್ತ್ಯಸ್ತು ಸರ್ವಭೂತೇಷು ನಿರಾತಂಕಾನಿ ಸಂತು ಚ |
ಮಾ ವ್ಯಾಧಿರಸ್ತು ಭೂತಾನಾ ಮಾಧಯೋ ನ ಭವಂತು ಚ |
ಮೈತ್ರೀಮಶೇಷ ಭೂತಾನಿ ಪುಷ್ಯಂತು ಸಕಲೇ ಜನೇ ||
ಶಿವಮಸ್ತು ದ್ವಿಜಾತೀನಾಂ ಪ್ರೀತಿರಸ್ತು ಪರಸ್ಪರಂ |
ಸಮೃದ್ಧಿಃ ಸರ್ವವರ್ಣಾನಾಂ ಸಿದ್ಧಿರಸ್ತು ಚ ಕರ್ಮಣಾಂ ||
ಹೇ ಲೋಕಾಃ ಸರ್ವಭೂತೇಷು ಶಿವಾವೋಸ್ತು ಸದಾಮತಿಃ |
ಯಥಾತ್ಮನಿ ಯಥಾ ಪುತ್ರೇ ಹಿತಮಿಚ್ಛಥ ಸರ್ವದಾ ||
ತಥಾ ಸಮಸ್ತ ಭೂತೇಷು ವರ್ತಧ್ವಂ ಹಿತ ಬುದ್ಧಯಃ |
ಏತದ್ವೋ ಹಿತಮತ್ಯಸ್ತಂ ಕೋ ವಾ ಕಸ್ಯಾಪರಾಧ್ಯತೇ ||
ಯತ್ ಕರೋತ್ಯಹಿತಂ ಕಿಂಚಿತ್ ಕಸ್ಯಚಿನ್ಮೂಢಮಾನಸಃ |
ತಂ ಸಮಭ್ಯೇತಿ ತನ್ನೂನಂ ಕರ್ತೃಗಾಮಿ ಫಲಂ ಯತಃ ||
ಇತಿ ಮತ್ವಾ ಸಮಸ್ತೇಷು ಭೋ ಲೋಕಾಃ ಕೃತಬುದ್ಧಯಃ |
ಸಂತು ಮಾ ಲೌಕಿಕಂ ಪಾಪಂ ಲೋಕಾನ್ ಪ್ರಾಪ್ಸ್ಯಥ ವೈ ಬುಧಾಃ |
ಯೋ ಮೇಽದ್ಯ ಸ್ನಿಹ್ಯತೇ ತಸ್ಯ ಶಿವಮಸ್ತು ಸದಾ ಭುವಿ |
ಯಚ್ಚ ಮಾಂ ದ್ವೇಷ್ಟಿ ಲೋಕೇಽಸ್ಮಿನ್ ಸೋಽಪಿ ಭದ್ರಾಣಿ ಪಶ್ಯಂತು ||

(ಮಾರ್ಕಂಡೇಯ ಪು. 111/7-12-19)

## ಪುರೋಹಿತನ ಅವಶ್ಯಕತೆ

ಪುರೋಹಿತನನ್ನು ನಿಯಮಿಸಿಕೊಂಡು, ಆತನ ನಿರ್ದೇಶನದಂತೆ ಕೃತ್ಯಕರ್ಮಗಳನ್ನು ಅನುಸರಿಸಬೇಕು ಎಂದು ಮಾರ್ಕಂಡೇಯಸ್ಮೃತಿಯಲ್ಲಿನ 'ಪುರೋಹಿತ ಪ್ರಶಂಸಾ' ಎನ್ನುವ ಅಧ್ಯಾಯವು ತಿಳಿಸುತ್ತದೆ. ಈತನ ಮಾತನ್ನು ಮೀರಿ ಯಾರೂ, ಯಾವ ಕಾರ್ಯವನ್ನು ಮಾಡುವಂತಿಲ್ಲ. ಹೀಗೆ ಮಾಡುವುದರಿಂದ ಪುರೋಹಿತನನ್ನು ಇರಿಸಿಕೊಂಡಂತವಹನು ಶ್ರೇಯಸ್ಸು ಹಾಗೂ ಸಂಪತ್ತನ್ನು ಹೊಂದುವನು. ಪುರೋಹಿತನನ್ನು ಗುರು, ತಂದೆ, ತಾಯಿ, ಆಚಾರ್ಯ, ಶಿಕ್ಷಕ, ಬಂಧು, ಮಿತ್ರ–ಎನ್ನುವ ರೂಪದಲ್ಲಿ ಕಾಣುತ್ತಾರೆ. ಪಾಂಡವರಿಗೆ ಧೌಮ್ಯನು ಇದೇ ರೀತಿಯಲ್ಲಿ ಪುರೋಹಿತನಾಗಿದ್ದ; ಬಲಿ ಚಕ್ರವರ್ತಿಗೆ ಶುಕ್ರಾಚಾರ್ಯ ಹಾಗೂ ಇಕ್ಷ್ವಾಕು ವಂಶದವರಾದ ದಶರಥ ಇತ್ಯಾದಿಯವರಿಗೆ ವಸಿಷ್ಠನು ಪುರೋಹಿತರಾಗಿದ್ದರು. ಇವರನ್ನು ಕುಲ ಪುರೋಹಿತರೆಂದೇ ಕರೆಯಲಾಗುತ್ತಿತ್ತು.

ಸದಾ ಪುರೋಹಿತಂ ತಸ್ಮಾತ್ ಸರ್ವಕರ್ಮಸು ಚೇತಸಾ ||
ಸಂಪ್ರಧಾರ್ಯೈವ ಮತಿಮಾನ್ ತಾನಿ ಕುರ್ಯಾತ್ ತತಃ ಪರಂ |
ತೇನ ಶ್ರೇಯೊ ವಿಶೇಷೇಣ ಲಭತೇ ಸಂಪದಾಂ ಶ್ರಿಯಂ |
ಗುರುರ್ಮಾತಾ ಪಿತಾಚಾರ್ಯ ಉಪಾಧ್ಯಾಯಶ್ಚ ಬಾಂಧವಃ |
ಸರ್ವಂ ಪುರೋಹಿತೋ ಜ್ಞೇಯಃ ಪುತ್ರೋ ಮಿತ್ರಂ ಸುತಃ ಸುಹೃತ್ ||

## ದುಷ್ಟ ಸಹವಾಸ ತ್ಯಾಜ್ಯ

ಸಂಗಃ ಸರ್ವಾತ್ಮನಾ ತ್ಯಾಜ್ಯಃ ಸ ಚೇತ್ ತ್ಯಕ್ತುಂ ನ ಶಕ್ಯತೇ |
ಸ ಸದ್ಭಿಃ ಸಹ ಕರ್ತವ್ಯಃ ಸತಾಂ ಸಂಗೋ ಹಿ ಭೇಷಜಂ ||
ಕಾಮಃ ಸರ್ವಾತ್ಮನಾ ಹೇಯೋ ಹಾತುಂ ಚೇಚ್ಛಕ್ಯತೇ ನ ಸಃ |
ಮುಮುಕ್ಷಾಂ ಪ್ರತಿ ತತ್ಕಾರ್ಯಂ ಸೈವ ತಸ್ಯಾಪಿ ಭೇಷಜಂ ||

(ಮಾರ್ಕಂಡೇಯ ಪುರಾಣ. ಅ. 38)

ದುಷ್ಟ ಸಹವಾಸವನ್ನು ಎಲ್ಲ ರೀತಿಯಲ್ಲೂ ತ್ಯಜಿಸಬೇಕು. ಹಾಗೆ ಮಾಡದಿದ್ದಲ್ಲಿ ಅವನು ನಾಶವಾಗುತ್ತಾನೆ. ತಪ್ಪದೆ, ಕಷ್ಟಪಟ್ಟಾದರೂ ಸತ್ಪುರುಷರ ಸಹವಾಸವನ್ನು ಮಾಡಬೇಕು. ಈ ಸತ್ಸಂಗವೇ ಅವನಿಗೆ ಮಾನಸಿಕ, ಶಾರೀರಿಕ ಔಷಧಿಯಾಗುತ್ತದೆ. ದುರಾಸೆಯನ್ನು ತ್ಯಜಿಸುವುದು ಕ್ಷೇಮ. ಈ ಆಸೆಯಿಂದ

ದೂರವಾಗದಿದ್ದಲ್ಲಿ ಮುಮುಕ್ಷುವಿಗೆ ಮುಕ್ತಿ ಅಥವಾ ಮೋಕ್ಷಪ್ರಾಪ್ತಿಯು ಸಾಧ್ಯವಾಗುವುದಿಲ್ಲ.

## ರಾಜಧರ್ಮದ ಉಪದೇಶ

**ಮಾರ್ಕಂಡೇಯ** ಮಹರ್ಷಿಯು ಯುಧಿಷ್ಠಿರನಿಗೆ ಈ ರೀತಿ ಉಪದೇಶ ಮಾಡುತ್ತಾನೆ –

ದಯಾವಾನ್ ಸರ್ವಭೂತೇಷು ಹಿತೋ ರಕ್ತಾಽನಸೂಯಕಃ ||
ಸತ್ಯವಾದೀ ಮೃದುರ್ದಾಂತಃ ಪ್ರಜಾನಾಂ ರಕ್ಷಣೆ ರತಃ |
ಚರ ಧರ್ಮಂ ತ್ಯಜಾಧರ್ಮಂ ಪಿತೄನ್ ದೇವಾಂಶ್ಚ ಪೂಜಯ ||
ಪ್ರಮಾದಾದ್ ಯತ್ ಕೃತಂ ತೇಽಭೂತ್ ಸಮ್ಯಗ್ ದಾನೇನ ತಜ್ಜಯ|
ಅಲಂ ತೇ ಮಾನಮಾಶ್ರಿತ್ಯ ಸತತಂ ಪರವಾನ್ ಭವ ||

(ಮಹಾ. ವನಪರ್ವ 191/23-25)

'ಎಲೈರಾಜನೆ ! ಸಮಸ್ತ ಜೀವಿಗಳ ಬಗ್ಗೆಯೂ ದಯೆ ತೋರು ! ಎಲ್ಲರ ಹಿತವನ್ನು ಬಯಸುವವನಾಗು. ಎಲ್ಲರ ಮೇಲೂ ಪ್ರೇಮಭಾವವನ್ನು ಹೊಂದಿರು. ಯಾರ ಮೇಲೂ ದೋಷಪೂರಿತ (ಕೆಟ್ಟ) ದೃಷ್ಟಿಯನ್ನು ನೆಡಬೇಡ. ಜಿತೇಂದ್ರಿಯನಾಗಿದ್ದು, ಪ್ರಜಾಪಾಲನೆಯಲ್ಲಿ ತತ್ಪರನಾಗಿದ್ದು, ಧರ್ಮಾಚರಣೆಯಲ್ಲಿ ನಿರತನಾಗು. ದೂರದಿಂದಲೇ ಅಧರ್ಮವನ್ನು ತ್ಯಜಿಸು. ಅದನ್ನು ಹತ್ತಿರದಲ್ಲೂ ಸೇರಿಸಬೇಡ. ಪಿತೃಗಳನ್ನು ಚನ್ನಾಗಿ ಆರಾಧಿಸು. ಪ್ರಮಾದವಶಾತ್ ನಿನ್ನಿಂದ ಯಾರಿಗಾದರೂ ಅಪಮಾನವಾದಲ್ಲಿ ದಾನ ಕೊಟ್ಟು ಅವರನ್ನು ತೃಪ್ತಿಪಡಿಸಿ, ಅವರನ್ನು ವಶಪಡಿಸಿಕೊಳ್ಳಬೇಕು. 'ನಾನು ಎಲ್ಲರ ಯಜಮಾನ' ಎನ್ನುವ ಅಹಂಕಾರದ ಭಾವವನ್ನು ಹತ್ತಿರವೂ ಸುಳಿಯಗೊಡಬಾರದು. ನಿನ್ನನ್ನು ನೀನು ಯಾವಾಗಲೂ ಇತರರ ವಶ ಎಂದು ತಿಳಿದುಕೊ !'

## ಅತಿಥಿ ಧರ್ಮದ ಮಹಿಮೆ

ಪಾದೋದಕಂ ಪಾದಘೃತಂ ದೀಪಮನ್ನಂ ಪ್ರತಿಶ್ರಯಂ ||
ಪ್ರಯಚ್ಛಂತಿ ತು ಯೇ ರಾಜನ್ ನೋಪಸರ್ಪಂತಿ ತೇ ಯಮಂ ||

(ಮಹಾ. ವನ. 200/23-24)

'ರಾಜನ್ ! ಅತಿಥಿಗೆ ಕಾಲು ತೊಳೆಯಲು ನೀರು, ಕಾಲುಗಳಿಗೆ ಹಚ್ಚಿಕೊಳ್ಳಲು ಎಣ್ಣೆ, ಬೆಳಕು ನೀಡುವ ದೀಪ, ಊಟಕ್ಕಾಗಿ ಅನ್ನ ಹಾಗೂ

ಇರುವುದಕ್ಕೆ ಸ್ಥಳವನ್ನು ಯಾರು ಕೊಡುವರೊ, ಅವರು ಯಮರಾಜನ ಬಳಿಗೆ ಹೋಗಬೇಕಾದ ಅಗತ್ಯವಿಲ್ಲ'.

### ಪಾಪದಿಂದ ಮುಕ್ತಿ ಪಡೆಯುವ ಉಪಾಯ

ವಿಕರ್ಮಣಾ ತಪ್ಯಮಾನಃ ಪಾಪಾದ್ ವಿಪರಿಮುಚ್ಯತೆ |
ನ ತತ್ ಕುರ್ಯಾಂ ಪುನರಿತಿ ದ್ವಿತೀಯಾತ್ ಪರಿಮುಚ್ಯತೇ||

(ಮಹಾ. ವನ. 207/51)

ಪಾಪವನ್ನು ಮಾಡಿದ ವ್ಯಕ್ತಿಯು ಶುದ್ಧ ಹೃದಯದಿಂದ ಪಶ್ಚಾತ್ತಾಪ ಹೊಂದಿ, ಆ ಪಾಪದಿಂದ ದೂರವಾಗಲು 'ಮತ್ತೆ ಎಂದೆಂದಿಗೂ ಇಂತಹ ಕಾರ್ಯವನ್ನು ಮಾಡುವುದಿಲ್ಲ' ಎಂಬು ದೃಢ ತೀರ್ಮಾನ ಕೈಗೊಂಡಲ್ಲಿ, ಅಂತಹವನು ಭವಿಷ್ಯದಲ್ಲಿ ಯಾವುದೇ ಪಾಪವನ್ನು ಮಾಡಲಾರನು. ಅಂತಹ ಪಾಪದಿಂದ ಅವನು ಬದುಕಿ ಉಳಿಯುತ್ತಾನೆ.

### ಸರ್ವೋತ್ತಮ ಜ್ಞಾನ

ಆನೃಶಂಸ್ಯಂ ಪರೋ ಧರ್ಮಃ ಕ್ಷಮಾ ಚ ಪರಮಂ ಬಲಂ |
ಆತ್ಮಜ್ಞಾನಂ ಪರಂ ಜ್ಞಾನಂ ಸತ್ಯಂ ವ್ರತಪರಂ ವ್ರತಂ ||

(ಮಹಾ. ವನ. 213/30)

ಕ್ರೂರತೆ ಇಲ್ಲದ ದಯೆಯೇ ಎಲ್ಲದಕ್ಕಿಂತಲೂ ದೊಡ್ಡದಾದ ಧರ್ಮ. ಕ್ಷಮೆಯೇ ಎಲ್ಲದಕ್ಕಿಂತಲೂ ಬಲಯುತವಾದುದು. ಸತ್ಯ ಹೇಳುವುದು ಎಲ್ಲದಕ್ಕಿಂತಲೂ ಉತ್ತಮವಾದ ವ್ರತ. ಪರಮಾತ್ಮನ ತತ್ತ್ವದ ಜ್ಞಾನವೇ ಎಲ್ಲದಕ್ಕಿಂತಲೂ ಉತ್ತಮವಾದ ಜ್ಞಾನವಾಗಿರುತ್ತದೆ.

ಭೂತೇಷ್ವಭಾವಂ ಸಂಚಿಂತ್ಯ ಯೇ ತು ಬುದ್ಧೇಃ ಪರಂಗತಾಃ |
ನ ಶೋಚಂತಿ ಕೃತಪ್ರಜ್ಞಾಃ ಪಶ್ಯಂತಃ ಪರಮಾಂ ಗತಿಂ ||

(ಮಹಾ. ವನಪರ್ವ. 216/28)

ಪ್ರಪಂಚದಲ್ಲಿರುವ ಎಲ್ಲ ವಸ್ತುಗಳು ಅನಿತ್ಯವಾದವುಗಳು. ಹೀಗೆಂದು ಚಿಂತಿಸಿ, ಬುದ್ಧಿಯನ್ನು ಸುಸ್ಥಿತಿಯಲ್ಲಿ ಇರಿಸಿಕೊಂಡು, ಪರಬ್ರಹ್ಮ ಪರಮಾತ್ಮನನ್ನು ಪಡೆದಿದ್ದೇ ಆದರೆ, ಅಂತಹ ಜ್ಞಾನೀ ಮಹಾಪುರುಷನು ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡು, ಎಂದಿಗೂ ಶೋಕವನ್ನು ಅನುಭವಿಸುವುದೇ ಇಲ್ಲ.

# 31. ಶಂಖ ಮತ್ತು ಲಿಖಿತರ ಸ್ಮೃತಿಗಳು

ಶಂಖ, ಲಿಖಿತರ ಉದಾತ್ತ ಜೀವನ ಚರಿತ್ರೆಯು ವಿಶ್ವದ ಇತಿಹಾಸದಲ್ಲಿ ಧರ್ಮ, ಸತ್ಯ, ಪ್ರಾಮಾಣಿಕತೆ – ಇವುಗಳಿಗಾಗಿ ಆದರ್ಶ. ಇವರ ಸಮಾನರು ದೊರೆಯುವುದು ಅಪರೂಪ. ಸತ್ಯತೆ, ಪ್ರಾಮಾಣಿಕತೆಗಳನ್ನು ಸ್ವತಃ ಅನುಸರಿಸುವುದರ ಮುಖಾಂತರ ಉಚ್ಚಕೋಟಿಗೆ ಸೇರಿದವರಾಗಿರುವ ಇವರು ತಮ್ಮ ಅನುಭವ, ಆಚರಣೆಗಳ ಆಧಾರದ ಮೇಲೆ ಶುದ್ಧ ರೂಪದ ಧರ್ಮಶಾಸ್ತ್ರವನ್ನು ರಚಿಸಿದ್ದಾರೆ. ಉಪದೇಶ ಮಾಡುವುದು ಸುಲಭ; ಆದರೆ ಅದನ್ನು ಜೀವನದಲ್ಲಿ ಅಳವಡಿಸಿಕೊಂಡು ಅದರಂತೆ ನಡೆಯುವುದು ಕಷ್ಟ. ಆದರೆ ಶಂಖ, ಲಿಖಿತರು ತಾವು ಬರೆದುದನ್ನು ತಮ್ಮ ಜೀವನದಲ್ಲಿ ಅಳವಡಿಸಿ ತೋರಿಸಿದರು.

ಶಂಖ, ಲಿಖಿತರು ಅಣ್ಣತಮ್ಮಂದಿರು. ಹಿರಿಯನು ಶಂಖ, ಕಿರಿಯನು ಲಿಖಿತ. ಇವರಿಬ್ಬರೂ ಉನ್ನತ ಮಟ್ಟದ ತಪಸ್ವಿಗಳು. ಬಹುಧಾ ನದಿಯ ದಡದಲ್ಲಿ ಇವರಿಬ್ಬರೂ ಬೇರೆ ಬೇರೆಯಾದ ಆಶ್ರಮಗಳನ್ನು ನಿರ್ಮಿಸಿಕೊಂಡು, ಅಲ್ಲಿ ತಮ್ಮ ತಪಸ್ಸಿನ ಜೀವನವನ್ನು ಮುಂದುವರಿಸುತ್ತಿದ್ದರು. ಪರಸ್ಪರ ಹೊಂದಿಕೊಂಡೇ ಇದ್ದರು.

ಒಂದು ದಿನ ಹೀಗಾಯಿತು.

ಅಣ್ಣ ಶಂಖನು ಆಶ್ರಮದಿಂದ ಹೊರಗೆ ಹೋಗಿದ್ದ. ಆಗ ತಮ್ಮ ಲಿಖಿತನು ಅಣ್ಣನ ಆಶ್ರಮಕ್ಕೆ ಬಂದ. ಅವನಿಗೆ ಹಸಿವಾಗಿತ್ತು. ನೋಡಿದ, ಮರಗಳಲ್ಲಿ ಸಪೂರವಾದ ಹಣ್ಣುಗಳಿವೆ. ಅವನ್ನು ನೋಡಿ ಆಕರ್ಷಿತಗೊಂಡು, ಕಿತ್ತು, ತಿನ್ನತೊಡಗಿದ.

ಅದೇ ಸಮಯಕ್ಕೆ ಶಂಖನು ಆಶ್ರಮಕ್ಕೆ ಹಿಂತಿರುಗಿ ಬಂದ. ತಮ್ಮನು ಹಣ್ಣುಗಳನ್ನು ತಿನ್ನುತ್ತಿರುವುದನ್ನು ನೋಡಿ, ಕೇಳಿದ.

"ತಮ್ಮ, ಈ ಹಣ್ಣುಗಳನ್ನು ಎಲ್ಲಿಂದ ಪಡೆದೆ ?"

"ಅಣ್ಣ, ನಿನ್ನ ಆಶ್ರಮದಲ್ಲಿನ ವೃಕ್ಷಗಳಿಂದ ಇವುಗಳನ್ನು ಕಿತ್ತು ಸೇವಿಸುತ್ತಿದ್ದೇನೆ." ಎಂದು ತಮ್ಮ ಹೇಳಿದ.

ಇದನ್ನು ಆಲಿಸಿದ ಕೂಡಲೇ ಅಣ್ಣ ಶಂಖನು ಕೋಪಗೊಂಡ. ತಮ್ಮನನ್ನು ನೋಡಿ, "ನನ್ನ ಆಶ್ರಮಕ್ಕೆ ಬಂದು, ನನ್ನನ್ನು ಕೇಳದೆ, ಹಣ್ಣುಗಳನ್ನು

ಕಿತ್ತು ತಿನ್ನುವುದು ಶೋಭಿಸುವುದಿಲ್ಲ. ನೀನು ಹೀಗೆ ಮಾಡಿರುವುದು ಕಳ್ಳತನ. ಇದು ಅಧರ್ಮಾಚರಣೆ. ಆದುದರಿಂದ ನೀನು ದಂಡಾರ್ಹನು. ನಾವಿರುವ ಈ ಪ್ರದೇಶದ ರಾಜನಾದ ಸುದ್ಯುಮ್ನನ ಬಳಿಗೆ ಹೋಗಿ 'ರಾಜನ್ ! ಕೇಳದೆಯೇ ನನ್ನಣ್ಣನ ಆಶ್ರಮದ ವೃಕ್ಷಗಳಿಂದ ಹಣ್ಣುಗಳನ್ನು ಕಿತ್ತು ತಿಂದಿದ್ದೇನೆ. ನ್ಯಾಯವಾಗಿ ಇದು ಕಳ್ಳತನ. ಈ ಅಪರಾಧಕ್ಕೆ ಏನು ಶಿಕ್ಷೆ ಇದೆಯೋ ಅದನ್ನು ನೀಡಿ, ಅಧರ್ಮಾಚರಣೆಯ ಪಾಪದಿಂದ ನನ್ನನ್ನು ದೂರ ಮಾಡು !' ಎಂದು ಹೇಳು." ಎಂದು ಆಜ್ಞಾಪಿಸಿದ.

ಅಣ್ಣನ ಆಜ್ಞೆಯನ್ನು ಪರಿಪಾಲಿಸುವವನೇನೆ ಲಿಖಿತ.

ಅದರಂತೆ ಅವನು ಸಂತೋಷದಿಂದ ರಾಜಾ ಸುಧ್ಯುಮ್ನನ ಬಳಿಗೆ ಹೋಗಿ, ತಾನು ಬಂದ ಕಾರಣವನ್ನು ತಿಳಿಸುತ್ತಾ,

"ರಾಜಶ್ರೇಷ್ಠ ! ನಾನು ನಮ್ಮಣ್ಣನ ತೋಟದಲ್ಲಿ ಅವನ ಅನುಜ್ಞೆ ಇಲ್ಲದೆಯೆ ಹಣ್ಣುಗಳನ್ನು ಕಿತ್ತು ತಿಂದೆ. ಇದು ನಾನು ಮಾಡಿದ ಕಳ್ಳತನ, ಇದು ಅಪರಾಧ ! ಆದುದರಿಂದ ಹೇ ರಾಜನ್, ನನ್ನ ಈ ಅಪರಾಧಕ್ಕೆ ತಕ್ಕ ದಂಡನೆಯನ್ನು ನೀಡು ! ನಾನು ಮಾಡಿದ ಅಪರಾಧಕ್ಕೆ ನನಗೆ ದುಃಖವಾಗಿದೆ. ಅದರಿಂದ ಆದಷ್ಟು ಶೀಘ್ರ ನನಗೆ ಶಿಕ್ಷೆಯನ್ನು ವಿಧಿಸು !"

ಎಂದು ಕೇಳಿಕೊಂಡನು.

ರಾಜನು ಈ ಮಾತುಗಳನ್ನು ಆಲಿಸಿ, ಆಶ್ಚರ್ಯಗೊಂಡನು. ಅಪರಾಧಿಯೇ ಸ್ವತಃ ಬಂದು ತಪ್ಪೊಪ್ಪಿಕೊಂಡು, ಶಿಕ್ಷೆ ನೀಡೆಂದು ತಿಳಿಸುವುದು, ಅದರಲ್ಲೂ ಅಣ್ಣ, ತಮ್ಮಂದಿರ ನಡುವೆ ಇಂತಹವು ಸಾಮಾನ್ಯವಾಗಿರುವಾಗ, ನ್ಯಾಯದ ದೃಷ್ಟಿಯನ್ನು ಇದಕ್ಕೆ ಅನ್ವಯಿಸಿದುದಕ್ಕಾಗಿ ಲಿಖಿತನನ್ನು ಮನಸ್ಸಿನಲ್ಲಿಯೇ ಅಭಿನಂದಿಸಿದ.

"ಮಹಾತ್ಮಾ ! ಶಿಕ್ಷೆಯನ್ನು ನೀಡಲೇಬೇಕೆಂದು ಒತ್ತಾಯಿಸಿದರೆ ರಾಜನ ನಿಯಮದ ಪ್ರಕಾರದಂತೆ ನಾನೂ ನಡೆದುಕೊಳ್ಳಬೇಕಾಗುತ್ತದೆ. ನೀನು ಪವಿತ್ರನು, ವ್ರತಾನುಷ್ಠಾನ ಮಾಡುವವನು, ತಪಸ್ವಿ, ವಿದ್ವಾಂಸನು. ನೀನು ಮಾಡಿರುವುದು ಅಪರಾಧವೇ ಅಲ್ಲ. ಇದು ನಿನ್ನ ಪ್ರಥಮ ಅಪರಾಧವೆಂದು ಪರಿಗಣಿಸಿ, ನಿನ್ನದು ಅಪರಾಧವೇ ಅಲ್ಲ ಎಂದು ಭಾವಿಸಿ, ನನಗಿರುವ ನ್ಯಾಯಾಧೀಶನ ಮಿತಿಯಲ್ಲಿ ನಿನ್ನನ್ನು ಕ್ಷಮಿಸಿದ್ದೇನೆ."

ಎಂದು ರಾಜನು ತೀರ್ಪು ನೀಡಿದನು.

ಆದರೆ ಲಿಖಿತನು ಈ ಕ್ಷಮಾದಾನವನ್ನು ಒಪ್ಪಲಿಲ್ಲ. ತನಗೆ ಶಿಕ್ಷೆಯನ್ನು ವಿಧಿಸಲೇಬೇಕೆಂದು ಆಗ್ರಹ ಪಡಿಸಿದ. ಅದಕ್ಕಾಗಿ ಒತ್ತಾಯಿಸಿದ.

ರಾಜನಿಗೆ ಶಿಕ್ಷೆ ನೀಡದೆ ಬೇರೆ ದಾರಿಯೇ ಕಾಣಲಿಲ್ಲ.

ಆದರಿಂದ ಅವನು ತನ್ನ ಮಂತ್ರಿಗಳೊಂದಿಗೆ ಇದರ ಬಗ್ಗೆ ಸಮಾಲೋಚನೆ ನಡೆಸಿದನು. ಕಡೆಗೆ, ಲಿಖಿತನು ಅಪರಾಧ ಮಾಡಿದ್ದು ಅವನ ಕೈಗಳಿಂದ. ಆದುದರಿಂದ ಆ ಕೈಗಳಿಗೆ ಶಿಕ್ಷೆ ನೀಡಬೇಕೆಂದು ತೀರ್ಮಾನಿಸಿ, ಅವನ್ನು ಕಲ್ಲಿನಿಂದ ಜಜ್ಜಿ ಹಾಕಬೇಕೆಂದು ತೀರ್ಮಾನಿಸಲಾಯಿತು. ಅದರಂತೆ ಆ ಶಿಕ್ಷೆಯನ್ನು ಜಾರಿ ಮಾಡಲಾಯಿತು.

ಶಿಕ್ಷೆಯನ್ನು ಸ್ವೀಕರಿಸಿದ ಲಿಖಿತನು ತಾನು ಶುದ್ಧನಾದೆನೆಂಬ ಸಂತೋಷ ದಿಂದ, ತನ್ನ ಅಣ್ಣನ ಬಳಿಗೆ ಬಂದನು. ತನ್ನ ಕೈಗಳು ಜಜ್ಜಿಹೋದ ನೋವೂ ಅವನಲ್ಲಿರಲಿಲ್ಲ. ಬದಲಾಗಿ ಕರ್ತವ್ಯ ಪಾಲನೆ ಮಾಡಿದ ಆತ್ಮಸಂತೋಷವು ಅವನಲ್ಲಿತ್ತು. ಅದರಂತೆ ಅಣ್ಣನನ್ನು ಕಂಡು, "ಅಣ್ಣಾ! ಶಿಕ್ಷೆಯನ್ನು ಸ್ವೀಕರಿಸಿ ಬಂದಿದ್ದೇನೆ. ನನ್ನನ್ನು ಕ್ಷಮಿಸು!" ಎಂದ.

ನಿಷ್ಪ್ರಯೋಜಕವಾಗಿರುವ ಅವನ ಜಜ್ಜಿದ ಕೈಗಳನ್ನು ನೋಡಿ ಶಂಖನು, "ನಿನ್ನ ಮೇಲೆ ನನಗೆ ಕೋಪವಿಲ್ಲ. ನೀನು ಧರ್ಮದ ತತ್ತ್ವವನ್ನು ಚನ್ನಾಗಿ ತಿಳಿದಿರುವವನು. ಪ್ರಪಂಚದಲ್ಲಿ ನಮ್ಮ ಕುಲವು ಅತ್ಯಂತ ನಿರ್ಮಲವೂ, ನಿಷ್ಕಳಂಕವೂ ಆಗಿದೆ ಎಂಬುದು ಇದರಿಂದ ವಿಶದವಾಗುತ್ತದೆ. ನೀನು ಧರ್ಮದ ಉಲ್ಲಂಘನೆ ಮಾಡಿದ್ದೆ; ಅದರ ಶಿಕ್ಷೆಪಡೆದೆ. 'ಧರ್ಮಸ್ತು ತೇ ವ್ಯತಿಕ್ರಾಂತಸ್ತ ತಸ್ತೇ ನಿಷ್ಕೃತಿಃ ಕೃತಾ' ಎಂಬಂತಾಯಿತು. ನೀನು ಬಹುದಾ ನದೀ ದಡವನ್ನು ಸೇರಿ, ವಿಧಿಪೂರ್ವಕವಾಗಿ ದೇವತೆಗಳು-ಋಷಿಗಳು, ಪಿತೃಗಳಿಗೆ ತರ್ಪಣವನ್ನು ನೀಡು. ಮುಂದೆಂದೂ ಅಧರ್ಮದ ಕಡೆ ಗಮನ ಹರಿಸದಿರು-'ಮಾ ಚಧರ್ಮೇ ಮನಃ ಕೃಥಾಃ."

ತನ್ನಣ್ಣನ ಧರ್ಮಮಯ, ಕರ್ತವ್ಯಪ್ರದ ಮಾತುಗಳನ್ನು ಆಲಿಸಿದ ಲಿಖಿತನು ಬಹುಧಾ ನದೀ ತೀರವನ್ನು ತಲುಪಿ, ಶ್ರದ್ಧಾಭಕ್ತಿಗಳಿಂದ ಪಿತೃ ತರ್ಪಣವನ್ನು ನೀಡಿದ ಕೂಡಲೇ ಜಜ್ಜಿಹೋಗಿ, ನಿಸ್ಸತ್ತ್ವಗೊಂಡಿದ್ದ ಅವನ ಕೈಗಳು ಮತ್ತೆ ಮೊದಲಿನಂತಾದುವು.

ಇದನ್ನು ಕಂಡು ಲಿಖಿತನಿಗೆ ಮಹದಾಶ್ಚರ್ಯವಾಯಿತು. ಅಂತೆಯೇ ತರ್ಪಣಾದಿ ಪಿತೃಕಾರ್ಯಗಳನ್ನು ನೆರವೇರಿಸಿ, ಬೇಗನೆ ತನ್ನಣ್ಣನ ಬಳಿಗೆ ಬಂದು, ವಿವರಗಳನ್ನೆಲ್ಲ ತಿಳಿಸಿ, ಮೊದಲಿನಂತೆ ಜೀವ ತುಂಬಿದ ತನ್ನ ಕೈಗಳನ್ನು ತೋರಿಸಿದ.

ಅದನ್ನು ಕಂಡು ಶಂಖನು, "ಪ್ರಿಯ ತಮ್ಮ ! ನೀನು ಪುಣ್ಯವಂತನು. ನಿನ್ನ ಕೈಗಳು ಮೊದಲಿನಂತಾಗಲು ನನ್ನ ತಪಸ್ಸನ್ನು ನಿನಗೆ ಧಾರೆ ಯೆರೆದಿದ್ದೇನೆ." ಎಂದು ಹೇಳಿದ.

"ಭಗವನ್ ! ನಿನ್ನ ತಪಸ್ಸಿನ ಫಲದಲ್ಲಿ ಇಷ್ಟೊಂದು ಶಕ್ತಿ ಇರುವಾಗ, ಮುಂಚೆಯೇ ನನ್ನನ್ನೇಕೆ ಶುದ್ಧಿ ಮಾಡಲಿಲ್ಲ ? ರಾಜನ ಬಳಿಗೆ ಕಳುಹಿಸಿ, ಶಿಕ್ಷೆ ಕೊಡಿಸುವ ಆಗತ್ಯವಾದರೂ ಏನಿತ್ತು ?" ಎಂದು ಲಿಖಿತನು ಕೇಳಿದ.

ಆಲಿಸಿ ನಸುನಗುತ್ತಾ ಶಂಖನು, "ತಮ್ಮ ! ನೀನು ಹೇಳುವುದರಲ್ಲೂ ಸತ್ಯವಿದೆ. ನನ್ನ ತಪಸ್ಸಿನ ಫಲದಿಂದ ಮೊದಲೇ ಹಾಗೆ ಮಾಡಿದ್ದಾದರೆ, ಧರ್ಮ ಶಾಸ್ತ್ರದ ಮರ್ಯಾದೆ ಎಲ್ಲಿ ಉಳಿಯುತ್ತಿತ್ತು ? ನ್ಯಾಯ ನೀಡುವ ರಾಜನ ಸ್ಥಾನವೇನಾಗುತ್ತಿತ್ತು ? ಎಲ್ಲರಿಗೂ, ಎಲ್ಲದಕ್ಕೂ ಅದರದೇ ಆದ ಮರ್ಯಾದೆ ಇದೆ. ಅವರವರು ಆಯಾಯಾ ಮರ್ಯಾದೆಯ ಮಿತಿಯಲ್ಲಿದ್ದು, ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸಬೇಕು." ಎಂದನು.

ಧರ್ಮವು ಎಷ್ಟು ಪ್ರಭಾವಯುತವಾದುದು ಎಂಬುದನ್ನು ಈ ಘಟನೆ ತೋರಿಸುತ್ತದೆ. ಕರ್ತವ್ಯ ಪರಾಯಣತೆಯ ಮಹತ್ವವನ್ನು ಇದು ತೋರಿಸುತ್ತದೆ. ಭಾರತೀಯ ಇತಿಹಾಸದಲ್ಲಿ ಇಂತಹ ಉದಾಹರಣೆಗಳು ಸಾವಿರಾರು ಇವೆ. ತಪಸ್ಸಿನ ಮಹಿಮೆಯನ್ನು ಇವು ತಿಳಿಸುತ್ತವೆ. ರಾವಣನಿಗೆ ತಲೆಗಳು ಮತ್ತೆ ಮತ್ತೆ ಹುಟ್ಟುತ್ತಿದ್ದುದು, ರಾಮಾಯಣದ ಯುದ್ಧದಲ್ಲಿ ಸತ್ತ ಕಪಿಗಳು ಜೀವಂತಗೊಳ್ಳುತ್ತಿದ್ದುದು, ಸತ್ಯವಾನನನ್ನು ಸಾವಿತ್ರಿಯು ಬದುಕಿಸಿಕೊಂಡಿದುದು – ಇಂತಹ ಘಟನೆಗಳು ಧರ್ಮದ, ತಪಸ್ಸಿನ ಮಹಿಮೆಯನ್ನು ಪ್ರಕಾಶ ಪಡಿಸುತ್ತವೆ.

ಧರ್ಮ, ಜಪ, ತಪ, ಸಾಧನೆ – ಇವುಗಳಲ್ಲಿ ದಿವ್ಯಶಕ್ತಿಗಳಿವೆ. ಇವು ಮಾನವನನ್ನು ಧರ್ಮದ ದಾರಿಯಲ್ಲಿ ಹೋಗುವಂತೆ ಮಾಡುತ್ತವೆ.

ಈ ಸಹೋದರರ ಧರ್ಮಾಚರಣೆಯ ವಿವರಗಳ ಸಂಗ್ರಹವೇ ಇವರು

ರಚಿಸಿದ ಸ್ಮೃತಿಗಳು. ಬೇರೆ ಬೇರೆಯಾಗಿಯೇ ಇವರು ಸ್ಮೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ 'ಲಘು ಶಂಖಸ್ಮೃತಿ', 'ಶಂಖಸ್ಮೃತಿ', 'ಲಿಖಿತಸ್ಮೃತಿ' ಹಾಗೂ 'ಶಂಖ-ಲಿಖಿತ ಸ್ಮೃತಿ' - ಮುಖ್ಯವಾದುವು.

ಇವರಿಬ್ಬರೂ ಸೇರಿ ರಚಿಸಿದ ಧರ್ಮಶಾಸ್ತ್ರವಿದೆಯೆಂದು ಹೇಳಲಾಗುತ್ತದೆ. ಇದರ ಉಲ್ಲೇಖ ಅನೇಕ ನಿಬಂಧ ಗ್ರಂಥಗಳಲ್ಲಿ ಕಂಡು ಬರುತ್ತವೆ. ಕಾಲ ಪ್ರವಾಹದಲ್ಲಿ ಇದು ಕಣ್ಮರೆಯಾಗಿರಬಹುದು. ಆಚಾರ್ಯ ಲಕ್ಷ್ಮೀಧರನು ತನ್ನ 'ಕೃತ್ಯಕಲ್ಪತರು' ಎನ್ನುವ ಗ್ರಂಥದಲ್ಲಿ ವಾದವಿವಾದ ಹಾಗೂ ವ್ಯವಹಾರ ಪ್ರಕರಣಗಳಲ್ಲಿ ಇದರ ಉಲ್ಲೇಖವನ್ನು ಮಾಡಿರುವುದೇ ಅಲ್ಲದೆ ಕಾಣೆಯಾದ ಈ ಕೃತಿಯ ಬಗ್ಗೆ ಒಂದು ಸಂಸ್ಕೃತ ಭಾಷ್ಯವನ್ನು ಬರೆದಿರುವುದಾಗಿಯೂ ತಿಳಿದು ಬರುತ್ತದೆ.

## 1. ಲಘು ಶಂಖಸ್ಮೃತಿ

ಇದು ಶಂಖನಿಂದ ಬರೆಯಲ್ಪಟ್ಟ ಸ್ಮೃತಿಯಾಗಿದೆ. ಇದು ನೋಡುವುದಕ್ಕೆ ಆಕಾರದಲ್ಲಿ ಚಿಕ್ಕದಾಗಿರುವುದರಿಂದ 'ಲಘು ಶಂಖಸ್ಮೃತಿ' ಎಂಬ ಹೆಸರು ಪಡೆಯಿತು. ಇದು ದೊರೆತಿದ್ದು, ಇದರಲ್ಲಿ 71 ಶ್ಲೋಕಗಳಿವೆ.

ಇದರ ಪ್ರಾರಂಭದಲ್ಲಿ ಇಷ್ಟಾರ್ಥ ಸಿದ್ಧಿಗಾಗಿ ದೇವತಾ ಪ್ರಾರ್ಥನೆ ಇದೆ. ಇಷ್ಟ (ಯಜ್ಞ-ಯಾಗಾದಿ ಸತ್ಕರ್ಮಗಳು) ಹಾಗೂ ಪೂರ್ತ (ದೇವ ಮಂದಿರ, ಅರವಟ್ಟಿಗೆ, ಬಾವಿ, ಧರ್ಮಶಾಲೆ, ವೃಕ್ಷಾರೋಪಣ) ಇತ್ಯಾದಿ ಪರೋಪ ಕಾರ್ಯಗಳನ್ನು ಮಾಡುವುದರಿಂದ ಸತ್ಫಲಗಳು ಉಂಟಾಗುತ್ತವೆ.

ಇಷ್ಟಕರ್ಮಗಳಿಂದ ಸ್ವರ್ಗಪ್ರಾಪ್ತಿ ಹಾಗೂ ಪೂರ್ತಿ ಕರ್ಮಗಳಿಂದ ಮೋಕ್ಷಪ್ರಾಪ್ತಿ ಉಂಟಾಗುವುದು -

ಇಷ್ಟೇನ ಲಭತೇ ಸ್ವರ್ಗಂ ಪೂರ್ತೇನ ವಿಂದತಿ || 1 ||

ಅಗ್ನಿಹೋತ್ರ, ತಪಸ್ಸು, ಸತ್ಯ, ವೇದಾಧ್ಯಯನ, ಆತಿಥ್ಯ ಹಾಗೂ ವೈಶ್ವೇದೇವನನ್ನು 'ಇಷ್ಟ' ಎಂದು ಕರೆಯಲಾಗುವುದು -

ಅಗ್ನಿಹೋತ್ರಂ ತಪಃ ಸತ್ಯಾಂ ವೇದಾನಾಂ ಚೈವ ಧಾರಣಂ |
ಆತಿಥ್ಯಂ ವೈಶ್ವದೇವಂ ಚ ಇಷ್ಟಮಿತ್ಯಭಿಧೀಯತೇ || 5 ||

ಈ ಇಷ್ಟಪೂರ್ತದ ವಿಧಿಯು ಬ್ರಾಹ್ಮಣನಿಗೆ ಬಹಳ ಉತ್ತಮ ಧರ್ಮ ಸಾಧನವಾಗಿದೆ -

ಇಷ್ಟಾ ಪೂರ್ತೇ ದ್ವಿಜಾತೀನಾಂ ಸಾಮಾನ್ಯೌ ಧರ್ಮಸಾಧನೆ || 6 ||

ಜಲಾಂಜಲಿಯನ್ನು ಎಲ್ಲಿ ನೀಡುವುದು ಎಂಬುದರ ಬಗ್ಗೆ ಶಂಖನು ವಿವರಗಳನ್ನು ನೀಡುತ್ತಾ. ದೇವತೆಗಳು ಹಾಗೂ ಪಿತೃಗಳಿಗೆ ನೀರಿನಲ್ಲಿಯೇ ಜಲಾಂಜಲಿಯನ್ನು ಕೊಡಬೇಕು. ಮೃತಪಟ್ಟ ವ್ಯಕ್ತಿಗೆ ನಿಮಿತ್ತವಾದ ಸ್ಥಳದಲ್ಲಿಯೇ ಅದನ್ನು ನೀಡಬೇಕು – ಎಂದು ತಿಳಿಸುತ್ತಾನೆ.

ದೇವತಾನಾಂ ಪಿತೃಣಾಂ ಚ ಜಲೇ ದದ್ಯಾಜ್ಜಲಾಂಜಲಿಂ |
ಅಸಂಸ್ಕೃತಮೃತಾನಾಂ ಚ ಸ್ಥಲೇ ದದ್ಯಾಜ್ಜಲಾಂಜಲಿಂ || 8 ||

ಏಕಾದಶಾಹ ಹಾಗೂ ಸಪಿಂಡೀಕರಣ ಶ್ರಾದ್ಧದ ಬಗ್ಗೆ ನಿರ್ದೇಶವನ್ನು ಆತ ನೀಡಿದ್ದಾನೆ. ನಂತರದಲ್ಲಿ ಭಕ್ಷ್ಯಾಭಕ್ಷ್ಯ ಹಾಗೂ ಸ್ಪೃಶ್ಯಾ – ಸ್ಪೃಶ್ಯ ಪ್ರಾಯಶ್ಚಿತ್ತ ವಿವೇಕದ ವರ್ಣನೆಯನ್ನು ನೀಡಲಾಗಿದೆ. ಇವಕ್ಕಾಗಿ ಮಾಡಬೇಕಾಗಿರುವ ಸಂತಾಪನ; ಚಾಂದ್ರಾಯಣ ಇತ್ಯಾದಿ ವ್ರತಗಳನ್ನು ಮಾಡುವ ರೀತಿಯನ್ನು ವಿವರಿಸಲಾಗಿದೆ. ಇದರೊಂದಿಗೆ ಗಂಗೆಯಲ್ಲಿ ಅಸ್ಥಿಗಳನ್ನು ವಿಸರ್ಜಿಸುವುದರ ಮಹಿಮೆ, ಪಿತೃಕರ್ಮ ಹಾಗೂ ಗಯಾಶ್ರಾದ್ಧದ ಮಹಿಮೆ ಹಾಗೂ ಪಾರ್ವಣ-ಏಕೋದ್ದಿಷ್ಟ-ಶ್ರಾದ್ಧದ ನಿಯಮಗಳ ವರ್ಣನೆಯನ್ನು ನೀಡಲಾಗಿದೆ.

ಎಲ್ಲ ಪಾಪಗಳ ಉಪಶಮನಕ್ಕಾಗಿ ಆಚಾರ್ಯ ಶಂಖನು ಕೆಲವೊಂದು ಪರಿಹಾರಗಳನ್ನು ಸೂಚಿಸಿದ್ದಾನೆ. ಪಾಪಿಯ ಆತ್ಮವು ಅವನನ್ನು ಶಪಿಸುತ್ತದೆಯೊ, ಮಾಡಿದಂತಹ ಪಾಪ ಕಾರ್ಯವು ಸರಿಯಾದುದಲ್ಲ, ಅಧರ್ಮದ ಆಚರಣೆ, ಪಾಪದ ಆಚರಣೆ ಎಂದು ತಿಳಿಸಿದಾಗ ಎಳ್ಳಿನ ಹೋಮ ಮಾಡಬೇಕು. ಗಾಯಿತ್ರಿ ಜಪದ ಅನುವರ್ತನೆ (ಪದೇ ಪದೇ ಮಾಡುವುದು) ಯನ್ನು ಮಾಡಬೇಕು. ಇದರ ಪರಿಣಾಮವಾಗಿ ಅಂತರ್ ಹೃದಯದಲ್ಲಿನ ಆತ್ಮವು ತೃಪ್ತಿಗೊಂಡು ಆ ವ್ಯಕ್ತಿಯು ಪೂರ್ತಿಯಾಗಿ ಶುದ್ಧನಾಗುತ್ತಾನೆ –

ಯತ್ರ ಯತ್ರ ಸಂಕೀರ್ಣಂ ಪಶ್ಯೆತ್ಯಾತ್ಮನ್ಯಸಂಶಯಂ |
ತತ್ರ ತತ್ರ ತಿಲೈರ್ಹೋಮೋ ಗಾಯತ್ರ್ಯಾವರ್ತನಂ ತಥಾ || 71 ||

## 2. ಲಿಖಿತ ಸ್ಮೃತಿ

ಮೊದಲನೇ ಸ್ಮೃತಿಯ ತರಹ ಈ ಸ್ಮೃತಿಯೂ ಇದೆ. ಶ್ಲೋಕಗಳೂ ಕೂಡ ಅದರಲ್ಲಿರುವಷ್ಟೇ ಇವೆಯಾದರೂ ಸ್ವಲ್ಪ ಹೆಚ್ಚು. ಇಲ್ಲಿ 93 ಶ್ಲೋಕಗಳಿವೆ. ಮೊದಲಿನ ಸ್ಮೃತಿಯಂತೆ ಇದರಲ್ಲಿಯೂ ಕೂಡ ಪ್ರಾರಂಭದಲ್ಲಿ ಇಷ್ಟಾ

ಪೂರ್ತ ಕರ್ಮ ನಿರೂಪಣೆ, ವೃಷೋತ್ಸರ್ಗದ ಫಲ, ಗಯೆಯಲ್ಲಿ ಪಿಂಡ ಪ್ರದಾನದ ಮಹಿಮೆ, ಷೋಡಶ ಶ್ರಾದ್ಧಗಳು ಹಾಗೂ ಉದಕುಂಭದಾನಗಳ ವರ್ಣನೆಗಳು ಇವೆ. ಬೇರೆ ಬೇರೆ ಶ್ರಾದ್ಧಗಳಲ್ಲಿ ಬರುವ ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ಧುರಿ, ಲೋಚನ, ಪುರೂರವ ಹಾಗೂ ಆರ್ದವ-ಎನ್ನುವ 10 ವಿಶ್ವೇದೇವರುಗಳ ವಿವರಗಳು ಇದರಲ್ಲಿವೆ. ಈ ವಿಶ್ವೇದೇವರುಗಳ ಆವಾಹನಾ ಮಂತ್ರ ಈ ರೀತಿ ಇದೆ –

ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ |
ಯೇ ಯತ್ರ ವಿಹಿತಾಃ ಶ್ರಾದ್ಧೇ ಸಾವಧಾನಾ ಭವಂತು ತೇ || 50 ||

ಇಷ್ಟ-ಶ್ರಾದ್ಧದಲ್ಲಿ ಕ್ರತು ಹಾಗೂ ದಕ್ಷ ಮತ್ತು ವೈದಿಕ ಶ್ರಾದ್ಧದಲ್ಲಿ ವಸು ಮತ್ತು ಸಭ್ಯ (ಸತ್ಯ); ಅಗ್ನಿ ಕಾರ್ಯದಲ್ಲಿ ಕಾಲ ಮತ್ತು ಕಾಮ, ಕಾಮ್ಯದಲ್ಲಿ ಧುರಿ ಹಾಗೂ ಲೋಚನ; ಪಾರ್ವಣ ಶ್ರಾದ್ಧದಲ್ಲಿ ಪುರೂರವಾ ಹಾಗೂ ಆರ್ದವ ಎನ್ನುವ ಹೆಸರುಳ್ಳ ವಿಶ್ವೇದೇವರುಗಳನ್ನು ಆವಾಹಿಸಲಾಗುವುದು.

ಇಷ್ಟಿಶ್ರಾದ್ಧೇ ಕ್ರತುರ್ದಕ್ಷೋ ವಸುಃ ಸಭ್ಯಶ್ಚ ವೈದಿಕೆ |
ಕಾಲಃ ಕಾಮೋऽಗ್ನಿ ಕಾರ್ಯೇಷು ಕಾಮ್ಯೇಷು ಧುರಿಲೋಚನಾ||51||
ಪುರೂರವಾದ್ರ್ರವಶ್ಚೈವ ಪಾರ್ವಣೇಷು ನಿಯೋಜಯೇತ್ ||52||

ಗಂಗೆಯಲ್ಲಿ ಅಸ್ಥಿವಿಸರ್ಜನೆಯ ಮಹಿಮೆಯನ್ನು ತಿಳಿಸುತ್ತಾ ಎದುವರಿ ವಿಗೂ ವ್ಯಕ್ತಿಯ ಅಸ್ಥಿಗಳು ಗಂಗೆಯಲ್ಲಿ ಇರುತ್ತವೆಯೊ, ಅಷ್ಟು ಸಾವಿರ ವರ್ಷಗಳವರೆಗೆ ಆ ವ್ಯಕ್ತಿಯು ಸ್ವರ್ಗಲೋಕದಲ್ಲಿರುತ್ತಾನೆ –

ಯಾವದಸ್ಥಿ ಮನುಷ್ಯಸ್ಯ ಗಂಗಾತೋಯೇಷು ತಿಷ್ಠತಿ |
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ || 7 ||

ಕಡೆಯಲ್ಲಿ ಸ್ಪೃಶ್ಯಾಸ್ಪೃಶ್ಯಗಳ ವಿವೇಕ ಹಾಗೂ ಗೋವಧೆ ಇತ್ಯಾದಿಗಳ ಪಾಪ ಪ್ರಾಯಶ್ಚಿತ್ತಗಳನ್ನು ಸಂಕ್ಷಿಪ್ತ ರೂಪದಲ್ಲಿ ನೀಡಲಾಗಿದೆ.

## 3. ಶಂಖಲಿಖಿತ ಸ್ಮೃತಿ

ಈ ಸ್ಮೃತಿಯು 32 ಶ್ಲೋಕಗಳಲ್ಲಿ ನಿಬದ್ಧವಾಗಿದೆ. ಇದರಲ್ಲಿ ಬಲ ವೈಶ್ವೇದೇವ ಹಾಗೂ ಅತಿಥಿಯ ಮಹಿಮೆ, ಬೇರೆಯವರ ಊಟ (ಅನ್ನ)ವನ್ನು ಪಡೆಯುವುದರ ನಿಷೇಧ ಹಾಗೂ ರಾಜಧರ್ಮಗಳನ್ನು ತಿಳಿಸುತ್ತಾ ರಾಜನ ಕರ್ತವ್ಯಗಳನ್ನು ನಿರ್ದೇಶಿಸಲಾಗಿದೆ.

ಊಟಕ್ಕೆ ಮುಂಚೆ ಬಲಿ ವೈಶ್ವೇದೇವ ಕರ್ಮವನ್ನು ಮಾಡದಿರುವವನು ಬ್ರಾಹ್ಮಣರಾದರೂ ಕೂಡ ವೃಷಲಕ್ಕೆ ಸಮಾನನಾಗುತ್ತಾನೆ. ವೈಶ್ವೇದೇವನನ್ನು ಪ್ರಾರ್ಥಿಸದೆ ಬ್ರಾಹ್ಮಣರು ಊಟವನ್ನು ಮಾಡಿದರೆ ಅಂತಹವರು ಕಾಗೆಗಳಾಗಿ ಜನಿಸುವರು.

ವೈಶ್ವೇದೇವೇನ ಯೇ ಹೀನಾ ಆತಿಥ್ಯೇನ ವಿವರ್ಜಿತಾಃ |
ಸರ್ವೇ ತೇ ವೃಷಲಾ ಜ್ಞೇಯಾಃ ಪ್ರಾಪ್ತವೇದಾ ಅಪಿ ದ್ವಿಜಾಃ || 2 ||
ಅಕೃತೇ ವೈಶ್ವದೇವ ತು ಯೇ ದಿ ಭುಜಂತಿ ದ್ವಿಜಾತಯಃ ।
ವೃಥಾ ತೇ ತೇನ ಪಾಕೇನ ಕಾಕಯೋಗಿ ವ್ರಜಂತಿ ವೈ || 3 ||

ವೈಶ್ವೇದೇವನ ಸಮಯದಲ್ಲಿ ಬೇಕಾದ ವ್ಯಕ್ತಿ, ಮೂರ್ಖ, ಪಂಡಿತ ಅಥವಾ ಶತ್ರು – ಯಾರೇ ಬಂದರೂ ಅವರು ಅತಿಥಿ ರೂಪಿಗಳಾಗಿರುವರು. ಇಂತಹವರ ಉಪಚಾರ ಸ್ವರ್ಗ ಸೋಪಾನಕ್ಕೆ ಸಮನಾದದು. ಆ ಸಮಯದಲ್ಲಿ ಬಂದಿರುವವನು ಉತ್ತಮನೆ, ದುಷ್ಟನೆ ಎಂಬುದನ್ನು ನೋಡಬಾರದು. ಶ್ರದ್ಧಾ ಪೂರ್ವಕವಾಗಿ ಆತನಿಗೆ ಊಟವನ್ನು ಬಡಿಸಬೇಕು. ಮಳೆಯು ಬೆಳೆಯುವುದು ಹುಲ್ಲೊ, ಫಸಲೊ ಎಂಬುದನ್ನೂ ಗಮನಿಸದೆ ಹೇಗೆ ಸುರಿಯುತ್ತದೆಯೊ ಅದೇ ರೀತಿ ಕರ್ತನೂ ಇಂತಹ ಸಂದರ್ಭದಲ್ಲಿ ಅನುಸರಿಸಬೇಕು –

ಇಷ್ಟೋ ವಾ ಯದಿ ವಾ ಮೂರ್ಖೋ ದ್ವೇಷಃ ಪಂಡಿತ ಏವ ವಾ |
ಪ್ರಾಪ್ತಸ್ತು ವೈಶ್ವದೇವಾಂತೇ ಸೋಽತಿಥಿಃ ಸ್ವರ್ಗ ಸಂಕ್ರಮಃ || 6 ||
ದಾತಾರಃ ಕಿಂ ವಿಚಾರೇಣ ಗುಣವಾನ್ ನಿರ್ಗುಣೋ ಭವೇತ್ ।
ಸಮಂ ವರ್ಷತಿ ಪರ್ಜನ್ಯಃ ಸಸ್ಯಾದಪಿ ತೃಣಾದಪಿ || 7 ||

ಅನ್ನದಿಂದಲೇ ತೇಜಸ್ಸು, ಮನಸ್ಸು, ಪ್ರಾಣ, ಕಣ್ಣು, ಕಿವಿ, ಯಶ, ಬಲ, ಧೃತಿ, ಶ್ರುತಿ ಹಾಗೂ ಶುಕ್ರನ ಅನುಗ್ರಹದಿಂದ ಪ್ರಾಪ್ತವಾಗುತ್ತವೆ. ಆದುದರಿಂದ ವಿದ್ವಾಂಸರು ಇತರರ ಅನ್ನವನ್ನು ಸ್ವೀಕರಿಸಬಾರದು – ಎಂದು ಪರಾನ್ನ ಭಕ್ಷಣದ ಬಗ್ಗೆ ಶಂಖ, ಲಿಖಿತರು ತಿಳಿಸುತ್ತಾರೆ. ಇತರರ ಅನ್ನವನ್ನು ಪಡೆಯುವುದು, ಇತರರ ಬಟ್ಟೆಯನ್ನು ಕಸಿಯುವುದು, ಇತರರ ವಾಹನಗಳನ್ನು ಕದಿಯುವುದು, ಪರಸ್ತ್ರೀಯನ್ನು ಅಪಹರಿಸುವುದು, ಇತರರ ಮನೆಯನ್ನು ಅಪಹರಿಸುವುದು–ಇತ್ಯಾದಿಗಳನ್ನು ಇಂದ್ರನೇ ಮಾಡಿದರೂ ಕೂಡ ಅಂತಹವನ ಲಕ್ಷ್ಮಿಹರಣವಾಗುವುದು.

ಅನ್ನಾತ್ ತೇಜೋಃ ಮನಃ ಪ್ರಾಣಾಂಶಚಕ್ಷುಃ ಶ್ರೋತ್ರಂ ಯಶಾಂ ಬಲಂ |
ಧೃತಿ ಶೃತಿ ತಥಾ ಶುಕ್ರಂ ಪರಾನ್ನಂ ವರ್ಜಯೇತ್ ಬುಧಃ || 16 ||
ಪರಾನ್ನಂ ಪರವಸ್ತ್ರಂ ಚ ಪರಯಾನಂ ಪರಸ್ತ್ರಿಯಃ |
ಪರವೇಶ್ಮಾನಿ ವಾಸಶ್ಚ ಶುಕ್ರಸ್ಯಾಪಿ ಶ್ರಿಯಂ ಹರೇತ್ || 17 ||

ರಾಜನ (ಆಡಳಿತಗಾರರ) ಕರ್ತವ್ಯಗಳನ್ನು ನಿರ್ದೇಶಿಸುತ್ತಾ ಹಸುಗಳು, ಭೂಮಿ, ಸ್ತ್ರೀ ಹಾಗೂ ಬ್ರಾಹ್ಮಣರ ಸ್ವಂತಿಕೆಯನ್ನು ರಾಜನು ರಕ್ಷಿಸಬೇಕು; ಇಲ್ಲದಿದ್ದಲ್ಲಿ ಅವನು 'ಬ್ರಹ್ಮಘಾತಿ' ಯಾಗುತ್ತಾನೆ – ಎಂದು ಶಂಖ ಲಿಖಿತರು ತಿಳಿಸುತ್ತಾರೆ –

ಗಾವೋ ಭೂಮಿಃ ಕಲತ್ರಂ ಚ ಬ್ರಹ್ಮಸ್ವಹರಣಂ ತಥಾ |
ಯಸ್ತು ನ ತ್ರಾಯತೇ ರಾಜಾ ತಮಾಹು ರ್ಬ್ರಹ್ಮ ಘಾತಕಂ || 24 ||

ದುರ್ಬಲ, ಅನಾಥ, ಬಾಲಕ, ವೃದ್ಧ, ತಪಸ್ವಿಗಳು ಹಾಗೂ ಅನ್ಯಾಯ ದಿಂದ ಪೀಡಿತರಾದ ವ್ಯಕ್ತಿಗಳು ಹಾಗೂ ಇತರೇ ದೀನದಲಿತರನ್ನು ರಾಜನೇ ರಕ್ಷಿಸಬೇಕು. ರಾಜನೇ ತಂದೆ, ತಾಯಿ, ಎಲ್ಲರನ್ನೂ ರಕ್ಷಿಸುವ ಗುರುವೂ ಆಗಿರುವನು.

ಪಕ್ಷಿಗಳಿಗೆ ಬಲ ನೀಡುವುದು ಆಕಾಶ, ಮೀನಿಗೆ ನೀರು, ದುರ್ಬಲರಿಗೆ ರಾಜನು ಹಾಗೂ ಬಾಲಕರಿಗೆ ಅಳುವೇ ಬಲವಾಗಿರುತ್ತದೆ. ಮೂರ್ಖನಿಗೆ ಮೌನವಾಗಿರುವುದೇ ಬಲ, ಕಳ್ಳನಿಗೆ ಸುಳ್ಳು ಹೇಳುವುದೇ ಬಲ. ಇವೆಲ್ಲವೂ ರಾಜಬಲದ ಮೇಲೆ ಆಧಾರ ಪಟ್ಟಿರುತ್ತದೆ. ಆದರೆ ಇವೆಲ್ಲವೂ ಯಜ್ಞಸ್ವರೂಪ ಬ್ರಾಹ್ಮಣನ ಮುಖಾಂತರ ರಕ್ಷಿಸಲ್ಪಟ್ಟು ಬಲಯುತ ರಾಜಬಲವಾಗುತ್ತದೆ.

## 4. ಶಂಖ ಸ್ಮೃತಿ

ಮಹರ್ಷಿ ಶಂಖನಿಂದ ರಚಿತವಾದ ಒಂದು ಬೃಹತ್ ಸ್ಮೃತಿಯೂ ಇದೆ. ಇದನ್ನು 'ಶಂಖ ಸ್ಮೃತಿ' ಎಂದು ಕರೆಯಲಾಗಿದ್ದು, ಇದರಲ್ಲಿ 18 ಅಧ್ಯಾಯ ಗಳಿವೆ. ಸರಿಸುಮಾರು 350 ಶ್ಲೋಕಗಳಿವೆ. 12 ಮತ್ತು 13 ಅಧ್ಯಾಯಗಳಲ್ಲಿ ಗದ್ಯಾ–ಪದ್ಯ ಮಿಶ್ರಣದ ಚಂಪೂ ಶೈಲಿ ಇದೆ. ಸುಮಾರು 25 ಸೂತ್ರಗಳು ಈ ಶೈಲಿಯಲ್ಲಿವೆ. ಶ್ಲೋಕ ರೂಪದಲ್ಲಿ ಸ್ವಲ್ಪ ಕಡಿಮೆ ಇದೆ.

ಮೊದಲನೆಯ ಅಧ್ಯಾಯದಲ್ಲಿ ನಾಲ್ಕು ವರ್ಣಗಳ ಬೇರೆ ಬೇರೆಯಾದ ಕರ್ತವ್ಯ ಕರ್ಮಗಳ ವಿವರಗಳಿವೆ. ಕ್ಷಮೆ, ಸತ್ಯ, ವಿಶ್ವಾಸ ಹಾಗೂ ಅಂತರ್

ಬಾಹ್ಯ ಶೌಚಗಳು ನಾಲ್ಕೂ ವರ್ಣಗಳಿಗೆ ಪರಮಾವಶ್ಯಕವಾದ ಸಾಮಾನ್ಯ ಧರ್ಮಗಳಾಗಿವೆ. 'ಕ್ಷಮಾ ಸತ್ಯಂ ದಮಃ ಶೌಚಂ ಸರ್ವೇಷಾಮವಿಶೇಷತಃ' (1/5). ಬ್ರಾಹ್ಮಣನಾದವನು ತನ್ನ ಪಠಣ–ಪಾಠನ, ಯಜನ–ಯಾಜನ, ಹಾಗೂ ಷಟ್ಕರ್ಮಗಳನ್ನು ಮಾಡುವುದರೊಂದಿಗೆ ಕ್ಷಮಾಶೀಲನಾಗಿರಬೇಕು. ಹಾಗಿಲ್ಲದೆ ಸುಳ್ಳಾಡುವವನೂ, ಶಮ-ದಮಾದಿ ನಿಯಮಗಳ ಪಾಲನೆಯನ್ನು ಮಾಡದೆ ಇರುವವನೂ, ಶೌಚಾಚಾರ ಹಾಗೂ ಸದಾಚಾರಗಳಿಂದ ದೂರನಾದ ವನೂ ಆಗಿದ್ದಲ್ಲಿ ಷಟ್ಕರ್ಮ ಮಾಡಿದ್ದಾಗ್ಯೂ ಕೂಡ ಅವೆಲ್ಲ ವ್ಯರ್ಥವೇ ಆಗುತ್ತದೆ. ಇದೇ ಮಾತು ಕ್ಷತ್ರಿಯರಿಗೂ, ಮತ್ತಿತರರಿಗೂ ಅನ್ವಯ ವಾಗುತ್ತದೆ.

ಎರಡನೇ ಅಧ್ಯಾಯದಲ್ಲಿ ಗರ್ಭಾದಾನದಿಂದ ಯಜ್ಞೋಪವೀತ ಧಾರಣೆ ಯವರೆವಿಗಿನ ಸಂಸ್ಕಾರಗಳ ಸಂಕ್ಷಿಪ್ತ ಪರಿಚಯವಿದೆ. ಶಿಶುವಿನ ಜನನದ ಮೊದಲಿಗೆ ಗರ್ಭಾದಾನ, ಪುಂಸವನ ಹಾಗೂ ಸೀಮಂತ–ಎನ್ನುವ ಮೂರೂ ಸಂಸ್ಕಾರಗಳನ್ನು ನಡೆಸಬೇಕಾಗಿರುವುದು. ಆರೇಳು ತಿಂಗಳು ಗರ್ಭಿಣಿ ಯಾದಾಗ, ತಾಯಿಗೆ ಸೀಮಂತ ಮಾಡಬೇಕು. ಜನ್ಮವೆತ್ತಿದ ಕೂಡಲೇ 'ಜಾತಕರ್ಮ ಸಂಸ್ಕಾರ', ಜನನ ಶೌಚವಾದ ಮೇಲೆ 'ನಾಮಕರಣ-ಸಂಸ್ಕಾರ' ಗಳನ್ನು ಮಾಡಬೇಕಾಗಿದೆ. ನಾಲ್ಕನೇ ತಿಂಗಳಲ್ಲಿ 'ಸೂರ್ಯದರ್ಶನ', 6ನೇ ತಿಂಗಳಲ್ಲಿ 'ಅನ್ನಪ್ರಾಶನ' ಹಾಗೂ 'ಚೂಡಾಕರ್ಮ'ಗಳನ್ನು ತಮ್ಮ ತಮ್ಮ ದೇಶಾಚಾರದಂತೆ ಸೂಕ್ತ ಸಮಯದಲ್ಲಿ ಮಾಡಬೇಕು. ಆ ನಂತರದಲ್ಲಿ ಬ್ರಾಹ್ಮಣರು ಸೂಕ್ತ ಸಮಯದಲ್ಲಿ ತಮ್ಮ ಬಾಲಕನಿಗೆ 'ಉಪನಯನ ಸಂಸ್ಕಾರ' ವನ್ನು ಮಾಡಬೇಕು. ಗೊತ್ತಾದ ಸಮಯದಲ್ಲಿ ಉಪನಯನವನ್ನು ಮಾಡದೆ ಇದ್ದಾಗ, ಆ ಬಾಲಕನ ವ್ರತಭಂಗ ವಾಗುತ್ತದೆ. ಅಂತಹವನು ಸಾವಿತ್ರೀ ಪತಿತನಾಗಿ, ಎಲ್ಲ ಧರ್ಮಕರ್ಮಗಳಿಂದಲೂ ವಂಚಿತನಾಗುತ್ತಾನೆ. ನಂತರ ಅವನಿಗೆ ಪ್ರಾಯಶ್ಚಿತ್ತವನ್ನು ಮಾಡಬೇಕು.

ಮೂರನೇ ಅಧ್ಯಾಯದಲ್ಲಿ ಬ್ರಹ್ಮಚಾರಿಯ ಧರ್ಮ ಹಾಗೂ ಸದಾ ಚಾರದ ವರ್ಣನೆಯನ್ನು ನೀಡಲಾಗಿದೆ. ಅಂತಹ ವಟು ಅಹಂಕಾರವನ್ನು ತ್ಯಜಿಸಿ, ವಿನಯ ಸಂಪನ್ನನಾಗಿರಬೇಕು. ಗುರುಗಳಿಗೆ ಹಿತವಾದ, ಪ್ರಿಯವಾದ ಕಾರ್ಯಗಳನ್ನು ಮಾಡುತ್ತಿರಬೇಕು. ಅವರಿಗೆ ಪ್ರಿಯವಾದ ಕಾರ್ಯಗಳನ್ನೆ

ಮಾಡುತ್ತಿರಬೇಕು. ಗುರುಗಳಿಗೆ ವಂದಿಸಿ, ಅವರು ನೀಡುವ ಆಜ್ಞೆಗಳನ್ನು ಪಾಲಿಸಬೇಕು. ಬೆಳಗಿನಜಾವ ಗುರುಗಳಿಗಿಂತ ಮುಂಚೆ ಏಳಬೇಕು, ಅಂತೆಯೇ ರಾತ್ರಿಗೆ ಗುರುಗಳು ಮಲಗಿದ ನಂತರ ಮಲಗಬೇಕು. ತಂದೆ, ತಾಯಿ, ಗುರು ಈ ಮೂವರು ಮಾನವನಿಗೆ ಅತ್ಯಂತ ಪೂಜನೀಯರು ಹಾಗೂ ಸದ್ದೈವಿಗಳು. ಇವರು ಮೂವರನ್ನು ಪೂಜಿಸದೆ, ಆದರಿಸದೆ ಇರುವವನು ಪಾಪಿಯಾಗಿ ನರಕ ವನ್ನು ಅನುಭವಿಸುವನು. ಅಂತಹವನ ಕಾರ್ಯಗಳೆಲ್ಲವೂ ನಿಷ್ಫಲವಾಗುವವು-

ಮಾತಾ ಪಿತಾ ಗುರುಶ್ಚೈವ ಪೂಜನೀಯಾಃ ಸದಾ ನೃಣಾಂ |
ಕ್ರಿಯಾಸ್ತಸ್ಯಾಫಲಾಃ ಸರ್ವಾ ಯಸ್ಯೈತೇಽನಾದೃತಾಸ್ತ್ರಯಃ ||3-3||

ನಾಲ್ಕನೆಯ ಅಧ್ಯಾಯದಲ್ಲಿ 'ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯಾ, ಆಸುರ, ಗಾಂಧರ್ವ, ರಾಕ್ಷಸ ಹಾಗೂ ಪೈಶಾಚ' ಈ ಎಂಟು ವಿಧ ವಿವಾಹಗಳ ಬಗ್ಗೆ ಸಂಕ್ಷೇಪ ವಿವರಣೆ ನೀಡಲಾಗಿದೆ. ಗೃಹಸ್ಥಿ (ಮನೆ)ಯ ಎಲ್ಲ ಕಾರ್ಯ ಗಳನ್ನೂ ಅತ್ಯಂತ ಕುಶಲತೆಯಿಂದ ಮಾಡುವವಳೂ, ಪತಿವ್ರತೆಯೂ, ಪತಿಯಲ್ಲೆ ತನ್ನ ಪ್ರಾಣವನ್ನು ಇರಿಸಿರುವವಳೂ, ಸಂತಾನವನ್ನು ನೀಡುವವಳೇ ನಿಜ ಅರ್ಥದ ಪತ್ನಿ ಎಂದು ಕರೆಯಿಸಿಕೊಳ್ಳುವಳು ಎಂದು ತಿಳಿಸಲಾಗಿದೆ -

ಸಾ ಭಾರ್ಯಾ ಯಾ ಗೃಹೇ ದಕ್ಷಾ ಸಾ ಭಾರ್ಯಾ ಯಾ ಪತಿವ್ರತಾ |
ಸಾ ಭಾರ್ಯಾ ಯಾ ಪತಿಪ್ರಾಣಾ ಸಾ ಭಾರ್ಯಾ ಯಾ ಪ್ರಜಾವತೀ ||15||

ಐದನೆಯ ಅಧ್ಯಾಯದಲ್ಲಿ ಗೃಹಸ್ಥಾಶ್ರಮಕ್ಕಾಗಿ, 'ದೇವಯಜ್ಞ, ಭೂತ ಯಜ್ಞ, ಪಿತೃಯಜ್ಞ, ಬ್ರಹ್ಮಯಜ್ಞ ಹಾಗೂ ಅತಿಥಿ ಯಜ್ಞ' ಈ ಪಂಚ ಮಹಾಯಜ್ಞಗಳನ್ನು ಪ್ರತಿನಿತ್ಯ ಅನುಷ್ಠಾನ ಮಾಡುವ ವಿಧಾನವನ್ನು ತಿಳಿಸ ಲಾಗಿದೆ. ಇದರೊಂದಿಗೆ ಗೃಹಸ್ಥಾಶ್ರಮದ ಮಹಿಮೆ ಹಾಗೂ ಅತಿಥಿ ಸೇವೆಯ ಮಹಿಮೆಯನ್ನು ನಿರೂಪಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ವಾನಪ್ರಸ್ಥ ಹಾಗೂ ಸನ್ಯಾಸಾಶ್ರಮಗಳಲ್ಲಿ ಅನುಸರಿಸಬೇಕಾದ ಧಾರ್ಮಿಕ ವಿಷಯಗಳ ನಿರೂಪಣೆ ಹಾಗೂ ಏಳನೇ ಅಧ್ಯಾಯದಲ್ಲಿ ಯೋಗಾಭ್ಯಾಸ ವರ್ಣನೆಯನ್ನು ನೀಡಲಾಗಿದೆ.

ಸನ್ಯಾಸ ಪ್ರಕರಣದಲ್ಲಿ ಯೋಗಾಭ್ಯಾಸದ ಸಾರಭೂತ ವಿವರಗಳ ಸಂಗ್ರಹವನ್ನು ಮಹರ್ಷಿ ಶಂಖನು ತನ್ನ ಈ ಸ್ಮೃತಿಯಲ್ಲಿ ನೀಡಿದ್ದಾನೆ. ಯೋಗ ಸಾಧನವಿಲ್ಲದೆ ಸನ್ಯಾಸಿಯ ಜೀವನ ನಿರರ್ಥಕ. ಅವನಿಗೆ ಯೋಗ

ದಿಂದಲೇ ಮೋಕ್ಷ ಪ್ರಾಪ್ತಿಯಾಗುತ್ತದೆ. ಪ್ರಾಣಾಯಾಮದಿಂದ ಶರೀರದ ಎಲ್ಲ ವ್ಯಾಧಿಗಳೂ, ಕಾಮಕ್ರೋಧಾದಿ ದೋಷಗಳೂ, ಅವನ್ನು ನಿಗ್ರಹಿಸಿಕೊಳ್ಳು ವುದರಿಂದಲೂ ಎಲ್ಲ ಪಾಪಗಳೂ ನಿವಾರಣೆಯಾಗುತ್ತವೆ. ಪ್ರತ್ಯಾಹಾರದ ಅಭ್ಯಾಸದಿಂದ, ಅಸತ್-ಸತ್ಸಂಗದಿಂದ ಪ್ರಾಪ್ತವಾಗುವ ಎಲ್ಲ ಪಾಪಗಳೂ, ದೋಷಗಳೂ ಇದರಿಂದ ನಷ್ಟವಾಗುತ್ತವೆ. ಧ್ಯಾನದಿಂದ ಜೀವಭಾವದಲ್ಲಿನ ಎಲ್ಲ ದೋಷಗಳೂ ನಷ್ಟವಾಗಿ ಅವನಲ್ಲಿ ಈಶ್ವರತ್ವದ ಲಕ್ಷಣಗಳು ಪ್ರಕಟವಾಗುತ್ತವೆ. ಇವೇ ಯೋಗಚರ್ಯೆಯ ಮುಖ್ಯ ಉದ್ದೇಶ್ಯಗಳು –

ಪ್ರಾಣಾಯಾಮೈರ್ದಹೇ ದೋಷಾನ್ ಧಾರಣಾಭಿಶ್ಚ ಕಿಲ್ಬಿಷಂ |
ಪ್ರತ್ಯಾಹಾರೈ ರಸತ್ಯಂಗಾನ್ ಧ್ಯಾನೇ ನಾನೈಶ್ವೆರಾನ್ ಗುಣಾನ್ ||12||

ಎಂಟನೇ ಅಧ್ಯಾಯದಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ, ಕ್ರಿಯಾಂಗ, ಮಲಕರ್ಷಕ ಹಾಗೂ ಕ್ರಿಯಾಸ್ನಾನ – ಈ ಷಟ್ (ಆರು) ವಿಧ ಸ್ನಾನಗಳ ವರ್ಣನೆಯನ್ನು ನೀಡಲಾಗಿದೆ. ಪ್ರಾತಃ ಕಾಲದಲ್ಲಿ ಮಾಡುವ ಸ್ನಾನವು 'ನಿತ್ಯ ಸ್ನಾನ'ವಾಗಿದೆ. ರಜಸ್ವಲೆ, ಶವ ಹಾಗೂ ಇತರೇ ರೀತಿಯ ಅಸ್ಪೃಶ್ಯಗಳನ್ನು ಮುಟ್ಟಿದುದಕ್ಕೆ ಮಾಡುವ ಸ್ನಾನವು 'ನೈಮಿತ್ತಿಕ ಸ್ನಾನ'ವೆಂದು ಹೇಳಲಾಗು ತ್ತದೆ. ಪುಷ್ಯಾದಿ ನಕ್ಷತ್ರಗಳ ಸಮಯದಲ್ಲಿ ದೈವಜ್ಞರ ಮುಖಾಂತರ ಮಾಡಿ ಸಲ್ಪಡುವ ಸ್ನಾನವು 'ಕಾಮ್ಯಸ್ನಾನ' ವಾಗಿರುತ್ತದೆ. ಪವಿತ್ರ ಮಂತ್ರಗಳ ಜಪಕ್ಕಾಗಿ, ದೇವತೆಗಳು ಹಾಗೂ ಪಿತೃಗಳ ಪೂಜೆ ಇತ್ಯಾದಿಗಳ ಅಂಗವಾಗಿ ಮಾಡುವ ಸ್ನಾನ 'ಕ್ರಿಯಾಂಗಸ್ನಾನ' ಎಂದು ಕರೆಯಲಾಗುವುದು. ಅಭ್ಯಂಗ ಪೂರ್ವಕವಾಗಿ ಕೇವಲ ಮಲಾಪಕರ್ಷಣದ ಉದ್ದೇಶ್ಯದಿಂದ ಮಾಡುವ ಸ್ನಾನವು 'ಮಲಕರ್ಷಕಸ್ನಾನ' ಎಂದು ಕರೆಯಲಾಗುವುದು. ಪುಣ್ಯ ತೀರ್ಥಗಳು, ನದಿ ಗಳು, ಕುಂಡಗಳಲ್ಲಿ ಪುಣ್ಯಾರ್ಜನೆಯ ದೃಷ್ಟಿಯಿಂದ ಮಾಡುವ ಮಹಾಸ್ನಾನ ವನ್ನು 'ಕ್ರಿಯಾಸ್ನಾನ'ವೆಂದು ಕರೆಯಲಾಗುವುದು. ಎಲ್ಲ ತೀರ್ಥಸ್ನಾನಗಳೂ ಪುಣ್ಯವಾದುದೂ, ಪಾಪವನ್ನು ನಾಶಮಾಡತಕ್ಕವುಗಳೂ ಆಗಿವೆ. ಇವೆಲ್ಲವು ಗಳಲ್ಲಿ ಗಂಗಾಸ್ನಾನಕ್ಕೆ ವಿಶೇಷ ಮಹತ್ವವಿದೆ –

ನದ್ಯಾಃ ಪುಣ್ಯಾಸ್ತಥಾ ಸರ್ವಾ ಜಾಹ್ನವೀ ತು ವಿಶೇಷತಃ ||14||

ಶುದ್ಧ ಮನಸ್ಸಿನಿಂದ ತೀರ್ಥ ಸ್ಥಳಗಳಲ್ಲಿ ಸ್ನಾನ ಮಾಡಿ, ಅಲ್ಲಿನ ಪವಿತ್ರ ತೀರ್ಥವನ್ನು ಸೇವಿಸುವವನು ಪೂರ್ಣ ಫಲವನ್ನು ಪಡೆದು, ಸಫಲಗೊಳ್ಳುತ್ತಾನೆ.

ಯಥೋಕ್ತಫಲದಂ ತೀರ್ಥಂ ಭವೇಚ್ಛ್ರದ್ಧಾತ್ಮನಾಂ ನೃಣಾಂ || 16 ||

9ನೇ ಅಧ್ಯಾಯದಲ್ಲಿ ಕ್ರಿಯಾ–ಸ್ನಾನ–ತೀರ್ಥ ಸ್ನಾನಗಳ ವಿಧಾನಗಳು ಹಾಗೂ ಅದರ ವಿಶೇಷ ಮಹಿಮೆಗಳನ್ನು ತಿಳಿಸಲಾಗಿದೆ.

10ನೇ ಅಧ್ಯಾಯದಲ್ಲಿ ವಿವಿಧ ತೀರ್ಥಗಳಲ್ಲಿ ಮಾಡುವ ಆಚಮನ ವಿಧಿ, ಅಂಗಸ್ಪರ್ಶ ಹಾಗೂ ಸಂಧ್ಯಾವಂದನೆಯ ಮಹಿಮೆಗಳ ವರ್ಣನೆ ಇದೆ.

11ನೇ ಅಧ್ಯಾಯದಲ್ಲಿ ಅಘಮರ್ಷಣ ವಿಧಿಯ ವಿವರಗಳಿವೆ.

12ನೇ ಅಧ್ಯಾಯದಲ್ಲಿ ಗಾಯಿತ್ರೀ ಜಪದ ವಿಧಿಯನ್ನು ವಿವರಿಸಲಾಗಿದೆ. ಗಾಯಿತ್ರಿಯ ಮಹಿಮೆಯಲ್ಲಿ – ಗಾಯಿತ್ರಿಯು ಸಮಸ್ತ ವೇದಗಳ ಮಾತೆ ಯಾಗಿದ್ದು, ಅದರ ಜಪವು ಪಾಪನಾಶಕರವಾದುದಾಗಿದೆ. ಈ ಮಂತ್ರಕ್ಕೆ ಮಿಗಿಲಾದ ಪವಿತ್ರ ಮಂತ್ರ ಈ ಲೋಕ ಹಾಗೂ ಪರಲೋಕದಲ್ಲಿ ಬೇರೊಂದಿಲ್ಲ –

ಗಾಯಿತ್ರೀ ವೇದಜನನೀ ಗಾಯಿತ್ರೀ ಪಾಪನಾಶಿನೀ || 24 ||
ಗಾಯತ್ರ್ಯಾಃ ಪರಮಂ ನಾಸ್ತಿ ದಿವಿ ಚೇಹ ಚ ಪಾವನಂ || 25 ||

13ನೇ ಅಧ್ಯಾಯದಲ್ಲಿ ತರ್ಪಣ ವಿಧಿಯನ್ನು ವರ್ಣಿಸಲಾಗಿದೆ.

14ನೇ ಅಧ್ಯಾಯದಲ್ಲಿ ಶ್ರಾದ್ಧದಲ್ಲಿ ಅಧಿಕಾರಯೋಗ್ಯ ಬ್ರಾಹ್ಮಣರ ವಿವರಗಳಿವೆ. ಇದರೊಂದಿಗೆ ಶ್ರಾದ್ಧಕ್ಕೆ ಪ್ರಶಸ್ತವಾದ ದೇಶಗಳ ವರ್ಣನೆ ಇದೆ.

15ನೇ ಅಧ್ಯಾಯದಲ್ಲಿ ಜನನ, ಮರಣಗಳ ಆಶೌಚದ ವಿವರಗಳಿವೆ.

16ನೇ ಅಧ್ಯಾಯದಲ್ಲಿ ದ್ರವ್ಯಶುದ್ಧಿ, ಪಾತ್ರಶುದ್ಧಿಗಳ ವರ್ಣನೆ ಇದೆ.

17ನೇ ಅಧ್ಯಾಯದಲ್ಲಿ ಪ್ರಾಯಶ್ಚಿತ್ತ ವಿಧಾನಗಳನ್ನು ತಿಳಿಸಲಾಗಿದೆ.

18ನೇ ಅಧ್ಯಾಯದಲ್ಲಿ ಪರಾಕ್, ಕೃಚ್ಛ್ರ, ಅತಿ ಕೃಚ್ಛ್ರ, ಸಾಂತಪನ ಇತ್ಯಾದಿ ಪ್ರಾಯಶ್ಚಿತ್ತ ವ್ರತಗಳನ್ನು ತಿಳಿಸಲಾಗಿದೆ. ಪಿತೃಗಳು ಪ್ರಸನ್ನರಾಗುವುದರಿಂದ ಏನೇನು ಲಭಿಸುತ್ತದೆ ಎಂಬುದನ್ನು ವಿವರಿಸಲಾಗಿದೆ –

ಪ್ರಜಾಂ ಪುಷ್ಟಿಂ ಯಶಃ ಸ್ವರ್ಗಮಾರೋಗ್ಯಂ ಚ ಧನಂ ತಥಾ |
ನೃಣಾ ಶ್ರಾದ್ಧೈಃ ಸದಾ ಪ್ರೀತಾಃ ಪ್ರಯಚ್ಛಂತಿ ಪಿತಾಮಹಾಃ || 33 ||

ಶ್ರಾದ್ಧದ ಮುಖಾಂತರ ಪ್ರಸನ್ನಗೊಂಡ ಪಿತೃಗಣಗಳು ತಮ್ಮ ವಂಶಸ್ಥರಿಗೆ ಉತ್ತಮ ಸಂತಾನ, ಪುಷ್ಟಿ, ಯಶ, ಆರೋಗ್ಯ, ಶ್ರೇಷ್ಠ ಧನಗಳು ಲಭಿಸಲಿ ಎಂದು ಆಶಿಸುತ್ತಾ, ಅವುಗಳನ್ನು ನೀಡುತ್ತವೆ.

# 32. ಅತ್ರಿ ಸ್ಮೃತಿ

ಅತ್ರಿ ಮಹರ್ಷಿಯು ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬನು. ಈತನು ಪ್ರಜಾಪತಿಯೂ ಹೌದು. ಹತ್ತು ಮಾನಸಪುತ್ರರಲ್ಲಿ ಈತನು ದ್ವಿತೀಯನು. ಈತನು 'ಅಕ್ಷ್ಣೋಽತ್ರಿಃ' ಎನ್ನುವಂತೆ ಬ್ರಹ್ಮನ ಕಣ್ಣುಗಳಿಂದ ಹುಟ್ಟಿದನು. ಆದುದರಿಂದ ಈತನನ್ನು ಸಾಕ್ಷಾತ್ ಜ್ಯೋತಿ, ಪ್ರಕಾಶ ಹಾಗೂ ಜ್ಞಾನದ ಸ್ವರೂಪನೆಂದು ನಂಬಲಾಗಿದೆ. ಸಪ್ತರ್ಷಿಗಳಲ್ಲಿ ಒಬ್ಬನಾದ ಈತನು ಬ್ರಹ್ಮನ ಸಮಾನನಾಗಿದ್ದಾನೆ. ಈತನು ದಿವ್ಯಜ್ಞಾನವನ್ನು ಹೊಂದಿದ್ದು, ಉತ್ತಮ ತಪಸ್ವಿ ಹಾಗೂ ಶ್ರೀಮನ್ನಾರಾಯಣನ ಭಕ್ತನಾಗಿದ್ದನು. ಅಲ್ಲದೆ ಈತನಲ್ಲಿ ಶೀಲ, ವಿನಯ, ಸತ್ಯ, ಧರ್ಮ, ಸದಾಚಾರ, ಕ್ಷಮೆ, ಸಹಿಷ್ಣುತೆ ಹಾಗೂ ದಯಾಳುತ್ವ-ಇತ್ಯಾದಿ ಸದ್ಗುಣಗಳಿದ್ದುವು.

ಚಿತ್ರಕೂಟದಲ್ಲಿನ ಈತನ ಆಶ್ರಮವು ತುಂಬಾ ಪ್ರಸಿದ್ಧಿಯನ್ನು ಪಡೆದಿತ್ತು. ಕರ್ದಮ ಪ್ರಜಾಪತಿಯ ಪುತ್ರಿ ಅನಸೂಯಾಳು ಈತನ ಧರ್ಮ ಪತ್ನಿ. ದಿವ್ಯ ತೇಜಸ್ಸಿನಿಂದ ಸಂಪನ್ನಳಾಗಿದ್ದ ಈಕೆಯು ಆದರ್ಶ ಪತಿವ್ರತೆ ಯಾಗಿದ್ದಳು. ಈಕೆಯು ತನ್ನ ಪಾತಿವ್ರತ್ಯದ ಬಲದಿಂದ ಶೈವ್ಯೆಯ ಪತಿಯ ಮೃತ ದೇಹವಲ್ಲಿ ಜೀವ ತುಂಬಿದಳು. ಬಂಧಿತನಾಗಿದ್ದ ಸೂರ್ಯನು ಇದರ ಮುಖಾಂತರ ಉದಯಿಸುವಂತೆ ಮಾಡಿದಳು. ತನ್ನ ತಪೋಬಲ ಹಾಗೂ ದಿವ್ಯಶಕ್ತಿಯಿಂದ ಗಂಗಾನದಿಯ ಒಂದು ಭಾಗವನ್ನು ಚಿತ್ರಕೂಟದಲ್ಲಿ ಹರಿಯು ವಂತೆ ಮಾಡಿ, ಅದಕ್ಕೆ 'ಮಂದಾಕಿನೀ' ಎಂಬ ಹೆಸರು ನೀಡಿದಳು. ಎಲ್ಲ ಪಾಪಗಳಿಂದ ಈ ನದಿಯು ಜನರನ್ನು ದೂರ ಮಾಡುತ್ತಿದೆ.

ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮನು ಈ ದಂಪತಿಗಳಿಗೆ ಸೃಷ್ಟಿ ಕಾರ್ಯದಲ್ಲಿ ನಿರತರಾಗಲು ಆಜ್ಞೆ ಮಾಡಿದನು. ಆದರೆ ಇವರುಗಳು ಆ ಕಾರ್ಯ ವಹಿಸಿ ಕೊಳ್ಳುವುದಕ್ಕೆ ಮುಂಚೆ ತಪಸ್ಸು ಮಾಡಲು ತೀರ್ಮಾನಿಸಿ, ಋಕ್ಷ ಪರ್ವತದ ಮೇಲೆ ಕಠಿಣ ತಪಸ್ಸು ಮಾಡಲು ಪ್ರಾರಂಭಿಸಿದರು. ಇವರ ಗುರಿ ಕೇವಲ ಭಗವಂತನ ದರ್ಶನವಾಗಿತ್ತು, ಸಂತಾನೋತ್ಪಾದನೆ ಆಗಿರಲಿಲ್ಲ. ಶ್ರದ್ಧಾ ಪೂರ್ವಕ ನಿರಂತರ ಸಾಧನೆಯಿಂದ ಆಕರ್ಷಿತರಾದ ಬ್ರಹ್ಮ, ವಿಷ್ಣು, ಮಹೇಶ್ವರರು ಇವರ ಪ್ರಾರ್ಥನೆಯಂತೆ ಇವರ ಮಕ್ಕಳಾಗಿ ಜನಿಸಲು ಒಪ್ಪಿ

ಕೊಂಡರು. ಸೂಕ್ತ ಸಮಯದಲ್ಲಿ ವಿಷ್ಣುವಿನ ಅಂಶದಿಂದ ಮಹಾಯೋಗೀ ದತ್ತಾತ್ರೇಯ, ಬ್ರಹ್ಮನ ಅಂಶದಿಂದ ಚಂದ್ರನು, ಶಂಕರನ ಅಂಶದಿಂದ ದೂರ್ವಾಸನನ್ನು ಇವರು ಪಡೆದರು.

ಮಹರ್ಷಿ ಅತ್ರಿಯು ಜ್ಞಾನ, ಭಕ್ತಿ, ಧರ್ಮಾಚರಣೆ ಹಾಗೂ ತಪಸ್ಸಿನ ಮೂರ್ತಿವಾನ್ ಸ್ವರೂಪನಾಗಿದ್ದನು. ಅಂತೆಯೇ ಅನಸೂಯಾ ದೇವಿಯು ಪತಿವ್ರತಾ ಧರ್ಮ ಹಾಗೂ ಶೀಲದ ಪ್ರತಿ ಮೂರ್ತಿಯಾಗಿದ್ದಳು. ಇವರು ಚಿತ್ರಕೂಟದಲ್ಲಿ ನಿವಸಿಸುತ್ತಾ ಭಗವಾನ್ ನಾರಾಯಣನ ಆರಾಧನೆ, ತಪಸ್ಸು ಹಾಗೂ ಭಕ್ತಿಯಲ್ಲಿ ತನ್ಮಯರಾಗಿದ್ದರು. ಇವರ ನಿಷ್ಠೆಯನ್ನು ಸಫಲಗೊಳಿಸುವುದಕ್ಕೋ ಎನ್ನುವಂತೆ ಅರಣ್ಯವಾಸಕ್ಕೆ ಬಂದಿದ್ದ ಸೀತಾಲಕ್ಷ್ಮಣ ಸಮೇತದ ಶ್ರೀರಾಮನು ಇವರ ಆಶ್ರಮಕ್ಕೆ ಬಂದಿದ್ದನು. ಆಗ ಅತ್ರಿ ಮಹರ್ಷಿಯು ಶ್ರೀರಾಮನನ್ನು ಸ್ತುತಿಸಿ, ಪೂಜಿಸಿದನು. ಇದೊಂದು ಮಹತ್ವಪೂರ್ಣ ಸ್ತುತಿಯಾಗಿದೆ. ಇದರ ಅಂತ್ಯದಲ್ಲಿ ಶ್ರೀರಾಮನ ಚರಣಾವಿಂದಗಳ ಅನುಗ್ರಹವನ್ನು ಬೇಡುತ್ತಾನೆ.

ಅನಸೂಯಾಳು ಸೀತೆಗೆ ಪಾತಿವ್ರತ್ಯ ಧರ್ಮದ ಬಗ್ಗೆ ಉಪದೇಶ ಮಾಡಿದಳು. ಇದರಿಂದ ಸೀತಾದೇವಿಗೆ ತುಂಬಾ ಅನುಕೂಲವಾಯಿತು.

ಪ್ರಜಾಪತಿ ಪದವಿಯಲ್ಲಿದ್ದ ಅತ್ರಿ ಮಹರ್ಷಿಯು ಪ್ರಜೆಗಳ ಸುಖ ಸಂತೋಷಗಳಿಗಾಗಿ ವ್ಯವಸ್ಥೆಗಳನ್ನು ಮಾಡಿ, ಅವರು ಸನ್ಮಾರ್ಗದಲ್ಲಿ ಮುಂದುವರಿಯಲು ಪ್ರಯತ್ನಗಳನ್ನು ನಡೆಸಿದನು. ಇದಕ್ಕೆ ಸಂಬಂಧ ಪಟ್ಟಂತಹ ವೈದಿಕ ಮಂತ್ರಗಳನ್ನು ಈತ ರೂಪಿಸಿದ. ಹೀಗಾಗಿ ಪ್ರಜಾಪತಿಯಾಗಿದ್ದುದರ ಜೊತೆಗೆ ಮಂತ್ರದ್ರಷ್ಟಾರನೂ ಆಗಿದ್ದನು. ಋಗ್ವೇದದ ಐದನೇ ಮಂಡಲದ ರಚನಾಕಾರನು ಈತನೇ ಆದುದರಿಂದ ಆ ಮಂಡಲವು 'ಆತ್ರೇಯ ಮಂಡಲ' ಎನ್ನುವ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ. ಶ್ರೀಸೂಕ್ತ ಇತ್ಯಾದಿ ಅತ್ಯಂತ ಪ್ರಸಿದ್ಧವಾದ ಖಿಲ-ಸೂಕ್ತಗಳು ಇದೇ ಆತ್ರೇಯ ಮಂಡಲದ ಪರಿಶಿಷ್ಟ ಭಾಗವೆಂದು ನಂಬಲಾಗಿದೆ. ಪ್ರಜೆಗಳು ಧರ್ಮಾಚರಣೆ, ಸದಾಚಾರ ಹಾಗೂ ಕರ್ತವ್ಯಾಕರ್ತವ್ಯಗಳಲ್ಲಿ ಮುಂದುವರಿಯಲು ಸಹಕಾರಿಯಾಗುವ ಶಿಕ್ಷಣ ನೀಡಲು ಒಂದು ಸ್ಮೃತಿ ಹಾಗೂ ಒಂದು ಸಂಹಿತೆಯನ್ನು ಈತನು ರಚಿಸಿದನು. 'ಅತ್ರಿ ಸ್ಮೃತಿ' ಹಾಗೂ 'ಅತ್ರಿ ಸಂಹಿತೆ' ಎಂಬ ಈತನ ಹೆಸರುಗಳಿಂದಲೇ ಪ್ರಸಿದ್ಧವಾಗಿವೆ.

ಇವು ಆಕಾರದಲ್ಲಿ ಚಿಕ್ಕನಾದರೂ, ಅತ್ಯಂತ ಉಪಾದೇಯುವಾದವುಗಳು. ಪ್ರಮುಖ ಧರ್ಮಶಾಸ್ತ್ರಕಾರರಲ್ಲಿ ಅತ್ರಿಯೂ ಒಬ್ಬನು ಎಂದು ಮಹರ್ಷಿ ಯಾಜ್ಞವಲ್ಕ್ಯನು ತಿಳಿಸಿದ್ದಾನೆ. 'ಅತ್ರಿಸ್ಮೃತಿ'ಯು 'ಆತ್ರೇಯ ಧರ್ಮ ಶಾಸ್ತ್ರ'ವೆಂದೂ ಪ್ರಸಿದ್ಧಿ ಪಡೆದಿದೆ.

## 1. ಅತ್ರಿ ಸ್ಮೃತಿ

ಈ ಸ್ಮೃತಿಯು ಗದ್ಯ-ಪದ್ಯ ಮಿಶ್ರಿತವಾದ ಚಂಪೂಶೈಲಿಯಲ್ಲಿದ್ದು, 9 ಅಧ್ಯಾಯಗಳಿಂದ ಕೂಡಿದೆ. ಒಟ್ಟು ಇದರಲ್ಲಿ 90 ಶ್ಲೋಕಗಳಿವೆ. ಇದರಲ್ಲಿನ 4 ಮತ್ತು 7ನೇ ಅಧ್ಯಾಯಗಳು ಸೂತ್ರ ರೂಪದಲ್ಲಿ ವರ್ಣಿತವಾಗಿದೆ. 4ನೇ ಅಧ್ಯಾಯದಲ್ಲಿ 45 ಸೂತ್ರಗಳು ಹಾಗೂ 7ನೇ ಅಧ್ಯಾಯದಲ್ಲಿ 15 ಸೂತ್ರ ಗಳು ಇವೆ. ಈ ರೀತಿಯಲ್ಲಿ ಈ ಸ್ಮೃತಿಯಲ್ಲಿ ಸೂತ್ರಗಳೇ ಹೆಚ್ಚಾಗಿರುವುದ ರಿಂದ 'ಅತ್ರಿ-ಧರ್ಮಸೂತ್ರ' ಎನ್ನುವ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ. ಇದರಲ್ಲಿನ ಎಂಟನೇ ಅಧ್ಯಾಯವು ವೇದದ ಸೂಕ್ತಗಳು ಹಾಗೂ ಪವಿತ್ರ ಸ್ತೋತ್ರಗಳ ವರ್ಣನೆಯಿಂದ ಕೂಡಿದೆ. 7ನೇ ಅಧ್ಯಾಯವು ಪ್ರಚ್ಛನ್ನ ಪ್ರಾಯಶ್ಚಿತ್ತಗಳನ್ನು ವಿವರಿಸುತ್ತದೆ. ಇದರಲ್ಲಿ ಮನು ಇತ್ಯಾದಿ ವಿದ್ವಾಂಸರ ಅಭಿಪ್ರಾಯಗಳನ್ನು ಅಲ್ಲಲ್ಲಿ ಉದಾಹರಿಸಲಾಗಿದ್ದು, ವ್ಯಾಖ್ಯಾನವನ್ನು ನೀಡಲಾಗಿದೆ. ಇದೊಂದು ಮಹತ್ವಪೂರ್ಣ ಸ್ಮೃತಿಯಾಗಿದೆ.

ಪ್ರಾರಂಭದಲ್ಲಿ ಋಷಿ, ಮುನಿಗಳು, ವೇದವಿದರು ಅತ್ರಿ ಮಹರ್ಷಿಯ ಬಳಿಗೆ ಹೋಗಿ, "ಹೇ ಮಹಾಮುನೆ ! ಯಾವ ರೀತಿಯ ಜಪ, ತಪ, ದಾನ ಅಥವಾ ಸಾಧನಗಳನ್ನು ನಡೆಸಿದರೆ ಎಲ್ಲ ರೀತಿಯ ಪಾತಕಗಳಿಂದ ಮುಕ್ತಿ ಪಡೆಯಬಹುದು, ವ್ಯಕ್ತಿಯು ಪರಮ ಪವಿತ್ರನಾಗುವನು, ಶುದ್ಧಗೊಳ್ಳುವನು ಎಂಬುದನ್ನು ತಾವು ದಯವಿಟ್ಟು ನಮಗೆ ತಿಳಿಯಪಡಿಸಿ !" ಎಂದು ನಮ್ರತೆ ಯಿಂದ ಕೇಳಿದರು. ಇದಕ್ಕೆ ಉತ್ತರವಾಗಿ ಅತ್ರಿಯು ನೀಡಿದ ಧರ್ಮೋಪ ದೇಶವೇ 'ಅತ್ರಿ ಸ್ಮೃತಿ' ಎನ್ನುವ ಹೆಸರಿನಿಂದ ಪ್ರಖ್ಯಾತಿ ಪಡೆಯಿತು.

ಯೋಗ ಸಾಧನೆಯಿಂದ ಪಡೆಯುವ ಸ್ಥಿತಿಯು, ತೀವ್ರ ತಪಸ್ಸು, ಧ್ಯಾನ, ಯಜ್ಞ ಹಾಗೂ ಇತರೇ ಸಾಧನಗಳಿಂದಲೂ ಪಡೆಯಲು ಸಾಧ್ಯವಿಲ್ಲ. ಎಲ್ಲ ಧರ್ಮಗಳಲ್ಲಿ ಯೋಗವೇ ಸರ್ವೋತ್ಕೃಷ್ಟವಾದುದು. ಯೋಗ ಸಾಧನೆ ಯಿಂದ ಶುದ್ಧರೂಪದ ಪರಮಾತ್ಮಜ್ಞಾನವು ಪ್ರಾಪ್ತವಾಗುವುದು. ಯೋಗವೇ

ನಿಜ ಧರ್ಮದ ಸ್ವರೂಪವಾಗಿರುತ್ತದೆ. ಯೋಗವೇ ಎಲ್ಲಕ್ಕಿಂತಲೂ ಹೆಚ್ಚಿನ ದಾದ ತಪಸ್ಸಾಗಿರುತ್ತದೆ. ಆದುದರಿಂದ ಸದಾ ಯೋಗದ ಆಶ್ರಯ ಪಡೆದು ಯೋಗ ಪರಾಯಣನಾಗಿರುವುದು ಒಳ್ಳೆಯದು. ಇದು ಆತ್ಮಕಲ್ಯಾಣದ ನಿಜ ವಾದ ಸಾಧನವಾಗಿದೆ.

## ಪ್ರಾಣಾಯಾಮದ ಮಹತ್ವ

ಅಗ್ನಿಯು ಒಣಗಿದ ಕಾಷ್ಠವನ್ನು ಸುಟ್ಟು ಭಸ್ಮ ಮಾಡುವಂತೆ ವೇದ ತತ್ತ್ವಜ್ಞ ವಿದ್ವಾಂಸನು ತಾನು ಮಾಡುವ ಕರ್ಮಗಳಿಂದ ಎಲ್ಲ ಪಾಪಗಳನ್ನು, ದೋಷಗಳನ್ನು ಸುಟ್ಟು ಭಸ್ಮ ಮಾಡುವನು. ಅಂತೆಯೇ ಪ್ರಾಣಾಯಾಮ ಹಾಗೂ ಯೋಗಿಯ ಸಾಧನೆಯಿಂದ ಇಂದ್ರಿಯಗಳಿಂದ ಉತ್ಪನ್ನವಾಗುವ ಕಾಯಕ, ವಾಚಿಕ ಹಾಗೂ ಮಾನಸಿಕದ ಸಮಸ್ತ ಪಾಪಗಳನ್ನು ಯೋಗಿಯು ನಷ್ಟಗೊಳಿಸುವನು.

ಯಥಾತಿ ಪ್ರಬಲೋ ಬರ್ಹಿರ್ದಹತ್ಯಾದ್ರ್ರಾ ನ ಪಿ ದ್ರುಮಾನ್ ।
ತಥಾ ದಹತಿ ವೇದಜ್ಞಃ ಕರ್ಮಜಂ ದೋಷಮಾತ್ಮನಃ ॥ 3/2 ॥
ಯಥಾ ಪರ್ವತಧಾತೂನಾಂ ದೋಷಾ ದಹಂತಿ ಧಾಮ್ಯತಾಂ ।
ತಥೇಂದ್ರಿಯಕೃತಾ ದೋಷಾ ದಹಾಂತೇ ಪ್ರಾಣ ನಿಗ್ರಹಾತ್ ॥ 3/3 ॥

## ಪೂರ್ವಜನ್ಮದ ಪಾಪಗಳು

ನಾಲ್ಕನೇ ಅಧ್ಯಾಯದಲ್ಲಿ ಹಿಂದಿನ ಜನ್ಮದಲ್ಲಿ ವ್ಯಕ್ತಿಯು ಎಂತಹ ದುಷ್ಕೃತ್ಯ ಅಥವಾ ಪಾಪವನ್ನು ಮಾಡಿ, ಅದಕ್ಕೆ ತಕ್ಕಂತಹ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದುದರಿಂದ ಈ ಜನ್ಮದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸ ಬೇಕಾಗುತ್ತದೆ – ಎಂದು ಮಹರ್ಷಿ ಅತ್ರಿಯು ತಿಳಿಸುತ್ತಾನೆ. ಆತನು ಹಿಂದಿನ ಜನ್ಮದ ಪಾಪಗಳ ಲಕ್ಷಣಗಳನ್ನು ವಿವರಿಸುತ್ತಾ, ಇದರಿಂದ ಮುಂದಿನ ಜನ್ಮದ ಬಗ್ಗೆಯೂ ಎಚ್ಚರಿಕೆಯಿಂದ ಇರಬೇಕೆಂದು ತಿಳಿಸುತ್ತಾನೆ. ಕೆಲವು ಲಕ್ಷಣಗಳು ಈ ರೀತಿ ಇವೆ –

ಒತ್ತೆ ಇಟ್ಟ ವಸ್ತುಗಳನ್ನು ಅಪಹರಿಸುವವನು ಮುಂದಿನ ಜನ್ಮದಲ್ಲಿ ಮಕ್ಕಳನ್ನು ಪಡೆಯುವುದಿಲ್ಲ; ಸಂತಾನ ರಹಿತನಾಗುತ್ತಾನೆ– 'ನ್ಯಾಸಾಪಹಾರೀ ಚಾನಪತ್ಯಃ'. ರತ್ನಗಳನ್ನು ಕದಿಯುವವನು ಮಹಾ ದರಿದ್ರನಾಗಿ ಜನಿಸುವನು ' ರತ್ನಾಪಹಾರೀ ಚಾತ್ಯಂತ ದರಿದ್ರಃ '. ವ್ಯರ್ಥಾಲಾಪ ಮಾಡುತ್ತಾ, ನಾಸ್ತಿ

ಕತೆಯ ಬಗ್ಗೆ ತರ್ಕ, ವಿವಾದಗಳನ್ನು ಮಾಡುವವನು ಬೆಕ್ಕಾಗಿ ಜನಿಸುವನು– 'ಇತಸ್ತತಸ್ತರ್ಕಕೋ ಮಾರ್ಜಾರಃ'. ಸಣ್ಣ–ಪುಟ್ಟ ಮನೆಗಳನ್ನು ಸುಡುವವನು ಅಥವಾ ಬೆಂಕಿ ಹಚ್ಚುವವನು ಮಿಣುಕು ಹುಳುವಾಗಿ ಜನಿಸುವನು– 'ಕಕ್ಷಾಗಾರ ದಾಹಕಃ ಖದ್ಯೋತಃ'. ಅನ್ನ, ಊಟಗಳನ್ನು ಕದಿಯುವವನು ಇಲಿಯಾಗಿ ಹುಟ್ಟುವನು–'ಧಾನ್ಯಹರಣಾನ್ ಮೂಷಕಃ'. ಹಣ ಪಡೆದು ಹೇಳಿಕೊಡು ವವನು ನರಿಯಾಗಿ ಜನಿಸುವನು –'ಭೃತಕಾಧ್ಯಾಪಕಃ ಶೃಗಾಲಃ'. ಬೇರೆಯವರ ಹಣವನ್ನು ಅಪಹರಿಸುವವನು ಪ್ರೇತವಾಗಿ ಬದಲಾಗುವನು. 'ಪರದ್ರವ್ಯ ಹರಣಾತ್ ಪ್ರೇತಃ'. ಹಣ ಪಡೆದು ದೇವಸ್ಥಾನಗಳಲ್ಲಿ ಪೂಜೆ ಮಾಡುವವನು ಹಾಗೂ ದೇವಸ್ಥಾನಗಳ ಸಂಪತ್ತನ್ನು ಅಪಹರಿಸುವವನು ಚಾಂಡಾಲನಾಗಿ ಜನಿಸುವನು – 'ದೇವಲ ಶ್ಚಾಂಡಾಲಃ'. ಬಹಳ ಕಡಿಮೆ ಬೆಲೆಗೆ ವಸ್ತುಗಳನ್ನು ಕೊಂಡು, ಅದನ್ನು ಬಹಳ ಹೆಚ್ಚಿನ ಮೌಲ್ಯಕ್ಕೆ ಮಾರುವವನು ಹಾಗೂ ಚಕ್ರ ಬಡ್ಡಿ ಪಡೆಯುವವನು ಆಮೆಯಾಗಿ ಜನಿಸುವನು. 'ವಾರ್ಧುಷಿಕಃ ಕೂರ್ಮಃ' ನಾಸ್ತಿಕನು ಹಾಗೂ ಕೃತಘ್ನನು ಜೇಡಹುಳುವಾಗಿ ಹುಟ್ಟುವನು- 'ಊರ್ಣ ನಾಭೀ ನಾಸ್ತಿಕಃ ಕೃತಘ್ನಶ್ಚ'. ಶರಣಾಗತಿ ಹೊಂದಿದವನನ್ನು ದೂರ ಮಾಡು ವವನು, ಅವನನ್ನು ತ್ಯಜಿಸುವವನು ಬ್ರಹ್ಮರಾಕ್ಷಸನಾಗಿ ಜನಿಸುವನು – 'ಶರಣಾಗತ ತ್ಯಾಗೀ ಬ್ರಹ್ಮರಾಕ್ಷಸಃ'. ಸದಾಕಾಲದಲ್ಲೂ ಸುಳ್ಳು ಹೇಳುವವನು, ಮಿಥ್ಯಾಬಾಷಣ ಮಾಡುವವನು ಎಲ್ಲ ರೀತಿಯ ಪಾಪಗಳನ್ನು ತನ್ನ ಬೆನ್ನಿನಲ್ಲಿ ಕಟ್ಟಿಕೊಳ್ಳುವನು - 'ಸರ್ವದಾಽನೃತವಚನಾತ್ ಪಾಪಃ'.

ಮೇಲೆ ತಿಳಿಸಿದ ನಿಂದಿತ ಇಲ್ಲವೆ ತ್ಯಾಜ್ಯ ಕಾರ್ಯಗಳನ್ನು ತಿಳಿಸುತ್ತಾ, ಇಂತಹ ಕರ್ಮಗಳನ್ನು ಮಾಡುವುದರಿಂದ ಮಾನವನು ತುಂಬಾ ದುಃಖವನ್ನು ಅನುಭವಿಸುವನು, ಇಲ್ಲವೆ ಯಮಯಾತನೆಯನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ ಸದಾ ಕಾಲದಲ್ಲಿಯೂ ಧರ್ಮಾಚರಣೆಯನ್ನು ಅನುಸರಿಸುತ್ತಾ, ಸತ್ಕರ್ಮಗಳ ಅನುಷ್ಠಾನ ಮಾಡಬೇಕು. ಇದರಿಂದ ವ್ಯಕ್ತಿಯು ಉನ್ನತ ಮಟ್ಟಕ್ಕೇರುತ್ತಾನೆ.

### ವೇದ ಸೂಕ್ತಗಳ ಜಪ – ಪಾಪನಾಶ

ಈ ಸ್ಮೃತಿಯ 6ನೇ ಅಧ್ಯಾಯದಲ್ಲಿ ಮಹರ್ಷಿ ಅತ್ರಿಯು ವೈದಿಕ ಸೂಕ್ತಗಳನ್ನು ಬಹಳವಾಗಿ ಪ್ರಶಂಶಿಸಿದ್ದಾನೆ. ವೈದಿಕ ಮಂತ್ರಗಳು ಹಾಗೂ

ಸೂಕ್ತಗಳನ್ನು ಜಪಿಸುವುದರಿಂದ ಎಲ್ಲ ರೀತಿಯ ಪಾಪ-ಕ್ಲೇಶಗಳು ನಿವಾರಣೆ ಯಾಗುತ್ತವೆ. ವ್ಯಕ್ತಿಯು ಇದರಿಂದ ಪರಮಪವಿತ್ರನಾಗುತ್ತಾನೆ. ಎಲ್ಲರೀತಿಯ ಆತ್ಮಶುದ್ಧಿಯಾಗುವುದು. ಅವನಿಗೆ ಪುನರ್ಜನ್ಮದ ಜ್ಞಾನ ಉಂಟಾಗುತ್ತದೆ. ಏನನ್ನು ಉತ್ತಮವಾದುದನ್ನು ಅವನು ಬೇಕೆಂದು ಇಚ್ಛಿಸುವನೊ ಅವೆಲ್ಲವೂ ಸುಲಭವಾಗಿ ದೊರೆಯುವುದು –

ಏತಾನಿ ಜಪ್ತಾನಿ ಪುನಂತಿ ಜಂತೂಜ್ -
ಜಾತಿಸ್ಮರತ್ವಂ ಲಭತೇ ಯದೀಚ್ಛೇತ್ ॥ 6 - 5 ॥

ಕೆಲವೊಂದು ಮಂತ್ರಗಳು, ಸೂಕ್ತಗಳು ಈ ರೀತಿ ಇವೆ–ಅಘಮರ್ಷಣದ ಮಂತ್ರ-ಉದುತ್ಯಂ ಜಾತವೇದಸಂ (ಋಗ್ವೇದ 1-50-2; ಅಥರ್ವ 13-2-16; ಯಜುರ್ವೇದ 7–41 ಇತ್ಯಾದಿ), ತರತ್ ಸ ಮಂದೀಧವತಿ (ಋಗ್ವೇದ 9-58-1); ಪವಮಾನೀ ಋಚಾಗಳು, ಶತಮದ್ರೀಯ, ಅಥರ್ವಶಿರಸ್, ಗೋಸೂಕ್ತ, ಅಶ್ವಸೂಕ್ತ, ಇಂದ್ರಸೂಕ್ತ, ರಥಂತರ, ವಾಮದೇವ ಇತ್ಯಾದಿ ಸಾಮ ಮಂತ್ರಗಳು.

## ದಾನದ ಮಹಿಮೆ

ಪಾಪಗಳ ನಿಷ್ಕೃತಿಗಾಗಿ ಹಾಗೂ ಮಹತ್ಫಲದ ಪ್ರಾಪ್ತಿಗಾಗಿ ದಾನವೇ ಸಾಧನವೆಂದು ಅತ್ರಿ ಮಹರ್ಷಿಯು ಹೇಳುತ್ತಾನೆ. ವೈಶಾಖ ಮಾಸದ ಹುಣ್ಣಿಮೆ ಅಥವಾ ಬೇರೆಯಾವುದೇ ತಿಂಗಳ ಹುಣ್ಣಿಮೆಯಂದು ಏಳು ಅಥವಾ ಐದು ಬ್ರಾಹ್ಮಣರಿಗೆ ಎಳ್ಳು ಮತ್ತು ಜೇನುತುಪ್ಪವನ್ನು ವಿಧಿಪೂರ್ವಕವಾಗಿ ದಾನ ಮಾಡಬೇಕು. ಹಾಗೆ ದಾನ ಮಾಡುವಾಗ 'ಹೇ ಧರ್ಮರಾಜ ! ಈ ದಾನದಿಂದ ನೀನು ಪ್ರಸನ್ನನಾಗು !' (ಪ್ರೀಯತಾಂ ಧರ್ಮರಾಜ) ಎಂದು ಹೇಳಿದಲ್ಲಿ ಅಂತಹವನು ಜನ್ಮ ಪೂರ್ತಿ ಮಾಡಿದ ಪಾಪದಿಂದ ಮುಕ್ತನಾಗುವನು-

ಯಾವಜ್ಜನ್ಮಕೃತಂ ಪಾಪಂ ತೇನ ದಾನೇನ ಶುದ್ಧ್ಯತಿ ॥

ಇದೇ ರೀತಿಯಲ್ಲಿ ಕೃಷ್ಣಾಜಿನದ ಮೇಲೆ ಎಳ್ಳು, ಜೇನುತುಪ್ಪ ಹಾಗೂ ತುಪ್ಪಗಳನ್ನು ಯಥಾವಿಧಿಯಾಗಿ ಇರಿಸಿ, ಶ್ರದ್ಧಾಪೂರ್ವಕವಾಗಿ ಬ್ರಾಹ್ಮಣರಿಗೆ ದಾನ ನೀಡಿದಲ್ಲಿ, ಅದರ ಫಲವಾಗಿ ದಾನ ನೀಡಿದವನು ಸಕಲ ಪಾಪಗಳಿಂದ ಮುಕ್ತನಾಗುವನು-'ಸರ್ವಂ ತರತಿ ದುಷ್ಕೃತಂ' ॥ 6 - 11 ॥

## ಗುಪ್ತ ಹಾಗೂ ಬಹಿರಂಗ ಪಾಪಗಳ ಪ್ರಾಯಶ್ಚಿತ್ತ

ಅತ್ರಿಯು 7ನೇ ಅಧ್ಯಾಯದಲ್ಲಿ ಗುಪ್ತ ಪಾಪಗಳಿಗೆ ತೆಗೆದುಕೊಳ್ಳಬೇಕಾದ ಪ್ರಾಯಶ್ಚಿತ್ತಗಳನ್ನು ವರ್ಣಿಸಿದ್ದಾನೆ. ಇಂತಹ ಗುಪ್ತ ಪಾಪಗಳ ನಿವಾರಣೆಗಾಗಿ ನದಿ, ಕೊಳ, ಸರೋವರಗಳಲ್ಲಿ ಮುಳುಗು ಹಾಕಿ 'ತರತ್ ಸ ಮಂದೀ' (ಋಗ್ವೇದ 9/58/1-4) ಎಂಬ ಸೂಕ್ತವನ್ನು ಮೂರು ಸಲ ಆವೃತ್ತಿ ಮಾಡುವುದರಿಂದ ದೋಷ ನಿವಾರಣೆಯಾಗುತ್ತದೆ.

ಪಾಪವನ್ನು ಏಕಾಂತದಲ್ಲಿ ಮಾಡಿದ್ದು, ಅದು ಇತರರಿಗೆ ತಿಳಿದು ಬಂದಿಲ್ಲದಿದ್ದರೆ, ಅಂತಹ ಪಾಪಕರ್ಮ ನಿವಾರಣೆಗಾಗಿ ಸಮಾಹಿತ ಮನಸ್ಸಿನಿಂದ ತಪ್ತ ಕೃಚ್ಛ್ರ-ವ್ರತವನ್ನು ಆಚರಿಸಿದಲ್ಲಿ, ಅಂತಹ ವ್ಯಕ್ತಿಯು ಶುದ್ಧನಾಗುತ್ತಾನೆ.

ಬಹಿರಂಗ ಅಪರಾಧ (ಪಾಪ) ಮಾಡಿದ್ದವನಾದರೆ, ಅದು ಎಲ್ಲರಿಗೂ ತಿಳಿದಿದ್ದರೆ, ಅಂತಹ ಪಾಪ ಮಾಡಿರುವವನು ಚಾಂದ್ರಾಯಣ - ವ್ರತವನ್ನು ಅನುಷ್ಠಾನ ಮಾಡಿ, ಶುದ್ಧಿ ಹೊಂದಬೇಕು -

ರಹಸ್ಯೇ ತಪ್ತಕೃಚ್ಛ್ರಂ ತು ಚರೇದ್ವಿಪ್ರಃ ಸಮಾಹಿತಃ |
ಪ್ರಕಾಶೇ ಚೈಂದವಂ ಕುರ್ಯಾತ್ ಸಕೃದ್ ಭುಕ್ತ್ವಾ ದ್ವಿಜೋತ್ತಮಃ ||
(ಅತ್ರಿ 7-4)

ಕುಡಿಯಬಾರದ್ದನ್ನು ಕುಡಿಯುವುದು, ತಿನ್ನ ಬಾರದ್ದನ್ನು ತಿನ್ನುವುದು, ನಿಂದಿತ ಕಾರ್ಯವನ್ನು ಮಾಡುವುದು-ಇತ್ಯಾದಿಗಳನ್ನು ಅಘಮರ್ಷಣ ಸೂಕ್ತವನ್ನು ಜಪಿಸಿ, ನೀರನ್ನು ಕುಡಿಯುವುದರಿಂದ ವ್ಯಕ್ತಿಯು ಶುದ್ಧನಾಗುತ್ತಾನೆ- 'ಅಘಮರ್ಷಣೇನಾಪಃ ಪೀತ್ವಾ ಶುದ್ಧ್ಯೇತ್ |'

ಪ್ರಾಯಶ್ಚಿತ್ತ ಮಾಡಿಕೊಳ್ಳಲು ಆರೋಗ್ಯದ ದೃಷ್ಟಿಯಿಂದ ಅಸಮರ್ಥರಾದಲ್ಲಿ ಪಶ್ಚಾತ್ತಾಪ ಪಡುವುದು, ಪಾಪ ಮಾಡಿದ್ದಕ್ಕಾಗಿ ದುಃಖಪಡುವುದು, ಗ್ಲಾನಿಯನ್ನು ಹೊಂದುವುದು, ಅಂತಹ ಪಾಪವನ್ನು ಮತ್ತೆ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡುವುದು-ಇತ್ಯಾದಿ ಸದ್ವರ್ತನೆಯಿಂದ ಆ ವ್ಯಕ್ತಿಯು ಪಾಪಹೀನನಾಗಿ ಶುದ್ಧನಾಗುವನು -

ಅಸಕ್ತಃ ಪ್ರಾಯಶ್ಚಿತ್ತೀ ಸರ್ವತ್ರಾನುಶೋಚನೇನ ಶುದ್ಧ್ಯೇತ್ ||7-15||
ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ |
ದೃಶೇ ವಿಶ್ವಾಯ ಸರ್ವಂ || (ಋ. 1-50-1)

ಎಂಬ ಮಂತ್ರವನ್ನು ಹೇಳಿಕೊಂಡು ಸೂರ್ಯನಿಗೆ ಏಳು ಸಲ ಅರ್ಘ್ಯ ವನ್ನು ನೀಡಿ ಸೂರ್ಯೋಪಸ್ಥಾನ ಹಾಗೂ ವಿಧಿಪೂರ್ವಕವಾಗಿ ಸೂರ್ಯ ನಮಸ್ಕಾರ ಮಾಡುವುದರಿಂದ ಈ ಜನ್ಮ ಹಾಗೂ ಹಿಂದಿನ ಜನ್ಮಗಳ ಪಾಪವು ನಾಶವಾಗುವುದು -

ಉದುತ್ಯಮಿತಿ ಸಪ್ತರೂಪೇಣಾಽಽದಿತ್ಯ ಮುಪಾಸ್ಯೈಹ
ಕೃತ್ಯೈಃ ಪುರಾಕೃತ್ಯೈಶ್ಚ ಮುಚ್ಯತೇ || 8 - 6 ||

'ಸೋಮಂ ರಾಜಾನಮವಸೆ' (ಋಗ್ವೇದ 10-141-3; ಸಾಮ 91; ಅಥರ್ವ 3-20-4; ವಾ-ಸಂ. 9-26; ತೈ. ಸಂ. 1-7-10-3) ಈ ಮಂತ್ರ ವನ್ನು ಪಠಿಸುವುದರಿಂದ ವಿಷ ನೀಡುವುದು, ಮನೆ ಸುಡುವುದು ಇತ್ಯಾದಿ ಪಾಪ ಗಳನ್ನು ಮಾಡಿದ್ದಲ್ಲಿ ಅಂತಹವುಗಳಿಂದ ಮುಕ್ತಿ ದೊರೆಯುತ್ತದೆ.

'ಸೋಮಂ ರಾಜಾನಮಿತಿ ವಿಷಗರಾಗ್ನಿದಾಹಾಚ್ಚ ಮುಚ್ಯತೇ || (18-71).

ಅನೇಕ ಪಾಪಗಳನ್ನು ಒಟ್ಟಿಗೆ ಮಾಡಿದ್ದಲ್ಲಿ ಹತ್ತು ಸಾವಿರ ಸಲ ಗಾಯಿತ್ರೀ ಮಂತ್ರವನ್ನು ಜಪಿಸಿದಲ್ಲಿ ಶುದ್ಧರಾಗುವರು –

ಸರ್ವೇಷಾಮೇವ ಪಾಪಾನಾಂ ಸಂಕರೇ ಸಮುಪಸ್ಥಿತೇ |
ದಶ ಸಹಸ್ರಮಭ್ಯಸ್ತಾ ಗಾಯಿತ್ರೀ ಶೋಧನಂ ಪರಂ || 8–8 ||

## ಅಧ್ಯಾತ್ಮಜ್ಞಾನ, ಭಗವತ್ ಸ್ಮರಣೆಯ ಮಹಿಮೆ

ಇಷ್ಟೆಲ್ಲ ವಿವರಿಸಿದ ನಂತರ ಅತ್ರಿ ಮಹರ್ಷಿಯು ಕಡೆಯಲ್ಲಿ ಷಡಂಗಯೋಗ (ಪ್ರತ್ಯಾಹಾರ, ಧ್ಯಾನ, ಪ್ರಾಣಾಯಾಮ, ಧಾರಣಾ, ತರ್ಕ ಹಾಗೂ ಸಮಾಧಿ) ಗಳ ವರ್ಣನೆಯನ್ನು ಮಾಡಲಾಗಿದೆ. ದಮಘೋಷನ ಮಗ ಶಿಶುಪಾಲನಂತೆ ವಿದ್ವೇಷ ಭಾವದಿಂದಲೋ, ವೈರತ್ವದಿಂದಲೋ ಭಗವಂತನನ್ನು ಸ್ಮರಿಸಿದ್ದೇ ಆದರೆ, ಮಾನವನು ತಪ್ಪದೆ ಉದ್ಧಾರವಾಗುತ್ತಾನೆ – ಎಂದು ಅತ್ರಿಯು ತಿಳಿಸು ತ್ತಾನೆ. ಭಗವತ್ ಪಾರಾಯಣ ಮಾಡುತ್ತಾ ಸತ್ಕರ್ಮ ಹಾಗೂ ಧರ್ಮ ಕಾರ್ಯಗಳ ಆಶ್ರಯ ಪಡೆದದ್ದೇ ಆದರೆ, ಅಂತಹ ವ್ಯಕ್ತಿಯು ಉತ್ತಮ ಗತಿ ಯನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲ –

ವಿದ್ವೇಷಾದಪಿ ಗೋವಿಂದ ದಮಘೋಷಾತ್ಮಜಃ ಸ್ಮರನ್ |
ಶಿಶುಪಾಲೋ ಗತಃ ಸ್ವರ್ಗಂ ಕಿಂ ಪುನಸ್ತತ್ಪರಾಯಣಃ || 9–4 ||

ಹೇಗಾದರಾಗಲಿ, ಎಲ್ಲ ಕಾಲಗಳಲ್ಲೂ ಪರಮಾತ್ಮನ ಸ್ಮರಣೆ ಮಾಡಿ,

ಭಗವಂತನ ಗುಣಾನುಭವವನ್ನು ಪಡೆಯುತ್ತಾ, ಧ್ಯಾನ, ಸತ್ಸಂಗ, ಕಥಾಲಾಪ ಗಳಿಂದ ಪರಮಾತ್ಮನಲ್ಲಿ ಮಗ್ನನಾಗಿರುವ ಪ್ರಯತ್ನ ಮಾಡುತ್ತಿರಬೇಕು.

## 2. ಅತ್ರಿ ಸಂಹಿತಾ

ಇದು ಅತ್ರಿ ಮಹರ್ಷಿಯಿಂದ ರಚಿತವಾದ ಧರ್ಮಶಾಸ್ತ್ರ ಸಂಹಿತೆಯಾಗಿದೆ. ಶ್ಲೋಕಗಳಿಂದ ಕೂಡಿರುವ ಈ ಕೃತಿಯು ಸುಮಾರು 400 ಶ್ಲೋಕಗಳನ್ನು ಹೊಂದಿದೆ. ಇದರಲ್ಲಿ ಮುಖ್ಯವಾಗಿ ನಾಲ್ಕು ವರ್ಣಗಳ ಧರ್ಮ, ರಾಜಧರ್ಮ, ಆಹಾರ ಶುದ್ಧಿ, ದ್ರವ್ಯ ಶುದ್ಧಿ, ಗೃಹಶುದ್ಧಿ, ಇಷ್ಟಾಪೂರ್ತ ಶುದ್ಧಿ, ಗೋದಾನ, ವಿದ್ಯಾದಾನ, ಅನ್ನ ವಸ್ತ್ರಾದಿ ದಾನಧರ್ಮಗಳು, ಅಶೌಚ ಮೀಮಾಂಸೆ, ಪ್ರಾಯಶ್ಚಿತ್ತ ವಿಧಾನಗಳಲ್ಲಿ ಕೃಚ್ಛ್ರ, ಸಂತಾಪನ, ಚಾಂದ್ರಾಯಣ ಇತ್ಯಾದಿ ವ್ರತಗಳ ವಿವೇಚನೆ, ಪಾತಕ–ಮಹಾಪಾತಕ ಹಾಗೂ ಉಪಪಾತಕಗಳ ವರ್ಣನೆ, ಶುದ್ಧಿ ಮೀಮಾಂಸಾ ಹಾಗೂ ಶ್ರಾದ್ಧ ಇತ್ಯಾದಿ ವಿಷಯಗಳ ವಿವೇಚನೆಯನ್ನು ಇದರಲ್ಲಿ ಮಾಡಲಾಗಿದೆ.

### ಪರಧರ್ಮ

ಸಂಹಿತೆಯ ಪ್ರಾರಂಭದಲ್ಲಿಯೇ ನಾಲ್ಕು ವರ್ಣಗಳ ಧರ್ಮದ ವರ್ಣನೆ ಯನ್ನು ನೀಡಿದ್ದು, ಆಯಾಯಾ ವರ್ಣಗಳಿಗೆ ಅನುಸಾರ ಕರ್ತವ್ಯ ಕರ್ಮ ಗಳನ್ನು ನಿಗದಿ ಮಾಡಲಾಗಿದೆ. ಪರಧರ್ಮ ಅಥವಾ ಬೇರೆ ವರ್ಣ ಧರ್ಮವನ್ನು ತ್ಯಜಿಸಬೇಕು. ಪರಧರ್ಮದ ಆಚರಣೆಗಳನ್ನು ಆಚರಿಸಬಾರದು. ಪರಸ್ತ್ರೀಯು ಎಷ್ಟೇ ಸುಂದರಳಾದರೂ, ಅಂತಹವಳನ್ನು ಸರ್ವಥಾ ತ್ಯಜಿಸಬೇಕು –

ಪರಧರ್ಮೋ ಭವೇತ್ ತ್ಯಾಜ್ಯಃ ಸುರೂಪಪರದಾರಯಾತ್ || 18 ||

### ರಾಜಧರ್ಮ

ರಾಜಧರ್ಮದ ಬಗ್ಗೆ ನಿರ್ದೇಶನ ನೀಡುತ್ತಾ 1. ದುಷ್ಟವ್ಯಕ್ತಿಗೆ ಶಿಕ್ಷೆ ನೀಡಬೇಕಾದುದು ಆವಶ್ಯಕ, 2. ಸಜ್ಜನರು ಅಥವಾ ಸಾಧುಗಳನ್ನು ಪೂಜಿಸ ಬೇಕು ಅಥವಾ ಅಂತಹವರನ್ನು ಆದರಿಸಬೇಕು, 3. ನ್ಯಾಯಯುತವಾಗಿ ಸನ್ಮಾರ್ಗದ ಮುಖಾಂತರ ರಾಜ್ಯಖಜಾನೆಯನ್ನು ವೃದ್ಧಿಗೊಳಿಸಬೇಕು, 4. ಒಂದು ವಸ್ತುವಿನ ಬಗ್ಗೆ ಅನೇಕರು ಅಧಿಕಾರ ಪಡೆಯಲು ಪ್ರಯತ್ನಿಸಿದಾಗ, ಒಂದು ವಸ್ತುವನ್ನು ಪಡೆಯಲು ಅನೇಕರು ಪ್ರಯತ್ನಿಸಿದಾಗ, ಯಾರ ಬಗ್ಗೆಯೂ ಪಕ್ಷಪಾತ ತೋರದೆ ನಿಜವಾದ ಅಧಿಕಾರ ಉಳ್ಳವನಿಗೆ ಅಥವಾ

ಅದನ್ನು ಪಡೆಯಲು ನಿಜವಾದ ಯೋಗ್ಯತೆ ಉಳ್ಳವನಿಗೆ ಅದನ್ನು ನೀಡಬೇಕು, 5. ರಾಷ್ಟ್ರಕ್ಕೆ ಅಥವಾ ಪ್ರಜೆಗಳಿಗೆ ಎಲ್ಲ ರೀತಿಯಲ್ಲಿ ರಕ್ಷಣೆ ನೀಡುವ, ಅಂತಹ ವರಿಗೆ ಸೇವೆ ಮಾಡಬೇಕು –

ಈ ಐದೂ ಕರ್ಮಗಳನ್ನು ರಾಜರು ಪಂಚಯಜ್ಞಗಳ ತರಹ ನೆರವೇರಿಸ ಬೇಕು.

ಪ್ರಜೆಗಳನ್ನು ಸರಿಯಾಗಿ ನ್ಯಾಯಯುತವಾಗಿ ಪರಿಪಾಲಿಸುವುದರಿಂದ, ಅವರಿಗೆ ಸೇವೆ ಮಾಡುವುದರಿಂದ ರಾಜನಿಗೆ ಪುಣ್ಯವು ಪ್ರಾಪ್ತವಾಗುತ್ತದೆ. ಇಂತಹ ಪುಣ್ಯವನ್ನು ದ್ವಿಜೋತ್ತಮರು ಸಹಸ್ರ ಯಜ್ಞಗಳನ್ನು ಮಾಡಿದರೂ ಪಡೆಯಲಾರರು. ಅಂದರೆ ಧರ್ಮ ಪೂರ್ವಕವಾಗಿ ಪ್ರಜೆಗಳ ಪರಿಪಾಲನೆ ಮಾಡುವುದರಿಂದ ರಾಜರುಗಳಿಗೆ ಸಹಸ್ರಯಜ್ಞಗಳನ್ನು ಮಾಡುವುದರಿಂದ ಸಿಗುವ ಫಲಕ್ಕಿಂತಲೂ ಹೆಚ್ಚಿನದಾದ ಫಲವು ಸಿಗುವುದು.

ದುಷ್ಟಸ್ಯದಂಡಃ ಸುಜನಸ್ಯಾ ಪೂಜಾ ನ್ಯಾಯೇನ ಕೋಶಸ್ಯ ಚ
ಸಂಪ್ರವೃದ್ಧಿಃ |
ಅಪಕ್ಷಪಾತೋಽರ್ಥಿಷು ರಾಷ್ಟ್ರರಕ್ಷಾ ಪಂಚೈವಯಜ್ಞಾಃ ಕಥಿತಾ
ನೃಪಾಣಾಂ || 28 ||
ಯತ್ ಪ್ರಜಾಪಾಲನೆ ಪುಣ್ಯಂ ಪ್ರಾಪ್ನುವಂತೀಹ ಪಾರ್ಥಿವಾಃ |
ನ ತು ಕ್ರತು ಸಹಸ್ರೇಣ ಪ್ರಾಪ್ನುವಂತಿ ದ್ವಿಜೋತ್ತಮಾಃ || 29 ||

## ಸದ್ಗೃಹಸ್ಥನ ಲಕ್ಷಣಗಳು

1. ಅಸೂಯೆ ಇಲ್ಲದಿರುವುದು, 2. ಶೌಚ, 3. ಮಂಗಳ, 4. ಅನಾಯಾಸ, 5. ಅಸ್ಪೃಹಾ (ಅಲ್ಪ ತೃಪ್ತಿ), 6. ದಮ, 7. ದಾನ ಹಾಗೂ 8. ದಯೆ. – ಈ ಎಂಟೂ ಶ್ರೇಷ್ಠ ವ್ಯಕ್ತಿಯಲ್ಲಿ ಅಥವಾ ಸದ್ಗೃಹಸ್ಥ ನಲ್ಲಿ ಇರಬೇಕಾದ ಲಕ್ಷಣಗಳು.

**1.** ಅನಸೂಯೆ : ಸದ್ಗುಣಿಗಳ ಉತ್ತಮ ಗುಣಗಳನ್ನು ಖಂಡನೆ ಮಾಡುವವನು, ಅಲ್ಪ ಗುಣಿಗಳನ್ನು ಹೊಗಳುವವನು, ಇತರರ ತಪ್ಪುಗಳನ್ನು ಸರಿಪಡಿಸದಿರುವವನು–ಇಂತಹವನು ಸಮಾಜದ ಕಂಟಕನು. ಸದ್ಗೃಹಸ್ಥನು ಇಂತಹ ಭಾವನೆಯನ್ನು ಹೊಂದಿರಬಾರದು.

ನ ಗುಣಾನ್ ಗುಣಿನೋ ಹಂತಿ ಸ್ತೌತಿ ಚಾನ್ಯಾನ್ ಗುಣಾನಪಿ |
ನ ಹಸ್ಯೈಚ್ಛಾನ್ಯದೋಷಾಂಶ್ಚ ಸಾಽನ ಸೂಯಾ ಪ್ರಕೀರ್ತಿತಾ || 34 ||

2. ಶೌಚ : ಅಭಕ್ಷ್ಯ-ಭಕ್ಷ್ಯಣಗಳನ್ನು ತ್ಯಜಿಸುವುದು, ನಿಂದಿತ ವ್ಯಕ್ತಿಯೊಂದಿಗೆ ಸ್ನೇಹ ಮಾಡದಿರುವುದು, ಆಚಾರ (ಶೌಚಾಚಾರ-ಸದಾಚಾರ) ವಿಚಾರಗಳ ಪರಿಪಾಲನೆ-ಇವನ್ನು ಶೌಚವೆಂದು ಕರೆಯಲಾಗುವುದು.

ಅಭಕ್ಷ್ಯ ಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತೈಃ |
ಆಚಾರೇಷು ವ್ಯವಸ್ಥಾನಂ ಶೌಚಮಿತ್ಯಭಿಧೀಯತೇ || 35 ||

3. ಮಂಗಳ : ಶ್ರೇಷ್ಠ ವ್ಯಕ್ತಿಗಳು ಹಾಗೂ ಶಾಸ್ತ್ರ ಮರ್ಯಾದೆ ತಿಳಿದವರ ಪ್ರಶಂಸನೀಯ ಆಚರಣೆಗಳನ್ನು ಪ್ರತಿ ನಿತ್ಯ ಅನುಸರಿಸುವುದು, ನಿಂದನೀಯ ಆಚರಣೆಗಳನ್ನು ಪರಿತ್ಯಜಿಸುವುದು – ಇಂತಹ ಧರ್ಮದ ತತ್ತ್ವಗಳನ್ನು ಮಹರ್ಷಿಗಳ ಮುಖಾಂತರ ತಿಳಿಯುವುದಕ್ಕೆ 'ಮಂಗಳ' ಎಂದು ಹೆಸರು.

ಪ್ರಶಸ್ತಾಚರಣಂ ನಿತ್ಯಮಪ್ರಶಸ್ತ ವಿವರ್ಜನಂ |
ಏತದ್ಧಿ ಮಂಗಲಂ ಪ್ರೋಕ್ತ ಮೃಷಿಭಿರ್ಧರ್ಮದರ್ಶಿಭಿಃ || 36 ||

4. ಅನಾಯಾಸ : ಶುಭಾಶುಭ ಕರ್ಮಗಳನ್ನು ಮಾಡುವಾಗ ಶರೀರಕ್ಕೆ ನೋವುಂಟಾಗುವುದು ಸ್ವಾಭಾವಿಕ. ಇಂತಹ ಕಾರ್ಯಗಳನ್ನು ಹೆಚ್ಚಾಗಿ ಮಾಡಬಾರದು. ಸಹಜವಾಗಿ, ಸುಲಭವಾಗಿ ಮಾಡುವ ಕಾರ್ಯ ವೈಖರಿಗೆ 'ಅನಾಯಾಸ' ಎಂದು ಕರೆಯಲಾಗುತ್ತದೆ –

ಶರೀರಂ ಪೀಡ್ಯತೆ ಯೇನ ಶುಭೇನ ತ್ಯಶುಭೇನ ವಾ |
ಅತ್ಯಂತಂ ತನ್ನ ಕುರ್ಯಾತ ಅನಾಯಾಸಃ ಸ ಉಚ್ಯತೇ || 37 ||

5. ಅಸ್ಪೃಹಾ : ತನಗೆ ಏನು ದಕ್ಕುತ್ತದೊ ಅದರಲ್ಲೆ ವ್ಯಕ್ತಿಯು ತೃಪ್ತಿ ಪಟ್ಟುಕೊಳ್ಳಬೇಕು. ಬೇರೆಯವರ ಆಸ್ತಿಗೆ, ಹೆಣ್ಣಿಗೆ ಆಸೆ ಪಡಬಾರದು. ಈ ಭಾವನೆಗೆ 'ಅಸ್ಪೃಹಾ' ಎಂದು ಕರೆಯಲಾಗುತ್ತದೆ.

ಯಥೋತ್ಪನ್ನೇನ ಕರ್ತವ್ಯಃ ಸಂತೋಷಃ ಸರ್ವವಸ್ತುಷು |
ನ ಸ್ಪೃಹೇತ್ ಪರದಾರೇಷು ಸೋಽಸ್ಪೃಹಾ ಪರಿಕೀರ್ತಿತಾ || 38 ||

6. ದಮ : ಬೇರೆಯವರಿಂದ ಮಾನಸಿಕ, ಶಾರೀರಿಕ ದುಃಖ ಉಂಟಾದಾಗ ಅದಕ್ಕೆ ಆ ವ್ಯಕ್ತಿಯ ಮೇಲೆ ಸೇಡು ತೀರಿಸಿಕೊಳ್ಳುವುದು, ಅವನ ಮೇಲೆ ಕೋಪಗೊಳ್ಳುವುದು ಸೂಕ್ತವಲ್ಲ. ಉದ್ವೇಗದಲ್ಲಿ ಅವನನ್ನು ಕೊಲೆ ಮಾಡಲೂ ಬಹುದು. ಇಂತಹ ಉದ್ವೇಗ ಹಾಗೂ ಸೇಡಿನ ಭಾವಕ್ಕೆ ಒಳಗಾಗದೆ ಮಾನವನು ಸಮಸ್ಥಿತಿಯಲ್ಲಿ ಇರಬೇಕು. ಇದನ್ನೇ 'ದಮ' ಎಂದು ಕರೆಯುವುದು.

ಬಾಹ್ಯಮಾಧ್ಯಾತ್ಮಿಕಂ ವಾಪಿ ದುಃಖಮುತ್ಪಾದ್ಯತೆ ಪರೈಃ |
ನ ಕುಪ್ಯತಿ ನ ವಾ ಹಂತಿ ದಮಃ ಇತ್ಯಭಿಧೀಯತೆ || 39 ||

**7. ದಾನ :** ಪ್ರತಿ ದಿನವೂ ಸ್ವಲ್ಪಮಟ್ಟಿಗಾದರೂ ದಾನ ನೀಡ ಬೇಕಾದುದು ಧರ್ಮ. ತನಗೆ ಇರುವ ಅಲ್ಪ ಆದಾಯದಲ್ಲೆ, ಮನಸ್ಸಂತೋಷ ಕ್ಕಾಗಿ ಪ್ರಯತ್ನಮಾಡಿ, ಸ್ವಲ್ಪವನ್ನಾದರೂ ನೀಡುವಿಕೆಯನ್ನು 'ದಾನ' ಎಂದು ಕರೆಯುತ್ತೇವೆ.

ಅಹನ್ಯಹನಿ ದಾತವ್ಯಮದೀನೇ ನಾಂತರಾತ್ಮನಾ |
ಸ್ತೋಕಾದಪಿ ಪ್ರಯತ್ನೇನ ದಾನಮಿತ್ಯಭಿದೀಯತೇ || 40 ||

**8. ದಯೆ :** ಬಂಧು ಭಾಂಧವರನ್ನು, ಮಿತ್ರರನ್ನು, ಶತ್ರುಗಳನ್ನು, ದ್ವೇಷಿಸುವವರನ್ನು, ಪ್ರಪಂಚದಲ್ಲಿನ ಎಲ್ಲರನ್ನೂ, ಜೀವಿಗಳನ್ನೂ ತನ್ನಂತೆ ಕಾಣ ಬೇಕು. ಅವರ ಸುಖದುಃಖಗಳನ್ನು ತನ್ನ ಸುಖದುಃಖವೆಂದು ಪ್ರತಿಯೊಬ್ಬರೂ ಭಾವಿಸಬೇಕು. ಸರ್ವರನ್ನೂ ಸಮಭಾವ ದಿಂದ ಕಾಣುವ ರೀತಿಗೆ 'ದಯೆ' ಎಂದು ಕರೆಯುತ್ತಾರೆ ಈ ಮಾತನ್ನೇ ಬಸವಣ್ಣನವರು 'ದಯೆಯೇ ಧರ್ಮದ ಮೂಲವಯ್ಯ' ಎಂದು ಬಹಳ ಸುಲಭವಾದ ರೀತಿಯಲ್ಲಿ ತಿಳಿಸಿದ್ದಾರೆ –

ಪರಸ್ಮಿನ್ ಬಂಧುವರ್ಗೇ ವಾ ಮಿತ್ರೇ ದ್ವೇಷೇ ರಿಪೌ ತಥಾ |
ಆತ್ಮವದ್ವರ್ತಿತವ್ಯಂ ಹಿ ದಯೈಷಾ ಪರಿಕೀರ್ತಿತಾ || 41 ||

ಈ ಲಕ್ಷಣಗಳಿಂದ ಕೂಡಿದ ಶುದ್ಧರೂಪದ ಸದ್ಗೃಹಸ್ಥನು ತನ್ನ ಉತ್ತಮ ರೀತಿಯ ಧರ್ಮಾಚರಣೆಯಿಂದ ಶ್ರೇಷ್ಠ ಸ್ಥಾನವನ್ನು ಪಡೆಯುವನು ಅವನಿಗೆ ಮತ್ತೆ ಜನ್ಮ ವಿರುವುದಿಲ್ಲ. ಅವನು, ಜೀವನ್ಮುಕ್ತನಾಗುವನು –

ಯಶ್ಚೈತೈರ್ಲಕ್ಷಣೈರ್ಯುಕ್ತೋ ಗೃಹಸ್ಥೋಽಪಿ ಭವೇದ್ ದ್ವಿಜಃ |
ಸ ಗಚ್ಛತಿ ಪರಂ ಸ್ಥಾನಂ ಜಾಯತೇ ನೇತ ವೈ ಪುನಃ || 42 ||

## ಪರರಿಗಾಗಿ ಸತ್ಕರ್ಮಗಳನ್ನು ಮಾಡುವುದು

ಬೇರೆಯವರಿಗಾಗಿ, ಅವರ ಒಳ್ಳೆಯದಕ್ಕಾಗಿ ಸ್ನಾನ, ದಾನ, ಜಪ, ತಪ, ವ್ರತೋಪವಾಸ ಇತ್ಯಾದಿ ಧರ್ಮಕಾರ್ಯಗಳನ್ನು ಮಾಡಿದ್ದೇ ಆದರೆ ಅಂತಹವ ನಿಗೆ ಸದಾ ಶುಭವಾಗುವುದು. ಮಾಡಿದವನು ನಿಮಿತ್ತ ಮಾತ್ರದವನಾದರೂ, ಅವನೂ ಪುಣ್ಯದಲ್ಲಿ ಸಹಭಾಗಿಯಾಗುವನು. ಹೀಗೆ ಯಾರಿಗಾಗಿ ಮಾಡುವನೊ ಅವನಿಗೂ ಮತ್ತು ಮಾಡಿದವನಿಗೂ–ಇಬ್ಬರಿಗೂ ಒಳ್ಳೆಯದಾಗುತ್ತದೆ, ಪುಣ್ಯ

ಫಲವು ಇಬ್ಬರಿಗೂ ಲಭಿಸುತ್ತದೆ. ಆದುದರಿಂದಲೇ ಪರರಿಗಾಗಿಯೂ ನಾವು ಉತ್ತಮ ಕಾರ್ಯಗಳನ್ನು ಮಾಡಬೇಕಾಗಿದೆ. ಇದನ್ನು ಕುರಿತು ಅತ್ರಿ ಮಹರ್ಷಿಯು ಹೀಗೆಂದು ತಿಳಿಸುತ್ತಾನೆ –

ಪ್ರತಿಕೃತಿ ಕುಶಮಯೀಂ ತೀರ್ಥವಾರಿಷು ಮಜ್ಜಯೇತ್ ।
ಯಮುದ್ದಿ ಶ್ಯ ನಿಮಜ್ಜೇತ ಅಷ್ಟಭಾಗಂ ಲಭೇತ್ ಸಃ ॥
ಮಾತರಂ ಪಿತರಂ ವಾಪಿ ಭ್ರಾತರಂ ಸುಹೃದಂ ಗುರುಂ ।
ಯಮುದ್ದಿಶ್ಯ ನಿಮಜ್ಜೇತ ದ್ವಾದಶಾಂಶಫಲಂ ಲಭೇತ್ ॥

ಬೇರೆಯವರ ಒಳ್ಳೆಯದಕ್ಕಾಗಿ ಶುದ್ಧ ಮನಸ್ಸಿನಿಂದ ಯಾರು ನದಿಯಲ್ಲಿ ಕುಶಮಯೀ ಮೂರ್ತಿಯನ್ನು ಮಾಡಿ ಅದರಲ್ಲಿ ಬೇರೆಯವರ ವ್ಯಕ್ತಿತ್ವವನ್ನು ಅವಗಾಹನೆ ಮಾಡಿ ನಿಮಿತ್ತನಾಗಿ ಸ್ನಾನ ಮಾಡುವರೊ ಅಂತಹವರಿಗೆ ಪೂರ್ಣ ಫಲವು ದೊರೆಯುತ್ತದೆ, ಮಾಡಿದಾತನಿಗೂ ಎಂಟು ಭಾಗ ಪುಣ್ಯ ಲಭಿಸುತ್ತದೆ. ಇದೇ ರೀತಿಯಲ್ಲಿ ತಂದೆ, ತಾಯಿ, ಸಹೋದರ, ಮಿತ್ರ, ಗುರು ಅಥವಾ ಯಾರದೇ ನಿಮಿತ್ತವಾಗಲಿ ಪುಣ್ಯ ತೀರ್ಥದಲ್ಲಿ ಸ್ನಾನ ಮಾಡಿದ್ದೇ ಆದರೆ ಅಂತಹವರಿಗೆ 12 ಭಾಗ ಪುಣ್ಯವು ಲಭಿಸುತ್ತದೆ.

## ವೇದ ಪ್ರಮಾಣ

ವೇದಂ ಗೃಹೀತ್ವಾ ಯಃ ಕಶ್ಚಿಚ್ಛಾಸ್ತ್ರಂ ಚೈವಾವ ಮನ್ಯತೇ ।
ಸ ಸಹ್ಯಃ ಪಶುತಾಂ ಯಾತಿ ಸಂಭವಾನೇಕ ವಿಂಶತಿಂ ॥ 11 ॥

ವೇದವನ್ನು ಪ್ರಮಾಣವೆಂದು ಭಾವಿಸಿ ಅದಕ್ಕೆ ಸಂಪೂರ್ಣ ಗೌರವವನ್ನು ತೋರುವವನು ಸೂಕ್ತವಾದುದನ್ನೇ ಮಾಡುತ್ತಾನೆ. ಕಾರಣ, ಧಾರ್ಮಿಕ ವಿಷಯಗಳಲ್ಲಿ ವೇದವೇ ಎಲ್ಲದಕ್ಕಿಂತಲೂ ಬಹಳ ಮುಖ್ಯವಾದ ಪ್ರಮಾಣ – 'ಧರ್ಮ ಜಿಜ್ಞಾ ಸಮಾನಾನಾಂ ಪ್ರಮಾಣಂ ಪರಮಂ ಶೃತಿಃ ।' (ಮನು 2/13).

ಹೀಗೆ ಗೌರವವನ್ನು ತೋರುವಾಗ ಅಂಧಶ್ರದ್ಧೆ ರೂಪವನ್ನು ಅದು ಪಡೆಯಬಾರದು. ವೇದಗಳನ್ನು ನಂಬಿ, ಇತರೇ ಸ್ಮೃತಿ ಇತ್ಯಾದಿ ಇತರೇ ಶಾಸ್ತ್ರಗಳನ್ನು ಅಪಮಾನಗೊಳಿಸಬಾರದು. ಹೀಗೆ ಮಾಡಿದ್ದೇ ಆದರೆ ಅಂತಹವನು ಪಾಪ ಮಾಡಿದಂತಾಗುತ್ತದೆ. ಅವನು ಮೃಗ ಸಮಾನನಾಗುತ್ತಾನೆ.

# 33. ವಸಿಷ್ಠ ಸ್ಮೃತಿ

ತ್ಯಾಗ, ತಪಸ್ಸು, ವೈರಾಗ್ಯ, ಕ್ಷಮಾಗುಣಗಳ ಸಾಕಾರ ಮೂರ್ತಿ ವಸಿಷ್ಠನು. ಈತನ ಸದಾಚಾರ ಪರಾಯಣತೆಯು ಎಲ್ಲರಿಗೂ ಆದರ್ಶವಾಗಿದೆ. ವೇದಗಳು, ಪುರಾಣಗಳು, ಇತಿಹಾಸಗಳು-ಇತ್ಯಾದಿ ಎಲ್ಲ ಪ್ರಾಚೀನ ಗ್ರಂಥಗಳಲ್ಲೂ ಈತನ ಅಲೌಕಿಕ, ಪಾವನ ಜೀವನ ಚರಿತ್ರೆಯನ್ನು ವರ್ಣಿಸಲಾಗಿದೆ. ಕಾರುಣ್ಯ, ಪರೋಪಕಾರ ಹಾಗೂ ಧರ್ಮೋಪದೇಶಗಳಿಗೆ ಸಂಬಂಧಪಟ್ಟ ಇವರ ಆಖ್ಯಾನಗಳು ಮೇಲೆ ತಿಳಿಸಿದ ಗ್ರಂಥಗಳಲ್ಲಿ ಸವಿಸ್ತಾರವಾಗಿ ಚಿತ್ರಿಸಲಾಗಿದೆ.

ವೇದಗಳಲ್ಲಿ ಈತನನ್ನು ಮಿತ್ರಾವರುಣನ ಮಗನೆಂದು ತಿಳಿಸಲಾಗಿದೆ. ಈತನು ಮಂತ್ರದ್ರಷ್ಟಾರ ಋಷಿಯೂ ಆಗಿರುವನು. ವೇದಗಳಲ್ಲಿ ಅನೇಕ ಸೂಕ್ತಗಳಿಗೆ, ಮಂತ್ರಗಳಿಗೆ ಈತನು ದರ್ಶನವನ್ನು ರಚಿಸಿದ್ದಾನೆ. ಋಗ್ವೇದದ ಏಳನೇ ಮಂಡಲವನ್ನು 'ವಾಸಿಷ್ಠ ಮಂಡಲ' ಎಂದು ಕರೆಯಲಾಗುವುದು. ಈತನು ಸೃಷ್ಟಿಕರ್ತಾ ಬ್ರಹ್ಮನ ಮಾನಸ ಪುತ್ರನೆಂದು ಪುರಾಣಗಳು ವರ್ಣಿಸಿವೆ. ಈ ವಸಿಷ್ಠ ಗೋತ್ರದ ಪ್ರವರ್ತಕನೂ ಈತನೇ ಆಗಿದ್ದಾನೆ. ಸಪ್ತರ್ಷಿಗಳಲ್ಲಿ ಈತನೂ ಒಬ್ಬನು.

ಪತಿವ್ರತೆಯರಿಗೇ ಆದರ್ಶಳಾದ ಅರುಂಧತಿಯು ಈತನ ಧರ್ಮಪತ್ನಿ. ಇವರಿಬ್ಬರನ್ನೂ ಬೇರೆ ಮಾಡಲು ಸಾಧ್ಯವೇ ಇಲ್ಲ. ಸಪ್ತರ್ಷಿ ಮಂಡಲದಲ್ಲಿಯೂ ಕೂಡ ವಸಿಷ್ಠ ಮಹರ್ಷಿಯೊಂದಿಗೆ ಮಾತಾ ಅರುಂಧತಿಯೂ ವಿರಾಜಮಾನಳಾಗಿದ್ದಾಳೆ. ಆದರ್ಶ ದಂಪತಿಗಳಾದ ಇವರನ್ನು ಅನೇಕರು ಆರಾಧಿಸುತ್ತಾರೆ. ಈ ಕಾರಣದಿಂದಲೇ ವಿವಾಹ ಸಂದರ್ಭಗಳಲ್ಲಿ 'ಅರುಂಧತಿ ದರ್ಶನ' ಎಂಬ ಕಾರ್ಯಕ್ರಮವೂ ಇದೆ.

ಶಕ್ತಿಪುತ್ರ, ವೇದವ್ಯಾಸ ಹಾಗೂ ಶುಕದೇವರವರುಗಳು ವಸಿಷ್ಠನ ಪೌತ್ರ-ಪ್ರಪೌತ್ರ ಪರಂಪರೆಯಲ್ಲಿ ವಿರಾಜಮಾನರಾಗಿದ್ದಾರೆ. ಶ್ರೀರಾಮನಿಗೆ ಗುರುಗಳೂ ಆಗಿದ್ದ ಈತನು ವಿದ್ಯಾ-ಬುದ್ಧಿ, ಯೋಗ ಜ್ಞಾನ, ಸರ್ವಜ್ಞತೆ, ಆಚಾರ ನಿಷ್ಠೆಗಳಿಗೆ ಹೆಸರಾಗಿದ್ದನು. ಈತನ ಬ್ರಹ್ಮ ತೇಜಸ್ಸಿನ ಮುಂದೆ ವಿಶ್ವಾಮಿತ್ರನ ಕ್ಷಾತ್ರ ಬಲವೂ ಸೋಲನ್ನೊಪ್ಪಿಕೊಂಡಿತು. ಸದಾ ಕಾಲದಲ್ಲೂ

ಈತನು ಸಕಲ ಜೀವಿಗಳ ಹಿತದ ಬಗೆಗೇ ಚಿಂತಿಸುತ್ತಿದ್ದ. ಸ್ವಾರ್ಥವೇ ಈತನಲ್ಲಿರಲಿಲ್ಲ; ಸದಾ ಪರಮಾರ್ಥವೇನೇ ! ಭಗವದ್ಭಕ್ತರಲ್ಲಿ ಈತನ ಹೆಸರು ಮೊದಲ ಸಾಲಿನಲ್ಲಿದೆ.

ವಸಿಷ್ಠನ ವ್ಯಕ್ತಿತ್ವದ ಬಹಳ ಮುಖ್ಯ ವಿಶೇಷವೇನೆಂದರೆ ಈತನ ಗೋ ಸೇವೆ ಹಾಗೂ ಗೋ-ಭಕ್ತಿ. ಈ ಗುಣ ಅನೇಕರಿಗೆ ಆದರ್ಶವಾಗಿದೆ. ಕಾಮಧೇನುವಿನ ಪುತ್ರಿಯಾದ ನಂದಿನಿ ಎನ್ನುವ ಹೆಸರಿನ ಹಸುವು ಈತನ ಆಶ್ರಮದಲ್ಲಿತ್ತು. ಈ ದಂಪತಿಗಳು ಈ ಗೋವನ್ನು ಪ್ರತಿನಿತ್ಯವೂ ಪೂಜಿಸಿ, ಅದಕ್ಕೆ ಸೇವಾ ಶುಶ್ರೂಷೆಗಳನ್ನು ಮಾಡುತ್ತಿದ್ದರು. ಅನಂತ ಶಕ್ತಿ ಸಂಪನ್ನ ವಾದ ನಂದಿನಿಯು ತನ್ನ ಪ್ರಭಾವದಿಂದ ಅನೇಕ ದುರ್ಲಭ ವಸ್ತುಗಳನ್ನು ಸದಾ ಒದಗಿಸುವ ಕೃಪೆ ಮಾಡುತ್ತಿತ್ತು.

ವಸಿಷ್ಠನ ಧರ್ಮೋಪದೇಶಗಳು ಬಹಳಷ್ಟು ಲೋಕೋಪಕಾರಿಯಾದವು ಗಳು. 'ಯೋಗವಾಸಿಷ್ಠ' ಎನ್ನುವ ಗ್ರಂಥವು ಈತನ ಹೆಸರಿನಲ್ಲಿಯೇ ಪ್ರವರ್ತಿತ ವಾಗಿದೆ. ಈತನ ಧರ್ಮಶಾಸ್ತ್ರೀಯ ಹಾಗೂ ಆಚಾರ ಸಂಬಂಧದ ಮರ್ಯಾದೆ ಗಳನ್ನು 'ವಸಿಷ್ಠ ಧರ್ಮಸೂತ್ರ' ಹಾಗೂ 'ವಸಿಷ್ಠ ಸ್ಮೃತಿ' ಎನ್ನುವ ಗ್ರಂಥ ಗಳಲ್ಲಿ ಸಂಗ್ರಹಿಸಿಡಲಾಗಿದೆ.

## 1. ವಸಿಷ್ಠ ಧರ್ಮ ಸೂತ್ರ

ಇದನ್ನು 'ವಸಿಷ್ಠ ಧರ್ಮಶಾಸ್ತ್ರ' ಎಂದ ಕರೆಯಲಾಗುತ್ತದೆ. ಧರ್ಮಾ ಧರ್ಮ ಹಾಗೂ ಕರ್ತವ್ಯಾಕರ್ತವ್ಯದ ನಿರ್ಣಯದಲ್ಲಿ ಈ ಗ್ರಂಥವು ವಿಶೇಷ ಸ್ಥಾನ ಹಾಗೂ ಗೌರವಗಳನ್ನು ಪಡೆದಿದೆ. ಈ ಗ್ರಂಥವು ಸೂತ್ರಗಳ ರೂಪದಲ್ಲಿ ರಚಿತವಾಗಿದೆ. ಆದುದರಿಂದಲೇ ಇದನ್ನು 'ವಸಿಷ್ಠ ಧರ್ಮಸೂತ್ರ' ಎಂದು ಕರೆಯುತ್ತಿರುವುದು. ಇದು ಸುಂದರ ಶೈಲಿಯಲ್ಲಿದೆ. ಇದರಲ್ಲಿ 30 ಅಧ್ಯಾಯ ಗಳಿವೆ. ಆದರೆ ಎಲ್ಲ ಸೂತ್ರಗಳ ರೂಪದಲ್ಲಿವೆ. ನಡುನಡುವೆ ಅಲ್ಲಲ್ಲಿ ಶ್ಲೋಕಗಳೂ ಇವೆ.

### ಧರ್ಮದ ಲಕ್ಷಣ ಹಾಗೂ ಧರ್ಮಾಚರಣೆಯ ಫಲ

ಧರ್ಮದ ಈ ಗ್ರಂಥದ ಪ್ರಾರಂಭದಲ್ಲಿ ತಿಳಿಸುತ್ತಾ 'ಶ್ರುತಿ' ಹಾಗೂ 'ಸ್ಮೃತಿ'ಗಳಲ್ಲಿ ತಿಳಿಸಿರುವ ವಿಹಿತ ಆಚರಣೆಗಳೇ 'ಧರ್ಮ'ವೆಂದು ತಿಳಿಸಲಾಗಿದೆ– 'ಶ್ರುತಿ ಸ್ಮೃತಿ ವಿಹಿತೋ ಧರ್ಮಃ' (1-3). ಒಂದು ವೇಳೆ ಅಂತಹವು ಈ

ಶ್ರುತಿ, ಸ್ಮೃತಿಗಳಲ್ಲಿ ಕಂಡು ಬರದಿದ್ದಲ್ಲಿ, ಅಂತಹ ಸಂದರ್ಭದಲ್ಲಿ ಮಹಾ ಪುರುಷರು, ಮಹರ್ಷಿಗಳು ನಡೆಸುವ ಆಚಾರ-ವಿಚಾರಗಳು, ಅವರು ನಡೆಸುವ ವ್ಯವಹಾರಗಳು, ಕರ್ಮಗಳು-ಇತ್ಯಾದಿಗಳನ್ನು ಧರ್ಮಾಚರಣೆಯ ರೂಪದಲ್ಲಿನ ಪ್ರಮಾಣಗಳೆಂದು ತಿಳಿಯಬೇಕು. ಅಂದರೆ ಮಹಾತ್ಮರು, ಶಿಷ್ಟ ಮಹನೀಯರು ಹೇಗೆ ಜೀವನ ನಡೆಸಿದ್ದಾರೆ, ಹೇಗೆ ವರ್ತಿಸಿದ್ದಾರೆ ಎಂಬುದನ್ನು ಪ್ರಮಾಣ ವನ್ನಾಗಿ ತಿಳಿದು, ಆಚರಣೆಯಲ್ಲಿ ತಂದುಕೊಳ್ಳಬೇಕು – 'ತದಲಾಭೇ ಶಿಷ್ಟಾ ಚಾರಃ ಪ್ರಮಾಣಮ್' (1–4).

ಮಹಾತ್ಮರು ಯಾರು, ಎಂತಹವರು ಎಂಬುದನ್ನು ತಿಳಿದುಕೊಳ್ಳಲು ವಸಿಷ್ಠನು ಒಂದು ಸೂತ್ರವನ್ನು ತಿಳಿಸಿದ್ದಾನೆ – 'ಶಿಷ್ಟಃ ಪುನರಕಾತ್ಮಾ' (1–5) ಎಂಬುದು. ಅಂದರೆ ತ್ಯಾಗಿಯು, ನಿಷ್ಕಾಮನೂ ಆಗಿರುವವನೇ 'ಶಿಷ್ಟ'ನು ಎಂದರ್ಥ.

ಆತನು ಧರ್ಮಾಚರಣೆಯ ಫಲವನ್ನು ಹೀಗೆಂದು ವಿವರಿಸಿದ್ದಾನೆ– ಧರ್ಮವನ್ನು ಅವಹೇಳನ ಮಾಡದೆ ಅದನ್ನು ಅಕ್ಷರಶಃ, ನಿಜ ಅರ್ಥದಲ್ಲಿ ಪಾಲಿಸುವವನು ಧಾರ್ಮಿಕ ವ್ಯಕ್ತಿ ಎನಿಸಿಕೊಳ್ಳುತ್ತಾನೆ. ಇಂತಹವನೇ ಪ್ರಪಂಚದಲ್ಲಿ ಶ್ರೇಷ್ಠತಮ ವ್ಯಕ್ತಿಯಾಗುವನು. ಇಂತಹವನು ಮಾನ್ಯನೂ, ಪೂಜನೀಯನೂ ಆಗಿರುವನು. ಕಡೆಯಲ್ಲಿ ಇಂತಹ ವ್ಯಕ್ತಿ ಸ್ವರ್ಗಲೋಕವನ್ನು ಪಡೆಯುವನು. ಧರ್ಮಾತ್ಮ ವ್ಯಕ್ತಿಯು ಈ (ಇಹ) ಲೋಕದಲ್ಲಿ ಅಲ್ಲದೆ ಪರಲೋಕದಲ್ಲಿಯೂ ಮಾನ್ಯತೆ ಪಡೆದವನಾಗಿರುತ್ತಾನೆ –

'ಜ್ಞಾತ್ವಾ ಚಾನುತಿಷ್ಠನ್ ಧಾರ್ಮಿಕಃ ಪ್ರಶಸ್ಯತಮೋ ಭವತಿ ಲೋಕೇ, ಪ್ರೇತ್ಯ ಚ ಸ್ವರ್ಗಂ ಲೋಕಂ ಸಮಶ್ರುತೇ ! ' (1–2).

## ಆರು ರೀತಿಯ ದುಷ್ಟರು

ಮಹಾಪಾತಕಗಳು, ಉಪಪಾತಕಗಳ ಪ್ರಕರಣಗಳಲ್ಲಿ ದುಷ್ಟನ ಬಗ್ಗೆ ವಿವರಗಳನ್ನು ನೀಡಲಾಗಿದೆ.

ಆರು ರೀತಿಯ ಪಾತಕಿಗಳಿದ್ದಾರೆ– 1. ಬೆಂಕಿ ಹಚ್ಚುವವನು, 2. ವಿಷ ನೀಡುವವನು, 3. ಕೈನಲ್ಲಿ ಶಸ್ತ್ರ ಹಿಡಿದು ಅಕಾರಣವಾಗಿ ಜನರನ್ನು ಕೊಲ್ಲು ವುವನು, 4. ಧನವನ್ನು ಅಪಹರಿಸುವವನು, 5. ದಿವ್ಯಕ್ಷೇತ್ರಗಳಲ್ಲಿನ ದೇವ ಮಾನ್ಯವನ್ನು ಅಪಹರಿಸುವವನು, 6. ಸ್ತ್ರೀಯರನ್ನು ಅಪಹರಿಸುವವನು.

ಅಗ್ನಿದೋ ಗರಳಶ್ಚೈವ ಶಸ್ತ್ರಪಾಣಿರ್ಧನಾಪಹಃ |
ಕ್ಷೇತ್ರಧಾರ ಹರಶ್ಚೈವ ಷಡೇತೇ ಹ್ಯಾತದಾಯಿನಃ || 3-19 ||

ಇಂತಹ ಪಾತಕಿಗಳ ಸ್ನೇಹ ಮಾಡಿದಲ್ಲಿ, ಅವರ ಜೊತೆ ಸೇರಿದಲ್ಲಿ, ಹಾಗೆ ಸೇರಿದ ವ್ಯಕ್ತಿಯೂ ಒಂದು ವರ್ಷದಲ್ಲಿ ಪತಿತನಾಗುತ್ತಾನೆ-'ಸಂವತ್ಸರೇಣ ಪತತಿ ಪತಿತೇನ ಸಹಾಚರನ್ !' (1-22).

ಇಂತಹ ಪತಿತ ವ್ಯಕ್ತಿಯನ್ನು ಕೊಂದರೂ ಪಾಪ ಬರುವುದಿಲ್ಲ – 'ಆತತಾಯಿನಂ ಹತ್ವಾ ನಾತ್ರ ಪ್ರಾಣಚ್ಛೇತ್ತುಃ ಕಿಂಚಿತ್ ಕಿಲ್ಬಿಷಮಾಹುಃ |' (3-16)

## ಸುಜ್ಞಾನದಿಂದ ಬುದ್ಧಿಯ ಶುದ್ಧಿ

ಶರೀರದ ಶುದ್ಧಿಯು ನೀರಿನಿಂದ (ಸ್ನಾನದಿಂದ) ಆಗುತ್ತದೆ. ಸತ್ಯ, ಧರ್ಮಗಳನ್ನು ಪಾಲಿಸುವುದರಿಂದ ಮನಸ್ಸಿನ ಶುದ್ಧಿ ಆಗುವುದು. ವಿದ್ಯೆ ಹಾಗೂ ತಪಸ್ಸುಗಳಿಂದ ಜೀವಾತ್ಮದ ಶುದ್ಧಿಯು ಆಗುವುದು. ಇದೇ ರೀತಿಯಲ್ಲಿ ಜ್ಞಾನ (ಸುಜ್ಞಾನ) ದಿಂದ ಬುದ್ಧಿಯು ಶುದ್ಧಿಯಾಗುವುದು-ಹೀಗೆಂದು ವಸಿಷ್ಠನು ಈ ಕೃತಿಯ ಮೂರನೇ ಅಧ್ಯಾಯದಲ್ಲಿ ತಿಳಿಸಿದ್ದಾನೆ.

ಅದ್ಭಿರ್ಗಾತ್ರಾಣಿ ಶುದ್ಧ್ಯಂತಿ ಮನಃ ಸತ್ಯೇನ ಶುದ್ಧ್ಯತಿ |
ವಿದ್ಯಾ ತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುದ್ಧ್ಯತಿ ||3-56||

## ಆಚಾರ – ಅನಾಚಾರ

ಸದಾಚಾರ ಹಾಗೂ ಶೌಚಾಚಾರಗಳು ಧರ್ಮಾಚರಣೆಗೆ ಮೂಲ. ನಿಂದಿತ ಆಚರಣೆಗಳನ್ನು ಸರ್ವಥಾ ತ್ಯಜಿಸಬೇಕು.

ಇಂತಹ ಸದಾಚಾರಗಳ ಪಾಲನೆಯೇ ಪರಮಧರ್ಮ. ಆಚಾರ ಹೀನ ವ್ಯಕ್ತಿಯು ಸಂಪೂರ್ಣ ವೇದಗಳನ್ನು ಅಭ್ಯಾಸ ಮಾಡಿದವನಾದಾಗ್ಯೂ, ಆ ವೇದಗಳೂ ಕೂಡ ಅಂತಹವನನ್ನು ಪವಿತ್ರನನ್ನಾಗಿ ಮಾಡುವುದಿಲ್ಲ. ಜೀವನದ ಕಡೆಯಲ್ಲಿ ಅಂತಹವನನ್ನು ವೇದಗಳೂ ದೂರ ಮಾಡುತ್ತವೆ. ಗೂಡಿನಿಂದ ಹಾರಿಹೋದ ಹಕ್ಕಿಗೆ ರೆಕ್ಕೆಗಳಿಲ್ಲದಂತಾಗುತ್ತದೆ.

ಆಚಾರಹೀನಂ ನ ಪುನಂತಿ ವೇದಾ
ಯದ್ಯಪ್ಯಧೀತಾಃ ಸಹ ಷಡ್ಭಿರಂಗೈಃ |

ಧನಾನ್ಯಂಸ್ಸೇನಂ ಮೃತ್ಯುಕಾಲೇ ತ್ಯಜಂತಿ
ನೀಡಂ ಶಕುಂತಾ ಇವ ಜಾತಪಕ್ಷಾಃ || 6–3 ||

ಇದಕ್ಕೆ ಬದಲಾಗಿ, ಆಚಾರವನ್ನು ಪಾಲಿಸುತ್ತಾ ಇದ್ದಲ್ಲಿ ಧರ್ಮವು ಫಲ ಪ್ರದವಾಗುತ್ತದೆ, ಸಮಸ್ತ ಐಶ್ವರ್ಯವೂ ಲಭಿಸುತ್ತದೆ, ಲೋಕಾಭಿರಾಮತ್ವವು ಪ್ರಾಪ್ತವಾಗುತ್ತದೆ. ಆದುದರಿಂದ ಸದಾಚಾರ ಪಾಲನೆಯಿಂದಲೇ ದುರ್ಲಕ್ಷಣ ಗಳು, ದೋಷಗಳು ಸಂಪೂರ್ಣವಾಗಿ ದೂರವಾಗುತ್ತವೆ.

ಆಚಾರಾತ್ ಫಲತೇ ಧರ್ಮೋ ಹ್ಯಾಚಾರಾತ್ ಫಲತೇ ಧನಂ |
ಆಚಾರಾಚ್ಛ್ರಿಯಮಾಪ್ನೋತಿ ಆಚಾರೋ ಹಂತ್ಯಲಕ್ಷಣಂ || (6–7)

## ಅಗ್ರಾಹ್ಯ ಮಣ್ಣು

ಈ ಕೃತಿಯಲ್ಲಿ ಸ್ವೀಕರಿಸಲಾಗದ ಮಣ್ಣುಗಳ ಬಗ್ಗೆ ವಸಿಷ್ಠನು ತಿಳಿಸು ತ್ತಾನೆ. ಈ ಅಗ್ರಾಹ್ಯ ಮಣ್ಣು ಐದು ರೀತಿಯದ್ದಾಗಿವೆ. ಈ ಐದೂ ಸ್ಥಾನಗಳಲ್ಲಿ ದೊರೆಯುವ ಮಣ್ಣು ಸ್ವೀಕಾರಾರ್ಹವಲ್ಲ ಎಂದು ವಸಿಷ್ಠನು ತಿಳಿಸುತ್ತಾನೆ –

1. ನೀರಿನಲ್ಲಿರುವ ಮಣ್ಣು, 2. ದೇವಸ್ಥಾನದ ಪ್ರಾಂಗಣದಲ್ಲಿನ ಮಣ್ಣು, 3. ಹುತ್ತದ ಮಣ್ಣು, 4. ಇಲಿ ಬಿಲದ ಬಳಿ ಸಂಗ್ರಹವಾಗಿರುವ ಮಣ್ಣು, ಹಾಗೂ 5. ಶೌಚಕ್ಕೆ ಉಪಯೋಗಿಸಿ ಉಳಿದಿರುವ ಮಣ್ಣು.

ಶುದ್ಧಿ ಮಾಡುವುದಕ್ಕಾಗಿ ಈ ಐದೂ ಸ್ಥಳಗಳಲ್ಲಿ ದೊರೆಯುವ ಮಣ್ಣನ್ನು ಉಪಯೋಗಿಸಬಾರದು.

ಅಂತರ್ಜಲೇ ದೇವಗೃಹೇ ವಲ್ಮೀಕೆ ಮೂಷಕಸ್ಥಲೇ |
ಕೃತಶೌಚಾವಶಿಷ್ಟಾ ಚ ನ ಗ್ರಾಹ್ಯಾಃ ಪಂಚ ಮೃತ್ತಿಕಾಃ ||6–15||

## ಉತ್ತಮ ಬ್ರಾಹ್ಮಣನ ಲಕ್ಷಣಗಳು

ಯೋಗತಪೋ ದಮೋ ದಾನಂ ಸತ್ಯಂ ಶೌಚಂ ದಯಾ ಶ್ರುತಂ |
ವಿದ್ಯಾ ವಿಜ್ಞಾನ ಮಾಸ್ತಿಕ್ಯ ಮೇತದ್ ಬ್ರಾಹ್ಮಣ ಲಕ್ಷಣಂ ||6–20||

ಎನ್ನುವುದರ ಪ್ರಕಾರ ಯೋಗ, ತಪಸ್ಸು, ದಮ (ಇಂದ್ರಿಯ ನಿಗ್ರಹ), ದಾನ, ಸತ್ಯ, ಶೌಚ, ದಯೆ, ವೇದಾಧ್ಯಯನ, ವಿದ್ಯೆ, ವಿಜ್ಞಾನ ಹಾಗೂ ಆಸ್ತಿಕತೆಗಳು ಬ್ರಾಹ್ಮಣನ ಲಕ್ಷಣಗಳಾಗಿವೆ.

ಶಾಂತನಾಗಿರುವವನೂ, ದಾಂತನಾಗಿರುವವನೂ, ಜಿತೇಂದ್ರಿಯನೂ,

ವೇದಾಧ್ಯಯನದಿಂದ ತುಂಬಿದ ಕಿವಿಗಳನ್ನು ಉಳ್ಳವನೂ, ಪ್ರಾಣಿಹಿಂಸೆಯಿಂದ ದೂರವಿದ್ದು ಸಂಪೂರ್ಣವಾಗಿ ಅಹಿಂಸಾವ್ರತ ಪರಾಯಣನಾಗಿರುವವನೂ, ದಾನ ಸ್ವೀಕರಿಸುವುದರಲ್ಲಿ ಸಂಕೋಚಪಡುವವನೂ – ಇಂತಹವನು ಬ್ರಾಹ್ಮಣರ ಉದ್ಧಾರ ಕಾರ್ಯದಲ್ಲಿ ಸಫಲನಾಗುವವನು.

ಯೇ ಶಾಂತದಾಂತಾಃ ಶೃತಿ ಪೂರ್ಣ ಕರ್ಣಾ
ಜಿತೇಂದ್ರಿಯಾಃ ಪ್ರಾಣಿವಧಾನ್ನಿವೃತ್ತಾಃ |
ಪ್ರತಿಗ್ರಹೇ ಸಂಕುಂಚಿತಾಗ್ರಹಸ್ತಾಸ್ತೇ
ಬ್ರಾಹ್ಮಣಾಸ್ತಾರಯಿತುಂ ಸಮರ್ಥಾಃ || 6–21 ||

## ಗೃಹಸ್ಥ ಧರ್ಮ

ಈ ಕೃತಿಯ ಎಂಟನೆಯ ಅಧ್ಯಾಯದಲ್ಲಿ ಗೃಹಸ್ಥ ಧರ್ಮದ ವಿವರಗಳನ್ನು ಸಂಕ್ಷೇಪವಾಗಿ ವಿವರಿಸಲಾಗಿದೆ. ಇದರಲ್ಲಿ ಅತಿಥಿ ಸೇವೆಯನ್ನು ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಅದರ ಮಹತ್ವವನ್ನೂ ಸ್ಪಷ್ಟಗೊಳಿಸಲಾಗಿದೆ. ಅತಿಥಿ ಬಂದ ಕೂಡಲೇ ಎದ್ದು ಸ್ವಾಗತಿಸುವುದು, ಆತನಿಗೆ ಆಸನ ನೀಡುವುದು, ಮಧುರವಾಗಿ ಆತನೊಂದಿಗೆ ಮಾತನಾಡುವುದು, ಉತ್ತಮ ಊಟ ಹಾಗೂ ಶಯನದ ವ್ಯವಸ್ಥೆ ಮಾಡುವುದು. ಈ ರೀತಿಯಲ್ಲಿ ತುಂಬು ಆದರದಿಂದ ಆತನನ್ನು ಸತ್ಕರಿಸಬೇಕೆಂದು ಇದರಲ್ಲಿ ತಿಳಿಸಲಾಗಿದೆ.

ಗೃಹೇಷ್ವಭ್ಯಾಗತಂ ಪ್ರತ್ಯುತ್ಥಾನಾಸನಶಯನ
ವಾಕ್ಸೂನೃತಾನ ಸೂಯಾಭಿರ್ಮಾನಯೇತ್ || 8–12 ||

ನಾಲ್ಕೂ ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಹೆಚ್ಚು ಗೌರವಯುತ ವಾದುದು. ಎಲ್ಲ ನದಿ, ಮಹಾನದಿಗಳೂ ಕಡೆಯಲ್ಲಿ ಸಮುದ್ರದಲ್ಲಿ ಆಶ್ರಯ ಪಡೆಯುವಂತೆ, ಸಕಲ ಜೀವಜಂತುಗಳೂ ತಾಯಿಯ ಆಶ್ರಯದಲ್ಲಿರುವಂತೆ, ಎಲ್ಲ ಭಿಕ್ಷಾರ್ಥಿಗಳೂ (ಬ್ರಹ್ಮಚಾರಿ, ವಾನಪ್ರಸ್ಥ ಹಾಗೂ ಸನ್ಯಾಸಿ) ಗೃಹಸ್ಥನ ಆಶ್ರಯ ಪಡೆಯುತ್ತಾರೆ –

ಯಥಾ ಮಾತರಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ |
ಏವಂ ಗೃಹಸ್ಥಮಾಶ್ರಿತ್ಯ ಸರ್ವೇ ಜೀವಂತಿ ಭಿಕ್ಷವಃ || 8–16 ||

ಆದುದರಿಂದ ಗೃಹಸ್ಥನು ಯಥಾಶಕ್ತಿ ಅನ್ನ, ನೀರು ನೀಡುವುದರ ಮುಖಾಂತರ ಎಲ್ಲ ಜೀವಿಗಳ ಸೇವೆ ಮಾಡಬೇಕು. ಇದೇ ಗೃಹಸ್ಥನ ಮುಖ್ಯ ಧರ್ಮ–'ಯಥಾಶಕ್ತಿ ಚಾನ್ನೇನ ಸರ್ವ ಭೂತಾನಿ'. (8–13)

## ಎಲ್ಲ ಆಶ್ರಮಗಳ ಸಾಮಾನ್ಯ ಧರ್ಮ

ನಾಲ್ಕೂ ಆಶ್ರಮಗಳಿಗೂ ಅದರದರದೇ ಬೇರೆ ಬೇರೆ ಧರ್ಮಗಳಿವೆ. ಅದನ್ನು ಆಯಾ ಆಶ್ರಮ ಧರ್ಮದೊಂದಿಗೆ ಸೇರಿಸಿ ಬ್ರಹ್ಮಚರ್ಯ ಧರ್ಮ, ಗೃಹಸ್ಥ ಧರ್ಮ ಎಂಬುದಾಗಿ ಹೇಳಲಾಗುತ್ತದೆ. ಆಯಾಯಾ ಆಶ್ರಮಕ್ಕೆ ಅದರದ್ದೇ ಆದ ಗೊತ್ತಾದ ಧರ್ಮ ಸೇವನೆಗಳು ಇರುತ್ತವೆ. ಗೃಹಸ್ಥಾಶ್ರಮ ದಲ್ಲಿ ಸಂತಾನವನ್ನು ಪಡೆಯುವುದು ಒಂದು ಧರ್ಮ. ಆದರೆ ಸನ್ಯಾಸಾಶ್ರಮದಲ್ಲಿ ಸ್ತ್ರೀಯರನ್ನು ಸ್ವೀಕರಿಸುವುದು ಅಧರ್ಮವೂ, ಪಾಪ ಕರ್ಮವೂ ಆಗಿರುತ್ತದೆ. ಆದುದರಿಂದ ಆಯಾ ಆಶ್ರಮದಲ್ಲಿರುವಾಗ ಆಯಾಯಾ ಧರ್ಮವನ್ನೇ ಪಾಲಿಸ ಬೇಕು, ಇತರೇ ಆಶ್ರಮದ್ದಲ್ಲ.

ಆದರೆ ಈ ಎಲ್ಲ ಆಶ್ರಮಗಳಿಗೂ ಸಂಬಂಧಪಟ್ಟಂತಹ ಕೆಲವು ಸಾಮಾನ್ಯ ಧರ್ಮಗಳು ಇರುತ್ತವೆ. ಜಿಪುಣತನ, ಮಾತ್ಸರ್ಯ, ದುರಭಿಮಾನ, ದುರಹಂಕಾರ, ಅಶ್ರದ್ಧೆ, ಅನಾರ್ಜವ, ಸ್ವಪ್ರತಿಷ್ಠೆಯ ಪ್ರಶಂಸೆ, ಪರನಿಂದೆ, ದಂಭ, ಕ್ರೋಧ, ಲೋಭ, ಮೋಹ ಹಾಗೂ ಅಸೂಯೆ – ಇವುಗಳು ಯಾವ ಆಶ್ರಮದವರಲ್ಲಿಯೂ ಇರಬಾರದು. ಇವನ್ನು ತ್ಯಜಿಸಬೇಕು. ಇವುಗಳಿಗೆ ವಿರುದ್ಧವಾದುದು ಎಲ್ಲ ಆಶ್ರಮಗಳವರಲ್ಲಿಯೂ ಇರಬೇಕು.

## ಶ್ರಾದ್ಧದಲ್ಲಿ ಪವಿತ್ರತೆ

ಪಿತೃಗಳ ಶ್ರಾದ್ಧದಲ್ಲಿ ದುಹಿತಾಪುತ್ರ (ಮಗಳ ಮಗ), ಕುತಪ–ಕಾಲ, ಎಳ್ಳು-ಈ ಮೂರು ಇರಬೇಕಾದುದು ಅತ್ಯಂತ ಅವಶ್ಯಕ. ಇವು ಶ್ರಾದ್ಧಕ್ಕೆ ಪವಿತ್ರ ವಾದವುಗಳು. ಇದನ್ನು ನೆರವೇರಿಸುವಾಗ ಬಾಹ್ಯಾಭ್ಯಂತರ ಶೌಚ, ಕ್ರೋಧ ವಿಲ್ಲದಿರುವಿಕೆ ಹಾಗೂ ಆತುರಪಡಿಸದಿರುವಿಕೆಗಳು-ತುಂಬಾ ಅಗತ್ಯವಾದವು.

ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ |
ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಾಮ್ || 32 ||

ದಿನದ ಎಂಟನೇ ಒಂದು ಭಾಗದಲ್ಲಿ (3 ಘಂಟೆಗಳ ಕಾಲ) ಸೂರ್ಯನ ಬೆಳಕು ಮಂದ (ಕ್ಷೀಣ) ವಾಗಿರುತ್ತದೆ. ಆದುದರಿಂದ ಅಂತಹ ಸಮಯವನ್ನು ಕುತಪಕಾಲ ಎಂದು ಕರೆಯಲಾಗುತ್ತದೆ.

ದಿವಸ್ಯಾಷ್ಟಮೇ ಭಾಗೇ ಮಂದೀಭವತಿ ಭಾಸ್ಕರಃ |
ಸ ಕಾಲೋ ಕುತಪೋ ಜ್ಞೇಯಃ ಪಿತೃಣಾಂ ದತ್ತಮಕ್ಷಯಂ ||11-33||

## ಪುತ್ರವಂತನಾಗುವುದರ ಹಿರಿಮೆ

ಪುತ್ರನಿಲ್ಲದಿರುವುದು ಒಂದು ಶಾಪ. ('ಅಪುತ್ರಿಣ ಇತ್ಯಾಭಿಶಾಪಃ'17.3) ಮಗನ ಮುಖಾಂತರ ತಂದೆಯು ಲೋಕಗಳನ್ನೆ ಜಯಿಸುವನು. ಪೌತ್ರನಾದವನಿಗೆ ಅನನ್ಯತ್ವ ಪ್ರಾಪ್ತವಾಗುತ್ತದೆ. ಪ್ರಪೌತ್ರನಾದವನಿಗೆ ಸೂರ್ಯಲೋಕವು ದೊರೆಯುತ್ತದೆ.

ಪುತ್ರೇಣ ಲೋಕಾಜ್ಜಯತಿ ಪೌತ್ರೇಣಾನನ್ಯಮಶ್ನುತೇ |
ಅಥ ಪುತ್ರಸ್ಯ ಪೌತ್ರೇಣ ಪ್ರಧ್ನಸ್ಯಾಪ್ನೋತಿ ವಿಷ್ಟಪಂ ||17–5||

## ರಾಜನ ಧರ್ಮ

'ವಸಿಷ್ಠ ಧರ್ಮಸೂತ್ರ'ದ 19ನೇ ಅಧ್ಯಾಯದಲ್ಲಿ ರಾಜಧರ್ಮವನ್ನು ಸಂಕ್ಷೇಪವಾಗಿ ವಿವರಿಸಲಾಗಿದೆ. ಎಲ್ಲ ಜೀವಿಗಳ ಪಾಲನೆ–ಪೋಷಣೆ ಮತ್ತು ಅವುಗಳ ರಕ್ಷಣೆ ರಾಜನ ಮೊಟ್ಟ ಮೊದಲ ಸ್ವಧರ್ಮವಾಗಿದೆ. ಇದೇ ಅವನ ಮುಖ್ಯ ಧರ್ಮವೂ ಆಗಿದೆ. ರಾಜನಾದವನು ತನ್ನ ಸ್ವಾರ್ಥದ ಚಿಂತೆಯನ್ನು ಮಾಡಬಾರದು. ಪ್ರಜೆಗಳಿಗೆ ಒಳ್ಳೆಯದು ಮಾಡುವಿಕೆ, ಅವರ ಸುಖಕ್ಕಾಗಿ ಪ್ರಾಣವನ್ನೇ ಪಣವಾಗಿಡುವುದು, ಎಲ್ಲರೂ ಧರ್ಮಾಚರಣೆಯಲ್ಲಿ ಭಾಗವಹಿಸುವಂತೆ ಮಾಡುವುದು, ಪ್ರಜಾಕ್ಷೇಮಕ್ಕಾಗಿ ವಿವಿಧ ಕಾರ್ಯಗಳ ನಿರ್ವಹಣೆ ಇವೆಲ್ಲ ರಾಜತ್ವದ ಪರಮಸಿದ್ಧಿಗಾಗಿವೆ.

ಸ್ವಧರ್ಮೋ ರಾಜ್ಞಃ ಪಾಲನಂ ಭೂತಾನಾಂ
ತಸ್ಯಾನುಷ್ಠಾನಾತ್ ಸಿದ್ಧಿಃ || 19–1 ||

## ವಿವಿಧ ಧರ್ಮಗಳ ಫಲ

ದಾನ ಧರ್ಮವನ್ನು ಪರಿಪಾಲಿಸುವುದರಿಂದ ಎಲ್ಲ ಕಾಮನೆಗಳೂ ಫಲಪ್ರದಗೊಂಡು ಅವು ಪ್ರಾಪ್ತವಾಗುತ್ತವೆ. 'ದಾನೇನ ಸರ್ವಕಾಮಾನ್ ಅವಾಪ್ನೋತಿ' (29–1). ಬ್ರಹ್ಮಚರ್ಯ ಧರ್ಮವನ್ನು ಪಾಲಿಸುವುದರಿಂದ ವ್ಯಕ್ತಿಯು ಸುಂದರ ರೂಪವನ್ನು ಪಡೆಯುವನು. ಅಂತಹವನು ಚಿರಂಜೀವಿಯೂ ಆಗುವನು– 'ಚಿರಜೀವತ್ವಂ ಬ್ರಹ್ಮಚಾರೀ ರೂಪವಾನ್' (29-2). ಅಹಿಂಸಾ ಧರ್ಮವನ್ನು ಪಾಲಿಸುವುದರಿಂದ ಸ್ವರ್ಗಪ್ರಾಪ್ತಿಯಾಗುತ್ತದೆ – 'ಅಹಿಂಸ್ರುಪಪದ್ಯತೆ ಸ್ವರ್ಗಂ' (29–3). ಎಲ್ಲ ರೀತಿಗಳಲ್ಲೂ ಅಭಯಪ್ರದಾನ ನೀಡುವವನು ಸ್ಮೃತಿ ಮಂತನೂ, ಮೇಧಾವಿಯೂ ಆಗುವನು– 'ಸ್ಮೃತಿಮಾನ್ ಮೇಧಾವೀ

ಸರ್ವತೋಽಭಯದಾತಾ' (29–10). ವಿದ್ವಾಂಸನಾಗಿರುವವನು ಸಾಧು–ಮಹಾತ್ಮ ಅಥವಾ ಯೋಗಿಗಳ ಮುಖಾಂತರ ಗೊತ್ತಾದ ಆಚಾರ – ವಿಚಾರ ಪದ್ಧತಿಗಳನ್ನು ಅನುಸರಿಸುತ್ತಾ ಧರ್ಮ ಪರಿಪಾಲನೆಯನ್ನು ಮಾಡಿದ್ದೇ ಆದರೆ ಅಂತಹವನು ಮೋಕ್ಷವನ್ನು ಪಡೆಯುವನು –

ಆತ್ಯಂತಿಕಫಲಪ್ರದಂ ಮೋಕ್ಷಂ ಸಂಸಾರ ಮೋಚನಂ |
ಯೋಗಿನಾಂ ಸಮ್ಮತಂ ವಿದ್ವಾನಾಚಾರಮನವರ್ತತೇ ||29–21||

## ಆಸೆಯನ್ನು ಬಿಡು

ಆಸೆಯೇ ಎಲ್ಲ ದುಃಖಗಳ ಮೂಲ ಹಾಗೂ ಅಧರ್ಮದ ನೆಲೆ ಎಂದು ವಸಿಷ್ಠನು ತಿಳಿಸುತ್ತಾನೆ. ಆಸೆಯು ಉತ್ಕಟ ದುರಾಸೆಯನ್ನು ಉಂಟು ಮಾಡುತ್ತದೆ. ಇದು ಕಡಿಮೆಯಾಗುವುದೇ ಇಲ್ಲ, ಹೆಚ್ಚಾಗುತ್ತಲೇ ಹೋಗುತ್ತದೆ. ಇದನ್ನು ಅಂಕೆಯಲ್ಲಿ, ಹತೋಟಿಯಲ್ಲಿಡದಿದ್ದರೆ ಅವನು ಸಮೂಲವಾಗಿ ಪತನ ಗೊಳ್ಳುತ್ತಾನೆ. ಆದರೆ ಆಸೆಯನ್ನು ತ್ಯಜಿಸಿ, ಇದ್ದುದರಲ್ಲಿಯೇ ತೃಪ್ತಿ ಪಟ್ಟುಕೊಳ್ಳುವ ಮನೋಭಾವವನ್ನು ಹೊಂದಿರಬೇಕು, ಅಷ್ಟರಲ್ಲೆ ಸಂತೋಷ ಗೊಳ್ಳಬೇಕು. ಹೀಗೆ ಮಾಡಿದರೆ ಮಾನವನ ಅಭ್ಯುದಯವೂ ಆಗಿ, ಧರ್ಮ ವನ್ನೂ ಅವನು ಕಾಪಾಡುತ್ತಾನೆ.

ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ |
ಜೀವನಾಶಾ ಧನಾಶಾ ಚ ಜೀರ್ಯತೋಽಪಿ ನ ಜೀರ್ಯತಿ ||30–10||
ಯಾದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ |
ಯೋಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಂ ||30–11||

ಮಾನವನು ವೃದ್ಧನಾದ ಮೇಲೆ ಅವನ ಕೂದಲೂ ಜೀರ್ಣವಾಗುತ್ತದೆ, ಸುಕ್ಕುಗಟ್ಟುತ್ತದೆ. ಅಂತೆಯೇ ಅವನ ಹಲ್ಲುಗಳೂ ಉದುರಿಹೋಗುತ್ತವೆ. ಆದರೆ ಬದುಕಿರಬೇಕೆಂಬ ಆಸೆ ಹಾಗೂ ಧನದಾಹವು ಮಾನವನು ವೃದ್ಧನಾದರೂ ಕಡಿಮೆಯಾಗುವುದಿಲ್ಲ. ಈ ಆಸೆಯ ದೃಷ್ಟಿಯಿಂದ ಯುವಕನಂತೆ ಕಾಣಬೇಕೆಂದು ಪ್ರಯತ್ನಿಸುತ್ತಾನೆ. ಕಡಿಮೆ ಬುದ್ಧಿಯ ಮೂಢನು ಈ ದಾಹವನ್ನು ತ್ಯಾಗ ಮಾಡಲಾರ. ಅದು ಇವನಿಗೆ ತುಂಬಾ ಕಠಿಣವಾಗಿ ಕಾಣುತ್ತದೆ. ಶರೀರವು ಜೀರ್ಣವಾದರೂ, ಅವನ ದಾಹ ಜೀರ್ಣವಾಗುವುದಿಲ್ಲ. ಪ್ರಾಣ

ದೊಂದಿಗೆ ಹೋಗುವ ರೋಗದೊಂದಿಗೆ ಜೀವಂತವಿರುತ್ತಾನೆ. ಆಸೆಯನ್ನು ಸಂಪೂರ್ಣವಾಗಿ ತ್ಯಜಿಸಿದವನು ಪರಮ ಸುಖಿಯಾಗಿರುವನು.

### ಅಂತಿಮ ಉಪದೇಶ

ಧರ್ಮಂ ಚರತ ಮಾಽಧರ್ಮಂ ಸತ್ಯಂ ವದತ ನಾನೃತಂ ।
ದೀರ್ಘಂ ಪಶ್ಯತ ಮಾ ಹ್ರಸ್ವಂ ಪರಂ ಪಶ್ಯತ ಮಾಽಪರಂ ||30–1||

ಧರ್ಮವನ್ನೇ ಸದಾ ಆಚರಿಸು. ಅಧರ್ಮವನ್ನು ತ್ಯಜಿಸು. ಸದಾ ಸತ್ಯವನ್ನೇ ಹೇಳು. ಸುಳ್ಳನ್ನು ಎಂದಿಗೂ ಹೇಳಬೇಡ. ದೂರದರ್ಶಿತ್ವವನ್ನು ಹೊಂದು, ಚೆನ್ನಾಗಿ ಯೋಚನೆ ಮಾಡಿ ವಿವೇಕಪೂರ್ವಕವಾದ, ಧರ್ಮಾಧರ್ಮದ ನಿರ್ಣಯವನ್ನು ಮಾಡು. ಸಂಕೀರ್ಣನಾಗದಿರು. ಉದಾರಿಯಾಗಿರು. ಸದಾ ಪರಾತ್ಪರ ತತ್ತ್ವದ ಮೇಲೆಯೇ ದೃಷ್ಟಿ ಇರಿಸು. ಪರಮಾತ್ಮನಿಂದ ದೂರವಾದ ಯಾವುದೇ ಮಾಯಾಮೋಹದ ವಸ್ತುವಿನ ಮೇಲೂ ದೃಷ್ಟಿ ಹರಿಯಿಸಬೇಡ.

### 2. ವಸಿಷ್ಠ ಸ್ಮೃತಿ

ವಸಿಷ್ಠನ ಹೆಸರಿನಲ್ಲಿ ಒಂದು ಸ್ಮೃತಿಯೂ ಇದೆ. ಇದರಲ್ಲಿ ಏಳು ಅಧ್ಯಾಯಗಳೂ ಹಾಗೂ 1150 ಶ್ಲೋಕಗಳೂ ಇವೆ. ಈ ಸ್ಮೃತಿಯು ಮುಖ್ಯವಾಗಿ ವೈಷ್ಣವ ಧರ್ಮ ಮತ್ತು ವೈಷ್ಣವ ಭಕ್ತಿ ದರ್ಶನವನ್ನು ನೀಡುತ್ತದೆ. ವೈಷ್ಣವರ ಸದಾಚಾರ, ನಿತ್ಯಾನುಷ್ಠಾನ, ಪೂಜೆ, ಇಜ್ಯಾ, ಚರ್ಯಾ–ಇತ್ಯಾದಿಗಳ ಪ್ರತಿಪಾದನೆಯನ್ನು ಈ ಸ್ಮೃತಿಯು ನೀಡುತ್ತದೆ.

ವೈಷ್ಣವರ ಆಚಾರ, ಭಕ್ಷ್ಯಾಭಕ್ಷ್ಯ, ವೃತ್ತಿ–ಇತ್ಯಾದಿಗಳ ಬಗ್ಗೆ ವ್ಯಾಸ ಮುಂತಾದ ಋಷಿ – ಮುನಿಗಳು ವಸಿಷ್ಠನನ್ನು ಪ್ರಶ್ನಿಸಿದರು ಎಂದು ಈ ಕೃತಿಯ ಪ್ರಾರಂಭದಲ್ಲಿ ತಿಳಿಸಲಾಗಿದೆ. ಇದಕ್ಕೆ ಉತ್ತರವಾಗಿ ವಸಿಷ್ಠನು ಈ ಸ್ಮೃತಿಯನ್ನು ತಿಳಿಸಿದನು ಎಂದು ಹೇಳಲಾಗಿದೆ.

ಉತ್ತಮ ವೈಷ್ಣವನು ಯಾರು ಎಂಬುದರ ಬಗ್ಗೆ ವಸಿಷ್ಠನು ತಿಳಿಸುತ್ತಾ ಹೀಗೆಂದು ಹೇಳುತ್ತಾನೆ-ವೈಷ್ಣವನು ಮಂಗಳಕರವಾದ ಊರ್ಧ್ವಪುಂಡ್ರ ಹಾಗೂ ಸುದರ್ಶನ ಚಕ್ರದಿಂದ ಸುಶೋಭಿತನಾಗಬೇಕು. ಮಹಾ–ವಿಷ್ಣುವಿನ ಮಂತ್ರವನ್ನು ಜಪಿಸಬೇಕು. ಆ ಮಹಾ–ವಿಷ್ಣುವಿನ ಆರಾಧನೆಯನ್ನು ಮಾಡಬೇಕು. ಆ ಭಗವಂತನನ್ನು ಕುರಿತು ಪ್ರತಿನಿತ್ಯ ಜಪ–ಹೋಮಗಳನ್ನು ಮಾಡಬೇಕು,

ಆತನ ಪೂಜೆ ಮಾಡಬೇಕು, ಆತನ ಪುಣ್ಯಕಥೆಗಳನ್ನು ಆಲಿಸಬೇಕು. ಆತನ ಪವಿತ್ರ ಹೆಸರು (ವಿಷ್ಣು ಸಹಸ್ರನಾಮ ಇತ್ಯಾದಿ) ಗಳನ್ನು ಸಂಕೀರ್ತನೆ ಮಾಡಬೇಕು, ಆತನ ಪವಿತ್ರ ಚರಣಗಳನ್ನು ಪುಣ್ಯ ಜಲದಿಂದ ತೊಳೆಯಬೇಕು, ಆತನಿಗೆ ಅರ್ಪಿಸಿದ ಭೋಜನವನ್ನು ಪ್ರಸಾದ ರೂಪದಲ್ಲಿ ಸ್ವೀಕರಿಸಬೇಕು, ಆತನಿಗೆ ಅಷ್ಟಾಂಗ ಪ್ರಣಾಮಗಳನ್ನು ಸಲ್ಲಿಸಬೇಕು, ಆತನ ಎದುರುಗಡೆ ಗೀತ-ವಾದ್ಯ-ನೃತ್ಯಗಳ ಸೇವೆ ಮಾಡಬೇಕು (ದೇವಸ್ಥಾನಗಳಲ್ಲಿ), ಆತನ ಸ್ತೋತ್ರಗಳನ್ನು ಪಠಿಸಬೇಕು, ಆತನೇ ತನ್ನ ಸರ್ವಸ್ವವೆಂದು ತಿಳಿದು, ಸದಾ ಕಾಲದಲ್ಲೂ ಪೂಜಾ-ಸೇವೆಗಳನ್ನು ನಡೆಸಬೇಕು. ಹಣೆಯಲ್ಲಿ ಊರ್ಧ್ವಪುಂಡ್ರ ಹಾಗೂ ಬಾಹುಮೂಲದಲ್ಲಿ ಸುದರ್ಶನ ಚಕ್ರದ ಚಿಹ್ನೆಯನ್ನು ಧರಿಸಬೇಕು, ಕತ್ತಿನಲ್ಲಿ ಅಕ್ಷಮಾಲೆ ಹಾಗೂ ಕೈನಲ್ಲಿ ಪವಿತ್ರವನ್ನು ಧರಿಸಬೇಕು. ಹೀಗೆಂದು ಮೊದಲ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ವೈಷ್ಣವನ ಜಾತಕರ್ಮ ಹಾಗೂ ನಾಮಕರಣ ಸಂಸ್ಕಾರದ ಪ್ರಕ್ರಿಯೆಯನ್ನು ವರ್ಣಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ವೈಷ್ಣವ ಬಾಲಕರ ನಿಷ್ಕ್ರಮಣ ಹಾಗೂ ಅನ್ನಪ್ರಾಶನ, ಚೂಡಾಕರಣ, ಉಪನಯನ ಸಂಸ್ಕಾರಗಳ ವಿಧಿ - ವಿಧಾನಗಳನ್ನು ಪಾರಂಪರಿಕ ರೂಪದಲ್ಲಿ ವರ್ಣಿಸಲಾಗಿದೆ. ನಿಷ್ಕ್ರಮಣ ಸಂಸ್ಕಾರವು ನಾಲ್ಕು ತಿಂಗಳುಗಳಲ್ಲಿ ಮುಗಿಸಬೇಕೆಂದು ತಿಳಿಸಲಾಗಿದೆ. ಮನೆಯಿಂದ ಹೊರಗಡೆ ಬಾಲಕನನ್ನು ಕರೆದುಕೊಂಡು ಹೋಗಿ, ಸೂರ್ಯಮಂಡಲದಲ್ಲಿನ ಶ್ರೀಮನ್ನಾರಾಯಣನ ಧ್ಯಾನ ಮಾಡುತ್ತಾ ಸೂರ್ಯ ಮಂತ್ರದ ಜಪ ಮಾಡಬೇಕು, ತದನಂತರ ಸೂರ್ಯದರ್ಶನ ಮಾಡಿಸುವ ವಿಧಾನಗಳನ್ನು ತಿಳಿಸಲಾಗಿದೆ -

ಕುಮಾರಮೀಕ್ಷಯೇ ಭಾನುಂ ಜಪನ್ ವೈ ಸೂರ್ಯದೇವತಂ ||3-6||

ಮಗುವಿನ ಅನ್ನಪ್ರಾಶನವನ್ನು ಅದರ ಆರನೇ ತಿಂಗಳಿನಲ್ಲಿ ವಿಧಿಪೂರ್ವಕವಾಗಿ ನಡೆಸಬೇಕೆಂದು ತಿಳಿಸಲಾಗಿದೆ-

ಅಥಾನ್ನಪ್ರಾಶನಂ ಕುರ್ಯಾತ್ ಷಷ್ಠೇ ಮಾಸಿ ವಿಧಾನತಃ ||3-9||

ಮಗುವಿನ ಎಂಟನೇ ತಿಂಗಳಿನಲ್ಲಿ ವಿಧಿಪೂರ್ವಕವಾಗಿ ವಿಷ್ಣುಪೂಜೆಯನ್ನು ಮಾಡಿಸಬೇಕೆಂದು ನಿರ್ದೇಶಿಸಲಾಗಿದೆ. ಮೂರನೇ ವರ್ಷದಲ್ಲಿ ಚೂಡಾಕರಣ ಸಂಸ್ಕಾರ ಮಾಡಿಸುವ ಪ್ರಕ್ರಿಯೆಯನ್ನು ವರ್ಣಿಸಲಾಗಿದೆ. ಹುಟ್ಟಿನಿಂದ

ಎಂಟನೇ ಅಥವಾ ಆಧಾನಕಾಲದಿಂದ ಎಂಟನೇ ವರ್ಷದಲ್ಲಿ ಬ್ರಾಹ್ಮಣ ವಟುವಿಗೆ ಯಜ್ಞೋಪವೀತ ಸಂಸ್ಕಾರವನ್ನು ಮಾಡಬೇಕೆಂದು ತಿಳಿಸಿದೆ –

ಆಧಾನಾದಷ್ಟಮೇ ವರ್ಷೇ ಬ್ರಾಹ್ಮಣಸ್ಯೋಪನಯನಂ |
ಜನ್ಮಾಷ್ಟಮೇ ವಾ ಕರ್ತವ್ಯಂ ||3-37||

ತದನಂತರದಲ್ಲಿ ವಿಸ್ತಾರ ರೂಪದಲ್ಲಿ ಯಜ್ಞೋಪವೀತ – ಸಂಸ್ಕಾರದ ವಿಧಾನವನ್ನು ವರ್ಣಿಸಲಾಗಿದ್ದು, ಬ್ರಹ್ಮಚರ್ಯಾಶ್ರಮದ ಕರ್ತವ್ಯಗಳನ್ನು ಹಾಗೂ ಬ್ರಹ್ಮಚಾರಿಯ ದೈನಿಕ ಆಚಾರಗಳನ್ನು ಕೂಡ ವರ್ಣಿಸಲಾಗಿದೆ. ಗುರುವಿನ ಸಮೀಪದಲ್ಲಿ ಕುಳಿತು ಆತನಿಂದ ವಿದ್ಯೆಗಳ ಪರಿಜ್ಞಾನವನ್ನು ಪಡೆದು, ಗುರುವಿನ ಆಜ್ಞೆಯಿಂದ ಸ್ನಾತಕ ವ್ರತದ ಆಚರಣೆಯನ್ನು ಅನುಸರಿಸುವುದರ ಮುಖಾಂತರ ಗುರುವಿನ ಅನುಗ್ರಹವನ್ನು ಪಡೆಯಬೇಕು. ಬ್ರಹ್ಮಚರ್ಯಾಶ್ರಮದಲ್ಲಿ ಧರಿಸಬೇಕಾದ ಮೇಖಲಾ, ಅಜಿನ, ದಂಡ ಇತ್ಯಾದಿಗಳನ್ನು ಪರಿತ್ಯಾಗ ಮಾಡಿ, ಸ್ನಾನ ಮಾಡಿ, ನವೀನ ವಸ್ತ್ರಗಳನ್ನು ಧರಿಸಿ, ಕಟಕ – ಕುಂಡಲ ಇತ್ಯಾದಿ ಆಭೂಷಣಗಳನ್ನು ಧರಿಸಿ, ಮನೆಗೆ ಹಿಂತಿರುಗಬೇಕು.

ವಿರಕ್ತನಾಗಬೇಕೆಂದರೆ ನಿವೃತ್ತಿ ಮಾರ್ಗದ ಆಶ್ರಯ ಪಡೆದು, ಅದನ್ನು ಗ್ರಹಿಸಿ, ಅರಣ್ಯದ ಕಡೆ ಪ್ರಸ್ಥಾನಗೊಳ್ಳಬೇಕು. ಗೃಹಸ್ಥಾಶ್ರಮದಲ್ಲಿ ಆಸಕ್ತಿ ಉಳ್ಳವನಾದರೆ, ಮದುವೆ ಮಾಡಿಕೊಂಡು, ಗೃಹಸ್ಥ ಧರ್ಮದ ಪರಿಪಾಲನೆ ಮಾಡಬೇಕು.—

ವಿರಕ್ತಃ ಪ್ರವ್ರಜೇದ್ವಿತ್ವಾನನುರಕ್ತೋ ಗೃಹೇ ವಿಶೇತ್ || 4-1 ||

ಮುಂದಿನ ನಾಲ್ಕನೇ ಅಧ್ಯಾಯದಲ್ಲಿ ವಿವಾಹದ ವಿಧಿಗಳು, ನಂತರದ ಗೃಹಪ್ರವೇಶ ಹಾಗೂ ವೈಷ್ಣವ ಪೂಜೆಯ ದೀಕ್ಷೆಯ ವಿವರಗಳನ್ನು ಸವಿಸ್ತಾರವಾಗಿ ನೀಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸ್ತ್ರೀ–ಧರ್ಮ, ಪತಿವ್ರತಾ ಸ್ತ್ರೀಯರ ಕರ್ತವ್ಯಗಳ ವರ್ಣನೆ ಇದೆ. ಶೀಲವು ಹೆಣ್ಣಿಗೆ ಪ್ರಥಮ ಧರ್ಮ ಎಂದು ತಿಳಿಸಲಾಗಿದೆ. ಆ ಹೆಣ್ಣಿಗೆ ಪತಿಯೇ ದೇವರು. ಆತನೇ ಆವಳಿಗೆ ಬಂಧು, ಪರಮಗತಿ ಎಂದು ತಿಳಿಸಲಾಗಿದೆ. ಪತಿಯ ಆಜ್ಞೆಯ ಉಲ್ಲಂಘನೆ ಮಾಡುವುದರಿಂದ ಆ ಹೆಣ್ಣಿಗೆ ನರಕ ಪ್ರಾಪ್ತಿಯಾಗುತ್ತದೆ—

ಶೀಲಾಮೇನತು ನಾರೀಣಾಂ ಪ್ರಧಾನ ಧರ್ಮ ಉಚ್ಯತೆ || 5-1 ||

ಪತಿರ್ಹಿ ದೈವತಂ ನಾರ್ಯಾಃ ಪತಿರ್ಬಂಧುಃ ಪತಿರ್ಗತಿಃ || 5-2 ||
ತಾಸ್ಯಾಜ್ಞಾಂ ಲಂಘಯಿತ್ವೈವ ನಾರೀ ನರಕಮಾಪ್ನುಯಾತ್
|| 5-3 ||

'ಸ್ತ್ರೀಯು ಎಲ್ಲ ರೀತಿಗಳಲ್ಲಿಯೂ ರಕ್ಷಿಸಲ್ಪಡಬೇಕಾದವಳು'—ಈ ಸೂತ್ರವನ್ನು ಪ್ರತಿಪಾದಿಸುತ್ತಾ, ಸಂಸಾರದಲ್ಲಿ ಗಂಡನ ಅಣ್ಣ, ಚಿಕ್ಕಪ್ಪ, ಮೈದುನ, ಅತ್ತೆ, ಮಾವ ಮತ್ತು ಮಕ್ಕಳು-ಎನ್ನುವ ಅಂಶಗಳ ಮುಖಾಂತರ ಒಡವೆ, ವಸ್ತ್ರ ಹಾಗೂ ಊಟ ಇತ್ಯಾದಿಗಳಿಂದ ಹೆಣ್ಣನ್ನು ಗೌರವಿಸಬೇಕು. ಆ ಹೆಣ್ಣು ಆಷ್ಟೆ ಸಂಸಾರದಲ್ಲಿನ ಹಿರಿಯ - ಕಿರಿಯರನ್ನು ಸೇವೆ ಪೂಜೆಗಳಿಂದ ಉಪಚರಿಸಬೇಕು— ಎಂದು ವಸಿಷ್ಠನು ತಿಳಿಸುತ್ತಾನೆ.

ಭರ್ತೃಃ ಭ್ರಾತೃ ಪಿತೃವ್ಯೈಶ್ಚ ಶ್ವಶ್ರೂ ಶ್ವಶುರದೇವರೈಃ ||
ಪುತ್ರೈಶ್ಚ ಪೂಜನೀಯಾ ಸ್ತ್ರೀ ಭೂಷನಾಚ್ಛಾಂದನಾಶನೈಃ
|| 5-18 ||

ಹೆಣ್ಣು ಸದಾ ಸಂತೋಷದಿಂದಿದ್ದು ಸ್ವಯಂ ಸಂತುಷ್ಟಳಾಗಿರಬೇಕು. ಅವಳು ತನ್ನ ಸದ್ಗುಣಗಳ ಮುಖಾಂತರ ಪತಿಯನ್ನು ಸಂತುಷ್ಟಗೊಳಿಸಬೇಕು. ಅವಳು ಸದಾ ಧರ್ಮಾಚರಣೆಯಲ್ಲಿ ಪ್ರವೃತ್ತಳಾಗಿರಬೇಕು. ಸದಾ ಅವಳು ಪತಿ ಪರಾಯಣಳಾಗಿರಬೇಕು. ಕಠಿಣವಾದ ಮಾತುಗಳನ್ನು ಅವಳು ಹೇಳಲೇಬಾರದು. ಯಾವಾಗಲೂ ಮಧುರವಾದ ಮಾತುಗಳನ್ನೇ ಆಡಬೇಕು. ಊಟ, ವಸ್ತ್ರ, ದ್ರವ್ಯ ಇತ್ಯಾದಿಯವು ಯಾವುದೇ ಪ್ರಾಪ್ತವಾದರೂ, ಎಷ್ಟು ದೊರೆಯುತ್ತದೆಯೊ ಅಷ್ಟರಲ್ಲಿ ತೃಪ್ತರಾಗಬೇಕು. ಯಾವುದೇ ರೀತಿಯ ದುಃಖ, ಕಷ್ಟ, ಸಂತೋಷದಿಂದ ನಲುಗಿ ಹೋಗಬಾರದು. ಅತ್ಯಂತ ಕಷ್ಟಕರ ಪರಿಸ್ಥಿತಿಗಳಲ್ಲಿಯೂ ಕೂಡ ಪತಿಯನ್ನು ತ್ಯಜಿಸಬಾರದು. ಅವನನ್ನು ಸದಾ ಆದರ ಭಾವದಿಂದ ನೋಡಬೇಕು.

ಸಂತೋಷಂ ಪರಮಾಸ್ಥಾಯ ಪತಿಂ ಸಂತೋಷಯೇದ್ ಗುಣೈಃ |
ಸದಾ ಧರ್ಮಪಥೇ ಯುಕ್ತಾ ಸದಾ ಭರ್ತೃ ಪರಾಯಣಾ || 5-61 ||
ಪರುಷಂ ನ ವದೇತ್ ಕಿಂಚಿತ್ ಸದಾ ಮಧುರವಾಗ್ಭವೇತ್ |
ಯಥೋತ್ಪನ್ನೇನ ದ್ರವ್ಯೇಣ ಸಂತುಷ್ಟಾ ವಿಗತಜ್ವರಾ ||5-62||
ಪರಮಾಪದ್‌ಗತಾ ವಾಪಿ ಭರ್ತಾರಂ ನ ನಿಷೇಧಯೇತ್ ||5-63||

'ವಸಿಷ್ಠ ಸ್ಮೃತಿ'ಯ ಆರನೇ ಅಧ್ಯಾಯದಲ್ಲಿ ವೈಷ್ಣವರ ನಿತ್ಯನೈಮಿತ್ತಿಕ ಕಾರ್ಯಗಳ ವರ್ಣನೆ ಹಾಗೂ ಅವುಗಳ ವಿಧಿ ವಿಧಾನಗಳನ್ನು ವಿವರಿಸಲಾಗಿದೆ. ತುಂಬು ವಿಸ್ತಾರದ ರೀತಿಯಲ್ಲಿ ವಿಷ್ಣು ಪೂಜೆಯನ್ನು ಪ್ರತಿಪಾದಿಸಲಾಗಿದೆ. ವೈಷ್ಣವರ ಶೌಚಾಚಾರ, ಆಶೌಚ, ಶ್ರಾದ್ಧ ಭಕ್ಷ್ಯಾಭಕ್ಷ್ಯಗಳು ಹಾಗೂ ಶುದ್ಧ ತತ್ವಗಳ ವಿವೇಚನೆಯನ್ನು ಮಾಡಲಾಗಿದೆ.

ಕೊನೆಯ ಏಳನೆಯ ಅಧ್ಯಾಯದಲ್ಲಿ ಸಾಲಿಗ್ರಾಮದ ಮಹಿಮೆ, ಭಗವಾನ್ ಶ್ರೀ ಹರಿಯ ವಿಗ್ರಹದ ಹಿರಿಮೆಯನ್ನು ತಿಳಿಸಲಾಗಿದೆ. ದೇವಾಲಯದಲ್ಲಿ ವಿಷ್ಣು ಪ್ರತಿಮೆಯ ಸ್ಥಾಪನೆ, ಪ್ರಾಣ ಪ್ರತಿಷ್ಠೆ, ಮತ್ತೆ ಪೂಜೆ ಇತ್ಯಾದಿ ವಿಧಿಗಳನ್ನೂ ಕೂಡ ಈ ಅಧ್ಯಾಯದಲ್ಲಿ ಸವಿಸ್ತಾರವಾಗಿ ನಿರೂಪಿಸಲಾಗಿದೆ. ಶ್ರೀಮನ್ನಾರಾಯಣನ ಎರಡೂ ಕಡೆಗಳಲ್ಲಿ ಶ್ರಿದೇವಿ, ಭೂದೇವಿಯರನ್ನು ಸ್ಥಾಪಿಸಲಾಗಿದೆ—

ಶ್ರೀ ಭೂಮಿ ಸಹಿತಂ ದೇವಂ ಕರಾಯೇ ಚ್ಛುಭ ವಿಗ್ರಹಮ್ ||7-5||

ಭಗವಾನನ ವಿಗ್ರಹವನ್ನು ಪ್ರತಿಷ್ಠೆ ಮಾಡುವ ಸಮಯದಲ್ಲಿ ಶ್ರೀಮದ್ಭಾಗವತ, ವಿಷ್ಣು ಪುರಾಣ, ಶಾಂತಿ ಮಂತ್ರ, ಶ್ರೀಮದ್ಭಗವದ್ಗೀತೆ, ವಿಷ್ಣು ಸಹಸ್ರನಾಮಗಳ ಪಠನವನ್ನು ಶ್ರದ್ಧೆ, ಭಕ್ತಿ ಹಾಗೂ ಸಮಚಿತ್ತದಿಂದ ಮಾಡಬೇಕು—

ಪುರಾಣಂ ಶಾಂತಿ ಪಠನಂ ಶ್ರೀಗೀತಾ ಪಠನಂ ತಥಾ || 7-68 ||
ಸಹಸ್ರನಾಮ ಪಠನಂ ಕುರ್ಯಾದತ್ರ ಸಮಾಹಿತಃ || 7-69 ||

ಈ ರೀತಿಯಲ್ಲಿ ಈ 'ವಸಿಷ್ಠಸ್ಮೃತಿ'ಯಲ್ಲಿ ಆದ್ಯೋಪಾಂತವಾಗಿ ವೈಷ್ಣವ ಆಚಾರಗಳು, ವಿಷ್ಣು ಆರಾಧನೆಯ ವಿಧಾನಗಳನ್ನು ವರ್ಣಿಸಲಾಗಿದೆ. ವೈಷ್ಣವರಿಗೆ ಇದು ತುಂಬಾ ಉಪಯೋಗಕರವಾದುದು- ವೈಷ್ಣವರಿಗೇ ಅಲ್ಲದೆ ಇತರರಿಗೂ ಕೂಡ ಇದು ಆದರಣೀಯವಾಗಿ ಪರಿಣಮಿಸಿದೆ.

# 34. ವಿಷ್ಣು ಸ್ಮೃತಿ

## 1. ವಿಷ್ಣುಧರ್ಮ ಸೂತ್ರ

ಇದನ್ನು 'ವೈಷ್ಣವ ಧರ್ಮಶಾಸ್ತ್ರ' ಎಂದೂ ಕರೆಯುತ್ತಾರೆ. ಸೂತ್ರಗಳ ರೂಪದಲ್ಲಿ ರಚಿಸಲಾಗಿರುವ ಇದನ್ನು 'ವೈಷ್ಣವ ಧರ್ಮ ಸೂತ್ರ' ಎಂಬ ಹೆಸರಿ

ನಿಂದ ಕರೆಯಲಾಗಿದೆ. ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿಗಳ ನಂತರ ಇದು ಬಹಳ ಮುಖ್ಯವಾದ ವೈಷ್ಣವ ಧರ್ಮಶಾಸ್ತ್ರವಾಗಿದೆ. ಇದನ್ನು ಸ್ವತಃ ಮಹಾ ವಿಷ್ಣುವೇ ಭೂದೇವಿಗೆ ಉಪದೇಶಿಸಿದ ಸ್ಮೃತಿ ಎಂದು ತಿಳಿಸಲಾಗಿದೆ. ಇದು ಪರಮಾತ್ಮನ ವಾಣಿಯಾದುದರಿಂದ 'ಭಗವದ್ಗೀತೆ'ಯಷ್ಟೆ ಪವಿತ್ರವಾದುದಾಗಿದೆ. ಈ ದೃಷ್ಟಿಯಿಂದ ಇದು ವಿಶೇಷ ಮಹತ್ವವನ್ನು ಹೊಂದಿದೆ.

ಇದರಲ್ಲಿ ಭಗವದ್ಗೀತೆಯ ವಚನಗಳನ್ನು ಹಾಗೆ ಹಾಗೆಯೇ ಉಪಯೋಗಿಸಲಾಗಿದೆ. ಅಲ್ಲದೆ ಇದರಲ್ಲಿ ಜ್ಞಾನ-ವಿಜ್ಞಾನ, ಯೋಗ, ಭಕ್ತಿ, ಸದಾಚಾರ, ವರ್ಣಾಶ್ರಮಧರ್ಮ, ಪ್ರಾಯಶ್ಚಿತ್ತ, ಶ್ರಾದ್ಧ ಹಾಗೂ ವೈಷ್ಣವ ಭಕ್ತಿ-ಇತ್ಯಾದಿಗಳ ಉತ್ತಮ ವಿವರಗಳಿದರಲ್ಲಿವೆ.

ಶ್ರೀರಾಮಾನುಜ, ಶ್ರೀಮಧ್ವರು, ನಿಂಬಾರ್ಕರು, ವಲ್ಲಭರು, ರಾಮಾನಂದ ಇತ್ಯಾದಿಯವರುಗಳು ವೈಷ್ಣವ ಸಮಾಜದ ನೇತಾರರಾಗಿದ್ದಾರೆ. ಇವರುಗಳೆಲ್ಲ ಈ ಗ್ರಂಥವನ್ನು ಮುಖ್ಯ ಆಧಾರವಾಗಿ ಮಾಡಿಕೊಂಡಿದ್ದರು. ಇದರ ಪ್ರತಿಪಾದನೆಯ ಶೈಲಿಯು ಅತ್ಯಂತ ಸುಂದರವೂ, ಆಕರ್ಷಕವೂ ಆಗಿದೆ. ಇದರಲ್ಲಿನ ಹೆಚ್ಚು ಪಾಲಿನ ಸೂತ್ರಗಳು ಹಾಗೂ ಶ್ಲೋಕಗಳನ್ನು ಸುಭಾಷಿತಗಳ ರೂಪದಲ್ಲಿ ಕಂಠಪಾಠ ಮಾಡಿ, ನೆನಪಿನಲ್ಲಿಟ್ಟುಕೊಳ್ಳಬೇಕಾಗಿದೆ.

ಇದರಲ್ಲಿ ಚಿಕ್ಕವು, ದೊಡ್ಡವು ಎಲ್ಲ ಸೇರಿ 100 ಅಧ್ಯಾಯಗಳಿವೆ. ಸೂತ್ರಗಳು, ಶ್ಲೋಕಗಳೊಂದಿಗೆ ಇದರಲ್ಲಿ ಅಲ್ಲಲ್ಲಿ ಚಂಪೂ ಶೈಲಿಯೂ ಇದೆ.

ಅನೇಕ ಧರ್ಮ ಗ್ರಂಥಗಳನ್ನು ರಚಿಸಿರುವ ಆಚಾರ್ಯ ನಂದಪಂಡಿತ ಎನ್ನುವವರು ಈ ಗ್ರಂಥದ ಬಗ್ಗೆ 'ಕೇಶವ-ವೈಜಯಂತೀ' ಎನ್ನುವ ಸಂಸ್ಕೃತ ಟೀಕೆಯನ್ನು ರಚಿಸಿದ್ದಾರೆ. ಯಜುರ್ವೇದದ 'ಕಠ' ಶಾಖೆಯೊಂದಿಗೆ ಈ ಧರ್ಮಶಾಸ್ತ್ರವು ಘನಿಷ್ಠ ಸಂಬಂಧವನ್ನು ಹೊಂದಿದೆ ಎಂಬುದು ಈ ಟೀಕೆಯಿಂದ ತಿಳಿದು ಬರುತ್ತದೆ.

ಇದರಲ್ಲಿ ಮನುಸ್ಮೃತಿ, ಶ್ರೀಮದ್ಭಗವದ್ಗೀತೆ, ಗರುಡ ಪುರಾಣದಿಂದ ಆಯ್ದ ಶ್ಲೋಕಗಳನ್ನು ಉದಾಹರಿಸಲಾಗಿದೆ. ಮನುಸ್ಮೃತಿಯ ಮೇಧಾತಿಥಿಭಾಷ್ಯ, ಯಾಜ್ಞವಲ್ಕ್ಯದ ಮಿತಾಕ್ಷರ ಟೀಕಾ, ಅಪರಾರ್ಕ ಹಾಗೂ ಸ್ಮೃತಿ ಚಂದ್ರಿಕಾಗಳಲ್ಲಿ ಇದರ ಅನೇಕ ಧರ್ಮಸೂತ್ರಗಳನ್ನು ಪ್ರಮಾಣ ರೂಪದಲ್ಲಿ ಉದಾಹರಿಸಲಾಗಿದೆ. ಆದುದರಿಂದ ಈ ಗ್ರಂಥವು ಆದ್ಯೋಪಾಂತವಾಗಿ

ಪಠನೀಯವೂ, ಮನನೀಯವೂ, ಆಚರಣೀಯವೂ ಆಗಿದೆ.

ವರಾಹ ಪುರಾಣದೊಂದಿಗೂ ಇವಕ್ಕೆ ಸಂಬಂಧವಿದೆ. ಇದರ ಪ್ರಾರಂಭದಲ್ಲಿ ಭಗವಾನ್ ವರಾಹನ ಮುಖಾಂತರ ಪೃಥ್ವಿಯ (ಭೂದೇವಿಯ) ಉದ್ಧಾರ, ವರಾಹಾವತಾರದ ಪ್ರಾಮುಖ್ಯತೆಯನ್ನು ನೀಡಲಾಗಿದೆ. ರಸಾತಲದಲ್ಲಿ ಬಂಧಿತಳಾಗಿದ್ದ ಭೂದೇವಿಯನ್ನು ಭಗವಾನ್ ವರಾಹನು ಮೇಲೆತ್ತಿ ಉದ್ಧಾರ ಮಾಡಿದ ನಂತರ, ಆಕೆಯೂ ತಾನು ಯಾವ ಧರ್ಮದ ಆಧಾರದ ಮೇಲೆ ನಿಲ್ಲಬೇಕೆಂದು ಪರಮಾತ್ಮನನ್ನು ಕೇಳುತ್ತಾಳೆ. ಆಗ ಪರಮಾತ್ಮನು, "ವರ್ಣಾಶ್ರಮದ ಸದಾಚಾರದಲ್ಲಿ ಪರಾಯಣರಾಗಿರುವ ಹಾಗೂ ಶಾಸ್ತ್ರದ ವಿಧಿವಿಧಾನವನ್ನು ತಿಳಿದಿರುವ ಧರ್ಮಾತ್ಮರು ನಿನ್ನನ್ನು ಧಾರಣೆ ಮಾಡುವರು. ಅವರ ಆಧಾರದ ಮೇಲೆ ನೀನು ಸ್ಥಿರವಾಗಿರು !" ಅಂತಹ ಸಂತ ಮಹಾತ್ಮರ ಮುಖಾಂತರ ಸುಸ್ಥಿರ, ಶಾಂತ, ನಿರ್ಬಾಧಿತಳಾಗಿ ನೀನು ಇರುತ್ತೀಯೆ ! ಏಕೆಂದರೆ ಇಂತಹ ಧರ್ಮಾತ್ಮರು 'ಶುದ್ಧ' ವೈಷ್ಣವ ಜ್ಞಾನವನ್ನು ಹೊಂದಿದ್ದು, ಧರ್ಮಾಚರಣೆಯಲ್ಲಿ ನಿರತರಾಗಿರುವರು. ಅವರು ಸರ್ವ ಸಮರ್ಥರು, ಸರ್ವ ಶಕ್ತರು ಆಗಿರುವರು."

ವರ್ಣಾಶ್ರಮಾಚಾರರತಾಃ ಶಾಸ್ತ್ರೈಕತತ್ಪರಾಯಣಾಃ |
ತ್ವಾಂ ಧರೇ ಧಾರಯಿಷ್ಯಂತಿ ತೇಷಾಂ ತದ್ಭಾರ ಆಹಿತಃ || 1–47 ||

ಇದನ್ನು ಆಲಿಸಿ ಸಂತೋಷಗೊಂಡ ಭೂದೇವಿಯು ಧರ್ಮದ ಗೂಢಾರ್ಥ ತತ್ವಗಳು, ಸದಾಚಾರ, ಧರ್ಮಾಚಾರ ಇತ್ಯಾದಿ ವಿಷಯಗಳ ಬಗ್ಗೆ ಆತನೊಂದಿಗೆ ಜಿಜ್ಞಾಸೆ ಮಾಡಿದಳು. ಇದರ ಬಗ್ಗೆ ಮಹಾವಿಷ್ಣುವು ಕೆಲವು ಉಪದೇಶಗಳನ್ನು ನೀಡಿದನು. ಇದೇ ವಿಷ್ಣು–ಧಾರಾ–ಸಂವಾದ ರೂಪದಲ್ಲಿ 'ವೈಷ್ಣವ ಧರ್ಮಶಾಸ್ತ್ರ' ಎನ್ನುವ ಹೆಸರಿನಲ್ಲಿ ಪ್ರಸಿದ್ಧಿ ಹೊಂದಿತು—

'ಸುಶ್ರಾವ ವೈಷ್ಣವಾನ್ ಧರ್ಮಾನ್ ಸುಖಾಸೀನ್ ಧರಾ ತದಾ' ||1–76||

### ನೂರು ಅಧ್ಯಾಯಗಳಲ್ಲಿ ಪ್ರತಿಪಾದಿತ ವಿಷಯ

1. ವರಾಹಾವತಾರದ ಕಥೆ—ಭೂದೇವಿಗೆ ವಿಷ್ಣುವಿನ ಉಪದೇಶಗಳು, 2. ವರ್ಣಾಶ್ರಮಧರ್ಮ ಹಾಗೂ ಸಾಮಾನ್ಯ ಧರ್ಮ, 3. ರಾಜಧರ್ಮ, 4. ನಾಣ್ಯಗಳು ಮತ್ತು ತೂಕದ ಬಟ್ಟುಗಳ ವಿವರಣೆ, 5. ರಾಜಧರ್ಮ—ವಿಸ್ತಾರದಲ್ಲಿ ದಂಡ (ಶಿಕ್ಷೆ) ಪ್ರಕ್ರಿಯೆ, 6. ಸಾಲ ಪಡೆಯುವ ಹಾಗೂ

ವಿಧಾನಗಳು, 7. ಮೂರು ರೀತಿಯ ಸಾಕ್ಷಿ ಪತ್ರಗಳು, 8. ಕೂಟಸಾಕ್ಷೀ, 9. ಸಾಕ್ಷಿಯ ಪರೀಕ್ಷೆಯ ವಿಷಯದಲ್ಲಿನ ಸಾಮಾನ್ಯ ನಿಯಮಗಳು, 10–14. ಅಪರಾಧಿಗಳ ಹಾಗೂ ಸಾಕ್ಷಿಗಳ ಪರೀಕ್ಷೆಗಳ ಉಪಾಯ—ತುಲಾ ಪರೀಕ್ಷೆ, ಅಗ್ನಿಪರೀಕ್ಷೆ, ಜಲಪರೀಕ್ಷೆ, ವಿಷಪರೀಕ್ಷೆ, ಅಭಿಮಂತ್ರಿಸಿದ ಜಲದ ಮುಖಾಂತರದ ಪರೀಕ್ಷೆ, 15. ಹನ್ನೆರಡು ರೀತಿಯ ಮಕ್ಕಳು ಹಾಗೂ ಅವರ ಪ್ರಶಂಸೆ, 16. ಅಂತರ್ಜಾತೀಯ (ಮಿಶ್ರಿತ) ವಿವಾಹದಿಂದ ಹುಟ್ಟಿದ ಅನುಲೋಮ ಮತ್ತು ಪ್ರತಿಲೋಮದ ಮಕ್ಕಳು ಹಾಗೂ ಅವರ ಸಂಕರ ಜಾತಿಗಳು, 17. ದಯಾ–ವಿಭಾಗ–ಪಿತ್ರಾರ್ಜಿತ ಸಂಪತ್ತಿನ ಹಂಚಿಕೆ ಹಾಗೂ ಸ್ತ್ರೀಧನದ ಮೀಮಾಂಸೆ, 18. ಭಿನ್ನಜಾತಿಯ ಪತ್ನಿಯರಿಂದ ಹುಟ್ಟಿದ ಮಕ್ಕಳಲ್ಲಿ ಸಂಪತ್ತಿನ ಹಂಚಿಕೆ, 19. ಶವವನ್ನು ಹೊರುವವರ ಅಧಿಕಾರಗಳು, ಅಶೌಚ ಹಾಗೂ ಬ್ರಾಹ್ಮಣರ ಮಹಿಮೆಗಳು, 20. ಹಗಲು-ರಾತ್ರಿ, ವರುಷ, ಯುಗ, ಮನ್ವಂತರ, ಕಲ್ಪ, ಮಹಾಕಲ್ಪ ಇತ್ಯಾದಿಯ ರೀತಿಗಳಲ್ಲಿ ಕಾಲದ ವಿಭಾಗ, ಕಾಲದ ಮಹಿಮೆ ಹಾಗೂ ಧರ್ಮಾಚರಣೆಯ ಮಹತ್ವ, 21. ಅಶೌಚ ಪೂರ್ತಿಯಾದ ಮೇಲೆ ಸಪಿಂಡೀಕರಣ, ಮಾಸಿಕ ಶ್ರಾದ್ಧ-ಇತ್ಯಾದಿಗಳ ವಿಧಾನ, 22. ಜನನ ಶೌಚ, ಮರಣಾಶೌಚ, ಹಾಗೂ ಸ್ಪರ್ಶಜನ್ಯ ಅಶೌಚ, 23. ಅನ್ನ, ದ್ರವ್ಯ ಹಾಗೂ ಪಾತ್ರ ಶುದ್ಧಿಯ ವಿಧಾನಗಳು, 24. ವಿವಾಹ-ವಿಧಾನ, 25. ಸ್ತ್ರೀಧರ್ಮ, 26. ವಿಭಿನ್ನ ಜಾತಿಗಳ ಪತ್ನಿಯರ ಪ್ರಾಮುಖ್ಯತೆ, 27. ಗರ್ಭಾದಾನ, ಪುಂಸವನ ಇತ್ಯಾದಿ ದಶ ಸಂಸ್ಕಾರಗಳ ವರ್ಣನೆ, 28. ಬ್ರಹ್ಮಚಾರಿಯ ಸದಾಚಾರ ಹಾಗೂ ನಿಯಮಗಳ ವರ್ಣನೆ, 29, ಆಚಾರ್ಯ ಹಾಗೂ ಋತ್ವಿಕ್ಕರ ಕರ್ತವ್ಯ, 30. ವೇದಾಧ್ಯಯನದಲ್ಲಿ ಅನಧ್ಯಯನದ ವರ್ಣನೆ, 31. ಮಾತಾ-ಪಿತಾ ಹಾಗೂ ಗುರುಗಳ ಸೇವೆಯ ಮಹಾತ್ಮ್ಯೆ, 32. ಸತ್ಕಾರ ಪಡೆಯಲು ಯೋಗ್ಯರಾದ ಇತರೇ ಜನ, 33. ಪಾಪದ ಮೂರು ಕಾರಣ–ಕಾಮ, ಕ್ರೋಧ, ಲೋಭ, 34. ಅತಿಪಾತಕ, 35. ಪಂಚ ಮಹಾಪಾತಕ, 36. ಮಹಾ ಪಾತಕಕ್ಕೆ ಸಮಾನವಾದ ಅನ್ಯ ಪಾತಕಗಳು, 37. ಉಪಪಾತಕ, 38—42 ಜಾತಿ ಭ್ರಂಶಕರಣ, ಸಂಕರೀಕರಣ, ಅಪಾತ್ರೀಕರಣ ಹಾಗೂ ಮಲಿನೀಕರಣಕ್ಕೆ ಸಂಬಂಧಪಟ್ಟ ಪ್ರಕೀರ್ಣ ಪಾತಕ,

43. 21 ರೀತಿಯ ನರಕ, 44. ಪಾಪಗಳ ಫಲಸ್ವರೂಪದ ಗತಗಳು (ಕ್ಷುದ್ರ ಯೋನಿಗಳ ಪ್ರಾಪ್ತಿ), 45. ಕರ್ಮವಿಪಾಕ (ಪ್ರಾಯಶ್ಚಿತ್ತ ಮಾಡಿಕೊಳ್ಳದಿರುವುದರಿಂದ ಉಂಟಾಗುವ ವ್ಯಾಧಿಗಳು) 46-48. ಕೃಚ್ಛ್ರ, ತಪ್ತ ಕೃಚ್ಛ್ರ, ಪರಾಕ, ಸಾಂತಪನ, ಮಹಾಸಾಂತಪನ, ಚಂದ್ರಾಯಣ ಇತ್ಯಾದಿ ಪ್ರಾಯಶ್ಚಿತ್ತ ವ್ರತಗಳ ವಿಧಾನ, 49. ಏಕಾದಶಿ ಇತ್ಯಾದಿ ವ್ರತಗಳು ಹಾಗೂ ಭಗವಂತನ ಪೂಜೆಗಳಿಂದ ಪಾಪ ದೂರಹಾಗುವಿಕೆ, 50. ಬ್ರಾಹ್ಮಣ ಹತ್ಯೆ ಗೋಹತ್ಯೆಯ ಪ್ರಾಯಶ್ಚಿತ್ತ, 51-54. ಮಹಾಪಾತಕ, ಉಪಪಾತಕ ಹಾಗೂ ಪ್ರಕೀರ್ಣ ಪಾತಕಗಳ ಪ್ರಾಯಶ್ಚಿತ್ತ ವಿಧಾನ, 55. ರಹಸ್ಯ ಪಾಪಗಳ ಪ್ರಾಯಶ್ಚಿತ್ತ, 56. ಜಪ, ಹೋಮ, ವೈದಿಕ ಸೂಕ್ತಗಳ ಪಾಠಗಳಿಂದ ಪಾಪ-ಮುಕ್ತಿ ಹಾಗೂ ಪವಿತ್ರೀಕರಣ, 57. ಪ್ರತಿಗ್ರಹ ದೋಷ ಹಾಗೂ ಸತ್ಸಂಗದ ಮಹಿಮೆ, 58. ಗೃಹಸ್ಥನ ಶುಕ್ಲ, ಶಬಲ ಹಾಗೂ ಆಸಿತ-3 ರೀತಿಗಳ ಧನ ಹಾಗೂ ಧನದ ಗತಿ, 59-72. ಗೃಹಸ್ಥ ಧರ್ಮ, ಪಂಚ ಮಹಾ ಯಜ್ಞಗಳ ವಿಧಾನ, ಗೃಹಸ್ಥ ಜೀವನದ ಆಚಾರ-ಶೌಚಾಚಾರ, ಸದಾಚಾರ, ಗೃಹಸ್ಥನ ನಿತ್ಯಕರ್ಮ-ಶೌಚ, ದಂತಧಾವನ, ಸ್ನಾನ, ಸಂಧ್ಯಾವಂದನೆ, ಪೂಜೆ, ಜಪ, ಹೋಮ, ಬಲಿ, ವೈಶ್ವೇದೇವ, ಅತಿಥಿ ಸತ್ಕಾರ, ತರ್ಪಣ, ಶ್ರಾದ್ಧ, ಗ್ರಹಣದ ಸಮಯದಲ್ಲಿ ಕರಣೀಯ ಹಾಗೂ ತ್ಯಾಜ್ಯ ಕರ್ಮ, ಭೋಜನ-ವಿಧಿ, ಸ್ತ್ರೀಧರ್ಮ, ಶಯನವಿಧಿ, ಇಂದ್ರಿಯ ನಿಗ್ರಹ, ಆತ್ಮ ಸಂಯಮದ ಮಹಿಮೆ ಇತ್ಯಾದಿ, 73-86. ಶ್ರಾದ್ಧ, ಶ್ರಾದ್ಧವಿಧಿ, ಸಪಿಂಡೀಕರಣ, ಏಕೋದ್ದಿಷ್ಟ, ಪಾರ್ವಣಶ್ರಾದ್ಧ, ಅಷ್ಟಕಾ-ಶ್ರಾದ್ಧ, ಕಾಮ್ಯ-ಶ್ರಾದ್ಧ, ವಿಶೇಷ ತಿಥಿಗಳಂದು ಮಾಡುವ ಶ್ರಾದ್ಧ; ಶ್ರಾದ್ಧದಲ್ಲಿ ಆಹ್ವಾನಿಸಿದ ಬ್ರಾಹ್ಮಣರ, ಲಕ್ಷಣ, ಪಂಕ್ತಿಪಾವನ ಬ್ರಾಹ್ಮಣ, ಶ್ರಾದ್ಧಕ್ಕಾಗಿ ಪವಿತ್ರ ಹಾಗೂ ಯೋಗ್ಯವಲ್ಲದ ಪ್ರದೇಶ ಶ್ರಾದ್ಧದಲ್ಲಿನ ಪ್ರಶಸ್ತ ವಸ್ತುಗಳು, ಪಿತೃಗೀತಾ, ವೃಷೋತ್ಸರ್ಗ ಇತ್ಯಾದಿ, 87-88. ದಾನ, ದಾನದ ಮಹಿಮೆ, ವಿವಿಧ ರೀತಿಯ ದಾನ, 89. ಕಾರ್ತೀಕ ಮಾಸ ಮಾಹಾತ್ಮ್ಯೆ ಹಾಗೂ ಕಾರ್ತೀಕದಲ್ಲಿ ಸ್ನಾನ ದಾನದ ಮಹಿಮೆ, 90. ಮಾರ್ಗಶೀರ್ಷ ಇತ್ಯಾದಿ ದ್ವಾದಶ ಮಾಸಗಳ ಮಹಿಮೆ ಹಾಗೂ ಅವುಗಳಲ್ಲಿ ಮಾಡುವ ಸ್ನಾನ ದಾನದ ವಿಶೇಷತೆ, 91-93. ಇಷ್ಟಾ ಪೂರ್ತ ಧರ್ಮ ಹಾಗೂ ಅಭಯ ಇತ್ಯಾದಿ ವಿವಿಧ

ರೀತಿಯ ದಾನ ಹಾಗೂ ದಾನ ಸ್ವೀಕರಿಸಲು ಬ್ರಾಹ್ಮಣರಿಗೆ ಇರುವ ಅಧಿಕಾರ, 94–95. ವಾನಪ್ರಸ್ಥ ಆಶ್ರಮ ಹಾಗೂ ವಾನಪ್ರಸ್ಥ ಧರ್ಮ, 96–97. ಸನ್ಯಾಸಾಶ್ರಮ ಹಾಗೂ ಸನ್ಯಾಸ ಧರ್ಮ ಹಾಗೂ ಆತ್ಮ ಚಿಂತನದ ಮಹಿಮೆ, 98. ಭಗವಂತನ ದರ್ಶನವೇ ಶ್ರೇಷ್ಠ ಧರ್ಮ, ಇದರ ಪ್ರತಿಪಾದನೆ, 99. ಲಕ್ಷ್ಮಿನಿವಾಸ ಯೋಗ್ಯಸ್ಥಾನ ಹಾಗೂ, 100. ಈ ವೈಷ್ಣವ ಧರ್ಮದ ಮಹಾತ್ಮ್ಯೆ.

ಈ ಧರ್ಮ ಸೂತ್ರದ 2ನೇ ಅಧ್ಯಾಯದಲ್ಲಿ ಸಂಕ್ಷೇಪದಲ್ಲಿ ನಾಲ್ಕು ವರ್ಣಗಳ ಬೇರೆ ಬೇರೆಯಾದ ಕರ್ಮಗಳ ನಿರ್ದೇಶನ ಮಾಡುತ್ತಾ ನಾಲ್ಕು ವರ್ಣಗಳು ಸ್ವಧರ್ಮವನ್ನು ಪಾಲಿಸಬೇಕು, ಆಪತ್ತಿನ ಕಾಲದಲ್ಲಿ ವಿಶೇಷ ಪರಿಸ್ಥಿತಿಗಳಲ್ಲಿ ಬೇರೆ ವರ್ಣಗಳ ವೃತ್ತಿಗಳ ಆಶ್ರಯವನ್ನು ಪಡೆಯಬಹುದು—

'ಆಪದ್ಯ ನಂತರ್ ವೃದ್ಧಿಃ' (ಅ. 2.)

## ಸಾಮಾನ್ಯ ಧರ್ಮ

ವಿಶೇಷ ವರ್ಣ ಧರ್ಮದ ವಿವರಣೆ ನೀಡಿದ ನಂತರ ಸಾಮಾನ್ಯ ಧರ್ಮ ವನ್ನು ಸಾರ್ವಕಾಲಿಕ ದೃಷ್ಟಿಯಿಂದ ಉಲ್ಲೇಖಿಸಲಾಗಿದೆ. ಇವುಗಳ ಪರಿಪಾಲನೆ ಯನ್ನು ಎಲ್ಲರೂ ಮಾಡಬೇಕೆಂದು ತಿಳಿಸಲಾಗಿದೆ. ಸಾಮಾನ್ಯ ಧರ್ಮ ಮಾಡದೆ ವಿಶೇಷ ಧರ್ಮವನ್ನು ಅನುಸರಿಸುವುದು ಉಚಿತವಲ್ಲ. ಕ್ಷಮೆ, ಸತ್ಯ ದಮ (ಬಾಹ್ಯ ವೃತ್ತಿಗಳ ನಿಗ್ರಹ), ಬಾಹ್ಯಾಭ್ಯಂತರ ಶೌಚ, ದಾನ, ಇಂದ್ರಿಯ ಸಂಯಮ (ಬ್ರಹ್ಮಚರ್ಯ), ಅಹಿಂಸಾ, ಗುರು ಶುಶ್ರೂಷೆ, ತೀರ್ಥಾಟನೆ, ಆರ್ಜವ (ಸರಳತೆ) ಅಲೋಭ, ದೇವತೆಗಳು ಹಾಗೂ ಬ್ರಾಹ್ಮಣರ ಸೇವೆ-ಪೂಜೆ ಹಾಗೂ ಅನಭ್ಯಸೂಯೆ (ಯಾರನ್ನು ದ್ವೇಷಿಸದೆ ಇರುವುದು)- ಇವೆಲ್ಲ ವನ್ನು ಸಾಮಾನ್ಯ ಧರ್ಮ ಎಂಬುದಾಗಿ ಕರೆಯಲಾಗಿದೆ–

ಕ್ಷಮಾ ಸತ್ಯಂ ದಮಃ ಶೌಚಂ ದಾನಮಿಂದ್ರಿಯ ಸಂಶಯಃ |
ಅಹಿಂಸಾ ಗುರು ಶುಶ್ರೂಷಾ ತೀರ್ಥಾನುಸರಣಂ ದಯಾ ||
ಆರ್ಜವತ್ವಮಲೋಭಶ್ಚ ದೇವ ಬ್ರಾಹ್ಮಣ ಪೂಜನಮ್ |
ಅನಭ್ಯಸೂಯಾ ಚ ತಥಾ ಧರ್ಮಃ ಸಾಮಾನ್ಯ ಉಚ್ಯತೆ || 61 ||

ರಾಜನ ಮುಖ್ಯ ಕರ್ತವ್ಯ ಪ್ರಜೆಗಳ ಪರಿಪಾಲನೆ ಹಾಗೂ ವರ್ಣಾಶ್ರಮ ಧರ್ಮಗಳ ವ್ಯವಸ್ಥೆ ಮಾಡುವುದು. ಪ್ರಜೆಗಳು ತಮ್ಮ ತಮ್ಮ ವರ್ಣಗಳ ಅನುಸಾರ ತಮ್ಮ ತಮ್ಮ ಧರ್ಮಗಳನ್ನು ಪರಿಪಾಲಿಸುತ್ತಿರುವರೆ ಇಲ್ಲವೆ ಎಂಬು ದನ್ನು ನೋಡಿಕೊಳ್ಳುವುದು ಅವನ ಕರ್ತವ್ಯ. ಹಾಗೆ ಅವರು ಅನುಸರಿಸ ದಿದ್ದಲ್ಲಿ, ಅದನ್ನು ಅವರು ಅನುಸರಿಸುವಂತೆ ಮಾಡುವುದು ಅವನ ಕರ್ತವ್ಯ ವಾಗಿದೆ—

ಪ್ರಜಾ ಪರಿಪಾಲನಂ ವರ್ಣಾಶ್ರಮಾಣಾಂ
ಸ್ವೇ ಸ್ವೇ ಧರ್ಮೇ ವ್ಯವಸ್ಥಾಪನಮ್ || ಅ. 3 ||

ರಾಜ್ಯದ ಸೂಕ್ತ ಪರಿಪಾಲನೆಗಾಗಿ ಗ್ರಾಮಾಧ್ಯಕ್ಷ, ದಶ ಗ್ರಾಮಾಧ್ಯಕ್ಷ, ಶತಾಧ್ಯಕ್ಷ, ದೇಶಾಧ್ಯಕ್ಷ— ಇತ್ಯಾದಿಯವರುಗಳನ್ನು ರಾಜನು ನಿಯೋಜಿಸ ಬೇಕು. ಧರ್ಮಿಷ್ಠ ಜನರನ್ನು ಧಾರ್ಮಿಕ ಕಾರ್ಯಗಳಲ್ಲಿ ಸದಾ ತೊಡಗಿರು ವಂತೆ ಮಾಡಬೇಕು. ಕುಶಲರು, ಬುದ್ಧಿವಂತರಾದವರನ್ನು ಹಣಕಾಸು ವ್ಯವಹಾರದಲ್ಲಿ ತೊಡಗಿಸಬೇಕು. ಶೂರ, ವೀರರನ್ನು ಸೈನ್ಯದಲ್ಲಿ ಸೇರಿಸ ಬೇಕು. ಪ್ರಜೆಗಳಿಂದ ಕಂದಾಯದ ರೂಪದಲ್ಲಿ ವರ್ಷಕ್ಕೆ ಕೃಷಿ ಉತ್ಪನ್ನದ $\frac{1}{6}$ ಭಾಗವನ್ನು ರಾಜನು ತೆಗೆದುಕೊಳ್ಳಲಿ—

ಪ್ರಜಾಭ್ಯೋಽವಲ್ಯರ್ಥಂ ಸಂವತ್ಸರೇಣ
ಧಾನ್ಯತಃ ಷಷ್ಠಮಂಶಮಾದದ್ಯಾತ್ || ಅ. 3 ||

ಆದರೆ ಬ್ರಾಹ್ಮಣರಿಂದ ರಾಜನು ಕಂದಾಯವನ್ನು ವಸೂಲ ಮಾಡ ಬಾರದು. ಏಕೆಂದರೆ ಅವರು ರಾಜನಿಗಾಗಿ ಮಾಡುವ ಧರ್ಮಾನುಷ್ಠಾನವೇ ಕಂದಾಯ ರೂಪದಲ್ಲಿ ನೀಡಿದಂತಾಗುತ್ತದೆ –

ಬ್ರಾಹ್ಮಣೇಭ್ಯಃ ಕರಾದಾನಂ ನ ಕುರ್ಯಾತ್
ತೇ ಹಿ ರಾಜ್ಞೋ ಧರ್ಮಕರದಾಃ || ಅ. 3 ||

ರಾಜನು ಪ್ರಜೆಗಳ ಪುಣ್ಯ, ಪಾಪಗಳಲ್ಲಿ ಆರನೇ ಒಂದು ಭಾಗದ ಭಾಗಿಯಾಗಿರುತ್ತಾನೆ. ಪ್ರಜೆಗಳು ಪುಣ್ಯ ಮಾಡಿದಲ್ಲಿ ಅದರ ಆರನೇ ಒಂದು ಭಾಗ ರಾಜನಿಗೆ ಸೇರುತ್ತದೆ; ಪಾಪ ಮಾಡಿದ್ದರೆ ಅದರದೂ ಆರನೇ ಒಂದು ಭಾಗ ರಾಜನಿಗೆ ಸೇರುತ್ತದೆ. ಆದುದರಿಂದ ಸ್ವತಃ ರಾಜನೇ ಸ್ವತಃ ಪುಣ್ಯ

ಕಾರ್ಯಗಳಲ್ಲಿ ಭಾಗವಹಿಸಿದ್ದು, ಪ್ರಜೆಗಳನ್ನು ಪುಣ್ಯಕಾರ್ಯದಲ್ಲಿ ತೊಡಗಿಸು ವಂತೆ ಮಾಡಬೇಕು –

ರಾಜಾ ಚ ಪ್ರಜಾಭ್ಯಃ ಸುಕೃತ ದುಷ್ಕೃತ ಷಷ್ಠಾಂಶಭಾಕ್ || ಅ. 3 ||

ಸ್ವಾಮಿ (ರಾಜ), ಅಮಾತ್ಯವರ್ಗ (ಮಂತ್ರಿವರ್ಗ), ಕೋಟೆ, ಖಜಾನೆ, ಸೈನ್ಯ (ದಂಡ) ಹಾಗೂ ಮಿತ್ರರಾಷ್ಟ್ರ – ಈ ಆರೂ ಸೇರಿಯೇ ರಾಷ್ಟ್ರವೆಂದು ಕರೆಯಲ್ಪಡುವುದು. ಇವು ರಾಜ್ಯದ ಆರು ಅಂಗಗಳು –

ಸ್ವಾಮ್ಯಮಾತ್ಯದುರ್ಗಕೋಷದಂಡರಾಷ್ಟ್ರಮಿತ್ರಾಣಿ ಪ್ರಕೃತಯಃ ||

ಇವುಗಳನ್ನು ದೂಷಿಸುವವನು, ಇವುಗಳಿಗೆ ಅಡ್ಡಿ ಪಡಿಸುವವನು ವಧಿಸಲ್ಪ ಡಲು ಯೋಗ್ಯನಾಗಿದ್ದಾನೆ – ತದ್ದೂಷಕಾಂಶ ಹನ್ಯಾತ್ |' ರಾಜನು ಸಾಧು, ಸಂತ, ಮಹಾತ್ಮರನ್ನು ಪೂಜಿಸಬೇಕು; ಅವರುಗಳ ಸೇವೆ ಮಾಡಬೇಕು – 'ಸಾಧೂನಾಂ ಪೂಜನಂ ಕುರ್ಯಾತ್ |' ವೃದ್ಧರ ಸೇವೆ ಮಾಡಬೇಕು. 'ವೃದ್ಧ ಸೇವೀ ಭವೇತ್ |' ಶತ್ರು, ಮಿತ್ರರೊಂದಿಗೆ ಸಾಮ, ದಾನ, ಭೇದ, ದಂಡ – ಈ ನಾಲ್ಕೂ ನೀತಿಗಳನ್ನು ಸಮಯೋಚಿತವಾಗಿ, ಸೂಕ್ತಕಾಲದಲ್ಲಿ ವ್ಯವಹರಿಸಬೇಕು.

ರಾಜ್ಯದಲ್ಲಿ ದೈವೀ ಉತ್ಪಾತ, ಪ್ರಾಕೃತಿಕ ವಿಕೋಪಗಳಿಂದ ಕ್ಷಾಮ, ಮಹಾಮಾರೀ, ಭೂಕಂಪ, ಧೂಮಕೇತು – ದರ್ಶನ ಇತ್ಯಾದಿಗಳಾದಾಗ ವೇದ ಶಾಸ್ತ್ರಗಳನ್ನು ತಿಳಿದಿರುವ ಕುಲೀನ ಬ್ರಾಹ್ಮಣರ ಮುಖಾಂತರ ಶಾಂತಿ ಹಾಗೂ ಪುಷ್ಟಿ ಕರ್ಮಗಳನ್ನು ಹಾಗೂ ಆರೋಗ್ಯ ಕೇಂದ್ರಗಳ ಸ್ಥಾಪನೆ ಇತ್ಯಾದಿ ಮಂಗಳಮಯ ಕಾರ್ಯಗಳ ಮುಖಾಂತರ ಅವುಗಳಿಗೆ ಶಾಂತಿ ಉಂಟು ಮಾಡಬೇಕು –

ಶಾಂತಿಸ್ವಸ್ತ್ಯಯನೈರ್ದೈವೋಪಘಾತಾನ್ ಪ್ರಶಮಯೇತ್ || ಅ. 3 ||

ಪ್ರಜೆಗಳಿಗೆ ಸುಖ ನೀಡುವುದರಿಂದ ಸಂತೋಷವನ್ನು, ದುಃಖ ಉಂಟಾಗು ವುದರಿಂದ ದುಃಖವನ್ನು ಪಡುವನೊ ಅಂತಹವನೇ ನಿಜವಾದ ರಾಜ. ಅವರ ಕಷ್ಟಗಳನ್ನು ತನ್ನದೆಂದು ತಿಳಿದು ಕಡಿಮೆ ಮಾಡಬೇಕು. ಪ್ರಜೆಗಳನ್ನು ತನ್ನ ಆತ್ಮ ವೆಂದು ತಿಳಿಯಬೇಕು, ಅವರನ್ನೆಲ್ಲ ತನ್ನವರಂತೆ ಕಾಣಬೇಕು. ಇಂತಹ ಧಾರ್ಮಿಕ ರಾಜನು ಈ ಲೋಕದಲ್ಲಿ ಮಹಾನ್ ಕೀರ್ತಿವಂತನಾಗುವನು. ಪರಲೋಕದಲ್ಲಿ ಉತ್ತಮ ಗತಿಯನ್ನು ಪಡೆಯುವನು.

ಪ್ರಜಾಸುಖೆ ಸುಖೀ ರಾಜಾ ತದದುಃಖೇ ಯಶ್ಚ ದುಃಖಿತಃ |

ಸ ಕೀರ್ತಿಯುಕ್ತೋ ಲೋಕೋಽಸ್ಮಿನ್ ಪ್ರೇತ್ಯ ಸ್ವರ್ಗೇ ಮಹೀಯತೇ||

ಇಂತಹ ರಾಜನ ರಾಜ್ಯದಲ್ಲಿ, ನಗರಗಳಲ್ಲಿ ಕಳ್ಳತನಗಳು ನಡೆಯುವುದಿಲ್ಲ, ಪರಸ್ತ್ರೀ ಪೀಡಕನು ಇರುವುದಿಲ್ಲ; ದುಷ್ಟನೂ ಬಲಾತ್ಕಾರವಾಗಿ ಧನವನ್ನು ಅಪಹರಿಸುವವನೂ, ಕಾನೂನು ಉಲ್ಲಂಘನೆ ಮಾಡುವವನೂ ಇರುವುದಿಲ್ಲ. ಅಂತಹ ರಾಜ್ಯದಲ್ಲಿ ಧಾರ್ಮಿಕ ಹಾಗೂ ಸ್ವಧರ್ಮಾಚರಣೆಯನ್ನು ಅನುಷ್ಠಾನ ಮಾಡುವವರು ಹೆಚ್ಚಿರುತ್ತಾರೆ. ಅಂತಹ ರಾಜನು ಇಂದ್ರಲೋಕವನ್ನು ಪಡೆಯುತ್ತಾನೆ-

ಯಸ್ಯ ಚೌರಃ ಪುರೆ ನಾಸ್ತಿ ನಾನ್ಯಸ್ತ್ರೀಗೋ ನ ದುಷ್ಟವಾಕ್ |
ನ ಸಾಹಸಿಕದಂಡಘ್ನೀ ಸ ರಾಜಾ ಶಕ್ರಲೋಕಭಾಕ್ || ಅ. 5 ||

## ಪ್ರೇತ ಸಂಬಂಧಿತ ಕಾರ್ಯಗಳು

ವ್ಯಕ್ತಿ ಸತ್ತಾಗ, ಆ ಶವದ ದಹನ ಮಾಡಿದ ನಂತರ, ಆ ವಸ್ತ್ರ ಸಹಿತ, ಜಲಸ್ನಾನ ಮಾಡಬೇಕು. ಬಟ್ಟೆ ಬದಲಾಯಿಸಿ, ನಿಂಬೆ ಎಲೆಗಳನ್ನು ಅಗಿದು, ಮನೆಯ ಬಾಗಿಲ ಬಳಿ ಕಲ್ಲಿನ ಮೇಲೆ ಕಾಲನ್ನಿಟ್ಟು ಮನೆ ಪ್ರವೇಶ ಮಾಡಬೇಕು. ಅಗ್ನಿಗೆ ಅಕ್ಷತೆಯನ್ನು ಅರ್ಪಿಸಬೇಕು. ಹೀಗೆ ಮಾಡಿದಾಗ ದಹನ ಸಂಸ್ಕಾರ ಮಾಡಿದ ಜಾಗದಲ್ಲಿನ ದೂಷಿತ ಪರಮಾಣುವು ಮನೆಯನ್ನು ಪ್ರವೇಶ ಮಾಡುವುದಿಲ್ಲ. ಇದರಿಂದ ಮನೆ ಶುದ್ಧಿಯಾಗುತ್ತದೆ.

ನಾಲ್ಕನೆಯ ದಿನ ಅಸ್ಥಿಗಳ ಸಂಚಯನ ಮಾಡಬೇಕು. ಅವುಗಳನ್ನು ಗಂಗಾ ಇತ್ಯಾದಿ ಪವಿತ್ರ ನದಿಗಳಲ್ಲಿ ವಿಸರ್ಜನೆ ಮಾಡಬೇಕು. ಆಶೌಚ ಇರುವವರೆಗೂ, ಪ್ರೇತ ನಿಮಿತ್ತ ಉದಕಾಂಜಲಿ ಹಾಗೂ ಪಿಂಡವನ್ನು ಪ್ರತಿದಿನ ನೀಡಬೇಕು.

ಪ್ರೇತ ಕ್ರಿಯೆಗಳು ನಡೆಯುವಷ್ಟು ದಿನ, ಅವನ್ನು ನಡೆಸುವವನು ಪವಿತ್ರ ಭಿಕ್ಷಾದಿಗಳಿಂದ ಪಡೆದ ಅನ್ನ, ಸ್ವಂತ ಅಡಿಗೆಯ ಅನ್ನ (ಊಟ) ವನ್ನು ಸ್ವೀಕರಿಸಬೇಕು. ಅಪವಿತ್ರ ಹಾಗೂ ಅಶುದ್ಧ ಊಟವನ್ನು ಸೇವಿಸಬಾರದು. ಪವಿತ್ರ ಭೂಮಿಯ ಮೇಲೆ ಶುದ್ಧ ಆಸನದ ಮೇಲೆ ಮಲಗಬೇಕು. ಒಬ್ಬಂಟಿಗನಾಗೇ ಮಲಗಬೇಕು. ಆಶೌಚ ಮುಗಿಯುವವರೆಗೂ ಇದೇ ರೀತಿಯಲ್ಲಿ ಶುದ್ಧತಮ ಜೀವನವನ್ನು ಕಳೆಯಬೇಕು. ಆಶೌಚದ ಕೊನೆಯಲ್ಲಿ ಮನೆ ಅಥವಾ ಗ್ರಾಮದಲ್ಲಿ ಕ್ಷೌರ ಮಾಡಿಸಿಕೊಂಡು, ಶುದ್ಧ ಸ್ನಾನ ಮಾಡಿ, ವಸ್ತ್ರವನ್ನು

ಬದಲಾಯಿಸಿಕೊಂಡು, ಮನೆ ಪ್ರವೇಶಿಸಬೇಕು.

ಅಲ್ಲಿ ಶಾಂತಿ ಕರ್ಮವನ್ನು ಆಚರಿಸಿ, ಬ್ರಾಹ್ಮಣರಿಗೆ ಪೂಜೆ ಮಾಡಬೇಕು. ಆ ಬ್ರಾಹ್ಮಣರು ಮೃತ ವ್ಯಕ್ತಿಯ ಶೋಕದಿಂದ ಸಂತಪ್ತರಾದ ಬಂಧು ಬಾಂಧವರನ್ನು ಅನೇಕ ರೀತಿಯ ಧಾರ್ಮಿಕ ಚರ್ಚೆಗಳು, ಪೌರಾಣಿಕ ಆಖ್ಯಾನಗಳನ್ನು ತಿಳಿಸಿ, ಪ್ರಪಂಚದ ನಶ್ವರತೆ ಹಾಗೂ ದುಃಖ ಸ್ವರೂಪಗಳು, ಆತ್ಮದ ನಿತ್ಯತೆಗಳ ವಿವರಗಳನ್ನು ನೀಡಿ ಧೈರ್ಯವನ್ನು ತುಂಬಬೇಕು. ಇವುಗಳ ಮುಖಾಂತರ ಅವರ ದುಃಖವನ್ನು ದೂರ ಮಾಡಬೇಕು. ಅವರು ಮೊದಲಿನ ಪರಿಸ್ಥಿತಿಗೆ ಬಂದು ಎಂದಿನಂತೆ ತಮ್ಮ ಕೆಲಸ ಕಾರ್ಯಗಳನ್ನು ನಡೆಸಲು ಅನುಕೂಲವಾಗುವಂತೆ ಮಾಡಬೇಕು.

ತತ್ರ ಶಾಂತಿಂ ಕೃತ್ವಾ ಬ್ರಾಹ್ಮಣಾನಾಂ ಚ ಪೂಜನಂ ಕುರ್ಯಾಃ |
ದುಃಖಾನ್ವಿತಾನಾಂ ಮೃತ ಬಾಂಧವಾನಾಮಾಶ್ವಾಸನಂ ಕುರ್ಯಾರದೀನ
ಸತ್ತ್ವಾಃ || ಅ. 1 ||

## ಕಾಲದ ಮಹತ್ವ

ಕಾಲದ ಗತಿಯು ಮಹತ್ವವಾದುದು; ಅನಂತವಾದುದು. ಅದು ಸರ್ವಕಾಲೀಕ ಜಯವನ್ನು ಪಡೆಯುವಂತಹುದು. ಇದರ ಅಸ್ತಿತ್ವ ಶಾಶ್ವತವಾದುದು–

ನ ತದ್ಭೂತಂ ಪ್ರಪಶ್ಯಾಮಿ ಸ್ಥಿತಿರ್ಯಸ್ಯ ಭವೇತ್ ಧ್ರುವಾ ||ಅ. 10||

ಪ್ರತಿ ಕಲ್ಪ, ಮನ್ವಂತರದಲ್ಲೂ ಸಕಲ ದೇವತೆಗಳು ಹಾಗೂ ಮನುಗಳು ಲುಪ್ತರಾಗುವರು. ಅನೇಕ ಇಂದ್ರರೂ ಈ ಸಂದರ್ಭದಲ್ಲಿ ಬದಲಾಗುವರು. ಹಾಗಿರುವಾಗ ಮಾನವ ಮಾತ್ರರ ವಿಚಾರವೇನು ?

ಕಾಲನ ಮುಖಾಂತರ ಎಲ್ಲವೂ ನಷ್ಟವಾಗಿ ಹೋಗುವುದು. ಬಹಳಷ್ಟು ಶಕ್ತಿವಂತ ರಾಜರ್ಷಿಗಳು, ದೇವರ್ಷಿ, ಬ್ರಹ್ಮರ್ಷಿಗಳು ಕಾಲಗರ್ಭದಲ್ಲಿ ಲೀನವಾಗಿ ಬಿಡುವರು. ಜಗತ್ತನ್ನು ನಿರ್ಮಿಸಿ–ಲೀನಗೊಳಿಸುವವರೂ ಕೂಡ ಕಾಲನ ಮುಖಾಂತರ ಲೀನವಾಗಿ ಹೋಗುವರು. ಆದುದರಿಂದ ಕಾಲನನ್ನು ಯಾರೂ ಮೀರಲಾರರು. ಕಾಲವನ್ನು ಯಾರೂ ಉಲ್ಲಂಘಿಸಲಾರರು. ಪ್ರತಿ ಜೀವಿಯೂ ಸ್ವತಃ ನಿರ್ಮಿಸಿಕೊಂಡ ಕರ್ಮ ಬಂಧನದಲ್ಲಿ ಬಂಧಿತರಾಗಿರುತ್ತಾನೆ. ಆದುದರಿಂದ ಅಂತಹವುಗಳಿಗಾಗಿ ಶೋಕಿಸುವುದರಿಂದ ಏನು ಲಾಭ ? ಹುಟ್ಟಿದವನು ಸಾಯಲೇಬೇಕು. ಸತ್ತವನು ಹುಟ್ಟಲೇಬೇಕು. ಈ ವಿಷ ಚಕ್ರದಲ್ಲಿ ಧರ್ಮದ

ವಿನಹ ಬೇರೆ ಯಾರ ಸಹಾಯವೂ ಇಲ್ಲ. ಬೇರೆ ಯಾರೂ ಏನೂ ಮಾಡಲಾರರು–

ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತ್ಯಸ್ಯ ಚ |
ಅರ್ಥೇ ದುಷ್ಪರಿಹಾರ್ಯೋಽಸ್ಮಿನ್ ನಾಸ್ತಿ ಲೋಕೇ ಸಹಾಯತಾ
|| ಅ. 20 ||

## ಮೃತರ ಪರವಾಗಿ ಮಾಡಬೇಕಾದ ಕರ್ತವ್ಯ

ಮೃತ ವ್ಯಕ್ತಿಗಾಗಿ ಅಳುವ ಬಂಧುಬಾಂಧವರು ಶೋಕಿಸುವುದರಿಂದ ಅವರಿಗೆ ಯಾವುದೇ ಉಪಕಾರ ಮಾಡಲಾರರು. ಆದುದರಿಂದ ಅವರಿಗಾಗಿ ದುಃಖಿಸುವುದನ್ನು ಬಿಟ್ಟು, ಅವರಿಗಾಗಿ ಊರ್ಧ್ವಲೋಕದ ಕರ್ಮಗಳನ್ನು ಮಾಡಬೇಕು. ಇದು ಅವರಿಗೆ ಒಳ್ಳೆಯದನ್ನು ಮಾಡುತ್ತದೆ. ಪಿಂಡದಾನ, ಶ್ರಾದ್ಧ, ಬ್ರಾಹ್ಮಣ ಭೋಜನ, ದಾನ ಇತ್ಯಾದಿ ಸತ್ಕರ್ಮಗಳನ್ನು ಮಾಡ ಬೇಕು. ಇದರಿಂದ ಪ್ರೇತವು ಪ್ರೇತತ್ವದಿಂದ ಮುಕ್ತವಾಗಿ, ಸದ್ಗತಿಯನ್ನು ಪಡೆಯುತ್ತದೆ. ಕೇವಲ ಅಳುವುದು, ಪಿತೃ ಕರ್ಮಗಳನ್ನು ಮಾಡದಿರುವುದ ರಿಂದ ಮೃತ ವ್ಯಕ್ತಿಯನ್ನು ಅಧೋಗತಿಗೆ ಇಳಿಸಿದಂತಾಗುತ್ತದೆ–

ಶೋಚಂತೋ ನೋಪಕುರ್ವಂತಿ ಮೃತಸ್ಯೇಹ ಜನಾಯತಃ |
ಅತೋ ನ ರೋದಿತವ್ಯಂ ಹಿ ಕ್ರಿಯಾಃ ಕಾರ್ಯಾಃ ಸ್ವಶಕ್ತಿತಃ ||ಅ.20||

## ಸಾಯುವವರೊಂದಿಗೆ ಪಾಪ-ಪುಣ್ಯಗಳು ಮಾತ್ರ ಹೋಗುತ್ತವೆ

ವ್ಯಕ್ತಿಯು ತನ್ನ ಜೀವನದಲ್ಲಿ ಮಾಡಿದ ಪುಣ್ಯಕಾರ್ಯಗಳು ಅಥವಾ ನಿಂದಿತ, ತ್ಯಾಜ್ಯಕರ್ಮಗಳು – ಇವುಗಳ ಫಲಗಳು ಮಾತ್ರ ಸಾವಿನ ನಂತರ ಪಾಪಪುಣ್ಯ ಫಲಗಳಾಗಿ ಅವನೊಂದಿಗೆ ಹೋಗುತ್ತವೆ; ಅವನಿಗೆ ಸಹಾಯಕ್ಕೆ ಬರುತ್ತವೆ. ಸತ್ತ ನಂತರ ಯಾವ ಬಂಧು ಬಾಂಧವರೂ ಜೊತೆಗೆ ಬರುವುದಿಲ್ಲ. ಪುಣ್ಯಕಾರ್ಯ ಮಾಡಿದ್ದಲ್ಲಿ, ಅವರಿಗೆ ಅದರಿಂದ ಸದ್ಗತಿ ಉಂಟಾಗುತ್ತದೆ. ಬದಲಾಗಿ ಅವನು ನಿಂದಿತ ಕಾರ್ಯವನ್ನು ಮಾಡಿದ್ದಲ್ಲಿ ಘೋರ ಯಮ ಯಾತನೆಯನ್ನು ಅನುಭವಿಸಿ, ಅಧಮ ಯೋನಿಯಲ್ಲಿ ಜನಿಸುವನು. ಆದುದ ರಿಂದ ಸತ್ತ ವ್ಯಕ್ತಿಯ ಪರವಾಗಿ ಶೋಕಿಸುವುದು ಅಥವಾ ದುಃಖಿಸದೆ ಇರುವುದ ರಿಂದ ಮೃತ ವ್ಯಕ್ತಿಗೆ ಯಾವುದೇ ಒಳ್ಳೆಯದು ಕೆಟ್ಟದ್ದು ಮಾಡಿದಂತಾಗುವು ದಿಲ್ಲ. ಸತ್ತವನಿಗೆ ಇದರಿಂದ ಯಾವುದೇ ಉಪಯೋಗವೂ ಇಲ್ಲ.

ಸುಕೃತಂ ದುಷ್ಕೃತಂ ಚೋಭೀ ಸಹಾಯೌಂ ಯಸ್ಯ ಗಚ್ಛತಃ |
ಬಾಂಧವೈಸ್ತಸ್ಯ ಕಿಂ ಕಾರ್ಯಂ ಶೋಚದ್ಭಿರಥವಾ ನ ವಾ || ಅ. 20 ||

ಶ್ರಾದ್ಧದ ಅನ್ನ ಪಿತೃಗಳಿಗೆ ತಲುಪುವುದೆ ? ಹೇಗೆ ?

ಸಪಿಂಡೀಕರಣ ಶ್ರಾದ್ಧದಿಂದ ಮೃತ ವ್ಯಕ್ತಿಯ 'ಪ್ರೇತ' ರೂಪ ಮಾಯ ವಾಗಿ ಪಿತೃ ರೂಪವು ಬರುವುದು. ಸಪಿಂಡೀಕರಣ ಶ್ರಾದ್ಧದ ಮುಖಾಂತರ ಪ್ರೇತಕ್ಕಾಗಿ ಪಿಂಡದಾನ ಹಾಗೂ ಉದಕುಂಭ ದಾನಗಳನ್ನು ಮಾಡಬೇಕು. ಇದರಿಂದ ಪ್ರೇತತ್ವದ ನಿವೃತ್ತಿಯಾಗುತ್ತದೆ. ಅದು ಪಿತೃಲೋಕವನ್ನು ತಲುಪುತ್ತದೆ. ಅಲ್ಲಿ ಬಂಧು ಬಾಂಧವರ ಮುಖಾಂತರ ನಾಮಗೋತ್ರೋಚ್ಚಾರಣ ಪೂರ್ವಕವಾಗಿ ನೀಡುವ 'ಸ್ವಧಾಮಯ ಶ್ರಾದ್ಧ'ದ ಅನ್ನವು ತಿನ್ನಲು ದೊರೆಯು ವುದು. ಆದುದರಿಂದ ಪಿತೃಗಳಿಗಾಗಿ, ಅವರ ನಿಮಿತ್ತ ಶ್ರಾದ್ಧವನ್ನು ತಪ್ಪದೆ ಮಾಡಬೇಕು. ಪಿತೃಗಳು ದೇವಲೋಕ ಸೇರಲಿ ಇಲ್ಲವೆ ನರಕಲೋಕ ಸೇರಲಿ ಅಥವಾ ಮಾನವ ಇಲ್ಲವೆ ಪಶುಪಕ್ಷಿ ಯೋನಿಯಲ್ಲಿ ಜನಿಸಲಿ, ತನ್ನ ಬಂಧುಗಳ ಮುಖಾಂತರ ಶ್ರಾದ್ಧ ಪಿಂಡದ ಫಲಗಳು ಆಯಾ ಜನ್ಮದ ಭೋಜನ ರೂಪ ವಾಗಿ ದೊರೆಯುತ್ತವೆ.

ಪಿತೃಗಳು ದೇವಲೋಕದಲ್ಲಿದ್ದರೆ ಶ್ರಾದ್ಧದ ಪಿಂಡಾದಿಗಳು ಸುಗಂಧ ರೂಪದಲ್ಲಿ ಅವರಿಗೆ ದೊರೆಯುತ್ತವೆ. ಮಾನವ ಜನ್ಮದಲ್ಲಿದ್ದರೆ ಅವು ಉತ್ತಮ ವ್ಯಂಜನ ಪದಾರ್ಥಗಳಾಗುವುವು. ತಿರ್ಯಕ್ ಯೋನಿಯಲ್ಲಿ ಜನಿಸಿದ್ದರೆ ಅವರಿಗೆ ಖಾದ್ಯ ಪದಾರ್ಥಗಳ ರೂಪದಲ್ಲಿ ಅವರ ಬಳಿಗೆ ಹೋಗುತ್ತವೆ. ಇದ ರಿಂದ ಪ್ರೇತ ಹಾಗೂ ಶ್ರಾದ್ಧಕರ್ತರಿಬ್ಬರಿಗೂ ಪುಷ್ಟಿಯು ದೊರೆಯುತ್ತದೆ.

ಆದುದರಿಂದ ನಿರರ್ಥಕ ಶೋಕ ಪಡುವುದನ್ನು ತ್ಯಜಿಸಿ ಶ್ರಾದ್ಧ ಕರ್ಮ ಗಳನ್ನು ಅವಶ್ಯ ಮಾಡಬೇಕು—

ಪಿತೃಲೋಕಗತಶ್ಚಾನ್ನಂ ಶ್ರಾದ್ಧೇ ಭುಂಕ್ತೇ ಸ್ವಧಾಮಯಮ್ |
ಪಿತೃಲೋಕಗತ ಸ್ಯಾಸ್ಯ ತಸ್ಮಾಚ್ಛ್ರಾದ್ಧಂ ಪ್ರಯಚ್ಛತ ||

ದೇವತ್ವೇ ಯಾತನಾಸ್ಥಾನೇ ತಿರ್ಯಗ್ಯೋನೌ ತಥೈವ ಚ |
ಮಾನುಷ್ಯೇ ಚ ತಥಾಪ್ನೋತಿ ಶ್ರಾದ್ಧಂ ದತ್ತಂ ಸ್ವಬಾಂಧವೈಃ ||
ಪ್ರೇತಸ್ಯ ಶ್ರಾದ್ಧ ಕರ್ತುಶ್ಚ ಪುಷ್ಟಿಃ ಶ್ರಾದ್ಧೇ ಕೃತೇ ಧ್ರುವಮ್ |

ತಸ್ಮಾಚ್ಛ್ರಾದ್ಧಂ ಸದಾ ಕಾರ್ಯಂ ಶೋಕಂ ತ್ಯಕ್ತ್ವಾ ನಿರರ್ಥಕಮ್
|| ಅ. 20 ||

ಧರ್ಮಾಚರಣೆಯೇ ಸದಾ ಸಹಾಯಕ

ಭಗವಾನ್ ವಿಷ್ಣುವು ಮಾನವರನ್ನು ಹೀಗೆ ಎಚ್ಚರಿಸುವನು—

'ಹೇ ಮಾನವರೇ ! ಪ್ರತಿ ನಿತ್ಯ ಸಾಯುವ ನಿಮ್ಮ ಬಂಧು ಬಾಂಧವರನ್ನು ನೋಡುತ್ತಿರುವಿರಿ. ಅವರಿಗಾಗಿ ಎಷ್ಟು ದಿನಗಳವರೆಗೆ ಶೋಕಿಸುವಿರಿ ? ಸ್ವಲ್ಪ ಸಮಯದ ನಂತರ ಅವರನ್ನೆಲ್ಲ ಮರೆತು ಬಿಡುತ್ತಾರೆ. ಪ್ರಪಂಚದಲ್ಲಿ ಎಲ್ಲರೂ ಎಲ್ಲ ರೀತಿಯ ಸಂಬಂಧಗಳನ್ನು ಹೊಂದಿರುತ್ತಾರೆ. ಆದರೆ ಧರ್ಮವನ್ನು ಬಿಟ್ಟು ಬಂಧು-ಬಾಂಧವರು, ನೆಂಟರಿಷ್ಟರು, ಮನೆ, ಧನ-ಸಂಪತ್ತು, ಪುತ್ರ-ಪೌತ್ರಾದಿಗಳು ಯಾರೂ ಹಿಂಬಾಲಿಸಿ ಬರಲಾರರು. ಆದುದರಿಂದ ನಿಜ ಅರ್ಥದ ಸಹಾಯಕವಾದ ಧರ್ಮದ ಆಚರಣೆಯನ್ನು ಮಾಡಿ. ಇದೇ ಈ ಲೋಕ ಹಾಗೂ ಪರಲೋಕಗಳ ಒಳ್ಳೆಯ ಮಾರ್ಗವನ್ನು ತೋರಿಸುತ್ತದೆ. ಮೃತನೊಂದಿಗೆ ಯಾರಾದರೂ ಪ್ರಾಣವನ್ನು ತ್ಯಜಿಸಿದರೂ, ಅವನು/ಅವಳು ಸತ್ತ ವ್ಯಕ್ತಿಯೊಂದಿಗೆ ಇರಲಾರ. ಪ್ರಾಣತ್ಯಾಗ ವ್ಯರ್ಥವೇನೆ ! ಪತಿವ್ರತಾ ಸ್ತ್ರೀ ಇದ್ದಲ್ಲಿ, ಅಂತಹವಳು ಮಾತ್ರ ಪತಿಯೊಂದಿಗೆ ಹೋಗಬಹುದು. ಇಷ್ಟರ ವಿನಹ ಉಳಿದವರಿಗೆ ಯಮಲೋಕದ ಬಾಗಿಲು ಮುಚ್ಚಿರುತ್ತದೆ. ಕೇವಲ ಧರ್ಮವು ಮಾತ್ರವೇ ಆ ಜೀವಿಯ ಜೊತೆಯಲ್ಲಿ ಹೋಗುವುದು. ಆದುದರಿಂದ ಧರ್ಮವನ್ನಷ್ಟೆ ನೀವು ಸಂಪಾದಿಸಬೇಕು.

ಇದನ್ನು ನಾಳೆ ಮಾಡುವೆ, ನಾಡಿದ್ದು ಮಾಡುವೆ ಎಂದು ಮುಂದಕ್ಕೆ ಹಾಕಬಾರದು. ಏಕೆಂದರೆ ಸಾವು ಯಾವಾಗ ಬರುತ್ತದೆಯೊ ಹೇಳುವುದಕ್ಕೆ ಆಗುವುದಿಲ್ಲ. ಸಂಬಂಧಪಟ್ಟವನು ಸಾಕಷ್ಟು ಧರ್ಮಕಾರ್ಯವನ್ನು ಮಾಡಿರುವನೆ ಇಲ್ಲವೆ ಎಂಬುದನ್ನು ಪರೀಕ್ಷಿಸದೆ ಸಾವು ಮಾನವನ ಮೇಲೆ ಎರಗುತ್ತದೆ. ಸಾವಿಗೆ ಯಾರೂ ಪ್ರಿಯರೂ ಇಲ್ಲ, ಅಪ್ರಿಯರೂ ಇಲ್ಲ. ಆಯುಸ್ಸು ಮುಗಿದ ಮೇಲೆ ಅದು ತನ್ನ ಕಾರ್ಯಾಚರಣೆಯನ್ನು ಮಾಡುತ್ತದೆ. ಆದರಿಂದ ಯಾರನ್ನೂ ರಕ್ಷಿಸಲಾಗುವುದಿಲ್ಲ. ಸಾವಿರ ಗೋವುಗಳ ನಡುವೆ ಇರುವ ಕರುವು ತನ್ನ ತಾಯಿಯನ್ನು ಹುಡುಕುವಂತೆ, ಪೂರ್ವಜನ್ಮ ಕೃತ ಪಾಪವು ವ್ಯಕ್ತಿಯನ್ನು ಹುಡುಕಿಕೊಂಡು ಬರುತ್ತದೆ.

## ಜನನ, ಮರಣ ಶೌಚಗಳು

ಸಪಿಂಡಿಗಳ ಸಾವು ಹಾಗೂ ಜನನದಿಂದ ಸೂತಕ ಉಂಟಾಗುತ್ತದೆ. ಇದು ಬ್ರಾಹ್ಮಣರಿಗೆ ಹತ್ತು ದಿನಗಳು, ಕ್ಷತ್ರಿಯರಿಗೆ ಹನ್ನೆರಡು ದಿನಗಳು, ವೈಶ್ಯರಿಗೆ ಹದಿನೈದು ಹಾಗೂ ಶೂದ್ರರಿಗೆ ಒಂದು ತಿಂಗಳು ಇರುತ್ತದೆ. ಏಳು ತಲೆಗಳವರೆಗೆ ಸಪಿಂಡೀಕವಿರುತ್ತದೆ, ಆ ನಂತರದಲ್ಲಿ ಇಲ್ಲ. ಸೂತಕದ ಸಮಯದಲ್ಲಿ ಹೋಮ, ದಾನ, ಶುಭ ಕಾರ್ಯದಲ್ಲಿ ಭಾಗವಹಿಸುವಿಕೆ ಹಾಗೂ ಸ್ವಾಧ್ಯಾಯಗಳು ನಿಷಿದ್ಧ. ಇತರರ ಊಟವನ್ನು ಈ ಸಮಯದಲ್ಲಿ ಸ್ವೀಕರಿಸಬಾರದು. ಅದು ವರ್ಜ್ಯ.

ಗರ್ಭಸ್ರಾವವಾಗಿ ಎಷ್ಟು ತಿಂಗಳ ಮಗು ಇರುತ್ತದೆಯೊ ಅಷ್ಟು ದಿನಗಳು ಆಶೌಚವಿರುತ್ತದೆ—'ಮಾಸಾತುಲ್ಯೈರಹೋರಾತ್ರೈ ಗರ್ಭಸ್ರಾವೈ' ಹುಟ್ಟಿದ ಕೂಡಲೇ ಮಗು ಸತ್ತು ಹೋದರೆ, ಅಂತಹ ಸಂದರ್ಭದಲ್ಲಿ ಸದ್ಯಃ ಶೌಚ ಮಾತ್ರ ಇರುತ್ತದೆ—'ಜಾತಸ್ಮೃತೆ ಮೃತಜಾತೆ ವಾ ಕುಲಸ್ಯ ಸದ್ಯಃ ಶೌಚಮ್ |' ಹಲ್ಲು ಹುಟ್ಟದಿರುವ ಮಗುವು ಮರಣಿಸಿದಾಗಲೂ ಇದೇ ರೀತಿಯ ಆಶೌಚ ಉಂಟಾಗುತ್ತದೆ. ಇಂತಹ ಶವಕ್ಕೆ ಅಗ್ನಿ ಸಂಸ್ಕಾರವೂ ಇಲ್ಲ, ಜಲಾಂಜಲಿಯೂ ಇಲ್ಲ—'ಅದಂತ ಜಾತೆ ಬಾಲೇ ಪ್ರೇತೇ ಸದ್ಯ ಏವ ! ನಾಸ್ಯಾಗ್ನಿ ಸಂಸ್ಕಾರೋ, ನೋದಕಕಿಯಾ |' ಹಲ್ಲುಗಳು ಹುಟ್ಟಿದ್ದು ಕಿವಿ ಚುಚ್ಚುವಿಕೆ ಆಗಿಲ್ಲದಿದ್ದಲ್ಲಿ, ಅಂತಹ ಮಗು ಮರಣಿಸಿದಲ್ಲಿ ಒಂದು ದಿನದ ಶೌಚ (ಸೂತಕ)ವಿರುತ್ತದೆ – 'ದಂತಜಾತೆ ತ್ವಕೃತಚೂಡೇ ತ್ವಹೋರಾತ್ರೇಣ !' ಚೂಡಾಕರಣ (ಕಿವಿ ಚುಚ್ಚುವುದು) ಆಗಿದ್ದು ಉಪನಯನವಾಗಿಲ್ಲದಿದ್ದಲ್ಲಿ ಅಂತಹ ಮರಣಕ್ಕೆ ಮೂರು ದಿನಗಳ ಆಶೌಚ ಇರುತ್ತದೆ–'ಕೃತ ಚೂಡೆತ್ವ ಸಂಸ್ಕೃತೆ ತ್ರಿರಾತ್ರೇಣ !'.

ಸ್ತ್ರೀಯರಿಗೆ ವಿವಾಹ ಸಂಸ್ಕಾರವೇ ಮುಖ್ಯ. ವಿವಾಹಿತ ಸ್ತ್ರೀ ಅತ್ತೆಯ ಮನೆಯಲ್ಲಿದ್ದು ಮರಣಿಸಿದಲ್ಲಿ ಗೋತ್ರ ಇತ್ಯಾದಿಗಳು ಬೇರೆಯಾಗುವುದರ ಕಾರಣ ತವರು ಮನೆಯವರಿಗೆ ಯಾವುದೇ ಸೂತಕವಿಲ್ಲ. ಆದರೆ ಅಂತಹವಳು ತಂದೆಯ ಮನೆಗೆ ಬಂದು, ಪ್ರಸವದ ಕಾರಣ ಅವಳ ಮರಣ ಉಂಟಾದಲ್ಲಿ ಸಂಪ್ರದಾಯದಂತೆ ಒಂದು ಅಥವಾ ಮೂರು ದಿನಗಳ ಆಶೌಚವಿರುತ್ತದೆ–'ಸಂಸ್ಕೃತಾಸು ಸ್ತ್ರೀಷು ನಶೌಚ್‌ಭವತಿ ಪಿತೃಪಕ್ಷೆ ! ತತ್ಪ್ರಸವ ಮರಣೆ ಚೇತ್ ಪಿತೃಗೃಹೇ ಸ್ಯಾತಾಂ ತದೈಕರಾತ್ರಂ ತ್ರಿರಾತ್ರಂ ಚ' || ಅ 22 ||

## ಎರಡು ಸೂತಕಗಳು

ಜನನದ ಸೂತಕವಿದ್ದಾಗ, ನಡುವೆ ಜನನದ ಅಶೌಚ ಬಂದಲ್ಲಿ ಮೊದಲನೇ ಅಶೌಚ ಮುಗಿಯುವುದರೊಂದಿಗೆ ಎರಡನೇ ಆಶೌಚಗಳು ಉಂಟಾದಲ್ಲಿ ಮೊದಲನೆಯದು ಮುಗಿಯುತ್ತಿದ್ದಂತೆ ಎರಡನೆಯದೂ ಮುಗಿಯುತ್ತದೆ- 'ಜನನಾ ಶೌಚ ಮಧ್ಯೆ ಯದ್ಯಪರಂ ಜನನಾ ಶೌಚಂ ಸ್ಯಾತ್ ತದಾ ಪೂರ್ವಾಶೌಚ ವ್ಯಪಶಮೆ ಶುದ್ಧಿಃ | ಮರಣಾ ಶೌಚ ಮಧ್ಯೆ ಜ್ಞಾತಿ ಮರಣೇಪ್ಯೇವಮ್' | (ಅ. 22.)

## ವಿದೇಶಗಳಲ್ಲಿ ಜನನ ಮರಣಗಳ ಅಶೌಚ

ವಿದೇಶಗಳಲ್ಲಿ ಜನನ, ಮರಣಗಳಾದಲ್ಲಿ ಅದು ನಡೆದ 10 ದಿನಗಳ ಒಳಗೆ, ಯಾವುದೇ ದಿನ ವಿಷಯ ತಿಳಿದರೂ, ಅಷ್ಟು ದಿನಗಳ ಒಳಗೆಯೇ ಅದರ ಅಶೌಚ ಮುಗಿದಿರುತ್ತದೆ. ಉದಾಹರಣೆಗೆ 4ನೇ ತಾರೀಖು ಜನನ, ಮರಣ ಉಂಟಾಗುತ್ತದೆ ಎಂದಿಟ್ಟುಕೊಳ್ಳೋಣ. 12 ತಾರೀಖು ವಿಷಯ ತಿಳಿಯುತ್ತದೆ. ಅಶೌಚ ಮೂಲತಃ 10ನೇ ದಿನಕ್ಕೆ ಅಂದರ 13ನೇ ತಾರೀಖು ಮುಗಿಯುವುದರಿಂದ 13ನೇ ತಾರೀಖಿನಂದೇ ಸಮಯ ಮೀರಿ ತಿಳಿದರೂ ಹತ್ತರ ಅಶೌಚ ಮುಗಿಯುತ್ತದೆ. ಎಂದು ತಿಳಿಯುತ್ತದೆಯೊ ಅಂದಿನಿಂದ 10 ದಿನದ ಅಶೌಚ ಲೆಕ್ಕವಿಲ್ಲ. ವ್ಯಕ್ತಿಯು ಸತ್ತದಿನಂದಿದಷ್ಟೇ ಲೆಕ್ಕ. ಯಾವಾತ್ತಾದರೂ ತಿಳಿಯಲಿ. ಒಂದು ವೇಳೆ ಅಶೌಚದ ದಿನಗಳು ಮುಗಿದ ನಂತರ ಒಂದು ವರ್ಷದ ಒಳಗೆ ವಿಷಯ ತಿಳಿದಲ್ಲಿ, ಯಾವಾಗ ತಿಳಿದರೂ ಸರಿಯೆ ಒಂದು ದಿನದ ಅಶೌಚ ಮಾತ್ರ ಇರುತ್ತದೆ. ಒಂದು ವರ್ಷದ ನಂತರ ತಿಳಿದಲ್ಲಿ ಕೇವಲ ಸ್ನಾನ ಶುದ್ಧಿ ಮಾತ್ರ. 'ಶ್ರುತ್ವಾ ದೇಶಾಂತರಸ್ಥ ಜನನ ಮರಣೇ ಶೇಷೇಣ ಶುದ್ಧ್ಯೇತ್ | ವ್ಯತೀತೇಽಶೌಚೇ ಸಂವತ್ಸರಾನ್ತಸ್ತ್ವೇಕರಾತ್ರೇಣ | ತತಃ ಪರಂ ಸ್ನಾನೇನ |' (ಅ. 22).

## ಮೂರು ಮತ್ತು ಒಂದು ದಿನದ ಅಶೌಚ

ಗುರುಗಳ ಹಾಗೂ ತಾತನದ್ದು ಮೂರು ದಿನಗಳ ಅಶೌಚವಿರುತ್ತದೆ. ಗುರುಪತ್ನಿ, ಗುರುಪುತ್ರ, ಮಾವ, ಅತ್ತೆ, ಅತ್ತೆಯ ಮಕ್ಕಳು, ಸಹಪಾಠಿ, ಶಿಷ್ಯ ಹಾಗೂ ತನ್ನ ದೇಶದ ರಾಜನು ಸತ್ತಾಗ ಒಂದು ದಿನದ ಅಶೌಚವಿರುತ್ತದೆ. ಇದೇ ರೀತಿಯಲ್ಲಿ ಸಪಿಂಡೀಕನಲ್ಲದವನು ತನ್ನ ಮನೆಯಲ್ಲಿ ಸತ್ತಾಗಲೂ ಕೂಡ ಆ ಮನೆಯವರಿಗೆ ಒಂದು ದಿನದ ಅಶೌಚ ಉಂಟಾಗುತ್ತದೆ-'ಆಚಾರ್ಯೆ

ಮಾತಾಮಹೆ ಚ ವ್ಯತೀತೇ ತ್ರಿರಾತ್ರೇಣ | ಆಚಾರ್ಯ ಪತ್ನಿ ಪುತ್ರೋಪಾಧ್ಯಾಯ ಮಾತುಲಶ್ವಶುರ ಶ್ವಶುರ್ಯ ಸಹಾಧ್ಯಾಯಿ ಶಿಷ್ಯೇಷ್ವತೀತೇ ಷ್ವೇಕ ರಾತ್ರೇಣ | ಸ್ವದೇಶ ರಾಜಾನಿ ಚ | ಅಸಪಿಂಡೇ ಸ್ವವೇಸ್ಮನಿ ವೃತೇ ಚ |' (ಅ.22).

## ಅಂಟಿದ ಸೂತಕ

ಆತ್ಮಹತ್ಯೆ, ಪತಿತ-ಇಂತಹವರ ಸಾವಿಗೆ ಸೂತಕವಿಲ್ಲ. ಇಂತಹವರಿಗೆ ಜಲಾಂಜಲಿಯೂ ಇಲ್ಲ, ಶ್ರಾದ್ಧವೂ ಇಲ್ಲ-'ಆತ್ಮಹತ್ಯಾಗಿನಃ ಪತಿತಾಶ್ಚ ನಾಶಾಚೋದಕಭಾಜಃ |' (ಅ. 22).

## ಪತಿವ್ರತಾ ಸ್ತ್ರೀಯರ ಧರ್ಮ

ಪತಿವ್ರತೆಯಾದವಳು ಪತಿಯ ಆಚಾರ ವಿಚಾರಗಳನ್ನು ಪಾಲಿಸಬೇಕು. 'ಭರ್ತುಃ ಸಮಾನ ವ್ರತ ಚಾರಿತ್ವಮ್ |' (ಅ. 25.) ಮಾವ, ಅತ್ತೆ, ಗುರು, ದೇವತೆ ಹಾಗೂ ಅತಿಥಿಗಳ ಪೂಜೆಯನ್ನು ಮಾಡಬೇಕು. ಮನೆಯ ಎಲ್ಲ ವಸ್ತು, ಸಾಮಗ್ರಿಗಳನ್ನು ಶುಭ್ರವಾಗಿಡಬೇಕು. ಮನೆಯ ಪಾತ್ರೆ ಪಗಡ ಇತ್ಯಾದಿಗಳನ್ನು ಶುಭ್ರವಾಗಿರಿಸಬೇಕು. ಇವನ್ನು ಕಳ್ಳರಿಂದ ರಕ್ಷಿಸಲು ಪ್ರಯತ್ನಿಸಬೇಕು. ಪತಿಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ಮಾಟ-ಮಂತ್ರ, ವಶೀಕರಣ, ಉಚ್ಚಾಟನೆ, ಮಾಯೆ ಇತ್ಯಾದಿಗಳ ಉಪಯೋಗ ಸಲ್ಲದು-'ಮೂಲಕ್ರಿಯಾಸ್ವನಭಿರತಿಃ |'

ಯಾವಾಗಲೂ ಒಳ್ಳೆಯದಾಗುವ ಆಚರಣೆಯಲ್ಲಿ ತತ್ಪರಳಾಗಿರಬೇಕು. ಪತಿಯು ಪ್ರವಾಸದಲ್ಲಿರುವಾಗ ಅವನಿಗೆ ವಿರುದ್ಧವಾದ ಯಾವುದೇ ಕ್ರಿಯೆ ಕರ್ಮಗಳನ್ನು, ಆಚರಣೆಗಳನ್ನು ಮಾಡಬಾರದು. ಬಾಗಿಲು-ಕಿಟಕಿಗಳ ಮುಖಾಂತರ ಬಗ್ಗಿ ನೋಡಬಾರದು-'ದ್ವಾರದೇಶಗವಾಕ್ಷೇಷು ನಾವಸ್ಥಾನಮ್ |' ಬಾಲ್ಯ, ಯೌವನ, ವೃದ್ಧಾವಸ್ಥೆಗಳಲ್ಲಿ ಅವಳು ಕ್ರಮವಾಗಿ ತಂದೆ, ಗಂಡ, ಮಕ್ಕಳು ಇವರ ಅಧೀನದಲ್ಲಿ ಇರಬೇಕು. ಯಾವುದೇ ಕಾರ್ಯದಲ್ಲಿ ಅವಳು ಸ್ವತಂತ್ರಳಲ್ಲ-'ಸರ್ವ ಕರ್ಮಸ್ವ ಸ್ವತಂತ್ರತಾ |'

ಪತಿಯ ಮರಣದ ನಂತರ ಸತಿಯು ಬ್ರಹ್ಮಚರ್ಯ ಜೀವನ ನಡೆಸಬೇಕು-'ಮೃತೇ ಭರ್ತರಿ ಬ್ರಹ್ಮಚರ್ಯ ತದನ್ವಾರೋಹಣಂ ವಾ'. ಮಕ್ಕಳಿಲ್ಲದಿದ್ದರೂ ಇದೇ ರೀತಿ ಜೀವಿಸಬೇಕು. ಹೀಗೆ ಮಾಡಿದಲ್ಲಿ ಅವಳಿಗೆ ಸ್ವರ್ಗವು

ದೊರೆಯುತ್ತದೆ. ನಿಷ್ಕಾಮವಂತ ಬ್ರಹ್ಮಚಾರಿಣಿಯೇ ಇದಕ್ಕೆ ದಾರಿ–

ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ |
ಸ್ವರ್ಗಂ ಗಚ್ಛತ್ಯಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ || ಅ. 25. ||

## ಮಾತಾ–ಪಿತಾ–ಗುರು ಸೇವೆಯ ಮಹಿಮೆ

ತಂದೆ, ತಾಯಿ, ಗುರು–ಈ ಮೂವರನ್ನೂ ಅತಿ (ಅಸಾಧಾರಣ) ಗುರು ಎಂದು ಕರೆಯಲಾಗುತ್ತದೆ. ಆದುದರಿಂದ ಪ್ರತಿ ನಿತ್ಯ ಇವರ ಸೇವಾ ಶುಶ್ರೂಷೆ ಮಾಡಬೇಕು. ಅವರು ಹೇಳಿದುದನ್ನು ಆ ತಕ್ಷಣವೇ ಮಾಡಬೇಕು. ಅವರಿಗೆ ಪ್ರಿಯವಾಗುವ, ಹಿತಕರವಾಗಿರುವ ಕಾರ್ಯಗಳನ್ನು ಮಾಡಬೇಕು. ಅವರುಗಳ ಆಜ್ಞೆ–ಅನುಮತಿಗಳಿಲ್ಲದೆ ಯಾವುದೇ ಕಾರ್ಯವನ್ನೂ ಮಾಡಬಾರದು– 'ತ್ರಯಃ ಪುರುಷಸ್ಯಾತಿ ಗುರುವೋ ಭವಂತಿ | ಮಾತಾ ಪಿತಾ ಆಚಾರ್ಯಶ್ಚ | ತೇಷಾಂ ನಿತ್ಯಮೇವ ಶುಶ್ರೂಷುಣಾ ಭವಿತವ್ಯಮ್ | ಯತ್ ತೇ ಬ್ರೂಯು ಸ್ತತ್ ಕುರ್ಯಾತ್ ತೇಷಾಂ ಪ್ರಿಯಹಿತಮಾಚರೇತ್| ನ ತೈರನನು ಜ್ಞಾತಃ ಕಿಂಚಿದಪಿ ಕುರ್ಯಾತ್' | (ಅ. 31.).

ಈ ಮೂವರನ್ನು ಯಾರು ಆದರಿಸುವರೊ, ಅದರ ಮುಖಾಂತರ ಎಲ್ಲ ಧರ್ಮಗಳನ್ನೂ ಪಡೆಯಬಹುದು. ಇವರನ್ನು ಅನಾದರ ಮಾಡಿದ ವ್ಯಕ್ತಿ ಬೇರೆ ಯಾವುದೇ ಕಾರ್ಯವನ್ನು ಮಾಡಿದರೂ ನಿಷ್ಫಲವಾಗುತ್ತದೆ.

ಸರ್ವೇ ತಸ್ಯಾದೃತಾ ಧರ್ಮಾ ಯಸ್ಯೈತೇ ತ್ರಯ ಆದೃತಾಃ |
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯ ಫಲಾಃ ಕ್ರಿಯಾಃ ||
|| (ಅ. 31.) ||

## ಮೂರು ರೀತಿಯ ಧನ–ಸಂಪತ್ತುಗಳು

ಪ್ರತಿ ಗೃಹಸ್ಥನ ಧನ–ಸಂಪತ್ತುಗಳು ಮೂರು ರೀತಿಯದ್ದಾಗಿರುತ್ತವೆ. ಶುಕ್ಲ, ಶಬಲ ಹಾಗೂ ಅಸಿತ (ಶುಕ್ಲಃಸಬಲೋSಸಿತಶ್ಚಾರ್ಥಃ) (ಅ.58.).

1. ಶುಕ್ಲಧನ : ತಮ್ಮ ತಮ್ಮ ವರ್ಣಾಶ್ರಮ ಧರ್ಮದ ಅನುಸಾರ ಅಥವಾ ವೃತ್ತಿಯಿಂದ ನ್ಯಾಯಯುತವಾಗಿ ಸಂಪಾದಿಸಿದ ಶುದ್ಧ ರೂಪದ ಧನವನ್ನು 'ಶುಕ್ಲಧನ' ಎಂದು ಕರೆಯಲಾಗುತ್ತದೆ. ಶುಕ್ಲ ಪಕ್ಷದ ಚಂದ್ರನಂತೆ ಇದು ಇರುವುದು ಎಂದರ್ಥ. 'ಸ್ವ ವೃತ್ತ್ಯುಪಾರ್ಜಿತಂ ಸರ್ವ ಸರ್ವೇಷಾಂ ಶುಕ್ಲಮ್ |

2. ಶಬಲ ಧನ : ಬೇರೆಯವರ ವೃತ್ತಿಯಿಂದ ಸಂಪಾದಿಸಿದ ಧನ ವಿದು. ಮಾರುವುದಕ್ಕೆ ಯೋಗ್ಯವಲ್ಲದ್ದನ್ನು ಮಾರಿ, ಅನ್ಯಾಯದಿಂದ ಸಂಪಾದಿಸಿದ ಹಣವಿದು. ಯಾರಿಗಾದರೂ ಉಪಕಾರ ಮಾಡಿದರೆ, ಅದಕ್ಕೆ ಬದಲಾಗಿ ಪಡೆದ ಹಣವೂ ಇದರಲ್ಲಿ ಸೇರುತ್ತದೆ.

ಅನಂತರ ವೃತ್ತ್ಯಪಾತ್ತಂ ಶಬಲಮ್ |

ಉತ್ಕೋಚ ಶುಲ್ಕ ಸಂಪ್ರಾಪ್ತಮವಿಕ್ರೇಯಸ್ಯ ವಿಕ್ರಯೇ |
ಕೃತೋಪ ಕಾರಾದಾಪ್ತಂ ಚ ಶಬಲಂ ಸಮುದಾಹೃತಮ್ || ಅ. 58 ||

3. ಅಸಿತ (ಕಪ್ಪು ಹಣ) ಧನ : ನಿಂದನೀಯ ವೃತ್ತಿಯಿಂದ ಸಂಪಾದಿಸಿದ ಅಶುದ್ಧ ಹಾಗೂ ಅನ್ಯಾಯದ ಹಣವನ್ನು ಈ ಗುಂಪಿನಲ್ಲಿ ಸೇರಿಸಲಾಗಿದೆ. ಮೋಸ, ಕಪಟ, ಠಕ್ಕುತನ, ಜೂಜು, ಕಳ್ಳತನ, ಕಾಳಸಂತೆ, ಡಕಾಯಿತಿಗಳ ಮುಖಾಂತರ ಪಡೆದ ಹಣ ಈ ಗುಂಪಿಗೆ ಸೇರುತ್ತದೆ–

ಅಂತರಿತವೃತ್ತ್ಯ ಪಾತ್ತಂ ಚ ಕೃಷ್ಣಂ |
ಪಾರ್ಶ್ವಿಕ ದ್ಯೂತ ಚೌರ್ಯಾಪ್ತಂ ಪ್ರತಿರೂಪಕ ಸಾಹಸೌ |

ವ್ಯಾಜೇ ನೋಪಾರ್ಜಿತಂ ಯಚ್ಚ ತತ್ಕೃಷ್ಣಂ ಸಮುದಾಹತಂ || ಅ.58 ||

ಶುದ್ಧಾ ಶುದ್ಧ ಧನದಿಂದ ವ್ಯಕ್ತಿಯು ಯಾವ ಯಾವ ಕಾರ್ಯಗಳನ್ನು ಮಾಡುತ್ತಾನೋ, ಅದೇ ರೀತಿಯ ಫಲವನ್ನು ಅನುಭವಿಸುತ್ತಾನೆ. ಪವಿತ್ರ, ಶುದ್ಧ, ನ್ಯಾಯದ ರೀತಿಯಲ್ಲಿ ಸಂಪಾದಿಸಿದ ಹಣದಿಂದ ಯಾವುದೇ ಕಾರ್ಯವನ್ನು ಮಾಡಿದರೂ ಅದು ಶುಭಪ್ರದವಾಗಿರುತ್ತದೆ. ಇಹಲೋಕ, ಪರಲೋಕಗಳಲ್ಲಿ ಉತ್ತಮವಾದುದಾಗಿರುತ್ತದೆ. ಇದು ಅಭ್ಯುದಯಕಾರಕವೂ ಹೌದು.

'ಶಬಲ ಧನ'ದಿಂದ ಮಾಡಿದ ಕಾರ್ಯವು ಮಧ್ಯಮ ವರ್ಗದ್ದಾಗಿರುತ್ತದೆ. 'ಕಪ್ಪು ಹಣ'ದಿಂದ ಮಾಡಿದ ಕಾರ್ಯವು ಹಾನಿಕಾರಕವೂ, ಅಸಫಲವುಳ್ಳದ್ದೂ, ಪತನಗೊಳ್ಳುವಂತಹುದೂ ಆಗಿರುತ್ತದೆ—

ಯಥಾವಿಧೇನ ದ್ರವ್ಯೇಣ ಯತ್ಕಿಂಚಿತ್ ಕುರುತೆ ನರಃ |
ತಥಾವಿಧಮವಾ ಪ್ನೋತಿ ಸ ಫಲಂ ಪ್ರೇತ್ಯ ಚೇಹ ಚ || ಅ. 58 ||

ಕಪ್ಪು ಹಣವನ್ನು ತ್ಯಜಿಸಲೇಬೇಕು. ಉತ್ತಮ (ಸಾತ್ವಿಕ), ಮಧ್ಯಮ (ರಾಜಸ), ಅಧಮ (ತಾಮಸ) ಧನಗಳಲ್ಲಿ ಉತ್ತಮವಾದುದನ್ನೇ ಉಪ

ಯೋಗಿಸಿಕೊಂಡು, ಧಾರ್ಮಿಕ ಕಾರ್ಯಗಳಲ್ಲಿ ಅದನ್ನು ವಿನಿಯೋಗಿಸಬೇಕು.

## ಕಪ್ಪು ಹಣ

ವೇದವ್ಯಾಸನು ಜನಮೇಜಯನನ್ನು ದೇವಿ ಕೃಪೆಗಾಗಿ ಯಜ್ಞ ಮಾಡಲು ತಿಳಿಸಿದನು. ಹೀಗೆ ಮಾಡುವಾಗ ಇದರಲ್ಲಿ ಉಪಯೋಗಿಸುವ ಹಣವು ಶುದ್ಧ ರೂಪದಲ್ಲಿ ಇರಬೇಕು ಎಂದು ಆತ ಒತ್ತಿ ಹೇಳಿದ್ದಾನೆ. ಏಕೆಂದರೆ ಅನ್ಯಾಯದ ಹಣದಿಂದ ಮಾಡಿದ ಪುಣ್ಯ ಕಾರ್ಯವೂ ಕೂಡ ಇಹಲೋಕ, ಪರಲೋಕಗಳೆರಡರಲ್ಲೂ ಸತ್ಫಲವನ್ನು ಕೊಡುವುದಿಲ್ಲ—

ಅನ್ಯಾಯೋಪಾರ್ಜಿತೇ ನೈವ ದ್ರವ್ಯೇಣ ಸುಕೃತಂ ಕೃತಂ |
ನ ಕೀರ್ತಿರಿಹಲೋಕೇ ಚ ಪರಲೋಕೇ ಚ ತತ್ಫಲಂ ||

ಆದುದರಿಂದ ಈ ಲೋಕದಲ್ಲಿ ಯಶಸ್ಸು, ಪರಲೋಕದಲ್ಲಿ ಸುಖವನ್ನು ಪಡೆಯುವುದಕ್ಕಾಗಿ ನ್ಯಾಯಯುತವಾಗಿ ಸಂಪಾದಿಸಿದ ಹಣದಿಂದಲೇ ಪುಣ್ಯ ಕಾರ್ಯವನ್ನು ಮಾಡಬೇಕು.

ಇದಕ್ಕೆ ಸಂಬಂಧಪಟ್ಟ ಹಾಗೆ ವೇದವ್ಯಾಸನು ಒಂದು ಉದಾಹರಣೆಯನ್ನು ಜನಮೇಜಯನಿಗೆ ನೀಡಿದನು–

"ರಾಜೇಂದ್ರ ! ಧರ್ಮರಾಜನು ಧರ್ಮದ ಅವತಾರಿ. ಅವನು ರಾಜಸೂಯ ಯಾಗವನ್ನು ಮಾಡಿದ. ಆ ಯಜ್ಞವನ್ನು ಯಶಸ್ವಿಯಾಗಿ ನೆರವೇರಿಸಿದ. ಈ ಯಜ್ಞದಲ್ಲಿ ಸಾಕ್ಷಾತ್ ಭಗವಾನ್ ಶ್ರೀಕೃಷ್ಣನೂ ಇದ್ದ. ಭಾರದ್ವಾಜ ಇತ್ಯಾದಿ ಮಹಾ ಮುನಿಗಳೂ ಇದ್ದರು. ಒಂದು ತಿಂಗಳವರೆಗೆ ನಡೆದ ಈ ಯಜ್ಞಕ್ಕೆ ಪೂರ್ಣಾಹುತಿ ನೀಡಿ, ಉತ್ತಮ ರೀತಿಯಲ್ಲಿ ಅದನ್ನು ನೆರವೇರಿಸಿದನೂ ಕೂಡ ಎಲ್ಲಿಯೂ ಲೋಪವು ಕಂಡು ಬರಲಿಲ್ಲ. ಆದರೆ ಈ ಯಜ್ಞಕ್ಕೆ ಉಪಯೋಗಿಸಿದ ಧನವು ಲೂಟಿಯಿಂದ, ಅಧರ್ಮ ಮಾರ್ಗದಲ್ಲಿ ಸಂಪಾದಿಸಿದ್ದಾಗಿತ್ತು. ಒಂದು ರೀತಿಯಲ್ಲಿ ಅದು ಕಪ್ಪು ಹಣವಾಗಿತ್ತು. ಅದರಿಂದ ಯಜ್ಞದ ಫಲವು ಸತ್ಪರಿಣಾಮವನ್ನು ನೀಡಲಿಲ್ಲ. ದುಷ್ಪರಿಣಾಮಗಳನ್ನೇ ನೀಡಿತು. ಜೂಜಿನಲ್ಲಿ ಪಾಂಡವರು ಸೋತರು. ಹನ್ನೆರಡು ವರ್ಷಗಳ ವನವಾಸ ಅನುಭವಿಸಿದರು. ದ್ರೌಪದಿಯೊಂದಿಗೆ ಅನೇಕ ಕಷ್ಟಗಳನ್ನು ಅನುಭವಿಸಿದರು. ಅಜ್ಞಾತವಾಸದಲ್ಲಿ ವಿರಾಟನ ಸೇವಕರಾದರು. ಕೀಚಕನಿಂದ ದ್ರೌಪದಿಯು

ಅನೇಕ ಕಷ್ಟಗಳನ್ನು ಅನುಭವಿಸಬೇಕಾಯಿತು. ಕಪ್ಪು ಹಣದ ಉಪಯೋಗದಿಂದ ಸ್ವತಃ ಧರ್ಮರಾಜನಿಗೇ ಇಂತಹ ಸ್ಥಿತಿ ಒದಗಿದಾಗ, ಸಾಮಾನ್ಯ ಮಾನವರ ಪಾಡೇನು ? ಕಪ್ಪು ಹಣವು ಮಾನವನನ್ನು ನಾಶದಿಂದ ಸರ್ವನಾಶದ ಕಡೆಗೆ ಕರೆದೊಯ್ಯುತ್ತದೆ. ಆದ್ದರಿಂದ ಎಚ್ಚರವಾಗಿರು."

## ಸದಾಚಾರ ಹಾಗೂ ಧರ್ಮಾಚರಣೆ

ತನಗೆ ಒಳ್ಳೆಯದಾಗಲೆಂದು ಆಶಿಸುವ ಬುದ್ಧಿವಂತನು ಧರ್ಮಾತ್ಮನಾಗಲು ಇಷ್ಟಪಡುತ್ತಾನೆ. ಆದುದರಿಂದ ಮೊಟ್ಟ ಮೊದಲು ಅವನು ತನ್ನ ಇಂದ್ರಿಯಗಳ ಮೇಲೆ ಹತೋಟಿ ಪಡೆಯಬೇಕು. ವೇದಾದಿ ಶಾಸ್ತ್ರಗಳು ಹಾಗೂ ಸ್ಮೃತಿಗಳಲ್ಲಿ (ಧರ್ಮ ಶಾಸ್ತ್ರಗಳು) ತಿಳಿಸಿರುವ ಧರ್ಮ ಕಾರ್ಯಗಳನ್ನು ಅನುಸರಿಸಬೇಕು. ಸಾಧುಗಳು, ಸಂತ ಮಹಾತ್ಮರು, ಭಕ್ತರು, ಮಹಾಪುರುಷರು ಆಚರಣೆಯಲ್ಲಿ ತಂದಿರುವ ಸತ್ಕರ್ಮಗಳನ್ನು ಅನುಸರಿಸಬೇಕು. ಅದರಂತೆ ನಡೆದುಕೊಳ್ಳಬೇಕು. ಇದೇ ಸದಾಚಾರ. ಹೀಗೆ ಮಾಡುವುದರಿಂದಲೇ ಶುಭವಾಗುವುದು. ಬೇರೆ ಮಾರ್ಗಗಳಿಂದ ಪುಣ್ಯವನ್ನು ಸಂಪಾದಿಸಲಾಗುವುದಿಲ್ಲ. ಇದರಿಂದ ಉತ್ತಮ ಆರೋಗ್ಯ, ದೀರ್ಘಾಯು, ಮನೋಭಿಲಾಷಿತ ಉತ್ತಮ ಗತಿ ಹಾಗೂ ಅಕ್ಷಯ ಧನವನ್ನು ಪಡೆಯಬಹುದು. ಸದಾಚಾರವನ್ನು ಅನುಸರಿಸುವುದರಿಂದ ಸಮಸ್ತ ದುರ್ಗುಣಗಳೂ, ದುರ್ಲಕ್ಷಣಗಳೂ, ಪಾಪ ದೋಷಗಳೂ ಪರಿಹಾರವಾಗುತ್ತವೆ, ದೂರವಾಗುತ್ತವೆ. ಇದರಿಂದ ವ್ಯಕ್ತಿಯು ಪರಮ ಪವಿತ್ರನಾಗಿ, ಭಗವತ್ಪ್ರಾಪ್ತಿಗೆ ಯೋಗ್ಯನಾಗುತ್ತಾನೆ–

ಸ್ಮೃತಿ ಶೃತ್ಯುದಿತಂ ಸಮ್ಯಕ್ ಸಾಧು ಶಿಷ್ಟ ನಿಷೇವಿತಂ |
ತಮಾಚಾರಂ ನಿಷೇವೇತ ಧರ್ಮಕಾಮೋ ಜಿತೇಂದ್ರಿಯಃ ||
ಆಚಾರಾಲ್ಲಭತೇ ಚಾಯುರಾಚಾರಾ ದೀಪ್ಸಿತಾಂ ಗತಿಂ 1
ಆಚಾರಾದ್ಧನ ಮಕ್ಷಯ್ಯ ಮಾಚಾರಾದ್ಧಂತ್ಯ ಲಕ್ಷಣಂ || ಅ. 71 ||

## ಲಕ್ಷ್ಮೀನಿವಾಸ ಸ್ಥಾನ

ಲಕ್ಷ್ಮಿ ಎಲ್ಲಿರುವಳು ಎನ್ನುವುದಕ್ಕೆ ಅನೇಕ ಶಾಸ್ತ್ರಗ್ರಂಥಗಳು, ಕಾವ್ಯ ಕಾದಂಬರಿಗಳು ಸಾಕಷ್ಟು ವಿವರಣೆ ನೀಡುತ್ತವೆ. ಶಾಕ್ತಾಗಮಗಳು ಹಾಗೂ ಲಕ್ಷ್ಮೀತಂತ್ರ ಇತ್ಯಾದಿ ಪಾಂಚರಾತ್ರಾದಿ ಆಗಮಗಳಲ್ಲೂ ಇದು ಮುಖ್ಯ ವಿಷಯವಾಗಿದೆ. ಈ ಎಲ್ಲ ವೈಷ್ಣವ ಧರ್ಮಶಾಸ್ತ್ರಗಳಲ್ಲೂ ಲಕ್ಷ್ಮಿ

ಯನ್ನು ಪಡೆಯಲು ಧಾರ್ಮಿಕ ವಿಧಿಗಳಿಂದ ಧರ್ಮಾತ್ಮ ವ್ಯಕ್ತಿಗಳಿಂದಲೇ ಸಾಧ್ಯ ಎಂದು ತಿಳಿಸಲಾಗಿದೆ.

ಎಲ್ಲ ಆಗಮಗಳೂ ಒಂದೇ ಕಥೆಯನ್ನು ಹೇಳುತ್ತವೆ—

ವಸುಧಾದೇವಿ (ಭೂದೇವಿ) ಹಾಗೂ ಲಕ್ಷ್ಮಿಯರು ಮಹಾವಿಷ್ಣುವಿನ ಉಭಯ ಪಾರ್ಶ್ವಗಳಲ್ಲಿರುವ ದೇವಿಯರು. ಲಕ್ಷ್ಮಿಯ ಸ್ಥಾನವು ಭಗವಂತನ ಹೃದಯ ಹಾಗೂ ಪಾದಪದ್ಮಗಳು. ಆಕೆಯ ಮಹತ್ವವನ್ನು ಕಂಡು ಭೂದೇವಿಯು 'ಹೇ ದೇವಿ! ಭಗವಾನ್ ವಿಷ್ಣು ಬಳಿ ಅಲ್ಲದೆ ಬೇರೆಲ್ಲೆಲ್ಲ ನೀನು ನಿವಸಿಸುತ್ತೀ—'ಪೃಚ್ಛಾಮ್ಯಹಂ ತೇ ವಸತಿಂ ವಿಭೃತ್ಯಾಃ |' ಎಂದು ಕೇಳಿದಳು. ಆಗ ತಾನು ಇರುವ ಸ್ಥಾನಗಳು ಲಕ್ಷ್ಮೀ ದೇವಿಯು ಹೀಗೆಂದು ತಿಳಿಸಿದಳು.

ಸದಾ ಸ್ಥಿತಾಹಂಮಧುಸೂದನಸ್ಯ ದೇವಸ್ಯ ಪಾರ್ಶ್ವೇ
ತಪನೀಯವರ್ಣೇ |
ಅನ್ಯಾಜ್ಞಯಾ ಯಂ ಮನಸಾ ಸ್ಮರಾಮಿ ಶ್ರಿಯಾಯುತಂ ತಂ
ಪ್ರವದಂತಿ ಸಂತಃ |
ಸದ್ಯಃ ಕೃತೇ ಚಾಪ್ಯಥ ಗೋಪಯೋ ಚ ಮತ್ತೇ ಗಜೇಂದ್ರೆ
ತುರಗೇ ಪ್ರಹಷ್ಟೆ |
ವೃಷೇ ತಥಾ ದರ್ಪ ಸಮನ್ವಿತೆ ವಿಪ್ರೇ ತಥೈವಾಧ್ಯಯನ ಪ್ರಪನ್ನೆ ||
ಕ್ಷೀರೇ ತಥಾ ಸಂಪಿಷಿ ಶಾದ್ವಲಿ ಚ ಕ್ಷೌದ್ರೆ ತಥಾದಕ್ಷಿ
ಪುರಂಧಿ ಗಾತ್ರೇ |
ದೇಹೇ ಕುಮಾರ್ಯಾಶ್ಚ ತಥಾ ಸುರಾಣಾಂ ತಪಸ್ವಿನಾಂ ಯಜ್ಞಭೂತಾಂ
ಚ ದೇಹೇ ||
ಪುಷ್ಪೇಷು ಶುಕ್ಲೇಷು ಚ ಪರ್ವತೇಷು ಫಲೇಷು ರಮ್ಯೇಷು
ಸರಿದ್ವರಾಸು |
ಸರಃಸು ಪುಷ್ಪೇಷು ತಥಾ ಜಲೇಷು ಸಶಾದ್ವಲಾಯಾಂ ಭುವಿ
ಪದ್ಮಖಂಡೇ ||
ಬನೇ ಚ ಪತ್ನೀ ಚ ಶಿಶೌ ಪ್ರಹೃಷ್ಟಸಾ ಧೌ ನರೇ ಧರ್ಮ
ಪರಾಯಣೇ ಚ ||
ಆಚಾರ ಸೇವಿನ್ಯಥ ಶಾಸ್ತ್ರನಿತ್ಯೆ ವಿನೀತವೇಶೇ ಚ ತಥಾ ಸುವೇಶೇ |

ಸುಶುದ್ಧದಾಂತೇ ಮಲವರ್ಜಿತೇ ಚ ನಿಷ್ಟ್ಯಾಶನೆ ಚಾ ತಿಥಿಪೂಜಕೇ ಚ ||
ಸ್ವದಾರತುಷ್ಟೇ ನಿರತೇ ಚ ಧರ್ಮೇ ಧರ್ಮೋತ್ಕಟಿ ಚಾತ್ಯತನಾದ್ವಿರಕ್ತೆ |
ಸತ್ಯೇ ಸ್ಥಿತೇ ಭೂತ ಹಿತೇ ನಿವಿಷ್ಟೇ ಕ್ಷಮಾರ್ಚಿತೇ ಕ್ರೋಧ
ವಿವರ್ಜಿತೇ ಚ |
ಸ್ವಕಾರ್ಯದಕ್ಷೆ ಪರಕಾರ್ಯದಕ್ಷೇ ಕಲ್ಯಾಣಚಿತ್ತೇ ಚ ಸದಾ
ವಿನೀತೇ || ಅ. 99. ||

'ಹೇ ದೇವಿ ! ನಾನು ಭಗವಾನ್ ವಿಷ್ಣುವಿನ ಅರ್ಧಾಂಗಿನಿಯು ಸದಾ ಆತನ ಪಾರ್ಶ್ವಭಾಗದಲ್ಲಿ ಇರುತ್ತೇನೆ. ಆತನ ಆಜ್ಞೆಯನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ, ಆತನು ಎಲ್ಲಿಗೆ ಹೋಗಬೇಕೆಂದು ತಿಳಿಸಿದರೆ ಅಲ್ಲಿಗೆ ಹೊರಟು ಹೋಗುತ್ತೇನೆ. ಯಾರ ಬಳಿಗೆ ಹೋಗುವೆನೊ, ಆತನನ್ನು ಲಕ್ಷ್ಮಿಯಿಂದ ಸಂಪನ್ನಗೊಳಿಸುವೆನು. ಹಸುವಿನ ಹೊಸ ಸಗಣಿಯಲ್ಲಿ, ಉನ್ಮತ್ತ ಗಜರಾಜನಲ್ಲಿ, ಯುವ ಅಶ್ವದಲ್ಲಿ, ದರ್ಪದಿಂದ ಕೂಡಿದ ಯುವ ಎತ್ತಿನಲ್ಲಿ, ಅಧ್ಯಯನ ನಿರತ ಬ್ರಾಹ್ಮಣನಲ್ಲಿ ನಿವಸಿಸುವೆನು, ಸ್ವಧರ್ಮ ಪಾಲನೆಯ ಉಳಿದೆಲ್ಲರಲ್ಲಿಯೂ ನೆಲೆಸಿರುತ್ತೇನೆ. ಅಮಲಕ ಪುಷ್ಪ, ಬಿಲ್ವಪತ್ರ, ಗೋವಿನ ಹಾಲು, ಗೋವಿನ ಮೊಸರು, ತುಪ್ಪ, ಮಧು, ಹಸಿರಾದ ಹುಲ್ಲಿನಿಂದ ಕೂಡಿದ ಹಾಗೂ ಹಸು ಸಂಚರಿಸಿರುವ ಭೂಮಿಯಲ್ಲಿ, ಯುವತಿ ಸ್ತ್ರೀ, ಕುಮಾರಿ ಕನ್ಯೆ, ದೇವತೆ, ತಪಸ್ವಿ ಹಾಗೂ ಯಜ್ಞ ಇತ್ಯಾದಿಗಳನ್ನು ಆಯೋಜಿಸುವ ವ್ಯಕ್ತಿಗಳಲ್ಲಿ ನಾನು ನೆಲೆಸಿರುತ್ತೇನೆ.

'ಶುಕ್ಲ ಪುಷ್ಪದಲ್ಲಿ, ಪರ್ವತದಲ್ಲಿ, ಫಲದಲ್ಲಿ, ರಮಣೀಯ ಶ್ರೇಷ್ಠ ನದಿಗಳಲ್ಲಿ, ನೀರಿನಿಂದ ತುಂಬಿದ ಸರೋವರಗಳಲ್ಲಿ, ಸತ್ಯ ಸಂಪನ್ನ ಭೂಮಿಯಲ್ಲಿ ಹಾಗೂ ಕಮಲದಲ್ಲಿ ನೆಲೆಸಿರುತ್ತೇನೆ. ಇದೇ ರೀತಿಯಲ್ಲಿ ವನ, ಗೋವತ್ಸನು, ಚಿಕ್ಕ ಬಾಲಕರು, ಸಾಧು, ಧರ್ಮ ಪರಾಯಣ ವ್ಯಕ್ತಿ, ಸದಾಚಾರದ ಪಾಲನೆ ಮಾಡುವವನು, ಶಾಸ್ತ್ರಾಧ್ಯಯನ ಹಾಗೂ ಶಾಸ್ತ್ರಚರ್ಚೆ (ಸತ್ಸಂಗ) ಗಳನ್ನು ಪ್ರತಿನಿತ್ಯ ಮಾಡುವವನು, ಸೌಮ್ಯವೇಷಧಾರಿ, ಸುಂದರ ವೇಷ ಭೂಷಣಗಳನ್ನು ಧರಿಸುವವರಲ್ಲಿ ನಾನಿರುತ್ತೇನೆ. ಶುದ್ಧನೂ, ಪವಿತ್ರನೂ, ಇಂದ್ರಿಯಗಳನ್ನು ಜಯಿಸಿದವನೂ, ನಿರ್ಮಲ ಮನಸ್ಸಿನ ವ್ಯಕ್ತಿಗಳು ಹಾಗೂ ಪದಾರ್ಥಗಳಲ್ಲಿ, ಮೃಷ್ಟಾನ್ನದಲ್ಲಿ, ಅತಿಥಿ ಸೇವಾ ಪರಾಯಣ ವ್ಯಕ್ತಿಯಲ್ಲಿ, ತನ್ನ ಪತ್ನಿ

ಯಲ್ಲಿ ಸಂತುಷ್ಟನಾಗುವವನಲ್ಲಿ, ಶ್ರೇಷ್ಠ ಧರ್ಮಾತ್ಮನಲ್ಲಿ ಹಾಗೂ ಯುಕ್ತ ಆಹಾರ ಮಾಡುವವನಲ್ಲಿ ನಿವಸಿಸುತ್ತೇನೆ. ಇದೇ ರೀತಿಯಲ್ಲಿ ಸತ್ಯ, ಧರ್ಮ ಸ್ಥಿತ ವ್ಯಕ್ತಿಯಲ್ಲಿ, ಎಲ್ಲ ಜೀವಿಗಳಿಗೂ ಶುಭ ಬಯಸುವವನಲ್ಲಿ, ಧರ್ಮಶೀಲ ದಲ್ಲಿ, ಕೋಪರಹಿತ ವ್ಯಕ್ತಿಯಲ್ಲಿ, ತನ್ನ ಹಾಗೂ ಇತರರ ಕೆಲಸದಲ್ಲಿ ಕುಶಲತೆ ಯನ್ನು ಪಡೆದ ವ್ಯಕ್ತಿಯಲ್ಲಿ, ವಿನೀತನಾಗಿ ಇತರರಿಗೆ ಶುಭವಾಗುವುದಕ್ಕಾಗಿ ದುಡಿಯುವವರಲ್ಲಿ ನಾನು ನೆಲೆಸಿರುತ್ತೇನೆ. ಪ್ರಿಯವಾದಿನಿಯಾದ ಪತಿವ್ರತಾ ಸ್ತ್ರೀಯಲ್ಲಿ (ಪತಿವ್ರತಾಸು ಪ್ರಿಯವಾದಿ ನೀಷು), ಧರ್ಮದಲ್ಲಿ ನಿರತಳಾಗಿರುವ ವರಲ್ಲಿ, ದಯಾಳು ಸ್ತ್ರೀಯಲ್ಲಿ, ಹಾಗೂ ಭಗವಾನ್ ಮಧುಸೂದನನಲ್ಲಿ ನಾನು ನಿವಸಿಸುತ್ತೇನೆ (ಧರ್ಮವ್ಯಪೇಕ್ಷಾಸು ದಯಾನ್ವಿತಾಸು ಸ್ಥಿತಾ ಸದಾಹಂ ಮಧು ಸೂದನೇತು), (ಅ. 99)

ಮುಖ್ಯವಾಗಿ ಧರ್ಮಾತ್ಮನ ಹತ್ತಿರಕ್ಕೇ ಲಕ್ಷ್ಮಿಯು ಹೋಗುತ್ತಾಳೆ. ಲಕ್ಷ್ಮಿಯೇ ಧರ್ಮಾತ್ಮನ ಹಿಂದೆ ಬೀಳುವಳು. ಲಕ್ಷ್ಮಿಯಿಂದ ಧರ್ಮಾತ್ಮನಿಗೆ ಯಾವುದೇ ಉಪಯೋಗವಿಲ್ಲ ಆದರೆ ಅವನು ಯಾವುದಾದರೊಂದು ಧರ್ಮ ಕಾರ್ಯಕ್ಕಾಗಿ ತನ್ನಲ್ಲಿನ ಹಣವನ್ನು ಉಪಯೋಗಿಸಿಕೊಂಡರೆ, ಲಕ್ಷ್ಮಿಯು ತನ್ನನ್ನು ತಾನು ಧನ್ಯೆಯೆಂದುಕೊಳ್ಳುವಳು. ಧರ್ಮವೆಲ್ಲವೂ ಭಗವಂತನಲ್ಲಿ ಕೇಂದ್ರೀಕೃತವಾಗಿದೆ. ಆದುದರಿಂದ ಲಕ್ಷ್ಮಿ ಪ್ರಾಪ್ತಿಗಾಗಿ ಶುದ್ಧ ಧರ್ಮವನ್ನು ಆಚರಿಸಬೇಕಾದುದು ಅವಶ್ಯಕ. ಈ ದೃಷ್ಟಿಯಿಂದಲಾದರೂ ಸತತವಾಗಿ ಧರ್ಮದ ಅನುಷ್ಠಾನವನ್ನು ಮಾಡಬೇಕು. ಇದೇ ಈ ವೈಷ್ಣವ ಧರ್ಮಶಾಸ್ತ್ರದ ಗುರಿಯಾಗಿದೆ.

## 2. ಲಘು ವಿಷ್ಣುಸ್ಮೃತಿ

ಮಹಾವಿಷ್ಣುವನ್ನು ಇದರಲ್ಲಿ ಮಹರ್ಷಿ ಇತ್ಯಾದಿ ಗುಣಗಳಿಂದ ಹೊಗಳ ಲಾಗಿದೆ. ವಿಷ್ಣುವು ಧರ್ಮದ ಪ್ರತಿಮೂರ್ತಿ. ಆದುದರಿಂದ ಆತನು ತನ್ನ ಭಕ್ತರ ಹಿತಕ್ಕಾಗಿ ಧರ್ಮಾಚರಣೆಯ ಪ್ರತಿಪಾದನೆಯ, ವಿಧಿ ವಿಧಾನಗಳ ವಿವರಗಳೇ ಈ ಗ್ರಂಥ. ಇದು ಮೂಲ ರೂಪದಲ್ಲಿ ಇಂದು ದೊರೆತಿಲ್ಲ.

'ಲಘು ವಿಷ್ಣು ಸ್ಮೃತಿ' ಯು ಸಂಕ್ಷಿಪ್ತ ರೂಪದ್ದಾಗಿದೆ. ಇದರಲ್ಲಿ 115 ಶ್ಲೋಕಗಳಿವೆ. ವಿಷ್ಣುವನ್ನು ವರ್ಣಾಶ್ರಮ ಧರ್ಮದ ಬಗ್ಗೆ ನಿಯಮಗಳನ್ನು ಋಷಿ ಸಮೂಹವು ಕೇಳಿದಾಗ ಮಹಾವಿಷ್ಣುವು ವಿವರಿಸಿದ ಉಪದೇಶಿಸಿದ

ವಿವರಗಳೇ 'ಲಘು ವಿಷ್ಣು ಸ್ಮೃತಿ' ಯಾಗಿದೆ. ಮುಖ್ಯವಾಗಿ ನಾಲ್ಕು ವರ್ಣಗಳ ಧರ್ಮ, ಬ್ರಹ್ಮಚಾರಿಯ ನಿಯಮ, ಗೃಹಸ್ಥ ಧರ್ಮ ಹಾಗೂ ಸನ್ಯಾಸ ಧರ್ಮದ ವರ್ಣನೆಗಳನ್ನು ಇದರಲ್ಲಿ ನೀಡಲಾಗಿದೆ.

ಗೃಹಸ್ಥಾಶ್ರಮದಲ್ಲಿದ್ದಾಗ ಶ್ರೌತ, ಸ್ಮಾರ್ತ ಧರ್ಮದ ವಿಹಿತವಾದ ಎಲ್ಲ ಕರ್ಮಗಳನ್ನೂ ಗೃಹಸ್ಥನು ಅನುಸರಿಸಬೇಕು. ಇಲ್ಲದಿದ್ದಲ್ಲಿ ಅವನು ದೋಷಿಯಾಗುತ್ತಾನೆ–

ಶ್ರೌತಂ ಸ್ಮಾರ್ತಂ ಚ ಯತ್ಕಿಂಚಿದ್ವಿಧಾನಂ ಧರ್ಮಸಾಧನಂ |
ಗೃಹೇ ತದ್ವಸತಾ ಕಾರ್ಯಮನ್ಯಥಾ ದೋಷಭಾಗ್ಭವೇತ್ ||2–18||

ಹೀಗೆ ಸರಿಯಾದ ರೀತಿಯಲ್ಲಿ ಗೃಹಸ್ಥ ಧರ್ಮವನ್ನು ಪಾಲಿಸುವವನು ಪ್ರಜಾಪತಿಯ ಪರಮ ಸ್ಥಾನವನ್ನು ಪಡೆಯುತ್ತಾನೆ– 'ಪ್ರಜಾಪತೇಃ ಪರಂ ಸ್ಥಾನಂ ಸಮ್ಪ್ರಾಪ್ನೋತಿ ನ ಸಂಶಯಃ' (2–19).

ವಾನಪ್ರಸ್ಥ ಧರ್ಮವನ್ನು ಪಾಲಿಸುವವನು ಅರಣ್ಯದಲ್ಲಿದ್ದು, ವಲ್ಕಲವಸ್ತ್ರಗಳನ್ನು ಧರಿಸಬೇಕು. ಉತ್ತು, ಬೆಳೆದ ಆಹಾರ ಧಾನ್ಯವನ್ನು ಉಪಯೋಗಿಸಬಾರದು. ಫಲ–ಮೂಲಗಳನ್ನು ಮಾತ್ರ ಸೇವಿಸಬೇಕು, ಋಷಿ ಮುನಿಗಳಂತೆ ಜೀವನ ಸಾಗಿಸಬೇಕು. ಕೃಚ್ಛ್ರಚಾಂದ್ರಾಯಣ ಇತ್ಯಾದಿ ವ್ರತಗಳನ್ನು ಅನುಸರಿಸುತ್ತಾ, ಪರಮ ಪವಿತ್ರನನ್ನಾಗಿ ತನ್ನನ್ನು ಉಳಿಸಿಕೊಂಡಿರಬೇಕು.

ಸಂನ್ಯಾಸಾಶ್ರಮದಲ್ಲಿ ಇರುವವನು ಅಹಿಂಸೆ, ಸತ್ಯ, ಕಳ್ಳತನವಿಲ್ಲದಿರುವಿಕೆ, ಬ್ರಹ್ಮಚರ್ಯ, ಎಲ್ಲ ಪ್ರಾಣಿಗಳಲ್ಲಿ ದಯೆ, ಗಂಭೀರತೆ ಇತ್ಯಾದಿಗಳನ್ನು ಹೊಂದಿದ್ದು, ಧರ್ಮಪರಿಪಾಲನೆಯನ್ನು ಪ್ರತಿನಿತ್ಯ ಪಾಲಿಸಬೇಕು.

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಮಫಲ್ಗುತಾ |
ದಯಾ ಚ ಸರ್ವಭೂತೇಷು ನಿತ್ಯಮೇತದ್ ಯತಿಶ್ಚರೇತ್ ||4–4||

ಯತಿಯಾದವನು ಗ್ರಾಮದ ಹೊರಗೆ ಬಂದು ಮರದ ಕೆಳಗೆ ವಾಸಮಾಡಬೇಕು. ಮಾನಾಪಮಾನಗಳನ್ನು ಲಕ್ಷಿಸದೆ ಕೀಟಗಳ ತರಹ ಜೀವಿಸಬೇಕು. ಒಂದು ಸ್ಥಳದಲ್ಲಿ ನಿವಸಿಸಬಾರದು. ಆದರೆ ಅವನು ತುಂಬಾ ವೃದ್ಧನಾದಾಗ, ಭಯಭೀತನಾದಾಗ, ಅನಾಸಕ್ತನಾದಾಗ, ಗ್ರಾಮ ಅಥವಾ ನಗರದಲ್ಲಿ ಒಂದು ಸ್ಥಳದಲ್ಲಿ ವಾಸಮಾಡಬಹುದು–

ವೃದ್ಧಾನಾಮಾತುರಾಣಾಂ ಚ ಭೀರೂಣಾಂ ಸಂಗವರ್ಜಿನಾಂ |

ಗ್ರಾಮೇವಾಪಿ ಪುರೇ ವಾಪಿ ವಾಸೋ ನೈಕತ್ರ ದುಷ್ಯತಿ ||4–6||

ಕೌಪೀನ, ಹೊದೆಯಲು ಸಾಮಾನ್ಯ ಬಟ್ಟೆ ಹಾಗೂ ಪಾದುಕೆಗಳು ಇಷ್ಟರ ವಿನಹ ಬೇರೆ ಏನನ್ನೂ ಸನ್ಯಾಸಿ ಸಂಗ್ರಹಿಸಬಾರದು. ಸ್ತ್ರೀಯರೊಂದಿಗೆ ಸಂಭಾಷಣೆ, ಅವರನ್ನು ನೋಡುವುದು, ಅವರನ್ನು ಸ್ಪರ್ಶಿಸುವುದು, ಅವರೊಂದಿಗೆ ನೃತ್ಯ ಮಾಡುವುದು, ವಾದ–ವಿವಾದಗಳನ್ನು ಮಾಡುವುದು ಇತ್ಯಾದಿಗಳನ್ನು ಅವನು ಮಾಡಬಾರದು. ಅವನು ವಾನಪ್ರಸ್ಥ ಹಾಗೂ ಗೃಹಸ್ಥರ ಸಂಪರ್ಕವನ್ನು ಹೊಂದಿರಬಾರದು. ಏನನ್ನೂ ಅವನು ಪರಿಗ್ರಹಿಸಬಾರದು. ಒಬ್ಬಂಟಿಗನಾಗಿ ಸುತ್ತಾಡುತ್ತಿರಬೇಕು ಆ ನಡುವೆ ಭಿಕ್ಷೆಯಲ್ಲಿ ಏನು ದೊರೆಯುತ್ತದೆಯೊ ಅದನ್ನು ಮಾತ್ರ ಸ್ವೀಕರಿಸಬೇಕು. ಸದಾ ಕಾಲವೂ ಆತ್ಮಚಿಂತನೆ ಹಾಗೂ ಪರಮಾತ್ಮ ಚಿಂತನೆಯಲ್ಲಿ ತಲ್ಲೀನನಾಗಿರಬೇಕು.

## ನಾಲ್ಕು ರೀತಿಯ ಸನ್ಯಾಸಿಗಳು

ಕುಟೀಚಕ, ಬಹೂದಕ, ಹಂಸ ಹಾಗೂ ಪರಮಹಂಸ–ಎನ್ನುವ ನಾಲ್ಕು ರೀತಿಯ ಸನ್ಯಾಸಗಳಿವೆ. ಇದರಲ್ಲಿ ಕಡೆಯದು ಅತ್ಯುತ್ತಮ.

ಚತುರ್ವಿಧಾ ಭಿಕ್ಷುಕಾಃ ಸ್ಯುಃ ಕುಟೀಚಕಬಹೂದಕೌ |
ಹಂಸಃ ಪರಮಹಂಸಶ್ಚ ಪಶ್ಚಾದ್ ಯೋ ಯಃ ಸ ಉತ್ತಮಃ ||4–11||

ವೈಷ್ಣವ ಧರ್ಮದಲ್ಲಿ ಸನ್ಯಾಸ ಪಡೆಯಲು ಅನುಸರಿಸುವ ಪ್ರಕ್ರಿಯೆಗಳನ್ನು ಇಲ್ಲಿ ವಿವರಿಸಲಾಗಿದೆ.

**1.** ಕುಟೀಚಕ : ಈತನು ಒಂದು ಏಕ ದಂಡ ಅಥವಾ ತ್ರಿದಂಡವನ್ನು ಧರಿಸಬೇಕು. ಈತನು ಎಲ್ಲ ರೀತಿಯ ಸಾಂಸಾರಿಕ ಸುಖಭೋಗಗಳು ಹಾಗೂ ಮಕ್ಕಳ ಐಶ್ವರ್ಯ–ಸುಖ–ಭೋಗದ ಆಸ್ವಾದನೆಯನ್ನು ತ್ಯಜಿಸಬೇಕು. ಅವೆಲ್ಲವುಗಳಲ್ಲಿ ಅನಾಸಕ್ತಿ ವಹಿಸಿ, ಕುಟಿಯೊಂದನ್ನು ನಿರ್ಮಿಸಿಕೊಂಡು ಮಕ್ಕಳೊಂದಿಗೆ ಬೇಕಾದರೂ ಇರಬಹುದು. ಬೇರೆಯವರ ಮನೆಯಲ್ಲಿ ಊಟ ಮಾಡಬಾರದು. ಹಾಗೆ ಊಟ ಮಾಡಿದಲ್ಲಿ ಅಂತಹವನು ದೋಷಕ್ಕೆ ಗುರಿಯಾಗುವನು. ಕಾಮ, ಕ್ರೋಧ, ಲೋಭ, ಈರ್ಷ್ಯೆ ಹಾಗೂ ಸುಳ್ಳು ಹೇಳುವುದು– ಇತ್ಯಾದಿಗಳನ್ನು ತ್ಯಜಿಸಬೇಕು. ಅನ್ನ, ಧನಗಳನ್ನೂ ಕೂಡ ಮಕ್ಕಳಿಗಾಗಿ ಬಿಡಬೇಕು. ಒಂದು ವೇಳೆ ಭಿಕ್ಷಾಟನೆ ಮಾಡುವುದರಲ್ಲಿ ಅಶಕ್ತನಾದರೆ ಮಕ್ಕಳ ಆಶ್ರಯದಲ್ಲಿ ಇರಬಹುದು.

ಏಕದಂಡೀ ಭವೇದ್ವಾಪಿ ತ್ರಿದಂಡೀ ಚಾಪಿ ವಾ ಭವೇತ್ |

ತ್ಯಕ್ತ್ವಾ ಸರ್ವಸುಖಾಸ್ವಾದಂ ಪುತ್ರೈಶ್ವರ್ಯ ಸುಖಂ ತ್ಯಜೇತ್ ||12||
ಆಪತೇಷು ವಸನ್ ನಿತ್ಯಂ ಮಮತ್ವಂ ಯತ್ರತಸ್ತ್ಯಜೇತ್ |
ನಾನ್ಯಸ್ಯಗೇಹೇ ಭುಂಜೀತ ಭುಂಜಾನೊ ದೋಷಭಾಗ್ ಭವೇತ್ ||13||
ಕಾಮಂ ಕ್ರೋಧಂ ಚ ಲೋಭಂ ಚ ತಥೇರ್ಷ್ಯಾಸತ್ಯಮೇವ ಚ |
ಕುಟೀಚಕಸ್ತ್ಯಜೇತ್ ಸರ್ವಂ ಪುತ್ರಾರ್ಥಂ ಚೈವ ಸರ್ವತಃ ||14||
ಭಿಕ್ಷಾಟನಾದಿಕ್ಲೇಶಕ್ತೌ ಯತಿಃ ಪುತ್ರೇಷು ಸನ್ಯಾಸೇತ್ |
ಕುಟೀಚಕ ಇತಿ ಜ್ಞೇಯಃ ||4–15||

2. ಬಹೂದಕ : ಈ ಸನ್ಯಾಸಿಯು ಹತ್ತಿರದ ಬಂಧು–ಬಾಂಧವರನ್ನು ತ್ಯಜಿಸಿ ತ್ರಿದಂಡ, ಕಮಂಡಲ, ಭಿಕ್ಷಾಪಾತ್ರೆಯನ್ನು ಹೊಂದಿದ್ದು, ಯಜ್ಞೋಪವೀತವನ್ನು ಧರಿಸಿರಬೇಕು. ಪ್ರಾಣಾಯಾಮದಲ್ಲಿ ತತ್ಪರನಾಗಿದ್ದು, ಸದಾ ಕಾಲವೂ ಗಾಯಿತ್ರಿ ಜಪವನ್ನು ಮಾಡುತ್ತಿರಬೇಕು. ಹೃದಯದಲ್ಲಿ ಭಗವಂತನ ಧ್ಯಾನ ಮಾಡುತ್ತಾ ಜಿತೇಂದ್ರಿಯನಾಗಿ, ಕಾಲವನ್ನು ಕಳೆಯಬೇಕು. ಕಾವಿ ಬಣ್ಣದ ವಸ್ತ್ರವನ್ನು ಧರಿಸಬೇಕು.

ಪರಿವ್ರಾಟ್ ತ್ಯಕ್ತಬಾಂಧವಃ ||
ತ್ರಿದಂಡಂ ಕುಂಡಿಕಾಂ ಚೈವ ಭಿಕ್ಷಾಧಾರಂ ತಥೈವ ಚ |
ಸೂತ್ರಂ ತಥೈವ ಗೃಹ್ಣೀಯಾನ್ನಿತ್ಯಮೇವ ಬಹೂದಕಃ ||
ಪ್ರಾಣಾಯಾಮೋಪ್ಯಭಿರತೋ ಗಾಯಿತ್ರೀಂ ಸತತಂ ಜಪೇತ್ |
ವಿಶ್ವರೂಪಂ ಹೃದಿ ಧ್ಯಾಯನ್ ನಯೇತ್ ಕಾಲಂ ಜಿತೇಂದ್ರಿಯಃ ||
ಈಷತ್ಕೃತ ಕಷಾಯಸ್ಯ ಲಿಂಗಮಾಶ್ರಿತ್ಯ ತಿಷ್ಠತಃ ||4–15 ರಿಂದ 18||

3. ಹಂಸ : ಇರುವ ಮಕ್ಕಳನ್ನು ತ್ಯಜಿಸಿ, ಯೋಗ ಮಾರ್ಗದಲ್ಲಿ ಸ್ಥಿತನಾಗಿ, ಮನಸ್ಸು ಮತ್ತು ಇಂದ್ರಿಯಗಳನ್ನು ಪ್ರಯತ್ನಪೂರ್ವಕವಾಗಿ ಹತೋಟಿಯಲ್ಲಿ ಇಟ್ಟುಕೊಂಡಿರುವ ಸನ್ಯಾಸಿಯನ್ನು 'ಹಂಸ' ಎಂದು ಕರೆಯುತ್ತಾರೆ. ಈತನು ಮೋಕ್ಷಪದ ಬೇಕೆಂದು ಇಷ್ಟಪಡುವನು. ಕೃಚ್ಛ್ರ, ಚಾಂದ್ರಾಯಣ ಹಾಗೂ ತುಲಾಪುರುಷ ಎನ್ನುವ ವ್ರತಗಳು ಹಾಗೂ ಇತರೇ ವ್ರತಗಳನ್ನು ನಡೆಯಿಸಿ, ತನ್ನ ಶರೀರವನ್ನು ಒಣಗಿಸಿಕೊಳ್ಳಬೇಕು, ತನ್ಮೂಲಕ ಪವಿತ್ರಗೊಳಿಸಿಕೊಳ್ಳಬೇಕು. ಯಜ್ಞೋಪವೀತ ಧರಿಸಬೇಕು. ಕಚ್ಚುವ ಜಂತು, ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ದಂಡವನ್ನು ಉಪಯೋಗಿಸಬೇಕು. ಇದೇ ಕಾರಣಕ್ಕಾಗಿ ವಸ್ತ್ರವನ್ನು ಧರಿಸಬೇಕು. ಏನನ್ನೂ ಸ್ವೀಕರಿಸಬಾರದು,

ಸಂಗ್ರಹಿಸಬಾರದು.

ತ್ಯಕ್ತ್ವಾ ಪುತ್ರಾದಿಕಂ ಸರ್ವಂ ಯೋಗಮಾರ್ಗ ವ್ಯವಸ್ಥಿತಃ |
ಇಂದ್ರಿಯಾಣಿ ಪುನಶ್ಚೈವ ಕರ್ಷನ್ ಹಂಸೋಽಭಿಧೀಯತೆ ||4-19||
ಕೃಚ್ಛ್ರೈಶ್ಚಾಂದ್ರಾಯಣೈಶ್ಚೈವ ತುಲಾಪುರುಷ ಸಂಜ್ಞಕೈಃ |
ಅನ್ಯೈಶ್ಚ ಶೋಷಯೋದ್ದೇಹಮಾಕಾಂಕ್ಷನ್ ಬ್ರಹ್ಮಣಃ ಪದಂ || 20 ||
ಯಜ್ಞೋಪವೀತಂ ದಂಡಂ ಚ ವಸ್ತ್ರಂ ಜಂತುನಿವಾರಣಂ |
ಅಯಂ ಪರಿಗ್ರಹೋ ನ್ಯಾನ್ಯೋ ಹಂಸಸ್ಯ ಶ್ರುತಿ ವೇದಿನಃ || 4-21 ||

**4.** ಪರಮ ಹಂಸ : ತನ್ನ ದೇಹದಾದ್ಯಂತ ವ್ಯಾಪಕವಾಗಿ ಬ್ರಹ್ಮನನ್ನು ಜಪಿಸುತ್ತಾ, ಪ್ರಾಣಾಯಾಮವನ್ನು ಮಾಡುತ್ತಾ, ಎಲ್ಲ ರೀತಿಯಲ್ಲೂ ಅನಾಸಕ್ತನಾಗಿ ಆತ್ಮನಿಷ್ಠ, ಪರಮಾತ್ಮ ನಿಷ್ಠನಾಗಿರುವವನು 'ಪರಮ ಹಂಸ' ಸನ್ಯಾಸಿ ಎಂದು ಕರೆಯಲ್ಪಡುವನು. ಮನೆ ಹಾಗೂ ಇತರೇ ಪರಿಗ್ರಹಗಳನ್ನು ತ್ಯಜಿಸಬೇಕು. ಯೋಗೈಕ ಪ್ರಾಣನಾಗಿರಬೇಕು. ಬರೀಕಾಲಿನಲ್ಲಿ ನೆಲದ ಮೇಲೆ ನಡೆಯಬೇಕು. ಈ ಸನ್ಯಾಸಿಯೇ ಸರ್ವ ಶ್ರೇಷ್ಠನು. ಕಾರಣ ಈತನು 'ಧ್ಯಾನಭಿಕ್ಷು'ವಾಗಿರುವನು- ತ್ರಿದಂಡ, ಕಮಂಡಲ, ಯಜ್ಞೋಪವೀತ, ಭಿಕ್ಷಾಪಾತ್ರೆ, ವಸ್ತ್ರಧಾರಣೆ ಇವೆಲ್ಲವನ್ನು ತ್ಯಜಿಸಬೇಕು. ಕೌಪೀನ, ಹೊದೆಯಲು ಒಂದು ವಸ್ತ್ರ, ಒಂದು ದಂಡವನ್ನು ಮಾತ್ರ ಧರಿಸಬೇಕು. ಎಲ್ಲವನ್ನು ತ್ಯಜಿಸಿ, ಮೂಗನಂತೆ ಇರಬೇಕು.

ಅಧ್ಯಾತ್ಮಿಕಂ ಬ್ರಹ್ಮ ಜಪನ್ ಪ್ರಾಣಾಯಾಮಾಂ ಸ್ತಥಾಚರನ್ |
ವಿಯುಕ್ತಃ ಸರ್ವ ಸಂಗೇಭ್ಯೋ ಯೋಗೀ ಸತ್ಯಂ ಚರೇನ್ಮಹೀಂ ||
ಆತ್ಮ ನಿಷ್ಠಃ ಸ್ವಯಂ ಯುಕ್ತಸ್ತ್ಯಕ್ತಸರ್ವ ಪರಿಗ್ರಹಃ |
ಚತುರ್ಥೋಽಯಂ ಮಹಾನೇಷಾಂ ಧ್ಯಾನಭಿಕ್ಷುರುದಾ ಹತಃ ||
ತ್ರಿದಂಡಂ ಕುಂಡಿಕಾರ ಚೈವ ಸೂತ್ರಂ ಚಾಥ ಕಪಾಲಿಕಾಂ |
ಜಂತೂಣಾಂ ವಾರಣಂ ವಸ್ತ್ರಂ ಸರ್ವಂ ಭಿಕ್ಷುರಿದಂ ತ್ಯಜೇತ್ ||
ಕೌಪೀನಾಚ್ಛಾದನಾರ್ಥಂ ಚ ವಸೋಽಥಶ್ಚ ಪರಿಗ್ರಹೇತ್ |
ಕುರ್ಯಾತ್ ಪರಮಹಂಸಸ್ತು ದಂಡಮೇಕಂ ಚ ಧಾರಯೇತ್ ||
ಪ್ರಾಪ್ತ ಪೂಜೋ ನ ಸಂತುಷ್ಯೇದ ಲಾಭೇ ತ್ಯಕ್ತಮತ್ಸರಃ |
ತ್ಯಕ್ತ ತೃಷ್ಣಃ ಸದಾ ವಿದ್ವಾನ್ ಮೂಕವತ್ ಪೃಥಿವೀಂ ಚರೇತ್
|| ಅ. 4. ||

ವಿಷ್ಣು ಸ್ಮೃತಿಯು 2ನೇ ಅಧ್ಯಾಯದಲ್ಲಿ ಪ್ರತಿ ಮಾನವನಿಗೂ ಕ್ಷಮೆ, ಸತ್ಯ, ಅಹಿಂಸೆ ಇತ್ಯಾದಿಗಳು ಸಾಮಾನ್ಯ ಧರ್ಮವಾಗಿರಬೇಕೆಂದು ತಿಳಿಸಲಾಗಿದೆ. ಇವುಗಳಲ್ಲಿ ಗುರು ಶುಶ್ರೂಷೆಯು ಮುಖ್ಯವಾದುದು. ಗುರುಭಕ್ತಿ ಹಾಗೂ ಗುರು ಶುಶ್ರೂಷೆ ಪ್ರತಿಯೊಬ್ಬ ಮಾನವನ ಕರ್ತವ್ಯವಾಗಿದೆ.

## 35. ವೇದವ್ಯಾಸ ಸ್ಮೃತಿ

ತಂ ನಮಾಮಿ ಮಹೇಶಾನಂ ಮುನಿಂ ಧರ್ಮವಿದಾಂ ವರಮ್ ।
ಶ್ಯಾಮಂ ಜಟಾಕಲಾಪೇನ ಶೋಭಮಾನಂ ಶುಭಾನನಮ್ ॥
ಮುನೀನ್ ಸೂರ್ಯಪ್ರಭಾನ್ ಧರ್ಮಾನ್ ಪಾಠಯಂತಂ
ಸುವರ್ಚಸಮ್ ।
ನಾನಾಪುರಾಣ ಕರ್ತಾರಂ ವೇದವ್ಯಾಸಂ ಮಹಾಪ್ರಭುಮ್ ॥
(ಬೃಹದ್ಧರ್ಮಪುರಾಣ 1/1/24-25)

ಧರ್ಮದ ನಿಗೂಢ ತತ್ತ್ವಗಳನ್ನು ಅರಿತವರಲ್ಲಿಯೇ ಸರ್ವಶ್ರೇಷ್ಠನೂ, ಶ್ಯಾಮಲವರ್ಣದವನೂ, ಯಾರ ಮುಖಮಂಡಲವು ಜಟಾಜೂಟದಿಂದ ಸುಶೋಭಿತವಾಗಿದೆಯೊ, ಯಾರು ಸೂರ್ಯ ಸಮಾನರಾದ ಮುನಿಗಳಿಗೆ ಧರ್ಮಶಾಸ್ತ್ರದ ಶಿಕ್ಷಣ ನೀಡುವನೊ, ಅಂತಹ ಜ್ಯೋತಿರ್ಮಯನು, ಕಾಂತಿ ಮಂತನು, ಪುರಾಣ ಹಾಗೂ ಉಪಪುರಾಣಗಳನ್ನು ರಚಿಸಿದವನೊ ಆದ ಆ ಮಹಾತ್ಮ ವೇದವ್ಯಾಸನಿಗೆ ಪ್ರಣಾಮಗಳು.

ವ್ಯಾಸನು ಜಗದ್ಗುರುವು ಶ್ರೀಮನ್ನಾರಾಯಣನ ಅಪರಾವತಾರಿ. ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಮಾನವ ಸಮುದಾಯಕ್ಕೆ ಸದಾಚಾರ ಮತ್ತು ಧರ್ಮಾಚರಣೆಯ ಶಿಕ್ಷಣ ನೀಡಲು ಜನಿಸಿರುವನು. ಇದರಿಂದಾಗಿ ಇಂದಿಗೂ ವೇದವ್ಯಾಸನು ಅಮರನು. ಬದರಿ, ಕೇದಾರಗಳಲ್ಲಿ ಇಂದಿಗೂ ಈತನ ದರ್ಶನ ವಾಗುತ್ತದೆಂಬ ಪ್ರತೀತಿ.

ವೇದವ್ಯಾಸನು ವಸಿಷ್ಠ ಮಹರ್ಷಿಯ ಪ್ರಪೌತ್ರನು, ಶಕ್ತಿಯ ಪೌತ್ರನು, ಪರಾಶರನ ಪುತ್ರನು ಹಾಗೂ ಭಾಗವತನಾದ ಶುಕದೇವನ ತಂದೆ. ಪುರಾಣ ಗಳಲ್ಲಿ ಪ್ರಸಿದ್ಧವಾದ ಯಮುನೆಯ ದ್ವೀಪಗಳಲ್ಲಿ ಈತನು ಜನಿಸಿದನೆಂದು ಪ್ರಖ್ಯಾತವಾಗಿದೆ. ಆದರಿಂದಲೇ ಈತನಿಗೆ 'ದ್ವೈಪಾಯನ' ಎಂಬ ಹೆಸರು ಬಂದಿತು. ಈತನು ಶ್ಯಾಮಲ (ಕೃಷ್ಣ) ವರ್ಣದವನಾದುದರಿಂದ 'ಕೃಷ್ಣ

ದ್ವೈಪಾಯನ' ಎಂದೂ ಕರೆಯಲಾಯಿತು. ಈತನು ವೇದ ಸಂಹಿತೆಗಳನ್ನು ವಿಭಜಿಸಿದ್ದರಿಂದ ಈತನನ್ನು 'ವ್ಯಾಸ' ಅಥವಾ 'ವೇದವ್ಯಾಸ' ಎಂಬ ಹೆಸರಿನಿಂದ ಕರೆಯಲಾಯಿತು. ಇತಿಹಾಸ, ಪುರಾಣ, ಉಪಪುರಾಣ, ಬ್ರಹ್ಮಸೂತ್ರ, ವ್ಯಾಸ ಸ್ಮೃತಿ ಇತ್ಯಾದಿ ಧರ್ಮ ಶಾಸ್ತ್ರಗಳನ್ನು, ಯೋಗದರ್ಶನ ಇತ್ಯಾದಿಗಳಿಗೆ ಭಾಷ್ಯವನ್ನು ಈತನೇ ರಚಿಸಿದನು. ಇಂದು ಪ್ರಪಂಚದಲ್ಲಿರುವ ಬಹಳಷ್ಟು ಜ್ಞಾನವು ವೇದವ್ಯಾಸನಿಂದಲೇ ಬಂದಿತೆಂದು ಅನೇಕರ ನಂಬಿಕೆ. ಆದುದರಿಂದಲೇ 'ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ' ಎಂಬ ಉಕ್ತಿಯು ಪ್ರಸಿದ್ಧವಾಗಿದೆ. 'ಯನ್ನ ಭಾರತೇ ತನ್ನ ಭಾರತೇ' ಎಂದು ಹೇಳಿರುವಂತೆ, ಮಹಾಭಾರತದಲ್ಲಿ ಇಲ್ಲದಿರುವುದು ಬೇರೆಲ್ಲೂ ಇಲ್ಲ; ಅದರಲ್ಲಿ ಪ್ರಪಂಚದ ಎಲ್ಲ ವಿಷಯಗಳನ್ನೂ ಹೇಳಲಾಗಿದೆ.

ಈತನು ಇತರೇ ಋಷಿ, ಮಹರ್ಷಿಗಳ ಸತ್ಸಂಗ ಗೋಷ್ಠಿಗಳಲ್ಲಿ ಬ್ರಹ್ಮ ತತ್ತ್ವದ ನಿರೂಪಣೆ, ಪರಮಾತ್ಮನ ಸಗುಣ – ನಿರ್ಗುಣ ಸ್ವರೂಪದ ವಿವರಣೆ, ಧರ್ಮಕರ್ಮಗಳ ವ್ಯಾಪಕತೆ ಹಾಗೂ ಅವುಗಳ ಫಲಾಫಲಗಳ ಮೀಮಾಂಸೆ, ಧರ್ಮಚರಣೆಯ ಮಹಿಮೆ ಇತ್ಯಾದಿಗಳ ಗಹನವಾದ ಹಾಗೂ ಆಳವಾದ ವಿಚಾರ ವಿಮರ್ಶೆಗಳನ್ನು ನಡೆಸುತ್ತಿದ್ದನು. ಇವು ಈತನ ಎಲ್ಲ ಗ್ರಂಥಗಳಲ್ಲೂ ಕಾಣಿಸಿ ಕೊಂಡಿವೆ.

ವೇದಗಳಂತೂ ಧರ್ಮ ಸಂಹಿತೆಗಳೇ ಆಗಿವೆ. ಪುರಾಣಗಳಲ್ಲಿ ಧರ್ಮ, ದರ್ಶನ, ಆಚಾರ ಮೀಮಾಂಸೆಗಳು ಪದಪದದಲ್ಲೂ ತುಂಬಿವೆ. ಮಹಾ ಭಾರತ ವಂತೂ ಧಾರ್ಮಿಕ ವಿಷಯಗಳ ಕೋಶವೇ ಆಗಿದೆ. ಅಂತೆಯೇ ಸ್ಮೃತಿಗಳಲ್ಲಿ 'ವ್ಯಾಸ', 'ಲಘುವ್ಯಾಸ' ಎನ್ನುವವು ಈತನ ಹೆಸರಿನಿಂದ ಖ್ಯಾತಿ ಪಡೆದಿವೆ.

## 1. ವ್ಯಾಸ ಸ್ಮೃತಿ

ಸ್ಮೃತಿ ವಾಙ್ಮಯದಲ್ಲಿ ಈ ಸ್ಮೃತಿಯು ವಿಶೇಷ ಸ್ಥಾನವನ್ನು ಪಡೆದಿದೆ. ತನ್ನ ಪ್ರತಿಭಾಜ್ಞಾನ ಹಾಗೂ ತಪಸ್ಸಿನಿಂದ ಧರ್ಮದ ಸೂಕ್ಷ್ಮತಮ ತತ್ತ್ವಗಳ ದರ್ಶನ ಮಾಡಿಸಿರುವ, ವರ್ಣಾಶ್ರಮ ಧರ್ಮಗಳ ಉಪದೇಶಗಳ ಸಂಗ್ರಹವೇ ಈ ಕೃತಿ. ನಿಬಂಧ ಗ್ರಂಥಗಳಲ್ಲಿ ಈ ಸ್ಮೃತಿಯು ಅನೇಕ ಭಾಗಗಳನ್ನು ಉದಾಹರಿಸಲಾಗಿದೆ.

ಈಗ ದೊರೆತಿರುವ ವ್ಯಾಸ ಸ್ಮೃತಿಯಲ್ಲಿ ನಾಲ್ಕು ಅಧ್ಯಾಯಗಳು ಹಾಗೂ

250 ಶ್ಲೋಕಗಳು ಇವೆ. ಮುಖ್ಯವಾಗಿ ಧರ್ಮಾಚರಣೆಗೆ ಉತ್ತಮವಾದ ದೇಶ, ವೇದಪ್ರಾಮಾಣ್ಯದ ಪ್ರಾಧಾನ್ಯತೆ, ಷೋಡಶ ಸಂಸ್ಕಾರಗಳ ಹೆಸರು ಮತ್ತು ಅವುಗಳ ಸಂಕ್ಷಿಪ್ತ ವಿಧಿ, ಬ್ರಹ್ಮಚಾರಿಯ ನಿಯಮ, ಗುರು ಮಹಿಮೆ, ವಿವಾಹ ವಿಧಿ, ವಿವಾಹ ಯೋಗ್ಯ ಕನ್ಯೆಯ ಲಕ್ಷಣ, ಗೃಹಸ್ಥ ಧರ್ಮ, ಸ್ತ್ರೀ ಧರ್ಮ, ಸ್ತ್ರೀಯರ ನಿತ್ಯನೈಮಿತ್ತಿಕ ಕರ್ಮ, ಪಾತಿವ್ರತ್ಯದ ಧರ್ಮದ ಮಹಿಮೆ, ರಜೋ–ಧರ್ಮದ ಮಿತಿಗಳು, ಗೃಹಸ್ಥನ ನಿತ್ಯ, ನೈಮಿತ್ತಿಕ ಹಾಗೂ ಕಾಮ್ಯ ಈ ಮೂರೂ ರೀತಿಯ ಕರ್ಮಗಳ ವರ್ಣನೆ, ತರ್ಪಣ ವಿಧಿ, ವೈಶ್ವೀದೇವ ಹಾಗೂ ಪಂಚಬಲಿ ವಿಧಾನಗಳು, ಅತಿಥಿ ಪೂಜೆ, ಸದಾಚಾರದ ಮಹಿಮೆ–ಇತ್ಯಾದಿಗಳ ವರ್ಣನೆ ಇದೆ. ಇದರ 4ನೇ ಅಧ್ಯಾಯದ 50 ಶ್ಲೋಕಗಳಲ್ಲಿ ದಾನ ಧರ್ಮದ ವಿಶೇಷ ಮಹತ್ವವನ್ನು ಪ್ರತಿಪಾದಿಸಲಾಗಿದೆ. ಇದರಲ್ಲಿ ದಾನದ ಮಹಿಮೆ, ದಾನದ ಯೋಗ್ಯ ಪಾತ್ರ ಹಾಗೂ ದಾನದ ಸ್ವರೂಪ ಮತ್ತಿತರ ವಿಷಯಗಳನ್ನು ವಿವೇಚಿಸಲಾಗಿದೆ. ಇದು ತುಂಬಾ ಮಹತ್ವದ ಭಾಗವಾಗಿದೆ. ಇದರಿಂದಲೇ ವ್ಯಾಸನನ್ನು 'ದಾನವ್ಯಾಸ' ಎಂದು ಕರೆಯಲಾಗುತ್ತದೆ.

## ಷೋಡಶ ಸಂಸ್ಕಾರ

ವೇದ ಶಾಸ್ತ್ರಗಳ ಗೃಹ್ಯಸೂತ್ರಗಳಲ್ಲಿ 'ಸಂಸ್ಕಾರ' ವನ್ನು ಒಂದು ಮುಖ್ಯ ವಿಷಯವನ್ನಾಗಿ ವಿವರಿಸಲಾಗಿದೆ. ಸಂಸ್ಕಾರಗಳನ್ನು ಮಾಡುವುದರಿಂದ ಅಂತಃಕರಣ ಶುದ್ಧವಾಗುತ್ತದೆ. ಇವು ಮನುಷ್ಯನ ಪಾಪ ಹಾಗೂ ಅಜ್ಞಾನವನ್ನು ದೂರ ಮಾಡುತ್ತವೆ. ಇವುಗಳ ಅನುಸರಣೆಯಿಂದ ಮಾನವನು ಪೂರ್ಣವಾಗಿ ಸುಸಂಸ್ಕೃತನಾಗುತ್ತಾನೆ. ಸಂಸ್ಕಾರಾದಿ ಕರ್ಮಗಳನ್ನು ಮಾಡದೆ ಇರುವವನು ಧರ್ಮ ಕರ್ಮಾದಿ ಯಾವುದಕ್ಕೂ ಅರ್ಹನಾಗಿರುವುದಿಲ್ಲ. ತಮ್ಮ ತಮ್ಮ ವರ್ಣಾಶ್ರಮಕ್ಕೆ ಅನುಸಾರ ಶಾಸ್ತ್ರಗಳಲ್ಲಿಯೂ ಸಂಸ್ಕಾರಗಳನ್ನು ಅನುಸರಿಸುವ ವಿಧಾನಗಳನ್ನು ವಿವರಿಸಲಾಗಿದೆ. ಈ ಸಂಸ್ಕಾರಗಳ ಎರಡು ಮುಖ್ಯ ಕ್ರಿಯೆಗಳೆಂದರೆ–ಮಲಾಪನಯನ ಹಾಗೂ ಅತಿಶಯಾಧಾನ.

ಸಂಸ್ಕಾರಗಳ ಸಂಖ್ಯೆಯಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಗೌತಮ ಸ್ಮೃತಿಯಲ್ಲಿ 48 ಸಂಸ್ಕಾರಗಳನ್ನು ತಿಳಿಸಲಾಗಿದೆ. ಅಂಗಿರನು 25 ಸಂಸ್ಕಾರಗಳನ್ನು ತಿಳಿಸಿದ್ದಾನೆ. ಇವೆಲ್ಲವುಗಳಲ್ಲಿ ಷೋಡಶ ಸಂಸ್ಕಾರಗಳು ಬಹಳ ಮುಖ್ಯವಾದುವು.

ವೇದ ವ್ಯಾಸನು ತನ್ನ ಸ್ಮೃತಿಯಲ್ಲಿ ಈ ಷೋಡಶ (16) ಸಂಸ್ಕಾರಗಳನ್ನು ತಿಳಿಸಿ, ಅವುಗಳ ಸಂಕ್ಷಿಪ್ತ ವಿಧಿಗಳನ್ನು ತಿಳಿಸಿದ್ದಾನೆ-1. ಗರ್ಭಾದಾನ, 2. ಪುಂಸವನ, 3. ಸೀಮಂತ, 4. ಜಾತಕರ್ಮ, 5. ನಾಮಕರಣ, 6. ನಿಷ್ಕ್ರಮಣ, 7. ಅನ್ನ ಪ್ರಾಶನ, 8. ವಪನ ಕ್ರಿಯೆ (ಚೂಡಾಕರಣ-ಮುಂಡನ), 9. ಕಿವಿ ಚುಚ್ಚುವಿಕೆ, 10. ಉಪನಯನ-ಯಜ್ಞೋಪವೀತ ಧಾರಣೆ, 11. ವೇದಾರಂಭ (ವಿದ್ಯಾಭ್ಯಾಸ ಪ್ರಾರಂಭ), 12. ಕೇಶಾಂತ (ಗೋದಾನ), 13. ವೇದಸ್ನಾನ (ಸಮಾವರ್ತನ), 14. ವಿವಾಹ, 15. ವಿವಾಹಾಗ್ನಿ ಪರಿಗ್ರಹಣ, 16. ತ್ರೇತಾಗ್ನಿ ಸಂಗ್ರಹ.

ಗರ್ಭಾದಾನಂ ಪುಂಸವನಂ ಸೀಮಂತೋ ಜಾತಕರ್ಮ ಚ |
ನಾಮಕ್ರಿಯಾನಿಷ್ಕ್ರಮಣೇಽನ್ನಾಶನಂ ವಪನಕ್ರಿಯಾ ||
ಕರ್ಣವೇಧೋ ವ್ರತಾದೇಶೋ ವೇದಾರಂಭಕ್ರಿಯಾ ವಿಧಿಃ |
ಕೇಶಾನ್ತಃ ಸ್ನಾನ ಮುದ್ವಾಹೋ ವಿವಾಹಾಗ್ನಿ ಪರಿಗ್ರಹಃ ||
ತ್ರೇತಾಗ್ನಿ ಸಂಗ್ರಹಶ್ಚೇತಿ ಸಂಸ್ಕಾರಾಃ ಷೋಡಶ ಸ್ಮೃತಾಃ ||
(ವ್ಯಾಸ ಸ್ಮೃತಿ 1/13-15)

ಇವುಗಳಲ್ಲಿ ಮೊದಲ ಮೂರು ಸಂಸ್ಕಾರಗಳು ಮಗುವಿನ ಜನನಕ್ಕೆ ಮುಂಚೆ ನಡೆಸುವಂತಹವು. ಜನನದ ನಂತರ ಉಳಿದ ಸಂಸ್ಕಾರಗಳನ್ನು ನಡೆಸಲಾಗುತ್ತದೆ. ಕೆಲವು ಆಚಾರ್ಯರುಗಳು ಮೃತ ಸಂಸ್ಕಾರವಾದ ಅಂತ್ಯೇಷ್ಟಿ ಕ್ರಿಯೆಯನ್ನೂ ಒಂದು ಸಂಸ್ಕಾರವೆಂದು ಪರಿಗಣಿಸಿದ್ದಾರೆ. ಈ ಸಂಸ್ಕಾರದಲ್ಲಿ ಮುಖ್ಯವಾಗಿ ದಾಹಕ್ರಿಯೆಯಿಂದ ದ್ವಾದಶಾಹದವರೆಗೆ ತಮ್ಮ ತಮ್ಮ ವರ್ಣಾಶ್ರಮದ ಅನುಸಾರ ದಶಗಾತ್ರ ವಿಧಾನ, ಷೋಡಶ ಶ್ರಾದ್ಧ, ಸಪಿಂಡೀಕರಣದೊಂದಿಗೆ ಜಲಾಂಜಲಿ ವಿಧಾನ ಹಾಗೂ ಶ್ರಾದ್ಧಾದಿ ಇತರೇ ಕರ್ಮಗಳೂ ಸೇರಿವೆ.

ಗರ್ಭಾದಾನದಿಂದ ಪ್ರಾರಂಭವಾಗಿ ಕಿವಿಚುಚ್ಚುವಿಕೆಯ ವರೆಗಿನ ಒಂಭತ್ತು ಸಂಸ್ಕಾರಗಳನ್ನು ತಿಳಿಸಲಾಗಿದೆ. ಇವುಗಳು ಸ್ತ್ರೀಯರಿಗೋಸ್ಕರ ಮಾಡುವುದರಿಂದ ಮಂತ್ರಗಳು ಹೆಚ್ಚಾಗಿಲ್ಲ. ಆದರೆ ವಿವಾಹ ಸಂಸ್ಕಾರವು ಮಂತ್ರ ಸಹಿತವಾಗಿರುತ್ತದೆ. ಶೂದ್ರರಿಗೆ ಈ ಎಲ್ಲ ಸಂಸ್ಕಾರಗಳೂ ಮಂತ್ರವಿಲ್ಲದೆಯೆ ನಡೆಸಬಹುದಾಗಿದೆ –

ನೈತಾಃ ಕರ್ಣವೇಧಾಂತಾ ಮಂತ್ರವರ್ಜಂ ಕ್ರಿಯಾಃ ಸ್ತ್ರಿಯಾಃ ||
ವಿವಾಹೋ ಮಂತ್ರತಸ್ತಸ್ಯಾಃ ಶೂದ್ರಸ್ಯಾಮಂತ್ರತೋ ದಶ |
(ವ್ಯಾಸ ಸ್ಮೃತಿ 1/15–16)

ಗರ್ಭಾಧಾನವು ಪ್ರಥಮ ಸಂಸ್ಕಾರ. ವಿಧಿ ಪೂರ್ವಕವಾಗಿ ಸಂಸ್ಕಾರ ಯುಕ್ತವಾಗಿ ನಡೆಸಿದ ಗರ್ಭಾ ದಾನದಿಂದ ಉತ್ತಮ ಹಾಗೂ ಯೋಗ್ಯ ಮಕ್ಕಳು ಜನಿಸುವರು. ಈ ಸಂಸ್ಕಾರದಿಂದ ವೀರ್ಯ ಸಂಬಂಧದ ಹಾಗೂ ಗರ್ಭ ಸಂಬಂಧದ ದೋಷಗಳು ಹಾಗೂ ಪಾಪಗಳು ದೂರವಾಗುತ್ತವೆ. ಇದರೊಂದಿಗೆ ದೋಷ ಸಂಸ್ಕಾರವೂ ಆಗುತ್ತದೆ. ಇದೇ 'ಗರ್ಭಾದಾನ' ಸಂಸ್ಕಾರದ ಫಲ.

ಗರ್ಭ ಮೂರು ತಿಂಗಳಾದಾಗ, ಗರ್ಭಿಣಿಯಲ್ಲಿ ಗರ್ಭದ ಚಿಹ್ನೆಗಳು ಸ್ಪಷ್ಟವಾಗತೊಡಗುತ್ತವೆ. ಆಗ 'ಪುಂಸವನ' ಸಂಸ್ಕಾರವನ್ನು ಅನುಸರಿಸಬೇಕು. ಈ ಸಂಸ್ಕಾರದ ಫಲವೂ ಒಂದಿದೆ. ಅದೆಂದರೆ ಸಮಯವಲ್ಲದ ಸಮಯದಲ್ಲಿ ಗರ್ಭಪಾತವಾಗುವುದಿಲ್ಲ. 'ಸೀಮಂತೋನ್ನಯನ' (ಸೀಮಂತ) ಸಂಸ್ಕಾರವನ್ನು 8ನೇ ತಿಂಗಳಿನಲ್ಲಿ ನಡೆಯಿಸಬೇಕು.

ಮಗುವಿನ ಜನನವಾದ ಕೂಡಲೇ 'ಜಾತಕರ್ಮ' ಸಂಸ್ಕಾರವಾಗಬೇಕು. ಹುಟ್ಟಿದ 11ನೇ ದಿನ ಕುಲಕ್ರಮದ ಅನುಸಾರ ಶಾಸ್ತ್ರೀಯ ವಿಧಿಯಿಂದ 'ನಾಮಕರಣ' ಸಂಸ್ಕಾರವನ್ನು ಮಾಡಬೇಕು. ಈ ಸಂಸ್ಕಾರದ ಫಲವೆಂದರೆ ಆಯುಸ್ಸು, ತೇಜಸ್ಸುಗಳ ವೃದ್ಧಿ, ಲೌಕಿಕ ವ್ಯವಹಾರದ ಸಿದ್ಧಿ ಎಂದು ತಿಳಿಸಲಾಗಿದೆ. ಗಂಡು, ಹೆಣ್ಣಿನ ಹೆಸರುಗಳನ್ನು ಹೇಗೆ ಇಡಬೇಕು ಎನ್ನುವುದರ ಪೂರ್ತಿ ವಿವರಗಳು ಧರ್ಮಶಾಸ್ತ್ರಗಳಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

ನಾಲ್ಕನೇ ತಿಂಗಳಿನಲ್ಲಿ 'ನಿಷ್ಕ್ರಮಣ' ಸಂಸ್ಕಾರವನ್ನು ನಡೆಸಲಾಗುವುದು. ಸೂರ್ಯ ಚಂದ್ರಾದಿಗಳು ಹಾಗೂ ದೇವರ ಪೂಜೆ ಮಾಡಿ, ಮಗುವಿಗೆ ಸೂರ್ಯದರ್ಶನ ಮಾಡಿಸುವುದು ಈ ಸಂಸ್ಕಾರದ ಮುಖ್ಯ ಕ್ರಿಯೆಯಾಗಿರುತ್ತದೆ.

ಆರನೇ ತಿಂಗಳಿನಲ್ಲಿ 'ಅನ್ನಪ್ರಾಶನ' ಹಾಗೂ 'ಚೂಡಾಕರಣ' (ಕೂದಲು ತೆಗೆಸುವಿಕೆ) ಗಳನ್ನು ಕುಲಧರ್ಮಕ್ಕೆ ಅನುಸಾರವಾಗಿ ಮಾಡಬೇಕಾಗುತ್ತದೆ. ಚೂಡಾಕರಣದ ನಂತರ 'ಕರ್ಣವೇಧ' (ಕಿವಿ ಚುಚ್ಚುವಿಕೆ) ಸಂಸ್ಕಾರವು

ನಡೆಯುತ್ತದೆ.

ಆ ನಂತರದಲ್ಲಿ ಬ್ರಾಹ್ಮಣರಿಗೆ ಎಂಟನೇ ವಯಸ್ಸಿನಲ್ಲಿ, ಕ್ಷತ್ರಿಯನಿಗೆ ಹನ್ನೊಂದನೇ ವರ್ಷದಲ್ಲಿ, ವೈಶ್ಯನಿಗೆ ಹನ್ನೆರಡನೇ ವರ್ಷದಲ್ಲಿ 'ಉಪನಯನ' ಸಂಸ್ಕಾರವನ್ನು ನಡೆಸಬೇಕು. ಈ ಸಮಯಗಳ ಎರಡರಷ್ಟು ಸಮಯ ಕಳೆದ ಮೇಲೆ (ಬ್ರಾಹ್ಮಣರಿಗೆ 16 ವರ್ಷ ಕಳೆದ ಮೇಲೆ ಇತ್ಯಾದಿ) ಅವರು 'ವೇದವ್ರತ' ದಿಂದ ಚ್ಯುತರಾಗುತ್ತಾರೆ. ಇಂತಹವರನ್ನು 'ವ್ರಾತ್ಯ'ರು ಎಂದು ಕರೆಯಲಾಗುತ್ತದೆ. ಇಂತಹವರನ್ನು 'ವ್ರಾತ್ಯಹೋಮ' ದಿಂದ ಶುದ್ಧಿ ಮಾಡಬಹುದು.

ಉಪನಯನವಾದ ನಂತರ ಬಾಲಕನು ವೇದಾಧ್ಯಯನ ಮಾಡಲು ಅಧಿಕಾರವನ್ನು ಪಡೆಯುತ್ತಾನೆ 'ವೇದಾರಂಭ'ದ ಸಂಸ್ಕಾರದ ನಂತರ ಬ್ರಹ್ಮಚಾರಿಯು ಗುರುಕುಲದಲ್ಲಿ ವೇದದ ಸ್ವಾಧ್ಯಾಯವನ್ನು ಹಾಗೂ ಅಧ್ಯಯನವನ್ನು ಮಾಡುವನು. ಬ್ರಹ್ಮಚಾರಿಗೆ ಅನೇಕ ನಿಯಮಗಳಿವೆ. ಈ ಸಮಯದಲ್ಲಿ ಅವನು ಕೇಶ, ಶ್ಮಶ್ರು (ದಾಡಿ), ಮೌಂಜೀ – ಮೇಖಲೆಯನ್ನು ಧರಿಸಿರಬೇಕು. ವೇದಾಧ್ಯಯನವು ಪೂರ್ಣವಾದ ನಂತರ 'ಕೇಶಾಂತ' ಸಂಸ್ಕಾರ ವಾಗಬೇಕು. ಇದು ಗುರುಕುಲದಲ್ಲೆ ಆಗಬೇಕು.

ವಿದ್ಯಾಧ್ಯಯನದ ಕೊನೆ ಸಂಸ್ಕಾರವೆಂದರೆ 'ವೇದಸ್ನಾನ'ವು ಸಮಾವರ್ತನ ಗೊಳ್ಳಬೇಕಾಗುತ್ತದೆ. ಇದರಲ್ಲಿ ಗುರುವಿನ ಅನುಜ್ಞೆಯನ್ನು ಪಡೆದು, ವಿದ್ಯಾರ್ಥಿಯು ಮನೆಗೆ ಹಿಂತಿರುಗುವನು. ನಂತರದಲ್ಲಿ ಗೃಹಸ್ಥಾಶ್ರಮವನ್ನು ಪ್ರವೇಶ ಮಾಡುವುದಕ್ಕಾಗಿ ಯೋಗ್ಯಳೂ, ಸುಲಕ್ಷಣಳೂ ಆದ ಕನ್ಯೆಯೊಂದಿಗೆ 'ವಿವಾಹ' ಸಂಸ್ಕಾರವನ್ನು ಮಾಡಬೇಕು. ವಿವಾಹ ಸಂಸ್ಕಾರದಲ್ಲಿ ಲಾಜಾಹೋಮ ಇತ್ಯಾದಿ ಕಾರ್ಯಗಳನ್ನು ಮಾಡುವ ಅಗ್ನಿಗೆ 'ಆವಸಥ್ಯ' ಅಥವಾ 'ವಿವಾಹಾಗ್ನಿ' ಎಂದು ಕರೆಯಲಾಗುತ್ತದೆ. ಇದಕ್ಕಾಗಿ ಅಗ್ನಿಯಲ್ಲಿ ಆಹರಣ ಹಾಗೂ ಪರಿಸಮೂಹ ಇತ್ಯಾದಿ ಕ್ರಿಯೆಗಳನ್ನು ನಡೆಸಬೇಕಾಗುತ್ತದೆ. ಸ್ಮಾರ್ತ ಅಥವಾ ಪಾಕಯಜ್ಞ ಸಂಸ್ಥಾಗೆ ಸಂಬಂಧಪಟ್ಟ ಎಲ್ಲ ಕರ್ಮಗಳನ್ನೂ ವೈವಾಹಿಕ ಅಗ್ನಿ, ಹವಿರ್ಯಜ್ಞ ಹಾಗೂ ಸೋಮ ಸಂಸ್ಥಾದ ಎಲ್ಲ ರೀತಿಯ ಶೌತ–ಕರ್ಮಾನುಷ್ಠಾನಾದಿ ಕರ್ಮಗಳನ್ನು ವೈತಾನಾಗ್ನಿ (ಶ್ರೋತಾಗ್ನಿ–ತ್ರೇತಾಗ್ನಿ–ದಕ್ಷಿಣಾಗ್ನಿ, ಗಾರ್ಹಪತ್ಯಾಗ್ನಿ, ಆವಾಹನೀಯಾಗ್ನಿ) ಯಲ್ಲಿ ನೆರವೇರಿಸಬೇಕು. ಇದನ್ನೇ 'ತ್ರೇತಾಗ್ನಿ' ಸಂಸ್ಕಾರ ಎಂದು ಕರೆಯುವುದು. ಇಂತಹ ಕರ್ಮಗಳಿಂದ

ಇದನ್ನು ಮಾಡುವವನು ಸುಸಂಸ್ಕೃತನಾಗಿ, ಪರಮ ಪುರುಷಾರ್ಥವನ್ನು ಪಡೆಯುವನು.

ಗರ್ಭಾಧಾನಂ ಪ್ರಥಮತಸ್ತೃತೀಯೇ ಮಾಸಿ ಪುಂಸವಃ ||
ಸೀಮಾಂತಶ್ಚಾಷ್ಟಮೆ ಮಾಸಿ ಜಾತೆ ಜಾತಿಕ್ರಿಯಾ ಭವೇತ್ |
ಏಕಾದಶೋಽಹ್ನಿ ನಾಮಾರ್ಕಸ್ಯೇಕ್ಷಾ ಮಾಸಿ ಚತುರ್ಥಕೆ ||
ಷಷ್ಠೆ ಮಾಸ್ಯನ್ನಮ ಶ್ರೀಯಾಚ್ಚೂಡ ಕರ್ಮ ಕುಲೋಚಿತಮ್ |
ಕೃತ ಚೂಡೇಚ ಬಾಲೇ ಚ ಕರ್ಣ ವೇಧೋ ವಿಧೀಯತೆ ||

* * *

ಉಪನೀತೋ ಗುರುಕುಲೇ ವಸೇನ್ನಿತ್ಯಂ ಸಮಾಹಿತಃ |

* * *

ಕೇಶಾಂತ ಕರ್ಮಣಾ ತತ್ರ ಯಥೋಕ್ತ ಚರಿತವ್ರತಃ |
ಸಮಾಪ್ಯ ವೇದಾನ್ ವೇದೌ ವಾ ವೇದಂ ವಾ ಪ್ರಸರ್ಭ ದ್ವಿಜಃ ||
ಸ್ನಾಯೀತ ಗರ್ವನುಜ್ಞಾತಃ ಪ್ರವೃತ್ತೋದಿತ ದಕ್ಷಿಣಃ |
ಏವಂ ಸ್ನಾತಕತಾ ಪ್ರಾಪ್ತೀ ದ್ವಿತೀಯಾಶ್ರಮಕಾಂಕ್ಷಯಾಃ |
ಪ್ರತಿಕ್ಷೇತ ವಿವಾಹಾರ್ಥ ಮನಿಂದ್ಯಾನ್ವಯ ಸಂಭವಾಮ್ ||

* * *

ಸ್ಮಾರ್ತ ವೈವಾಹಿಕೆ ವಹ್ನೌ ಶ್ರೌತಂ ವೈತಾನಿಕಾಗ್ನಿಷು |
(ವ್ಯಾ. ಸ್ಮೃ. ಅ. 1-2)

## ದಾನವ್ಯಾಸ

ಧರ್ಮಶಾಸ್ತ್ರಗಳಲ್ಲಿ ದಾನಧರ್ಮದ ವಿಶೇಷ ಮಹಿಮೆಯನ್ನು ತಿಳಿಸಲಾಗಿದೆ. ದಾನ ನೀಡುವುದೇ ಕಲಿಯುಗದ ಮುಖ್ಯ ಧರ್ಮವಾಗಿದೆ. 'ದಾನಮೇಕಂ ಕಲೌಯುಗೇ' ಎಂದು ಕರೆಯಲಾಗಿದೆ.

ಈ ದಾನ ಧರ್ಮದ ಬಗ್ಗೆ ನೂರಾರು ಗ್ರಂಥಗಳು ಪ್ರಕಟವಾಗಿವೆ. ಸ್ಮೃತಿಗಳು ಹಾಗೂ ಪುರಾಣಗಳಲ್ಲಿ ಇದರ ಬಗ್ಗೆ ಬಹಳಷ್ಟು ವಿವರಗಳಿವೆ. ಇದೇ ರೀತಿಯಲ್ಲಿ ರಾಮಾಯಣ, ಮಹಾಭಾರತಗಳಲ್ಲೂ ಕೂಡ ಮಹತ್ವಪೂರ್ಣ ವಿವರಗಳಿವೆ. ಮಹಾ ಭಾರತದಲ್ಲಿಯಂತೂ ಪೂರ್ತಿ ಒಂದು ಪರ್ವವೇ ಇದಕ್ಕಾಗಿ ಮೀಸಲಾಗಿದೆ. ಇದನ್ನು 'ದಾನಧರ್ಮ ಪರ್ವ' ಎಂದು ಕರೆಯಲಾಗಿದೆ. ಇವೇ ಅಲ್ಲದೆ ಹೇಮಾದ್ರಿ, ವೀರ ಮಿತ್ರೋದಯ, ಕೃತ್ಯ ಕಲ್ಪತರು ಹಾಗೂ

ಅಪರಾರ್ಕ ಇತ್ಯಾದಿಯವರುಗಳು ಕೂಡ ತಮ್ಮ ತಮ್ಮ 'ದಾನ ಖಂಡ'ಗಳಲ್ಲಿ ಇದರ ಬಗ್ಗೆ ಸಂಪೂರ್ಣ ವಿವರಗಳನ್ನು ನೀಡಿದ್ದಾರೆ. ಅಲ್ಲದೆ 'ದಾನಸಾಗರ' ಎನ್ನುವ ಅನೇಕ ಸ್ವತಂತ್ರ ಗ್ರಂಥಗಳೂ ಲಭ್ಯವಿವೆ.

ಇವುಗಳಲ್ಲಿ ವೇದವ್ಯಾಸನು 'ದಾನ'ದ ಬಗ್ಗೆ ಬರೆದಿರುವ ವಿವರಗಳು ಮಹತ್ವ ಪೂರ್ಣವಾದುದು. ಮಹಾಭಾರತ, ಪುರಾಣಗಳಲ್ಲಿಯೂ ಈತನು ನಿರ್ದಿಷ್ಟ ದಾನದ ವಿವರಗಳನ್ನು ನೀಡಿದ್ದಾನೆ. ಇದೇ ರೀತಿಯಲ್ಲಿ 'ವ್ಯಾಸ ಸ್ಮೃತಿ'ಯಲ್ಲೂ ಈತನು ದಾನದ ಬಗ್ಗೆ ಬರೆದಿದ್ದಾನೆ. ಇದು 'ದಾನವ್ಯಾಸ' ವೆಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ಕೂರ್ಮ ಪುರಾಣದಲ್ಲಿ ಹೇಳಿರುವ ಅನೇಕ ವಿಷಯಗಳು ಅಂಶಗಳು ಈ ಕೃತಿಯೊಂದಿಗೆ ಹೋಲುತ್ತವೆ. ವ್ಯಾಸ ಸ್ಮೃತಿಯ 4ನೇ ಅಧ್ಯಾಯದಲ್ಲಿ 50 ಶ್ಲೋಕಗಳು ದಾನ ಧರ್ಮದ ಬಗೆಗೆ ವಿವರಗಳನ್ನು ನೀಡುತ್ತವೆ.

ಸತ್ಪಾತ್ರನಿಗೆ ದಾನ ನೀಡುವುದು, ತಾನು ತಿನ್ನುವ ಊಟ ಹಾಗೂ ಹೊದೆಯುವ ವಸ್ತ್ರಗಳಲ್ಲಿ ಸ್ವಲ್ಪ ಭಾಗವನ್ನು ದಾನವಾಗಿ ನೀಡುವುದು–ಇದೇ ವ್ಯಕ್ತಿಯ ನಿಜವಾದ ಸಂಪತ್ತು ಇದನ್ನು ಬಿಟ್ಟು ಉಳಿದಿರುವ ಹಣಕಾಸು ಇತ್ಯಾದಿಗಳು ಪರರದ್ದು, ಅವನದಲ್ಲ. ಅವನೇ ಸ್ವತಃ ಸಂಪಾದಿಸಿದ್ದರೂ, ಅದು ಅವನದಲ್ಲ; ಅವನು ಅದರ ಕಾವಲುಗಾರನು ಮಾತ್ರ. ಆಕಸ್ಮಾತ್ತಾಗಿ ಅವನು ಸತ್ತರೆ, ಆ ಹಣವನ್ನೆಲ್ಲ ಇತರರು ಮಜಾ ಉಡಾಯಿಸಿ ಹಾಳುಗೆಡಹುವರು. ಸಾಯುವವನೊಂದಿಗೆ ಅವನು ಸಂಪಾದಿಸಿದ ಹಣವಷ್ಟು ಬರುವುದಿಲ್ಲ. ಅವ ನೊಂದಿಗೆ ಬರುವುದು ಕೇವಲ ಅವನು ನೀಡಿದ ದಾನದ ಫಲ ಮಾತ್ರ. ಆದುದ ರಿಂದ ಈ ಫಲವೇ ಅವನ ನಿಜವಾದ ಸಂಪತ್ತು. ಆದುದರಿಂದಲೇ ಅವನು ಸಂಪಾದಿಸಿದುದನ್ನು ತನಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಉಪಯೋಗಿಸಿ ಕೊಂಡು ಉಳಿದುದನ್ನು ಸತ್ಕಾರ್ಯಗಳಿಗೆ ದಾನ ಮಾಡಬೇಕು. ಅದೇ ಅವನ ನಿಜವಾದ ಸಂಪತ್ತಾಗುತ್ತದೆ. ಸಾಯುವುದು ನಿಶ್ಚಿತವಾಗಿರುವಾಗ ಸಂಪಾದಿ ಸಿದ ಹಣವನ್ನು ಕೂಡಿಡುವುದರಲ್ಲಿ ಅರ್ಥವೇನಿದೆ ? ಯಾವ ಶರೀರದ ರಕ್ಷಣೆ ಗಾಗಿ ಹಣ ಸಂಗ್ರಹಣೆ ಮಾಡುವರೊ ಆ ಶರೀರವೇ ಅಸ್ಥಿರ, ನಶ್ವರ. ಅದ ರಿಂದ ದಾನ ಮಾಡಿ, ಧರ್ಮದ ವೃದ್ಧಿಯನ್ನು ಮಾಡಿಕೊಳ್ಳುವುದು ಒಳ್ಳೆ ಯದು, ಲೌಕಿಕವಾದ ಧನವನ್ನಲ್ಲ; ನಿರಂತರ ಹಣ ಸಂಗ್ರಹಣೆ ವ್ಯರ್ಥವಾದುದು.

ತಲೆಯ ಮೇಲೆ ಕುಳಿತಿರುವುದು ಮೃತ್ಯು ಎಂಬುದನ್ನು ತಿಳಿದಿರಬೇಕು. ಆದುದ ರಿಂದ ಸಂಪಾದಿಸಿದ ಹಣದ ಸದುಪಯೋಗ ಮಾಡುವುದು ಒಳ್ಳೆಯದು. ಯಾರ ಹಣ ನೀಡುವಿಕೆಯಿಂದ ಬಡವರು, ಸಾಧು ಸಂತರು, ಬಂಧು ಬಾಂಧವರ್, ಮಿತ್ರರು ಜೀವಿಸುರುವರೊ, ಅಂತಹವರ ಜೀವನವು ಸಾರ್ಥಕವಾದುದು. ಆದುದರಿಂದ ಸ್ವಾರ್ಥಿಗಳಾಗದೆ, ಪರೋಪಕಾರಿಗಳಾಗಬೇಕು. ಅವರದ್ದೇ ನಿಜ ವಾದ ಜೀವನ' ತಮ್ಮ ಸ್ವಾರ್ಥವನ್ನೇ ನೋಡಿಕೊಳ್ಳುವವರ ಜೀವನ ನಿರರ್ಥಕ. ಅವಶ್ಯಕತೆ, ಅಗತ್ಯ ಇರುವವರಿಗೆ ನಮ್ಮಲ್ಲಿರುವುದನ್ನು ನೀಡಿ, ಸಹಾಯ ಮಾಡ ಬೇಕು. ಹೆಚ್ಚು ಹಣ ಬರಲಿ, ಅದನ್ನು ದಾನ ಮಾಡುತ್ತೇನೆ-ಎಂದೆನ್ನ ಬಾರದು. ಇರುವಷ್ಟರಲ್ಲೆ ತೃಪ್ತಿಯಿಂದ ಜೀವನ ಮಾಡಿ, ಬಂದದ್ದಿರಲ್ಲಿ ಸ್ವಲ್ಪ ಭಾಗ ದಾನ ಮಾಡಬೇಕು. ಆದರಿಂದಲೇ ಸಂತೋಷ ಪಡಬೇಕು.

ನಿಜ ಅರ್ಥದಲ್ಲಿ ದಾನ ನೀಡುವ ವ್ಯಕ್ತಿ ಪ್ರಪಂಚದಲ್ಲಿ ದುರ್ಲಭನೆಂದೇ ಹೇಳಬೇಕು. ನಿಯಮ, ನೀತಿಗಳಿಲ್ಲದೆ, ಸ್ವಾರ್ಥಕ್ಕಾಗಿ ಮಾಡಿದ ದಾನವು ದಾನವೆಂದೆನಿಸಿಕೊಳ್ಳುವುದಿಲ್ಲ. ಯಥೋಚಿತ, ಯಥಾಯೋಗ್ಯ ವಿಧಿಪೂರ್ವಕ ದೇಶ—ಕಾಲಕ್ಕೆ ಅನುರೂಪವಾಗಿ ದಾನನೀಡುವವನೇ ನಿಜವಾದದಾತನು.

## 2. ಲಘು ವ್ಯಾಸ ಸಂಹಿತಾ

ಮಹರ್ಷಿ ವೇದವ್ಯಾಸನ ಹೆಸರಿನಲ್ಲಿ ಒಂದು 'ಲಘುವ್ಯಾಸ ಸಂಹಿತೆ' (ಸ್ಮೃತಿ)ಯು ಉಪಲಬ್ಧವಿದೆ. ಇದರಲ್ಲಿ ಎರಡು ಅಧ್ಯಾಯಗಳಿವೆ. ಒಟ್ಟು 125 ಶ್ಲೋಕಗಳು ಇದರಲ್ಲಿದೆ. ಮುಖ್ಯವಾಗಿ ಇದರಲ್ಲಿ ನಿತ್ಯಕರ್ಮಗಳಲ್ಲಿ ಪರಿಗಣಿತವಾಗುವ ಸ್ನಾನ, ಸಂಧ್ಯಾವಂದನೆ, ಜಪ, ದೇವರಪೂಜೆ, ಬಲಿವೈಶ್ವೇ ದೇವ, ಅತಿಥಿ ಸತ್ಕಾರ–ಈ ಆರು ಕರ್ಮಗಳು ಮಾನವನಿಗೆ ಆವಶ್ಯಕವಾದವು ಗಳೆಂದು ತಿಳಿಸಲಾಗಿದೆ. ಇವುಗಳೊಂದಿಗೆ ದಿನ ನಿತ್ಯದ ಕೃತ್ಯಗಳಾದ ಪ್ರಾತಃ–ಜಾಗರಣ, ಶೌಚ, ಸ್ನಾನ, ತರ್ಪಣ, ತ್ರಿಕಾಲ–ಸಂಧ್ಯಾವಂದನೆ, ಸೂರ್ಯಾರ್ಘ್ಯ ದಾನ, ಗಾಯಿತ್ರೀ ಜಪ, ಅಗ್ನಿಹೋತ್ರ, ಮಧ್ಯಾಹ್ನ ಸ್ನಾನ, ಪಂಚಯಜ್ಞ, ನಿತ್ಯಶ್ರಾದ್ಧ, ಅತಿಥಿ ಸೇವೆ, ದೇವರ ಪೂಜೆ, ಭೋಜನ ಹಾಗೂ ಶಯನ ಇತ್ಯಾದಿಗಳ ವಿಧಿಗಳ ಸೂಚನೆಗಳನ್ನು ನೀಡಲಾಗಿದೆ.

ಈ ಸ್ಮೃತಿಯು ಸಂಕ್ಷಿಪ್ತರೂಪದ್ದಾದರೂ ಮಹತ್ವಪೂರ್ಣವಾದುದು.

ಇದರಲ್ಲಿ ಮನು, ಕಪಿಲ ಇತ್ಯಾದಿ ಋಷಿರ ಧರ್ಮಶಾಸ್ತ್ರಗಳ ಶ್ಲೋಕಗಳನ್ನು ಉದಾಹರಿಸಲಾಗಿದೆ.

## ಬ್ರಾಹ್ಮ ಮುಹೂರ್ತದಲ್ಲಿ ಎಚ್ಚರ

ಸೂರ್ಯೋದಯಕ್ಕೆ ನಾಲ್ಕು ಘಳಿಗೆಗಳ ಮುಂಚೆ ಅಥವಾ $1\frac{1}{2}$ ಗಂಟೆ ಮುಂಚಿನ ಸಮಯವನ್ನು 'ಬ್ರಾಹ್ಮ ಮುಹೂರ್ತ' ಎಂದು ಕರೆಯಲಾಗುತ್ತದೆ. ಈ ಸಮಯದಲ್ಲಿ ಮಲಗಿರುವುದು ಶಾಸ್ತ್ರ ನಿಷಿದ್ಧವಾದುದು. ಈ ಸಮಯವು ಶರೀರ ಹಾಗೂ ಮನಸ್ಸುಗಳಿಗೆ ಸ್ಫೂರ್ತಿ ಹಾಗೂ ಬಲಗಳನ್ನು ನೀಡುತ್ತದೆ. ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು, ಹಗಲು-ರಾತ್ರಿಗಳ ಕಾರ್ಯಕ್ರಮಗಳ ಒಂದು ಸೂಚಿಯನ್ನು ಸಿದ್ಧಗೊಳಿಸಬೇಕು. ಇಂದು ಯಾವ ಯಾವ ಧರ್ಮದ ಹಾಗೂ ಪುಣ್ಯದ ಕಾರ್ಯಗಳನ್ನು ಮಾಡಬೇಕು ಎಂಬುದನ್ನು ತೀರ್ಮಾನಿಸಬೇಕು. ಈ ಕಾರ್ಯಗಳನ್ನು ಮಾಡುವುದಕ್ಕೆ ಅಗತ್ಯವಾದ ಶುದ್ಧ ಧನವನ್ನು ಪಡೆಯಲು ಯಾವ ಪ್ರಯತ್ನಗಳನ್ನು ಮಾಡಬೇಕು ಎಂಬುದು ತೀರ್ಮಾನವಾಗಬೇಕು.

ಬ್ರಾಹ್ಮೇ ಮುಹೂರ್ತೇ ಉತ್ಥಾಯ ಧರ್ಮಾಧಾವನು ಚಿಂತಯೇತ್||
ಕಾಯಕ್ಲೇಶಾಂಶ್ಚ ತನ್ಮೂಲಾನ್ ವೇದತತ್ತ್ವಾರ್ಥಮೇವ ಚ |

(ಲಘುವ್ಯಾಸ 1/12)

## ಪ್ರಾತಃ ಸ್ನಾನದ ಮಹಿಮೆ

ಶೌಚಾದಿಗಳ ನಂತರ ನದಿ, ಬಾವಿ ಇತ್ಯಾದಿಗಳಲ್ಲಿ ಶುದ್ಧ ನೀರು ಇರುವ ಕಡೆಗಳಲ್ಲಿ ಸ್ನಾನ ಮಾಡಬೇಕು. ಪ್ರಾತಃ ಸ್ನಾನದಿಂದ ಪಾಪಗಳು ನಾಶವಾಗುತ್ತವೆ. ಅವನು ಶುದ್ಧನಾಗುವನು. ಇದರಿಂದ ಅವನು ಜಪ, ಪೂಜಾ ಪಾಠಗಳನ್ನು ಮಾಡಲು ಅರ್ಹನಾಗುತ್ತಾನೆ. ಸ್ನಾನವಿಲ್ಲದೆ ಯಾವ ಕರ್ಮಗಳನ್ನು ಮಾಡಬಾರದು. ನವರಂಧ್ರಗಳಿಂದ ಕೂಡಿದ ಮಲಿನ ಶರೀರದಿಂದ ರಾತ್ರಿ-ಹಗಲು ಮಲವು (ಕೆಟ್ಟ ಜಲವು) ಹೊರ ಬರುತ್ತಿರುತ್ತದೆ. ಆದುದರಿಂದ ಪ್ರಾತಃಕಾಲದ ಸ್ನಾನದಿಂದ ಶರೀರವು ಶುದ್ಧವಾಗುತ್ತದೆ.

ರಾತ್ರಿಯಲ್ಲಿ ಸುಷುಪ್ತಾವಸ್ಥೆಯಲ್ಲಿ ಬಾಯಿಯಿಂದ ಜೊಲ್ಲು ಇತ್ಯಾದಿ ಪದಾರ್ಥಗಳು ಹೊರ ಬಂದಿರುತ್ತವೆ. ಆದುದರಿಂದ ಸ್ನಾನ ಮಾಡದೆ ಯಾವುದೇ ಕಾರ್ಯವನ್ನು ಮಾಡಬಾರದು, ಪ್ರಾತಃಕಾಲದ ಸ್ನಾನದಿಂದ ಅಲಕ್ಷ್ಮೀ

ದೌರ್ಭಾಗ್ಯ, ದುಃಸ್ವಪ್ನ ಇತ್ಯಾದಿ ಕೆಟ್ಟ ಅಂಶಗಳು ಸ್ನಾನದೊಂದಿಗೆ ನಾಶವಾಗುತ್ತವೆ. ಸ್ನಾನವಿಲ್ಲದೆ ನಂತರದ ಕಾರ್ಯಗಳನ್ನು ಮಾಡಬಾರದು. ಇದರಿಂದ ಪ್ರಾತಃ ಸ್ನಾನವು ವಿಶೇಷ ಮಹತ್ವವನ್ನು ಪಡೆದಿದೆ-

ಪ್ರಾತಃಸ್ನಾನೇನ ಪೂಯಂತೇ ಸರ್ವಪಾಪಾನ್ನಸಂಶಯಃ |
ನ ಹಿ ಸ್ನಾನಂ ವಿನಾ ಪುಂಸಾಂ ಪ್ರಾಶಸ್ತ್ಯಂ ಕರ್ಮಸು ಸ್ಮೃತ ||

## ಅಶಕ್ತರಾದಾಗ ಮಾಡುವ ಸ್ನಾನ

ವಯಸ್ಸಿನ ಕಾರಣ, ರೋಗದ ಕಾರಣ ಸ್ನಾನ ಮಾಡಲು ಅಶಕ್ತರಾದವರೂ ಇರುತ್ತಾರೆ. ಅಂತಹವರು ತಲೆಯನ್ನು ಬಿಟ್ಟು ಉಳಿದ ಶರೀರ ಭಾಗಕ್ಕೆ ಸ್ನಾನ ಮಾಡಿಸಬಹುದು. ನೆನದ ಬಿಳಿ ವಸ್ತ್ರದಿಂದ ಮೈಯ್ಯನ್ನು (ಸ್ಪಂಜ್ ಬಾತ್ ತರಹದ್ದು) ಒರೆಸಿಕೊಳ್ಳಬಹುದು, ನೀರನ್ನು ಮೈ ಮೇಲೆ ಚುಮುಕಿಸಿಕೊಂಡು ಮಾರ್ಜನ ಮಾಡಿಕೊಳ್ಳುವುದರ ಮುಖಾಂತರ ಸ್ನಾನದ ವಿಧಿಯನ್ನು ಮುಗಿಸಿಕೊಳ್ಳಬಹುದು. ಇದು ಕಪಿಲ ಮುನಿಗಳ ಅಭಿಪ್ರಾಯ. ಅಲ್ಲದೆ ಬ್ರಾಹ್ಮ್ಯ ಇತ್ಯಾದಿ ಮಂತ್ರ ವಿಧಿಗಳಿಂದಲೂ ಅಶಕ್ತರು ಸ್ನಾನ ವಿಧಿಯನ್ನು ಮಾಡಿಕೊಳ್ಳಬಹುದು—

ಅಶಕ್ತೋಽವಶಿರಸ್ಕಂ ವಾ ಸ್ನಾನ ಮಾತ್ರಂ ವಿಧೀಯತ್ ||
ಆರ್ದ್ರೇಣ ವಾಸಸಾ ಚಾಂಗಮಾರ್ಜನಂ ಕಾಪಿಲಂ ಸ್ಮೃತಂ |

* * *

ಬ್ರಾಹ್ಮ್ಯಾದೀನಾಥವಾಶಕ್ತೌ ಸ್ನಾನಾನ್ಯಾಹುರ್ಮನೀಷಿಣಃ ||
(ಲಘುವ್ಯಾಸ 1/8-10)

## ಏಳು ರೀತಿಗಳ ಸ್ನಾನ

ಶುದ್ಧ ನೀರಿನಲ್ಲಿ ಸ್ನಾನ ಮಾಡುವುದು ಸ್ನಾನ. ಆದರೂ ಧರ್ಮಶಾಸ್ತ್ರವು ಏಳು ರೀತಿಯ ಸ್ನಾನಗಳನ್ನು ತಿಳಿಸಿದೆ. 1. ಬ್ರಾಹ್ಮ, 2. ಆಗ್ನೇಯ, 3. ವಾಯುವ್ಯ, 4. ದಿವ್ಯ, 5. ವಾರುಣ, 6. ಮಾನಸ ಹಾಗೂ 7. ಯೌಗಿಕ ಎಂಬ ಸ್ನಾನಗಳನ್ನು ಲಘು ವ್ಯಾಸ ಸ್ಮೃತಿಯು ತಿಳಿಸುತ್ತದೆ.

ಕುಶಗಳ ಮುಖಾಂತರ 'ಆಪೋ ಹಿಷ್ಠಾ' ಇತ್ಯಾದಿ ಮಂತ್ರಗಳನ್ನು ಹೇಳಿಕೊಳ್ಳುತ್ತಾ, ಜಲ ಸಂಪ್ರೋಕ್ಷಣೆ ಮಾಡಿಕೊಳ್ಳುವ ಸ್ನಾನಕ್ಕೆ 'ಬ್ರಾಹ್ಮ ಸ್ನಾನ'ವೆಂದು ಹೆಸರು.

ಸಮಸ್ತ ಶರೀರದಲ್ಲಿ ಭಸ್ಮವನ್ನು ಧರಿಸಿಕೊಳ್ಳುವುದಕ್ಕೆ 'ಆಗ್ನೇಯ ಸ್ನಾನ' ಎಂದು ಕರೆಯಲಾಗುತ್ತದೆ. ಭಸ್ಮವು ಅಗ್ನಿಜನ್ಯವಾದುದು ಹಾಗೂ ಅತ್ಯಂತ ಪವಿತ್ರವಾದುದು. ಆದ್ದರಿಂದ ಇದು ಅಗ್ನಿ ಸಂಬಂಧಿತ ಸ್ನಾನ ಅಥವಾ 'ಆಗ್ನೇಯ ಸ್ನಾನ' ಎಂದು ಕರೆಯಲಾಗುತ್ತದೆ.

ಹಸುವಿನ ಗೊರಸುಗಳ ಧೂಳು ಅತ್ಯಂತ ಪವಿತ್ರವಾದುದು. ಇದರ ಮಹಿಮೆ ಅನಂತವಾದುದು. ಆದುದರಿಂದ ಹಸುಗಳು ಓಡಾಡಿರುವ ಪ್ರದೇಶದ ಧೂಳನ್ನು ಶರೀರಾದ್ಯಂತ ಸವರಿಕೊಳ್ಳುವುದಕ್ಕೆ 'ವಾಯವ್ಯ ಸ್ನಾನ' ಎಂದು ಕರೆಯುತ್ತಾರೆ. ಗಾಳಿಯ ಮುಖಾಂತರ ಅಥವಾ ಅಲ್ಲಿಂದ ಹಾರಿದ ಗೋಧೂಳು ಶರೀರದ ಮೇಲೆ ಬೀಳುವುದನ್ನು ಕೂಡ 'ವಾಯವ್ಯ ಸ್ನಾನ' ಎಂದು ಕರೆಯಲಾಗುತ್ತದೆ. ಇದರಲ್ಲಿ ವಾಯುವಿನ ವಿಶೇಷ ಯೋಗವಿರುತ್ತದೆ.

ಸೂರ್ಯ ಕಿರಣಗಳು (ಬಿಸಿಲಿನಲ್ಲಿ) ಹರಡಿರುವಾಗ ಬೀಳುವ ಮಳೆಯ ನೀರಿನಿಂದ ಅಥವಾ ಒಳ್ಳೆ ಬಿಸಿಲಿನಲ್ಲಿ ಹರಿಯುವ ನದಿ ನೀರಿನ ಸ್ನಾನ ಮಾಡುವಿಕೆಯನ್ನು 'ದಿವ್ಯಸ್ನಾನ' ಎಂದು ಕರೆಯುತ್ತಾರೆ.

ನೀರಿನಲ್ಲಿ ಮುಳುಗು ಹಾಕಿ ಸ್ನಾನ ಮಾಡುವ ರೀತಿಯನ್ನು 'ವಾರುಣ ಸ್ನಾನ' ಎಂದು ಕರೆಯಲಾಗುತ್ತದೆ.

ಆತ್ಮಜ್ಞಾನದಿಂದ ಅಥವಾ ಮಾನಸಿಕವಾಗಿ ಸ್ನಾನ ಮಾಡಿದೆನೆಂದು ಹೇಳಿಕೊಳ್ಳುವ ರೀತಿಯನ್ನು 'ಮಾನಸ ಸ್ನಾನ' ಎನ್ನಲಾಗುತ್ತದೆ.

ಭಗವಂತನ ಸ್ತೋತ್ರ ಮಾಡುತ್ತಾ, ಸ್ನಾನ ಮಾಡಿದೆನೆಂದು ತಿಳಿದುಕೊಳ್ಳುವುದು 'ಯೌಗಿಕ ಸ್ನಾನ'. ತಪಸ್ಸು ಮಾಡುವಾಗ ಋಷಿ, ಮುನಿಗಳು ಮಾಡುವ ಸ್ನಾನ ಇದೇನೇ. ಇದು ಯೋಗರೂಪವಾದುದರಿಂದ ಇದನ್ನು 'ಯೌಗಿಕ ಸ್ನಾನ' ಎಂದೂ ಕರೆಯಲಾಗುತ್ತದೆ.

ಬ್ರಾಹ್ಮಮಾಗ್ನೇಯಮುದ್ದಿಷ್ಟಂ ವಾಯವ್ಯ ದಿವ್ಯಮೇವ ಚ || 10 ||
ವಾರುಣಂ ಯೋಗಿಕಂ ಚೈವ ಸದಾ ಸ್ನಾನಂ ಪ್ರಕೀರ್ತಿತಮ್ |
ಬ್ರಾಹ್ಮಂ ತು ಮಾರ್ಜನಂ ಮಂತ್ರೈಃ ಕುಶೈಃ ಸೋದಕ
ಬಿಂದುಭಿಃ || 11 ||
ಆಗ್ನೇಯಂ ಭಸ್ಮನಾಂ ಸ್ನಾನಂ ವಾಯವ್ಯಂ ಗೋರಜಃ ಸ್ಮೃತಮ್ |
ಯತ್ತು ಸಾತಪವರ್ಷೇಣ ತತ್ ಸ್ನಾನಂ ದಿವ್ಯಮುಚ್ಯತೇ || 12 ||

ವಾರುಣಂ ಚಾವಗಾಹಂ ಚ ಮಾನಸಂ ಚಾತ್ಮವೇದನಮ್ |
ಯೌಗಿಕಂ ಸ್ನಾನ ಮಾಖ್ಯಾತಂ ಯೋಗೇऽಯಂ ವಿಷ್ಣು
ಚಿಂತನಮ್ || 13 ||

## ಸಂಧ್ಯಾವಂದನೆಯ ಮಹಿಮೆ

ಸಂಧ್ಯಾವಂದನೆ ಮಾಡದ ದ್ವಿಜರು ಪ್ರತಿದಿನವೂ ಅಪವಿತ್ರರಾಗುತ್ತಾರೆ. ಎಲ್ಲ ರೀತಿಗಳಲ್ಲಿಯೂ ಅವರು ಕರ್ಮವಿಹೀನರಾಗುತ್ತಾರೆ. ಈ ಕರ್ಮವನ್ನು ಮಾಡದೆ ಬೇರೆ ಯಾವ ಕರ್ಮವನ್ನೇ ಮಾಡಿದರೂ, ಅದರ ಫಲ ಅವರಿಗೆ ಲಭಿಸುವುದಿಲ್ಲ. ಆದುದರಿಂದ ದ್ವಿಜರು ತಪ್ಪದೆ ಸಂಧ್ಯಾವಂದನೆಯನ್ನು ಮಾಡಬೇಕು.

ಹಿಂದಿನ ಕಾಲದಲ್ಲಿ ದ್ವಿಜರು, ವೇದಶಾಸ್ತ್ರ ಪಾರಂಗತರಾದವರು ತದೇಕ ಚಿತ್ತದಿಂದ, ವಿಧಿಪೂರ್ವಕವಾಗಿ ಸಂಧ್ಯೋಪಾಸನೆಯ ಮುಖಾಂತರವೇ ಭಗವಂತನ ಸಾಕ್ಷಾತ್ಕಾರ ಪಡೆದಿದ್ದಾರೆ, ಇಲ್ಲವೆ ಪರಮಗತಿಯನ್ನು ಪಡೆದಿದ್ದಾರೆ. ಈ ಕರ್ಮವನ್ನು ಮಾಡದೆ ಇತರ ಕರ್ಮಗಳನ್ನು ಮಾಡಿದ ದ್ವಿಜರು ನರಕವನ್ನು ಹೊಂದುತ್ತಾರೆ.

ಆದುದರಿಂದ ಶ್ರದ್ಧಾ ಭಕ್ತಿಗಳಿಂದ ಯಥೋಚಿತ ವಿಧಿಗಳೊಡನೆ ಸಂಧ್ಯಾವಂದನೆಯನ್ನು ಮಾಡಬೇಕು ಇದರಿಂದ ಮಾನವನ ಶರೀರವು ಭಗವತ್ ಪ್ರಾಪ್ತಿಗಾಗಿ ಪರಮಯೋಗ್ಯವಾದುದಾಗಿರುತ್ತದೆ.

ಸಂಧ್ಯಾಹೀನೋऽಶುಚಿರ್ನಿತ್ಯಮನರ್ಹಃ ಸರ್ವ ಕರ್ಮಸು |
ಯದನ್ಯತ್ ಕುರುತೆ ಕರ್ಮ ನ ತಸ್ಯ ಫಲಮಾಪ್ನುಯಾತ್ || 27 ||
ಅನನ್ಯಚೇತಸಃ ಶಾಂತಾ ಬ್ರಾಹ್ಮಣಾ ವೇದಪಾರಗಾಃ |
ಉಪಾಸ್ಯ ವಿಧಿವತ್ ಸಂಧ್ಯಾಂ ಪ್ರಾಪ್ತಾಃ ಪೂರ್ವೇ ಪರಾಂ
ಗತಿಮ್ || 28 ||

ಯೋऽನ್ಯತಃ ಕುರುತೇ ಯತ್ನಂ ಧರ್ಮಕಾರ್ಯೇ ದ್ವಿಜೋತ್ತಮಃ |
ವಿಹಾಯ ಸಂಧ್ಯಾ ಪ್ರಣತಿಂ ಸ ಯಾತಿ ನರಕಾಯುತಂ || 29 ||

ತಸ್ಮಾತ್ ಸರ್ವ ಪ್ರಯತ್ನೇನ ಸಂಧ್ಯೋಪಾಸಂ ಸಮಾಚರೇತ್ |
ಉಪಾಸಿತೋ ಭವೇತ್ ತೇನ ದೇವಯೋಗ ತನುಃ ಪರಃ || 1-30 ||

## ಜಪದ ಸಮಯದಲ್ಲಿ ನಿಷಿದ್ಧ ಕಾರ್ಯ

ಗಾಯತ್ರೀ ಮಂತ್ರದ ಜಪ ಮಾಡುವಾಗ ಅಥವಾ ಬೇರೆ ಯಾವುದಾದರೂ ಮಂತ್ರವನ್ನು ಜಪಿಸುವಾಗ ಯಾರೊಂದಿಗೂ ಮಾತನಾಡಬಾರದು. ಹಾಗೂ ತನ್ನ ಶರೀರದ ಅಂಗಗಳನ್ನು ಚಲಿಸಬಾರದು, ತಲೆ, ಕುತ್ತಿಗೆಗಳನ್ನು ಅಲ್ಲಾಡಿಸಬಾರದು, ಹಲ್ಲು ಕಿರಿಯಬಾರದು, ಗಂಭೀರವಾಗಿರಬೇಕು. ಪವಿತ್ರ ಸ್ಥಳದಲ್ಲಿ, ಏಕಾಂತ ಪ್ರದೇಶದಲ್ಲಿ, ಸ್ಥಿರ ಆಸನದಲ್ಲಿ ಕುಳಿತು ಮಂತ್ರದ ಅಧಿಷ್ಠಾತಾ ದೇವರ ಬಗ್ಗೆ ಮಾತ್ರ ಚಿಂತಿಸುತ್ತಾ, ಜಪ ಮಾಡಬೇಕು. ಇದಕ್ಕೆ ವ್ಯತಿರೇಕವಾಗಿ ಜಪ ಮಾಡಿದ್ದೇ ಆದರೆ ಆ ಜಪದ ಫಲವನ್ನು ಗುಹ್ಯಕ, ರಾಕ್ಷಸ ಹಾಗೂ ಸಿದ್ಧರು ಬಲಾತ್ಕಾರದಿಂದ ಅಪಹರಿಸಿ ಬಿಡುತ್ತಾರೆ.

ಜಪಕಾಲೇ ನ ಭಾಷೇತ ನಾಂಗಾನಿ ಚಾಲಯೇತ್ ತಥಾ |
ನ ಕಂಪಯೇಚ್ಛಿರೋಗ್ರೀವಾಂ ದಂತಾನ್ ವೈ ನ ಪ್ರಕಾಶ
ಯೇತ್ || 31 ||
ಗುಹ್ಯಕಾ ರಾಕ್ಷಸಾಃ ಸಿದ್ಧಾ ಹರಂತಿ ಪ್ರಸಭಂ ಹಿ ತತ್ |
ಏಕಾಂತೇ ತು ಶುಚೌ ದೇಶೇ ತಸ್ಮಾಜ್ಜಪ್ಯಂ ಸಮಾಚರೇತ್
|| 2-32 ||

## ಸದಾಚಾರದ ಪಾಲನೆ

ಊಟಕ್ಕೆ ಸ್ವಲ್ಪ ಹೊತ್ತಿಗೆ ಮುಂಚೆ (ಗೋದೋಹನ ಸಮಯ) ಯಾರಾದರೂ ಅತಿಥಿಗಳು ಬರುವರೇ ಎಂದು ಕಾಯಬೇಕು. ಹಾಗೆ ಯಾರಾದರೂ ಬಂದಲ್ಲಿ ಅಂತಹವರಿಗೆ ಊಟ ಬಡಿಸಬೇಕು. ಆ ನಂತರದಲ್ಲಿ ಊಟ ಮಾಡಬೇಕು.

ದೇವತೆ, ಭೂತಬಲಿ, ಸೇವಕ, ಅತಿಥಿ ಹಾಗೂ ಪಿತೃಗಳಿಗೆ ಊಟ ನೀಡದೆ, ಊಟ ಮಾಡುವ ಮೂಢನು, ಮತ್ತೆ ಮಾನವ ಜನ್ಮವನ್ನು ಎತ್ತದೆ, ಮುಂದೆ ಪ್ರಾಣಿಯಾಗಿ ಜನಿಸುವನು. ಪ್ರತಿ ದಿನವೂ ಯಥಾಶಕ್ತಿ ವೇದಾಧ್ಯಯನ (ದೇವರ ಸ್ತೋತ್ರ ಹೇಳುವುದು), ಪಂಚ ಮಹಾ ಯಜ್ಞಗಳ ಅನುಸರಣೆ (ದೇವ, ಬ್ರಹ್ಮ, ಭೂತ-ಬಲಿ, ವೈಶ್ವೇದೇವ ಹಾಗೂ ಪಂಚಬಲಿ-ಮನುಷ್ಯ (ಅತಿಥಿ ಸೇವೆ), ಪಿತೃ ಯಜ್ಞಗಳನ್ನು ಮಾಡಬೇಕು. ಅಂತೆಯೇ ವೇದಾದಿ ಶಾಸ್ತ್ರಗಳ ಅಥವಾ ಪ್ರಾರ್ಥನಾ ಗ್ರಂಥಗಳ ಪೂಜೆಯನ್ನು ಮಾಡಬೇಕು. ಹೀಗೆ

ಮಾಡುವುದರಿಂದ ಎಲ್ಲ ಪಾಪಗಳೂ ನಷ್ಟವಾಗುತ್ತವೆ. ಒಂದು ವೇಳೆ ಅಜ್ಞಾನ ಹಾಗೂ ಲೋಭದ ಕಾರಣ ದೇವರ ಪೂಜೆ ಮಾಡದೆ ಊಟ ಮಾಡಿದಲ್ಲಿ, ಅಂತಹವನು ನರಕ ಭಾಜನನಾಗುತ್ತಾನೆ. ಆದುದರಿಂದ ಕಷ್ಟಪಟ್ಟಾದರೂ ಈ ನಿತ್ಯ ಕರ್ಮಗಳನ್ನು ತಪ್ಪದೆ ಆಚರಿಸಬೇಕು. ಉತ್ತರ ಹಾಗೂ ಪಶ್ಚಿಮದ ಕಡೆ ತಲೆ ಇಟ್ಟು ಅಥವಾ ಅಧೋಮುಖನಾಗಿ ಮಲಗಬಾರದು. ಅಂತೆಯೇ ನಗ್ನವಾಗಿ, ಬೇರೆಯವರ ಹಾಸಿಗೆಯಲ್ಲಿ, ಮುರಿದ ಮಂಚದ ಮೇಲೆ, ಜನರಿಲ್ಲದ ಮನೆಯಲ್ಲಿ ಮಲಗಬಾರದು —

ಗೋದೋಹ ಕಾಲ ಮಾತ್ರಂ ವೈ ಪ್ರತೀಕ್ಷ್ಯ ಹ್ಯತಿಥಿಂ ಸ್ವಯಂ ||
ಅಭ್ಯಾಗತಾನ್ ಯಥಾಶಕ್ತಿ ಭೋಜಯೇದ ತಿಥಿಂ ಸದಾ |
ಅದತ್ತ್ವಾ ದೇವತಾಭೂತ ಭೃತ್ಯಾತಿಥಿ ಪಿತೃಷ್ವಪಿ ||
ಭುಂಜೀತ ಚೇತ್ ಸ ಮೂಢಾತ್ಮಾ ತಿರ್ಯಗ್ಯೋನಿಂ ಚ ಗಚ್ಛತಿ |

* * *

ಯೋ ಮೋಹಾವಥವಾ ಲೋಭಾದಕೃತ್ವಾ ದೇವತಾರ್ಚನಂ ||
ಭುಂಕ್ತೇ ಸ ಯಾತಿ ನರಕಾನ್ ಶೂಕರೇಷ್ವಭಿಜಾಯತೇ |

* * *

ನೋತ್ತರಾಭಿಮುಖಃ ಸುಪ್ಯಾತ್ ಪಶ್ಚಿಮಾಭಿಮುಖೋ ನ ಚ ||
ಅವಾಂಙ್ಮುಖೋ ನ ನಗ್ನೋ ವಾ ನ ಚ ಭಿನ್ನಾಸನೇ ಕ್ವಚಿತ್ |
ನ ಭಗ್ನಾಯಾಂ ತು ಖಟ್ವಾಯಾಂ ಶೂನ್ಯಾಗಾರೇ ತಥೈವ ಚ ||
[ಲಘುವ್ಯಾಸ 2/62–66 ; 88–89]

## 36. ಮನುಸ್ಮೃತಿ

ಮನು ಹಾಗೂ ಆತನ ಧರ್ಮಶಾಸ್ತ್ರ 'ಮನುಸ್ಮೃತಿ' ಭಾರತೀಯ ಸಾಹಿತ್ಯದಲ್ಲಿ ವಿಶೇಷ ಸ್ಥಾನವನ್ನು ಪಡೆದಿದೆ. ಧರ್ಮಶಾಸ್ತ್ರಕಾರರಲ್ಲಿಯೂ ಕೂಡ ಮನುವಿಗೆ ಅತ್ಯಂತ ಗೌರವಯುತ ಸ್ಥಾನವಿದೆ. ಮನುಸ್ಮೃತಿಯಲ್ಲಿಲ್ಲದ ವಿಷಯಗಳು ಬೇರೆ ಯಾವ ಸ್ಮೃತಿಯಲ್ಲೂ ಇಲ್ಲ–ಎಂದು ಶಾಸ್ತ್ರಕಾರರು ಹೇಳುತ್ತಾರೆ. ಏಕೆಂದರೆ ಈ ಸ್ಮೃತಿಯು ವೇದಾರ್ಥದ ಅನುಸಾರ ರಚಿತವಾದುದಾಗಿದೆ —

ಮನುಸ್ಮೃತಿ ವಿರುದ್ಧಾ ಯಾ ಸಾ ಸ್ಮೃತಿರ್ನ ಪ್ರಶಸ್ಯತೇ |

ವೇದಾರ್ಥೋಪನಿಬದ್ಧತ್ವಾತ್ ಪ್ರಾಧಾನ್ಯಂ ಹಿ ಮನೋಃ ಸ್ಮೃತಿಃ ||

ಇಷ್ಟೇ ಅಲ್ಲದೆ ಮನು ಯಾವ ಧರ್ಮದ ಬಗ್ಗೆ ಹೇಳಿರುವನೊ, ಅದು ವೇದಗಳಲ್ಲಿಯೂ ಹೇಳಿದೆ—

ಯಃ ಕಶ್ಚಿತ್ ಕಸ್ಯಚಿದ್ಧರ್ಮೋ ಮನುನಾ ಪರಿಕೀರ್ತಿತಃ |
ಸ ಸರ್ವೋಽಭಿಹಿತೋ ವೇದೇ ಸರ್ವಜ್ಞಾನಮಯೋ ಹಿ ಸಃ ||

ಮನುವು ಮಾನವನ ಮೊದಲ ತಂದೆ. ಮಾನವನ ಎಲ್ಲ ಮಾರ್ಗಗಳ ಪಥ ಪದರ್ಶಕನೀತ. ಈತನ ಮನುಸ್ಮೃತಿಯು ಮಾನವನ ಮೊಟ್ಟ ಮೊದಲ ಧರ್ಮಶಾಸ್ತ್ರವಾಗಿದೆ. ಇದರ ಅನುಸಾರ ಪ್ರಪಂಚದ ಜೀವನದ ವಿಧಾನವು ನಿರ್ಮಾಣವಾಗಿದೆ.

ಇದೇ ವಿಚಾರವನ್ನು ವೇದವೂ ತಿಳಿಸಿ, 'ಮನುಷ್ಪಿತಾ' (ಋಗ್ವೇದ— 1-80-16)-'ಸರ್ವಾಸಾಂ ಪ್ರಜಾನಾಂ ಪಿತೃಭೂತೋ ಮನುಃ' ಎಂದು ಸಾಯಣರು ಹೇಳಿದ್ದಾರೆ. ತಂದೆಯು ತನ್ನ ಮಕ್ಕಳಿಗೆ ಮುಂದಿನ ಜೀವನ ವಿಧಾನದ ಹಿತ ವಚನಗಳನ್ನು ಹೇಳಿದಂತೆ ಸ್ವಾಯಂಭುವ ಮನುವು ತನ್ನ ತಂದೆ ಬ್ರಹ್ಮನಿಂದ ವೇದಗಳ ಸಾರಭೂತವಾದ ಲಕ್ಷ ಶ್ಲೋಕಗಳ ಗ್ರಂಥ ವೊಂದನ್ನು ಓದಿದ್ದ, ಅದರ ಸಂಕ್ಷಿಪ್ತರೂಪವನ್ನು ಭೃಗು, ನಾರದ ಇತ್ಯಾದಿ ತನ್ನ ಹತ್ತು ಮಕ್ಕಳಿಗೆ ಕಲಿಸಿದನು.

ಇದಂ ಶಾಸ್ತ್ರಂ ತು ಕೃತ್ವಾಸೌ ಮಾಮೇವ ಸ್ವಯ ಮಾದಿತಃ |
ವಿಧಿವತ್ ಗ್ರಾಹಯಾಮಾಸ............|| ಮನು 1-58 ||

ಇದಕ್ಕೆ ಮನ್ವರ್ಥ ಮುಕ್ತಾವಲೀ ಟೀಕೆಯು ಹೀಗಿದೆ-

ಬ್ರಹ್ಮಣಾ ಶತ ಸಹಸ್ರಮಿದಂ ಧರ್ಮಶಾಸ್ತ್ರಂ ಕೃತ್ವಾ ಮನುರಧ್ಯಾಪಿತ ಆಸೀತ್, ತತಸ್ತೇನ ಚ ಸ್ವವಚನೇನ ಸಂಕ್ಷಿಪ್ಯ ಶಿಷ್ಯೇಭ್ಯಃ ಪ್ರತಿಪಾದಿತಂ ತಥಾ ಚ ನಾರದಃ 'ಶತ ಸಹಸ್ರೋಽಯಂ ಗ್ರಂಥಃ' ಇತಿ ಸ್ಮರತಿ ಸ್ಮ ||

'ಮರೀಚ್ಯಾದೀಂ ಸ್ತ್ವಹಂ ಮುನೀನ್' || (ಮನು 1/58)

ಮುಂದೆ ಈ ಹತ್ತು ಪುತ್ರರು ಈ ಧರ್ಮಶಾಸ್ತ್ರವನ್ನು ತಮ್ಮ ಶಿಷ್ಯರಿಗೆ ಕಲಿಸಿದರು. ಈ ರೀತಿ ಪರಂಪರೆಯಿಂದ ವೇದದ ಕಲಿಕೆಯನ್ನು ಮನುವಿನ ಮಾಧ್ಯಮದಿಂದ ನಾವೆಲ್ಲ ಈಗ ಕಲಿತಿದ್ದೇವೆ.

ಸ್ವಾಯಂಭುವ ಮನುವಿನಿಂದ ಕಲಿತಿದ್ದನ್ನು ಈ ಮಹರ್ಷಿಗಳು

ಗ್ರಂಥಸ್ತ ಮಾಡಿದರು ಅವುಗಳಲ್ಲಿ ನಾರದನ ಮುಖಾಂತರ ಗ್ರಂಥಸ್ಥ ಮಾಡಿದುದು 'ನಾರದೀಯ ಮನುಸ್ಮೃತಿ' ಹಾಗೂ ಭೃಗು ಬರೆದದ್ದು 'ಮನುಸ್ಮೃತಿ' ಎಂಬ ಹೆಸರಿನಲ್ಲಿ ಇಂದಿಗೂ ಉಳಿದು ಬಂದಿದೆ. ಇವೆರಡು ಪ್ರತಿಗಳೇ ಈಗ ಉಳಿದಿರುವುದು.

## ಮನು–ಸರ್ವತ್ರ ಪ್ರಸಿದ್ಧಿ

ಭಾರತೀಯ ಸಾಹಿತ್ಯದಲ್ಲೆಲ್ಲ ಮನುವು ತುಂಬಾ ಪ್ರಸಿದ್ಧಿ. ಈ ಹೆಸರಿನ ಆಧಾರದ ಮೇಲೆಯೇ ಸಂಪೂರ್ಣ ಮನುಷ್ಯವಾಚೀ ಶಬ್ದವನ್ನು ರೂಪಿಸಲಾಗಿದೆ. ಇಂಗ್ಲಿಷ್‌ನ ಮ್ಯಾನ್ (MAN) ಎನ್ನುವ ಶಬ್ದವು 'ಮನು' ಶಬ್ದದೊಂದಿಗೆ ಸಂಬಂಧವನ್ನು ಹೊಂದಿದೆ. ಈಗಾಗಲೆ ತಿಳಿಸಿರುವಂತೆ ಋಗ್ವೇದದಲ್ಲಿ ಮನುವಿನ ಉಲ್ಲೇಖವಿದೆ (1–80–16, 8–63–1, 10–100–5, 1–114–2, 2–33–16). ಮನುವು ತಿಳಿಸಿರುವ (ಧರ್ಮಶಾಸ್ತ್ರದ) ಮಾರ್ಗದಿಂದ ದೂರ ಸರಿಯಬಾರದು. ಇದೇ ಋಗ್ವೇದ ತಿಳಿಸುತ್ತದೆ–

ಮಾ ನಃ ಪಥಃ ಪಿತ್ರ್ಯಾನ್ಮಾನವಾದಧಿ ದೂರಂ ನೈಷ್ಟ ಪರಾವತಃ |
(ಋ. 8–30–3)

ಇತರೇ ಮಂತ್ರಗಳ ಅನುಸಾರ ಅವನು ಮೊದಲ ಯಜ್ಞಕರ್ತನಾಗಿದ್ದಾನೆ. (ಋ. 10-63–7). ತೈತ್ತರೀಯ ಸಂಹಿತೆಯ ಅನುಸಾರ (2-2–10–2) ಅವುಗಳನ್ನು ಹೇಳಿಕೊಳ್ಳುವಿಕೆಯು ಔಷಧದ ಸಮಾನವಾದುದು–

ಮನುರ್ವೈ ಯತ್ಕಿಂಚಿದವದತ್ ತದ್
ಭೇಷಜಂ ಭೇಷಜ ತಾಯಾಃ ||

ತಾಂಡ್ಯ ಬ್ರಾಹ್ಮಣ (23–16–17), ಶತಪಥ ಬ್ರಾಹ್ಮಣ (1–1–4–14) ಹಾಗೂ ಮತ್ಸ್ಯ ಪುರಾಣಗಳಲ್ಲಿ ಜಲ ಪ್ರಳಯ ಹಾಗೂ ಮನುರವರುಗಳ ಕಥೆಗಳನ್ನು ವರ್ಣಿಸಲಾಗಿದೆ. ಮತ್ಸ್ಯಪುರಾಣದಲ್ಲಿ ಭಗವಂತನು ಮತ್ಸ್ಯ ರೂಪದಲ್ಲಿ ಪ್ರಕಟವಾಗಿದ್ದಾನೆ. ಭಗವಂತನ ಮುಖಾಂತರ ಮನು ನೀಡಿರುವ ಉಪದೇಶಗಳ ವರ್ಣನೆ ಇದೆ. ನಿರುಕ್ತ (ಅ. 3)ದಲ್ಲಿ ಮನುವನ್ನು ಸ್ಮೃತಿಕಾರರ ರೂಪದಲ್ಲಿ ಸ್ಮರಿಸಲಾಗಿದೆ. ಶ್ರೀಮದ್ಭಗವದ್ಗೀತೆ (10–6)ಯಲ್ಲಿ 14 ಮನುಗಳ ಉಲ್ಲೇಖವಿರುವುದು ತಿಳಿದುಬಂದಿದೆ. ಇದೇ ರೀತಿಯಲ್ಲಿ ಗೀತೆಯ 4ನೇ ಅಧ್ಯಾಯದ ಪ್ರಾರಂಭದಲ್ಲಿಯೂ ಕೂಡ ಈ ವರ್ಣನೆ ದೊರೆಯುತ್ತದೆ.

ಸೃಷ್ಟಿಯ ಆದಿಯಲ್ಲಿ ಭಗವಾನ್ ನಾರಾಯಣನು ಸೂರ್ಯನಿಗೆ ಯೋಗ ಜ್ಞಾನದ ಉಪದೇಶವನ್ನು ನೀಡಿದನು. ಅದೇ ಜ್ಞಾನವನ್ನು ಸೂರ್ಯನು ತನ್ನ ಮಗನಾದ ಮನುವಿಗೆ ಹಾಗೂ ಮನುವು ತನ್ನ ಮಗನಾದ ಸೂರ್ಯ ವಂಶದ ರಾಜ ಇಕ್ಷ್ವಾಕುವಿಗೆ ನೀಡಿದನು.

## ಸ್ವಾಯಂಭುವ ಮನು

ಶ್ರೀಮದ್ಭಾಗವತದ (3-12)ಲ್ಲಿ ಸೃಷ್ಟಿಯ ಕಾರ್ಯಕ್ಕಾಗಿ ಬ್ರಹ್ಮನು ಅವಿದ್ಯೆ, ಮಾಯಾ, ಸನಕಾದಿ ಋಷಿಗಳನ್ನೂ ; ರುದ್ರ, ಮರೀಚಾದಿ ಹತ್ತು ಮಾನಸ ಪುತ್ರರನ್ನು ಸೃಷ್ಟಿ ಮಾಡಿದನು. ಆದರೆ ಇದರಿಂದ ಸೃಷ್ಟಿಯು ವೃದ್ಧಿಯಾಗಲಿಲ್ಲ. ಆದರಿಂದ ಅವನು ಮನು-ಶತರೂಪಾರವರುಗಳನ್ನು ಸೃಷ್ಟಿಸಿದನು. ನಿಜ ಅರ್ಥದಲ್ಲಿ ಬ್ರಹ್ಮನ ಶರೀರವು ಎರಡು ಭಾಗಗಳಾಯಿತು. ಈ ಎರಡೂ ಭಾಗಗಳಿಂದ ಪ್ರಕಟಗೊಂಡ ಸ್ತ್ರೀ-ಪುರುಷರೇ ಮನು-ಶತ-ರೂಪಾ ಹೆಸರಿನಿಂದ ಪ್ರಖ್ಯಾತರಾಗಿದ್ದಾರೆ. ಇವರಿಬ್ಬರಿಂದಲೇ ಮಾನವ ಸೃಷ್ಟಿ ಮುಂದುವರೆಯಿತು. ಸ್ವಯಂಭು (ಬ್ರಹ್ಮ)ವಿನಿಂದ ಜನಿಸಿದ ಮೊಟ್ಟ ಮೊದಲಯವನೆ ಮನುವಾಗಿ, ಮುಂದೆ ಸ್ವಯಂಭೂಮನು ಎಂದು ಹೆಸರು ಪಡೆದನು.

ಈ ಮನುವು ಭಗವದ್ಭಕ್ತನಾಗಿದ್ದನು. ಈತನು ಧರ್ಮದ ಮಾರ್ಗದಲ್ಲಿ ಪ್ರಜೆಗಳನ್ನು ಪಾಲಿಸುತ್ತಾ ಆದರ್ಶ ಧರ್ಮರಾಜ್ಯವನ್ನು ಸ್ಥಾಪನೆ ಮಾಡಿದ. ಈತನು ಏಕಾಗ್ರ ಚಿತ್ತದಿಂದ ಶ್ರೀಹರಿಯ ಕಥನಗಳನ್ನು ಹೇಳುತ್ತಿದ್ದನು ಸ್ವಲ್ಪ ಸಮಯವನ್ನೂ ವ್ಯರ್ಥ ಮಾಡುತ್ತಿರಲಿಲ್ಲ.

ಮನು ಮತ್ತು ಶತರೂಪಾರವರುಗಳು ಕಠೋರ ತಪಸ್ಸು ಮಾಡಿದುದರ ಫಲವಾಗಿ ಶ್ರೀ ಮಹಾವಿಷ್ಣುವು ಇವರಿಗೆ ಮಗನಾಗಿ ಜನಿಸಿದ.

## ವಿಷಯ ನಿರೂಪಣೆ

ಮೂಲತಃ ತುಂಬಾ ವಿಸ್ತಾರವಾಗಿದ್ದ ಬ್ರಹ್ಮನು ಬೋಧಿಸಿದ ಧರ್ಮ ಶಾಸ್ತ್ರವನ್ನು ಮನುವು ಜನಸಾಮಾನ್ಯರಿಗೂ ಅನ್ವಯುವಾಗುವಂತೆ ಸಂಕ್ಷಿಪ್ತಗೊಳಿಸಿ ಹೇಳಿದ ರೂಪವೇ '**ಮನುಸ್ಮೃತಿ**'. ಇದರಲ್ಲಿ ಹಿಂದೆ, ಇಂದು, ಎಂದೆಂದಿಗೂ ಮಾನವ ಸಮಾಜಕ್ಕೆ ಮಾರ್ಗ ನಿರ್ದೇಶನ ಮಾಡುವ ನೀತಿ, ನಿಯಮಗಳನ್ನು ಉಲ್ಲೇಖಿಸಿದ್ದಾನೆ.

ಇಂದು ದೊರೆತಿರುವ ಮನುಸ್ಮೃತಿಯು 12 ಅಧ್ಯಾಯಗಳನ್ನು ಹೊಂದಿದ್ದು, ಒಟ್ಟು 2684 ಶ್ಲೋಕಗಳನ್ನು ಹೊಂದಿದೆ. ಇದರಲ್ಲಿ ಧಾರ್ಮಿಕ ವಿಧಿಗಳು, ಸಂಸ್ಕಾರಗಳು, ಗೃಹಸ್ಥ ಧರ್ಮ, ವಿವಾಹದ ನಿಯಮಗಳು, ನಿತ್ಯವಿಧಿಗಳು, ಶ್ರಾದ್ಧಗಳು, ವಿವಿಧ ವೃತ್ತಿಗಳು, ವೇದಾಧ್ಯಯನ, ಸ್ನಾತಕನ ನಿಯಮಗಳು, ವಿಹಿತ ಹಾಗೂ ನಿಷಿದ್ಧ ಆಹಾರ, ಅಶುದ್ಧಿ, ಶುದ್ಧೀಕರಣ, ಸ್ತ್ರೀಯ ಕರ್ತವ್ಯಗಳು, ಅರಣ್ಯದಲ್ಲಿನ ಆಶ್ರಮವಾಸಿಗಳು, ಯತಿಗಳು, ಅರಸನ ಕರ್ತವ್ಯಗಳನ್ನು ವಿವರಿಸಲಾಗಿದೆ.

ನಂತರ ಪೌರ ಹಾಗೂ ಅಪರಾಧ ಕಟ್ಟಳೆಗಳಲ್ಲಿ ಅವುಗಳ ವಿವರಣೆ ನೀಡುತ್ತಾ, ನ್ಯಾಯ ವಿಧಾನ, ಕೊಟ್ಟ ಸಾಲವನ್ನು ಪಡೆಯುವುದು, ಚಿನ್ನದ ತೂಕ ಇತ್ಯಾದಿಗಳು, ಒಡೆತನವಿಲ್ಲದ ಮಾರಾಟ, ಮದುವೆಯ ಕರಾರು, ಕಾಣಿಕೆಗಳ ಹಂಚಿಕೆ, ವೇತನದ ವಿವಾದ, ಒಡಂಬಡಿಕೆಯನ್ನು ಕಾರ್ಯ ರೂಪಕ್ಕೆ ತರದೆ ಇರುವುದು, ಒಡೆಯ ಹಾಗೂ ದನಗಾಹಿಗಳು, ಮಾನಹಾನಿ, ಗಾಯ ಗೊಳಿಸುವುದು, ಕಳವು, ಹಿಂಸೆ, ವ್ಯಭಿಚಾರ, ಸಂಕೀರ್ಣ ನಿಯಮ ಗಳು, ಪತಿ-ಪತ್ನಿಯರ ಕರ್ತವ್ಯಗಳು, ಪಿತ್ರಾರ್ಜಿತ ಆಸ್ತಿ ಹಾಗೂ ಪಾಲು, ಜೂಜಾಟ, ಸಂಕೀರ್ಣ ದಂಡನೆಗಳು, ಆಪದ್ಧರ್ಮ, ಮಿಶ್ರಜಾತಿಗಳು, ದಾನ, ಯಜ್ಞಯಾಗಾದಿಗಳು, ಆವಶ್ಯಕ ಪ್ರಾಯಶ್ಚಿತ್ತಗಳು, ಅಪರಾಧಗಳ ವರ್ಗೀ ಕರಣ, ಜನ್ಮಾಂತರ, ಮೋಕ್ಷ ಇತ್ಯಾದಿಗಳನ್ನು ಆ ನಂತರದಲ್ಲಿ ವಿವರಿಸಲಾಗಿದೆ.

ಈ ಸ್ಮೃತಿಯಲ್ಲಿ ಕೇವಲ ವೈದಿಕ ಆಚಾರ-ವಿಚಾರಗಳನ್ನಷ್ಟೆ ಅಲ್ಲದೆ ಒಂದು ಒಟ್ಟಾರೆ ಸಮಾಜದ ರೂಪರೇಷೆಗಳನ್ನು ಚಿತ್ರಿಸಲಾಗಿದೆ. ಜಾತಿಗಳ ವ್ಯಕ್ತಿಗತ ವಿವಾದಗಳ ಬಗ್ಗೆಯೇ ಅಲ್ಲದೆ ಅವರುಗಳ ನಡುವೆ ಇರುವ ಸಹ ಯೋಗ, ಸದ್ಭಾವನೆ, ಸ್ನೇಹಗಳ ಬಗ್ಗೆಯೂ ವಿವರಗಳನ್ನು ನೀಡಲಾಗಿದೆ. ವರ್ಣಾಶ್ರಮ ಧರ್ಮಗಳ ವಿವರ, ವ್ಯಕ್ತಿಯ ನಾಲ್ಕು ಆಶ್ರಮಗಳು, ಶಾಸ್ತ್ರೋಕ್ತ ವಾಗಿ ಆಯಾಯಾ ಆಶ್ರಮದ ನಿಯಮಗಳನ್ನು ಪಾಲಿಸುವುದು, ಅದರಿಂದ ವ್ಯಕ್ತಿಗೆ ಆಗುವ ಶುಭ ಇತ್ಯಾದಿಗಳನ್ನು 'ಸ್ವಧರ್ಮ' ಎಂದು ಮನುವು ವಿವರಿಸಿ ದ್ದಾನೆ. ಇದನ್ನೇ ಶ್ರೀಕೃಷ್ಣನೂ ತಿಳಿಸಿದ್ದಾನೆ –

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ |
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ||3–35||

ಇದೇ ರೀತಿಯಲ್ಲಿ ಮತ್ತೊಂದು ಕಡೆ

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾ ಸ್ವನುಷ್ಠಿತಾತ್ |
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ||18-47||

ಅಂದರೆ ಉತ್ತಮ ರೀತಿಯಲ್ಲಿ ಅನುಷ್ಠಾನ ಮಾಡುವ ಪರಧರ್ಮಕ್ಕಿಂತ ಗುಣರಹಿತವಾದ ಸ್ವಧರ್ಮವೇ ಶ್ರೇಷ್ಠವಾದುದು. ಹಿಂದಿನ ಜನ್ಮದ ಕರ್ಮಾನುಸಾರ ಹುಟ್ಟಿದ ಸ್ವಭಾವದ ಆಧಾರದ ಮೇಲೆ ಶಾಸ್ತ್ರದ ಮುಖಾಂತರ ಕ್ರಮಬದ್ಧವಾಗಿರುವ ಸ್ವಧರ್ಮರೂಪ ಕರ್ಮವನ್ನು ಮಾಡುತ್ತಾ ಇದ್ದರೆ ಅಂತಹವನಿಗೆ ಪಾಪವು ತಗಲುವುದಿಲ್ಲ.

## ಸಂಪೂರ್ಣ ಧರ್ಮಶಾಸ್ತ್ರ

ಮನುಸ್ಮೃತಿಯು ಒಂದು ಸಂಪೂರ್ಣ ರೂಪದ ಧರ್ಮಶಾಸ್ತ್ರವಾಗಿದೆ. ಮಾನವ ಜೀವನದ ಪೂರ್ಣರೂಪದ ದರ್ಶನವನ್ನು ಬಹಳ ಸುಂದರವಾಗಿ ಇದರಲ್ಲಿ ಪ್ರತಿಪಾದಿಸಲಾಗಿದೆ. ಇಂತಹ ದೃಷ್ಟಿಕೋನ ಬೇರೆ ಧರ್ಮ ಶಾಸ್ತ್ರಗಳಲ್ಲಿಲ್ಲ.

ಇದರ ಪ್ರಥಮಾಧ್ಯಾಯದಲ್ಲಿ ಜಗತ್ತಿನ ಉತ್ಪತ್ತಿ; ಎರಡನೇ ಅಧ್ಯಾಯದಲ್ಲಿ ಜಾತಕರ್ಮ ಮುಂತಾದವುಗಳ ಸಂಸ್ಕಾರ ವಿಧಿಗಳು, ಬ್ರಹ್ಮಚರ್ಯ ವಿಧಿ, ಗುರು-ಅಭಿವಾದನ ವಿಧಿ; ಮೂರನೇ ಅಧ್ಯಾಯದಲ್ಲಿ ಸಮಾವರ್ತನ, ಸಂಸ್ಕಾರ, ಪಂಚ ಮಹಾಯಜ್ಞ ವಿಧಿ, ನಿತ್ಯ ಶ್ರಾದ್ಧೀಯ ವಿಧಿ; ನಾಲ್ಕನೇ ಅಧ್ಯಾಯದಲ್ಲಿ ಗೃಹಸ್ಥನ ನಿಯಮಗಳು, ಐದನೇ ಅಧ್ಯಾಯದಲ್ಲಿ ಹಾಲು-ಮೊಸರು ಇತ್ಯಾದಿಗಳ ಭಕ್ಷ್ಯಾಭಕ್ಷ್ಯಗಳ ವಿವರ, ದಶಾಹಾದಿಗಳ ಮುಖಾಂತರ ಜನನ-ಮರಣ ಅಶೌಚಗಳಲ್ಲಿ ಬ್ರಾಹ್ಮಣಾದಿಗಳ ಧರ್ಮ, ಸ್ತ್ರೀ ಧರ್ಮಗಳು; ಆರನೇ ಅಧ್ಯಾಯದಲ್ಲಿ ವಾನಪ್ರಸ್ಥ ಹಾಗೂ ಸನ್ಯಾಸಾಶ್ರಮಗಳ ವಿವರ; ಏಳನೇ ಅಧ್ಯಾಯದಲ್ಲಿ ಮೊಕದ್ದಮೆಗಳ ನಿರ್ಣಯ ಹಾಗೂ ಕಂದಾಯ ವಸೂಲಿ ಇತ್ಯಾದಿಗಳ ರಾಜಧರ್ಮದ, ಆಡಳಿತದ ವಿವರ; ಎಂಟನೇ ಅಧ್ಯಾಯದಲ್ಲಿ ಸ್ನೇಹಿತರೊಂದಿಗೆ ಪ್ರಶ್ನೆ ಕೇಳುವ ವಿಧಾನ; ಒಂಭತ್ತನೇ ಅಧ್ಯಾಯದಲ್ಲಿ ಒಟ್ಟಿಗೆ ಅಥವಾ ಬೇರೆ ಬೇರೆ ಇರುವಾಗಿನ ಗಂಡು, ಹೆಣ್ಣಿನ ಧರ್ಮ, ವೈಶ್ಯ ಹಾಗೂ ಶೂದ್ರರ ತಮ್ಮ ತಮ್ಮ ಧರ್ಮಗಳ ಅನುಷ್ಠಾನ; ಹತ್ತನೇ ಅಧ್ಯಾಯದಲ್ಲಿ ಅನುಲೋಮ ಹಾಗೂ ಪ್ರತಿಲೋಮ ಜಾತಿಗಳ ಉತ್ಪತ್ತಿ ಹಾಗೂ ಆಪತ್ತಿನ ಕಾಲದಲ್ಲಿನ ಕರ್ತವ್ಯ ಮತ್ತು

ಧರ್ಮಗಳು; ಹನ್ನೊಂದನೇ ಅಧ್ಯಾಯದಲ್ಲಿ ಮಾಡಿದ ಪಾಪದ ನಿವೃತ್ತಿಗಾಗಿ ಮಾಡಬೇಕಾದ ವ್ರತಗಳ ಪ್ರಾಯಶ್ಚಿತ್ತ ವಿಧಿ; ಹನ್ನೆರಡನೇ ಅಧ್ಯಾಯದಲ್ಲಿ ಕರ್ಮಾನುಸಾರ ಉತ್ತಮ, ಮಧ್ಯಮ ಹಾಗೂ ಅಧಮ ಗತಿಗಳು, ಮೋಕ್ಷಪ್ರದ ಆತ್ಮಜ್ಞಾನ, ವಿಹಿತ ಹಾಗೂ ನಿಷಿದ್ಧ ಗುಣದೋಷಗಳ ಪರೀಕ್ಷೆ, ದೇಶಧರ್ಮ, ಜಾತಿಧರ್ಮಗಳು ಇತ್ಯಾದಿಗಳ ವರ್ಣನೆ ಇದೆ.

ಈ ರೀತಿಯಲ್ಲಿ ಮನುವು ಮಾನವ ಸಮಾಜದ ಮಾನವ ಸಂಸ್ಕೃತಿಯು ನಿರ್ಮಾಣಕ್ಕಾಗಿ ಮಾನವ ಧರ್ಮಶಾಸ್ತ್ರದ ರಚನೆ ಮಾಡಿದನು. ಇದೇ ಮಾನವ ಸಮಾಜದ ಮೊಟ್ಟ ಮೊದಲ 'ಸಂವಿಧಾನ' ವಾಯಿತು. ಮಾನವನು ನಿಜ ಅರ್ಥದಲ್ಲಿ ಮಾನವನಾಗಿ, ಸ್ವತಃ ನಾರಾಯಣನು ಆಗುವ ರೀತಿಯೇ ಈ ಮಹಾನ್ ಗ್ರಂಥದ ಸಂದೇಶವಾಗಿದೆ. ತಂದೆ-ಮಗ, ಸಹೋದರ-ಸಹೋದರಿ, ತಾಯಿ-ತಂದೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ – ಇತ್ಯಾದಿಯವರುಗಳ ಸತ್ಸಂಬಂಧ ಹಾಗೂ ಜೀವನವು ವೇದಶಾಸ್ತ್ರೋಕ್ತವಾದುದು. ಈ ಧರ್ಮ ನಿರೂಪಣೆಯು ಧರ್ಮದ ಆಧಾರದ ಮೇಲೆ ಸಮಾಜವು ನಿರ್ಮಾಣವಾಗಬೇಕು – ಎನ್ನುವುದೇ ಮನುವಿನ ಆಶಯ. ಇದರಿಂದಲೇ ಧರ್ಮ, ಸಂಸ್ಕೃತಿ, ಸಭ್ಯತೆಗಳು ಉಳಿಯುತ್ತವೆ; ಈ ಶೈಕ್ಷಣಿಕ ಕ್ರಮವನ್ನು ನಾವೆಲ್ಲರೂ ಅನುಸರಿಸಬೇಕು-ಎಂಬುದು ಆತನ ಆಶಯ, ತೀರ್ಮಾನಗಳು-

ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ |
ತಸ್ಮಾದ್ಧರ್ಮೋ ನ ಹಂತವ್ಯೋ ಮಾ ನೋ ಧರ್ಮೋ ಹತೋ
ವಧೀತ್ ||8-15||

## ಧರ್ಮ ಮತ್ತು ಪುರುಷಾರ್ಥ ಚತುಷ್ಟಯ

ಮೇಲೆ ತಿಳಿಸಿದ ನಾರದೀಯ ಮನುಸ್ಮೃತಿಯಲ್ಲಿ ಪ್ರಧಾನವಾಗಿ ವ್ಯವಹಾರದ ಬಗ್ಗೆ ಚರ್ಚೆ ನಡೆಸಲಾಗಿದೆ. ಆದರೆ ಭೃಗುಪ್ರೋಕ್ತ ಮನು ಸ್ಮೃತಿಯಲ್ಲಿ ಎಲ್ಲ ಅಂಗಗಳ ಮೇಲೂ ಧರ್ಮವು ಪ್ರಸರಿಸಿರುವುದನ್ನು ತಿಳಿಸುತ್ತದೆ. ಇದರಲ್ಲಿ ಧರ್ಮಾರ್ಥ ಕಾಮಮೋಕ್ಷಗಳೆನ್ನುವ ಚತುರ್ವಿಧ ಪುರುಷಾರ್ಥಗಳನ್ನು ಸುಂದರ ರೀತಿಯಲ್ಲಿ ಪ್ರತಿಪಾದಿಸಲಾಗಿದೆ. ಬ್ರಹ್ಮಚರ್ಯಾಶ್ರಮದಲ್ಲಿ ಧರ್ಮದ್ದೇ ಪ್ರಾಮುಖ್ಯತೆ. ಈ ಎಲ್ಲ ಪುರುಷಾರ್ಥಗಳಲ್ಲಿಯೂ ಧರ್ಮವು ಅಂತರ್ಗತವಾಗಿದೆ.

ಮೋಕ್ಷವು ಧರ್ಮವೇ ಅಲ್ಲದೆ ಅದು ಪರಮಧರ್ಮವಾಗಿದೆ – ' ಅಯಂ ತು ಪರಮೋ ಧರ್ಮೋ ಯದ್ಯೋಗೇನಾತ್ಮ–ದರ್ಶನಮ್ |' (ಯಾಜ್ಞ 1–8). ಕಾಮರೂಪ ಪುರುಷಾರ್ಥವನ್ನು ತಿಳಿಸುತ್ತಾ, 'ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಮ್' (ಮನು 3/4) ಎಂದು ತಿಳಿಸಲಾಗಿದೆ. ಅರ್ಥದ ಪ್ರತಿಪಾದನೆ ಮಾಡುವಾಗ, 'ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಂ' (4–3) ಎಂದು ತಿಳಿಸಿದೆ. ಕಡೆಯಲ್ಲಿ ಮೋಕ್ಷದ ಪ್ರತಿಪಾದನೆ ಮಾಡಲಾಗಿದೆ–

ಏವಂ ಯಃ ಸರ್ವಭೂತೇಷು ಪಶ್ಯತ್ಯಾತ್ಮಾನಮಾತ್ಮನಾ |
ಸ ಸರ್ವಸಮತಾ ಮೇತ್ಯ ಬ್ರಹ್ಮಾಭ್ಯೇತಿ ಪರಂ ಪದಮ್ ||12–125||

ಅಂದರೆ ಎಲ್ಲ ಜೀವಿಗಳಲ್ಲಿಯೂ ಅನುಸ್ಯೂತ ಪರಮಾತ್ಮನನ್ನು ಯಾರು ನೋಡುವರೊ, ಅಂತಹವನು ಸಮಬುದ್ಧಿಯನ್ನು ಪಡೆದು, ಬ್ರಹ್ಮಸ್ವರೂಪ ಮೋಕ್ಷವನ್ನು ಪಡೆಯುವನು.

ಧರ್ಮದ ನಿಯಂತ್ರಣದಲ್ಲಿರುವ ಕಾಮ ಹಾಗೂ ಅರ್ಥವನ್ನು ಮಾತ್ರವೇ ಮನುಸ್ಮೃತಿ ಒಪ್ಪುತ್ತದೆ. ಇದರಿಂದ ಸ್ವಚ್ಛಂದ ಕಾಮ ಹಾಗೂ ಅರ್ಥವನ್ನು ಅದು ಒಪ್ಪುವುದಿಲ್ಲ. ಹೀಗಾದಾಗ ಆ ವ್ಯಕ್ತಿಯು ಪಥ-ಭ್ರಷ್ಟನಾಗಿ, ಅವನ ಮೌಲಿಕ ಜೀವನವೇ ನಷ್ಟವಾಗಿ ಹೋಗುತ್ತದೆ. ಆದುದರಿಂದಲೇ ಸ್ಮೃತಿಗಳನ್ನು ಧರ್ಮಶಾಸ್ತ್ರಗಳೆಂದು ಕರೆದಿರುವುದು. ' ಧರ್ಮಶಾಸ್ತ್ರಂ ತು ವೈ ಸ್ಮೃತಿಃ ' (ಮನು 2/10) ಎಂದು ಹೇಳಿರುವುದು ಈ ಕಾರಣದಿಂದಲೇ. ಕಾಮ ಮತ್ತು ಅರ್ಥವನ್ನು ಪ್ರತಿಪಾದಿಸುವಾಗ ತಪ್ಪದೆ ಧಾರ್ಮಿಕ ನಿರ್ದೇಶನ ಹಾಗೂ ನಿಯಮಗಳನ್ನೂ ಅವುಗಳಿಗಾಗಿ ನಿರೂಪಿಸುತ್ತವೆ. ಈ ರೀತಿಯಲ್ಲಿ ತುಂಬಾ ವ್ಯಾಪಕ ಅರ್ಥದಲ್ಲಿ ಧರ್ಮದ ಶಬ್ದವನ್ನು ಉಪಯೋಗಿಸಲಾಗಿದೆ. ಪ್ರಪಂಚವನ್ನು ಯಾವುದು ಧಾರಣಗೊಳಿಸುವುದೊ ಅದೇ ಧರ್ಮ – 'ಧರತಿ ವಿಶ್ವಮಿತಿ ಧರ್ಮಃ' ಎಂದು ತಿಳಿಸಲಾಗುತ್ತದೆ. ಅರ್ಥ ರೂಪ ಧರ್ಮವಿಲ್ಲದೆ ಪ್ರಪಂಚದ ಧಾರಣ ಸಾಮರ್ಥ್ಯ' ಸಾಧ್ಯವಿಲ್ಲ ಎಂದು ಹೇಳಲಾಗುತ್ತದೆ. ಅದರಿಂದಲೇ 'ಅರ್ಥ'ವೂ ಧರ್ಮವೇ ಆಗಿರುತ್ತದೆ 'ಕಾಮ' ವಿಲ್ಲದೆ ಸೃಷ್ಟಿಯ ವಿಸ್ತರಣೆ ಅಸಾಧ್ಯ. ಅಮನಿಂತು ಹೋಗುತ್ತದೆ. ಆದುದರಿಂದ ಕಾಮವೇ ಧರ್ಮವಾಗಿದೆ.

'ಮೋಕ್ಷ' ವಿಲ್ಲದೆ ಮಾನವ ಜೀವನದ ಸಾರ್ಥಕತೆಯೇ ಇಲ್ಲ. ಆದುದ

ರಿಂದ ಮೋಕ್ಷವೂ ಧರ್ಮವೇ ಆಗಿದೆ.

ಧರ್ಮದ ಈ ವ್ಯಾಪಕ ಲಕ್ಷಣವನ್ನು ಅರ್ಥ ಮಾಡಿಕೊಳ್ಳದಿರುವ ಕಾರಣ ದಿಂದಲೇ ಪ್ರಶ್ನೆಯು ಉದ್ಭವಿಸುವುದು. ಮಹರ್ಷಿಗಳು ಧರ್ಮದ ವಿಷಯದ ಬಗ್ಗೆ ಮನುವನ್ನು ಪ್ರಶ್ನಿಸಿದಾಗ, ಆತನು ಧರ್ಮದ ಪ್ರತಿಪಾದನೆ ಮಾಡದೆ ಪ್ರಳಯ ಹಾಗೂ ಸೃಷ್ಟಿಯ ಮಾತುಗಳನ್ನಾಡುವನು ಏಕೆ? ಈ ಸಮಸ್ತ ಪ್ರಜಾಕೋಟಿಯ ಧರ್ಮವಾವುದು– 'ಧರ್ಮಾನ್ನೋ ವಕ್ತುಮರ್ಹಸಿ' (1/2) ಎಂದು ಈ ಸ್ಮೃತಿಯ ಮೊದಲನೇ ಶ್ಲೋಕದಲ್ಲಿ ಋಷಿಗಳು ಮನುವನ್ನು ಕೇಳಿ ದಾಗ, ಉತ್ತರ ರೂಪದಲ್ಲಿ 58 ಶ್ಲೋಕಗಳವರೆಗೆ ಪ್ರಶ್ನೆಗೆ ಉತ್ತರವನ್ನು ಆತ ನೀಡುವನು. ಆದರೆ ಅದರಲ್ಲಿ 'ಧರ್ಮ' ಶಬ್ದದ ಚರ್ಚೆ ಒಂದಿಷ್ಟೂ ಇಲ್ಲ.

ಸೂಚ್ಯವಾಗಿ ಆತ ತಿಳಿಸುವುದೇನೆಂದರೆ ಧರ್ಮಗಳ ಧರ್ಮ ಬ್ರಹ್ಮನು. ಮಾನವನ ಅಂತಿಮ ಗುರಿಯೂ ಅವನೇ ಆಗಿರಬೇಕು ಬ್ರಹ್ಮನು ತಟಸ್ಥನು. ಆ ಲಕ್ಷಣವನ್ನು ಶ್ರುತಿಯು ತಿಳಿಸುತ್ತದೆ. ಯಾವುದರಿಂದ ಪ್ರಪಂಚದ ಸೃಷ್ಟಿ, ಸ್ಥಿತಿ ಹಾಗೂ ಲಯಗಳಾಗುವುದೊ ಅದೇ ಬ್ರಹ್ಮ ಎಂದು ಹೇಳಿದೆ –

ಯತೋ ವಾ ಇಮಾನಿ ಭೂತಾನಿ ಜಾಯಂತೇ
ಯೇನ ಜಾತಾನಿ ಜೀವಂತಿ |
ಯತ್ಪ್ರಯಂತ್ಯಭಿಸಂವಿಶಂತಿ |
ತದ್ವಿಜಿಜ್ಞಾಸಸ್ವ ತದ್ ಬ್ರಹ್ಮೇತಿ || (ತೈತ್ತ. ಉಪ. 3/1)

ಈ ಶ್ರುತಿಯ ಆಧಾರದ ಮೇಲೆ ವ್ಯಾಸನು 'ಜನ್ಮಾದ್ಯಸ್ಯ ಯತಃ' (ಬ್ರಹ್ಮಸೂತ್ರ 1–1–4) ಎಂದು ಬ್ರಹ್ಮನ ಲಕ್ಷಣವನ್ನು ತಿಳಿಸಿದ್ದಾನೆ.

ಮನುವೂ ಕೂಡ ಈ ಶ್ರುತಿ ಹಾಗೂ ಸೂತ್ರದ ಬಗ್ಗೆ 58 ಶ್ಲೋಕಗಳ ವ್ಯಾಖ್ಯಾನವನ್ನು ನೀಡಿದ್ದಾನೆ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಯಾರಿಂದ ಉಂಟಾಗುತ್ತದೆಯೊ ಅಂತಹ ಬ್ರಹ್ಮನ ಜ್ಞಾನವನ್ನು ಹೊಂದು ವುದೇ ಮೋಕ್ಷ ಹಾಗೂ ಇದೇ ಜೀವನದ ಪರಮ ಧರ್ಮ ಎಂದು ಮನುವು ತಿಳಿಸುತ್ತಾನೆ. ವೇದದ ಕರ್ಮಕಾಂಡ ಭಾಗವಾದ ಬ್ರಹ್ಮಜ್ಞಾನ ಪ್ರಾಪ್ತಿಗಾಗಿ ಮಾಡುವ ಸಾಧನೆಯನ್ನು ಮನುವು ತನ್ನ ಸ್ಮೃತಿಯಲ್ಲಿ ತಿಳಿಸಿ, ಅದನ್ನು ಪ್ರಚುರ ಪಡಿಸಲು ಭೃಗುವನ್ನು ನಿಯುಕ್ತಗೊಳಿಸಿದನು. ಈ 58 ಶ್ಲೋಕ ಗಳಲ್ಲಿ ಯಾವುದೇ ಅಪ್ರಾಸಂಗಿಕ ವಿವರಗಳನ್ನು ನೀಡದೆ ಋಷಿಗಳ ಪ್ರಶ್ನೆಗಳಿಗೆ ಉತ್ತರಿಸಿದ್ದಾನೆ.

ಈ ರೀತಿಯಲ್ಲಿ ಮನುವು ತನ್ನ ಸ್ಮೃತಿಯಲ್ಲಿ ಮಾನವ ಜೀವನಕ್ಕೆ ಉಪಯೋಗವಾಗುವ ತತ್ತ್ವಗಳನ್ನು ವರ್ಣಿಸಿದ್ದಾನೆ. ವೇದದಿಂದ ಪಡೆದ ಈ ವಿಷಯಗಳು ಸದಾ ಕಾಲಕ್ಕೂ ತಥ್ಯವಾದವು.

ಯಃ ಕಶ್ಚಿತ್ಕಸ್ಯಚಿದ್ಧರ್ಮೋ ಮನುನಾ ಪರಿಕೀರ್ತಿತಃ |
ಸ ಸರ್ವೋಽಭಿಹಿತೋ ವೇದೇ ಸರ್ವಜ್ಞಾನಮಯೋ ಹಿ ಸಃ ||2–7||

ಎಂದು ಭೃಗುವು ಹೇಳಿರುವುದು ಔಷಧಿಗಳಿಗೆ ಔಷಧಿಯಾಗಿರುವುದನ್ನು ತಿಳಿಸಿದೆ ಎಂದು ಹೇಳಲಾಗಿದೆ.

'ಯತ್ಕಿಂಚ ಮನುರವದತ್ ತದ್ ಭೇಷಜಂ ಭೇಷಜತಾಯಾಃ |
(ತಾಂಡ್ಯ 23/16/7)

ಮನುವಿನ ಸಂದೇಶವನ್ನು ಅನುಮಾನಿಸಬಾರದು ಎಂದು ವೇದಗಳೂ ಹೇಳಿವೆ. ಕೃಷ್ಣ ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಈ ಮಾತನ್ನು 'ಯದ್ ವೈ ಕಿಂ ಚ ಮನುರವದತ್ ತದ್ ಭೇಷಜಂ' (2–2–10–2) ಎಂದು ಸ್ಪಷ್ಟಪಡಿಸಿದೆ. ಇದೇ ಮಾತನ್ನು ಕೃಷ್ಣ ಯಜುರ್ವೇದದ ಮೈತ್ರಾಯಿಣೀ ಸಂಹಿತೆ (1-15) ಹಾಗೂ ಕಾಠಕ ಸಂಹಿತೆ (11-5-9)ಯಲ್ಲಿಯೂ ಹೇಳಲಾಗಿದೆ.

ವೇದದಲ್ಲಿ ಇದೇ ಮಾತನ್ನು ಅನುಸರಿಸುತ್ತಾ ಬೃಹಸ್ಪತಿ ಸ್ಮೃತಿಯು 'ವೇದಾರ್ಥೋಪನಿಬದ್ಧತ್ವಾತ್ ಪ್ರಾಧಾನ್ಯಂ ಹಿ ಮನೋಃ ಸ್ಮೃತಂ |' ಎಂದು ಹೇಳಿದೆ. ಅಂದರೆ ಮನುಸ್ಮೃತಿಯು ಪ್ರತಿ ಅಕ್ಷರದಲ್ಲೂ ವೇದದ ಅರ್ಥವನ್ನು ಸ್ಪಷ್ಟಪಡಿಸಿದೆ; ಆದುದರಿಂದ ಎಲ್ಲ ಸ್ಮೃತಿಗಳಿಗಿಂತಲೂ ಮನುಸ್ಮೃತಿಯು ಮುಖ್ಯವಾದುದು. ಇತರೇ ಸ್ಮೃತಿಗಳು ಇದಕ್ಕೆ ಬೇರೆಯಾಗಿ (ಭಿನ್ನವಾಗಿ) ಏನೇ ಹೇಳಿದ್ದರೂ ಅದು ಮಾನ್ಯತೆ ಪಡೆದಿಲ್ಲ.

'ಮನ್ವರ್ಥ ವಿಪರೀತಾ ತು ಯಾ ಸ್ಮೃತಿಃ ಸಾ ನ ಶಾಸ್ಯತೇ ||

ಇಂದು ಮಾನವನು ತನ್ನ ಗುರಿ ಹಾಗೂ ಲಕ್ಷ್ಯವನ್ನು ಹುಡುಕುವ ವ್ಯಾಮೋಹದಲ್ಲಿ ಬಿದ್ದಿದಾನೆ. ಇಂತಹ ಸನ್ನಿವೇಶದಲ್ಲಿ ಪ್ರತಿ ಭಾರತೀಯನೂ ವೇದದ ಸ್ವರದೊಂದಿಗೆ, ತನ್ನ ದನಿಯನ್ನು ಸೇರಿಸಿ, ತನ್ನ ದೇವದೇವನನ್ನು, 'ಹೇ ದೇವ ! ಮಾನವನ ಆದಿ ಪಿತನಾದ ಮನುವು ಹೇಳಿರುವ ಪರಂಪರೆಯಿಂದ ದೂರನಾಗದಂತೆ ರಕ್ಷಿಸು' ಎಂದು ಬೇಡಿಕೊಳ್ಳುವುದು ಅಗತ್ಯ.

'ಮಾ ನಃ ಪಥಃ ಪಿತ್ರ್ಯಾನ್ಮಾನವಾದಧಿ ದೂರಮ್' (ಋ. 8-30-3)

